# ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಮಗ್ರ ಸಾಹಿತ್ಯ: ಒಂದು ಅಧ್ಯಯನ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕ
ಎಸ್.ಚಂದ್ರಮೌಳಿ

ಮಾರ್ಗದರ್ಶಕರು
ಡಾ.ಕೆ.ರವೀಂದ್ರನಾಥ
ಮುಖ್ಯಸ್ಥರು ಹಾಗೂ ಪ್ರವಾಚಕರು
ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕೂಡಲಸಂಗಮ



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬
೨೦೦೯

# ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಮಗ್ರ ಸಾಹಿತ್ಯ: ಒಂದು ಅಧ್ಯಯನ

ಡಾಕ್ಟರ್ ಆಫ್ ಫಿಲಾಸಫಿ (ಪಿಎಚ್.ಡಿ.) ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸುತ್ತಿರುವ ಮಹಾಪ್ರಬಂಧ

ಸಂಶೋಧಕ
**ಎಸ್.ಚಂದ್ರಮೌಳಿ**



ಮಾರ್ಗದರ್ಶಕರು
**ಡಾ.ಕೆ.ರವೀಂದ್ರನಾಥ**
ಮುಖ್ಯಸ್ಥರು ಹಾಗೂ ಪ್ರವಾಚಕರು
ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ಕೂಡಲಸಂಗಮ



ಹಸ್ತಪ್ರತಿಶಾಸ್ತ್ರ ವಿಭಾಗ
ಭಾಷಾ ನಿಕಾಯ
**ಕನ್ನಡ ವಿಶ್ವವಿದ್ಯಾಲಯ, ಹಂಪಿ**
ವಿದ್ಯಾರಣ್ಯ ೫೮೩ ೨೭೬
೨೦೦೯



**ಡಾ. ಕೆ.ರವೀಂದ್ರನಾಥ**
ಮಾರ್ಗದರ್ಶಕರು ಹಾಗೂ ಪ್ರವಾಚಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

---

## *ಮಾರ್ಗದರ್ಶಕರ ಪ್ರಮಾಣ ಪತ್ರ*

ಎಸ್.ಚಂದ್ರಮೌಳಿ ಅವರು ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಮಗ್ರ ಸಾಹಿತ್ಯ: ಒಂದು ಅಧ್ಯಯನ ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಇವರು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಡಾ. ಕೆ.ರವೀಂದ್ರನಾಥ

ಡಾ. ಕೆ. ರವೀಂದ್ರನಾಥ
ಸಂಶೋಧನ ಮಾರ್ಗದರ್ಶಕರು
ಕನ್ನಡ ವಿಶ್ವವಿದ್ಯಾಲಯ ಹಂಪಿ.
ವಿದ್ಯಾರಣ್ಯ - ೫೮೩ ೨೭೬.

ದಿನಾಂಕ : ೦6.೦೩.೨೦೦೯
ಸ್ಥಳ : ವಿದ್ಯಾರಣ್ಯ

## <u>ಸಂಶೋಧಕರ ಪ್ರಮಾಣ ಪತ್ರ</u>

**ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಮಗ್ರ ಸಾಹಿತ್ಯ: ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಸಂಶೋಧನಾ ಮಹಾಪ್ರಬಂಧವನ್ನು ಡಾ. ಕೆ.ರವೀಂದ್ರನಾಥ, ಪ್ರವಾಚಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ.

ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಅಥವಾ ಇತರೆ ಉದ್ದೇಶಗಳಿಗಾಗಲೀ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಎಸ್.ಚಂದ್ರಮೌಳಿ
ಸಂಶೋಧಕರು
ಹಸ್ತಪ್ರತಿಶಾಸ್ತ್ರ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

ದಿನಾಂಕ : 06 .೦೩.೨೦೦೮
ಸ್ಥಳ : ವಿದ್ಯಾರಣ್ಯ

# ಅರಿಕೆ

ಹೊಸಗನ್ನಡ ಸಾಹಿತ್ಯವೆಂದರೆ ವೈವಿಧ್ಯಮಯ ಸಾಹಿತ್ಯ ಸೃಷ್ಟಿಯ ಕಾಲ, ತನ್ನಷ್ಟಕ್ಕೆ ತಾನೇ ಪ್ರತ್ಯೇಕವಾಗಿ ಉಳಿಯದೆ ಇದು ಪ್ರಾಚೀನ ಸಾಹಿತ್ಯದೊಂದಿಗೆ ನಿರಂತರ ಜೀವಂತ ಸಂಬಂಧವನ್ನು ಬೆಳೆಸಿಕೊಂಡು ಉಳಿಸಿಕೊಂಡು ಬಂದಿದೆ. ಪಶ್ಚಿಮದ ಸಾಹಿತ್ಯ ವಿಚಾರಗಳ ಪ್ರಭಾವಕ್ಕೆ ಒಳಗಾಗಿದೆ. ಅಲ್ಲದೆ ಪೂರ್ವ ಪಶ್ಚಿಮಗಳ ಮುಖಾಮುಖಿಯಲ್ಲಿ ತನ್ನತನವನ್ನು, ಸತ್ವರಂಪರೆಯ ನೆಲೆಗಟ್ಟನ್ನು ಉಳಿಸಿಕೊಂಡು, ಬೆಳೆಸಿಕೊಂಡು ಬಂದಿರುವುದು ಇದರ ವೈಶಿಷ್ಟ್ಯವಾಗಿದೆ.

ಹೊಸಗನ್ನಡ ಸಾಹಿತ್ಯವು ಹಲವು ಘಟ್ಟಗಳಲ್ಲಿ, ಹಲವು ಪ್ರಕಾರಗಳಲ್ಲಿ ಸೃಷ್ಟಿಯಾಗುತ್ತಾ ಅನೇಕ ಕವಿಗಳನ್ನು ವೈಚಾರಿಕ ಲೇಖಕರನ್ನು ನಾಡಿಗೆ ಪರಿಚಯಿಸಿದೆ. ಈ ಸಾಹಿತ್ಯ ಘಟ್ಟದಲ್ಲಿ ನಮ್ಮ ಲೇಖಕರು ಭಾರತೀಯ ಚಿಂತನೆಗಳ ಜೊತೆಗೆ ಪಾಶ್ಚಾತ್ಯ ಆಲೋಚನೆಗಳನ್ನು ಸಮೀಕರಿಸಿಕೊಂಡು ಹೊಸಗನ್ನಡದ ಸತ್ವ-ಮಹತ್ವಗಳಿಗೆ ಕಾರಣರಾಗಿದ್ದಾರೆ. ಅದರಲ್ಲೂ ಬಹುಭಾಷೆ, ಬಹು ಸಂಸ್ಕೃತಿಗಳ ಅಧ್ಯಯನದಿಂದ ಹಲವು ಜನ ವಿದ್ವಾಂಸರು ಶ್ರೇಷ್ಠ ಕವಿಗಳಾಗಿ ವಿಮರ್ಶಕರಾಗಿ, ಸಂಶೋಧಕರಾಗಿ, ಹೆಸರುಮಾಡಿದ್ದಾರೆ. ಅಂಥವರ ಸಾಲಿನಲ್ಲಿ ಡಾ.ಸಿದ್ಧಲಿಂಗ ಪಟ್ಟಣಶೆಟ್ಟರೂ ಒಬ್ಬರು. ಇವರು ಕಾವ್ಯ, ಕಥೆ, ವಿಮರ್ಶೆ, ಸಂಪಾದನೆ, ಅಂಕಣ ಸಾಹಿತ್ಯ, ಪತ್ರಿಕಾ ಸಾಹಿತ್ಯ, ಅನುವಾದ ಮುಂತಾದ ಪ್ರಕಾರಗಳಲ್ಲಿ ಮಹತ್ವದ ಸಾಹಿತ್ಯ ಕೃಷಿ ಮಾಡಿದ್ದಾರೆ. ಇವರ ಸಾಹಿತ್ಯಿಕ, ಸಾಂಸ್ಕೃತಿಕ ಕೊಡುಗೆಗಳನ್ನು ಈ ಮಹಾಪ್ರಬಂಧದಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ. ಇದಕ್ಕೆ ಅವಕಾಶ ನೀಡಿದ್ದು ಹಂಪಿ ಕನ್ನಡ ವಿಶ್ವವಿದ್ಯಾಲಯ.

**ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಮಗ್ರ ಸಾಹಿತ್ಯ: ಒಂದು ಅಧ್ಯಯನ** ಕುರಿತು ಹಲವು ಮಗ್ಗಲುಗಳಿಂದ ಆಕರ-ಪರಿಕರಗಳ ಜ್ಞಾನವನ್ನು ನನ್ನ ಅಧ್ಯಯನಕ್ಕೆ ಎಲ್ಲಾ ರೀತಿಯಿಂದ ಸಹಾಯ, ಸಹಕಾರ ನೀಡಿದ ಡಾ.ಕೆ.ರವೀಂದ್ರನಾಥ ಅವರು ಈ ಮಹಾಪ್ರಬಂಧದ ಮಾರ್ಗದರ್ಶಕರಾಗಿ, ಈ ಅಧ್ಯಯನಕ್ಕೆ ಪರಿಪೂರ್ಣತೆ ಹಾಗೂ ನಿರ್ಧಿಷ್ಟತೆಯನ್ನು ನೀಡಿದ್ದಾರೆ. ಈ ಅಧ್ಯಯನದ ರೂಪುರೇಶಗಳನ್ನು ಹಾಕಿಕೊಟ್ಟು ನನ್ನ ಬರವಣಿಗೆಯನ್ನು ತಿದ್ದಿದ್ದಾರೆ. ಈ ಮಹಾಪ್ರಬಂಧವು ಒಂದು ಚೌಕಟ್ಟಿಗೆ ಬರುವಲ್ಲಿ ಅವರ ನೆರವು, ನಿರಂತರವಾಗಿ ನನ್ನ ಹಿಂದೆ ನಿಂತು ಕೆಲಸಮಾಡಿದೆ. ಅವರಿಗೆ ನನ್ನ ಗೌರವಪೂರ್ವಕ ಕೃತಜ್ಞತೆಗಳು.

ಕನ್ನಡ ವಿಶ್ವವಿದ್ಯಾಲಯದ ಬೌದ್ಧಿಕ ವಾತಾವರಣದಲ್ಲಿ ನನಗೆ ಸಂಶೋಧನೆಗೆ ಅವಕಾಶ ಮಾಡಿಕೊಟ್ಟ ಹಿಂದಿನ ಕುಲಪತಿಗಳಾದ ಡಾ.ಎಚ್.ಜೆ.ಲಕ್ಕಪ್ಪಗೌಡರು, ಡಾ.ಕೆ.ವಿ.ನಾರಾಯಣ, ಡಾ.ಬಿ.ಎ.ವಿವೇಕ ರೈ, ಡಾ.ಹಿ.ಚಿ.ಬೋರಲಿಂಗಯ್ಯ ಹಾಗೂ ಇಂದಿನ ಕುಲಪತಿಗಳಾಗಿರುವ ಡಾ.ಎ.ಮುರಿಗೆಪ್ಪನವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ಹಾಗೆಯೇ ಕುಲಸಚಿವರಾದ ಶ್ರೀ ಎಸ್.ಎಸ್.ಪೂಜಾರ, ಅಧ್ಯಯನಾಂಗದ ನಿರ್ದೇಶಕರಾದ ಡಾ.ಪಾಂಡುರಂಬಾಬು ಇವರಿಗೂ ನನ್ನ ವಂದನೆಗಳು ಸಲ್ಲಿಸುತ್ತೇನೆ.

ಮೇಲಿಂದ ಮೇಲೆ ಸಂಶೋಧನಾ ವಿದ್ಯಾರ್ಥಿಗಳನ್ನು ಕರೆಸಿಕೊಂಡು ಅಧ್ಯಯನ ಕಮ್ಮಟ ಸಮೂಹ ಚರ್ಚೆಗಳನ್ನು ಮಾಡುವುದರ ಮೂಲಕ ಸಂಶೋಧನೆಗೆ ಪ್ರೋತ್ಸಾಹ ತುಂಬಿದ ವಿಭಾಗದ ಪ್ರಾಧ್ಯಾಪಕರಾದ ಡಾ.ವೀರೇಶ ಬಡಿಗೇರ, ಡಾ.ಎಫ್.ಟಿ.ಹಳ್ಳಿಕೇರಿ, ಪ್ರವಾಚಕರಾದ ಡಾ.ಎಸ್.ಎಸ್.ಅಂಗಡಿ ಹಾಗೂ ವಿಭಾಗದ ಮುಖ್ಯಸ್ಥರಾದ ಡಾ.ಎಸ್.ಆರ್.ಚನ್ನವೀರಪ್ಪ ಇವರುಗಳಿಗೂ ಕೃತಜ್ಞತೆಗಳು.

ತಮ್ಮ ಬಹುಮುಖೀ ಸಾಹಿತ್ಯವನ್ನು ಕುರಿತು ಅಧ್ಯಯನ ಮಾಡಲು ಸಂತೋಷದಿಂದ ಒಪ್ಪಿ ಸಹಕರಿಸಿ ಆಗಾಗ್ಗೆ ಅಮೂಲ್ಯ ಸಲಹೆಗಳನ್ನು ನೀಡಿದ ನಾಡಿನ ಹಿರಿಯ ಚಿಂತಕರಾದ ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರಿಗೂ ಮತ್ತು ಡಾ.ಹೇಮಾ ಪಟ್ಟಣಶೆಟ್ಟಿಯವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ತಮ್ಮಗಳ ಶ್ರಮದ ಶಕ್ತಿಯನ್ನು ನನ್ನ ವಿದ್ಯಾಭ್ಯಾಸಕ್ಕಾಗಿ ಧಾರೆಯೆರೆದ, ನನ್ನನ್ನು ಈ ಮಟ್ಟಕ್ಕೆ ಬೆಳೆಸಿದ ಪೂಜ್ಯ ತಂದೆಯವರಾದ ಸಾಲಿ ವಿರುಪಾಕ್ಷಯ್ಯ, ತಾಯಿ ಬಸಮ್ಮ ಮತ್ತು ಚಿಕ್ಕಪ್ಪ ಸಾಲಿ ಮಲ್ಲಿಕಾರ್ಜುನಸ್ವಾಮಿ, ಚಿಕ್ಕಮ್ಮ ಉಮಾದೇವಿ ಇವರಿಗೂ ಹಾಗೂ ಅಧ್ಯಯನದುದ್ದಕ್ಕೂ ನನ್ನೊಂದಿಗೆ ಸಹಕರಿಸಿದ ಪತ್ನಿ ಸುಜಾತಳಿಗೂ ಮತ್ತು ಕುಟುಂಬದ ಎಲ್ಲಾ ಸದಸ್ಯರಿಗೂ ಋಣಿಯಾಗಿದ್ದೇನೆ. ಹಾಗೆಯೇ ಸಂಶೋಧನೆಯಲ್ಲಿ ಉತ್ತಮ ಸಲಹೆ ನೀಡಿ ಕರಡು ತಿದ್ದುವಲ್ಲಿ ಸಹಕರಿಸಿದ ಸ್ನೇಹಿತರಾದ ಶ್ರೀ ಕಲ್ಲಯ್ಯ ಎಸ್.ಹಿರೇಮಠ, ಶ್ರೀ.ಕುಮಾರ್.ಜೆ, ಹೆಚ್.ವಿರುಪಾಕ್ಷಪ್ಪ ಇವರಿಗೂ ಧನ್ಯವಾದಗಳನ್ನು ಅರ್ಪಿಸುತ್ತೇನೆ. ನನ್ನ ಅಧ್ಯಯನದುದ್ದಕ್ಕೂ ಸಹಕರಿಸಿದ ತೆಕ್ಕಲಕೋಟೆ ಸರ್ಕಾರಿ ಪ್ರೌಢಶಾಲೆಯ (ಬಾಲಕಿಯರ) ಸಹೋದ್ಯೋಗಿ ಶಿಕ್ಷಕ ವೃಂದಕ್ಕೂ ಹಾಗೂ ಅಂದವಾಗಿ ಡಿ.ಟಿ.ಪಿ ಅಕ್ಷರ ಜೋಡಣೆಮಾಡಿದ ಶ್ರೀ ಗುರು ಮೌನೇಶ್ವರ ಗ್ರಾಫಿಕ್ಸ್‌ನ ಅನ್ನಪೂರ್ಣ ಮತ್ತು ನಾಗರಾಜ ಬಡಿಗೇರ ಅವರಿಗೂ ಹೃದಯ ಪೂರ್ವಕವಾದ ಕೃತಜ್ಞತೆಗಳು.

**ಎಸ್.ಚಂದ್ರಮೌಳಿ**

# ಪರಿವಿಡಿ

ಅಧ್ಯಾಯ - ಒಂದು ೧ - ೫

ಅಧ್ಯಯನದ ಉದ್ದೇಶ, ಮತ್ತು ಸ್ವರೂಪ

ಅಧ್ಯಾಯ - ಎರಡು ೬ - ೨೪

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಬದುಕು

ಅಧ್ಯಾಯ - ಮೂರು ೨೫

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಮಗ್ರ ಸಾಹಿತ್ಯ ಸಮೀಕ್ಷೆ

ಭಾಗ-೧, ಕನ್ನಡ ಸ್ವತಂತ್ರ ಕೃತಿಗಳು ೨೬ - ೧೬೮

೩.೧.೧. ಕಾವ್ಯ ಸಂಕಲನ

೩.೧.೨. ಕಥಾಸಂಕಲನ

೩.೧.೩. ವಿಮರ್ಶಾ ಸಂಕಲನ

೩.೧.೪. ಜೀವನ ಚರಿತ್ರೆ

೩.೧.೫. ವ್ಯಕ್ತಿ ಚಿತ್ರಣ

೩.೧.೬. ಸಂಪಾದನೆ

ಭಾಗ-೨, ಹಿಂದೀ ಸ್ವತಂತ್ರ ಕೃತಿಗಳು ೧೬೯ - ೧೮೪

೩.೨.೧. ಕಾವ್ಯ ಸಂಕಲನ

೩.೨.೨. ನಿಬಂಧ ಸಂಕಲನ

೩.೨.೩. ವಿಮರ್ಶೆ

೩.೨.೪. ಜೀವನ ಚರಿತ್ರೆ

೩.೨.೫. ನಾಟಕ

೩.೨.೬. ಸಂಪಾದನೆ

ಭಾಗ-೩, ಅನುವಾದ ಕೃತಿಗಳು ೧೮೫ - ೨೨೧

೩.೩.೧. ಕಾವ್ಯ ಸಂಕಲನ

೩.೩.೨. ನಾಟಕ

೩.೩.೩. ಕಾದಂಬರಿ

೩.೩.೪. ಜೀವನ ಚರಿತ್ರೆ

೩.೩.೫. ವಿಚಾರ ಪ್ರಬಂಧ

**ಭಾಗ-೪, ಅಂಕಣ ಸಾಹಿತ್ಯ** ೨೨೨ - ೨೫೪

೩.೪.೧. ಚಹಾದ ಜೋಡಿ ಚೂಡಾದ್ಹಾಂಗ

(೧, ೨, ೩, ೪, ೫ನೇ ಸಂಪುಟಗಳು)

೩.೪.೨. ಕಡೇಪುಟ

೩.೪.೩. ಒನ್ನೇಪುಟ

**ಭಾಗ-೫, ಪತ್ರಿಕಾ ಸಾಹಿತ್ಯ** ೨೫೫ - ೨೬೨

೩.೫.೧. ಸಂಕ್ರಮಣ

೩.೫.೨. ಸೃಜನವೇದಿ

೩.೫.೩. ಸಂಕಲನ

**ಅಧ್ಯಾಯ - ನಾಲ್ಕು** ೨೬೩ - ೨೯೫

**ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ಆಧುನಿಕ ಕನ್ನಡ ಸಾಹಿತ್ಯ**

**ಅಧ್ಯಾಯ - ಐದು** ೨೯೬ - ೩೦೩

**ಸಮಾರೋಪ**

**ಅನುಬಂಧಗಳು** ೩೦೪ - ೩೩೬

* ಡಾ.ಸಿದ್ಧಲಿಂಗ ಪಟ್ಟಣಶೆಟ್ಟರ ಸಂಕ್ಷಿಪ್ತ ಪರಿಚಯ

* ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರಿಗೆ ಸಂದ ಪ್ರಶಸ್ತಿ ಪುರಸ್ಕಾರಗಳು

* ಡಾ.ಸಿದ್ಧಲಿಂಗ ಪಟ್ಟಣಶೆಟ್ಟರ ಕೃತಿಗಳು

* ಛಾಯಾಚಿತ್ರಗಳು

* ಗ್ರಂಥಋಣ



## ಅಧ್ಯಾಯ-೧

## ಅಧ್ಯಯನದ ಉದ್ದೇಶ ಮತ್ತು ಸ್ವರೂಪ

ಹತ್ತೊಂಬತ್ತನೆಯ ಶತಮಾನದ ಕೊನೆಯ ಮತ್ತು ಇಪ್ಪತ್ತನೆ ಶತಮಾನದ ಆದಿ ಸಮಯದ ಸಮಸ್ತ ಭಾರತದ ಚಾರಿತ್ರಿಕ ಮಹತ್ವದ ಘಟ್ಟ. ಎಲ್ಲಾ ಕ್ಷೇತ್ರವೂ ಈ ಬದಲಾವಣೆಯನ್ನು ಅಂಗೀಕರಿಸಿತು. ಪಾಶ್ಚಾತ್ಯಾ ಸಂಸ್ಕೃತಿ, ರೀತಿ ನೀತಿಗಳು, ವಿಚಾರ ಲಹರಿ, ಸ್ವಾತಂತ್ರ, ಪ್ರಜಾಪ್ರಭುತ್ವ ಮತ್ತು ವ್ಯಕ್ತಿಯ ಮಹತ್ವವನ್ನು ಕುರಿತ ಕಲ್ಪನೆಗಳು ಇವುಗಳ ಪ್ರಭಾವ ಭಾರತೀಯರ ಮೇಲೆ ಜೊತೆಗೆ ಕನ್ನಡಿಗರ ಮೇಲೆ ಆಯಿತು. ಇದರಿಂದ ಭಾರತೀಯರ ಮನಸ್ಸುಗಳು ಹೊಸಬಗೆಯ ಒಲವು ನಿಲುವುಗಳನ್ನು ಸ್ವೀಕರಿಸಲು ಆರಂಭಿಸಿತು. ಯಾವದೇಶ ಕಾಲದ ಸಾಹಿತ್ಯವಾದರೂ ಆದೇಶ ಕಾಲಗಳ ಸಂದರ್ಭಗಳಲ್ಲಿ ಬೆಳೆಯಬೇಕಾಗುತ್ತದೆ. ಮತ್ತು ಅದರ ಪ್ರಭಾವಕ್ಕೆ ಒಳಗಾಗಿ ಆಗಿನ ಅಂಶಗಳನ್ನು ತನ್ನ ಒಡಲಲ್ಲಿ ತುಂಬಿಕೊಂಡಿರುತ್ತದೆ. ಇದಕ್ಕೆ ಕನ್ನಡ ಸಾಹಿತ್ಯ ಹೊರತಾಗಲಿಲ್ಲ. ಅದು ಹೊಸತನದತ್ತ ಮುಖ ಮಾಡಿಕೊಂಡು ಆಧುನಿಕತೆಯನ್ನು ಪಡೆದು ಕೊಳ್ಳಲಾರಂಭಿಸಿತು.

ಹೊಸಗನ್ನಡ ಸಾಹಿತ್ಯವನ್ನು ಅಧ್ಯಯನದ ದೃಷ್ಠಿಯಿಂದ ನವೋದಯ ಪೂರ್ವ, ನವೋದಯ, ನವ್ಯ, ಪ್ರಗತಿಶೀಲ ಮತ್ತು ದಲಿತ-ಬಂಡಾಯ ಎಂದು ವಿಂಗಡಿಸಿದ್ದಾರೆ. ಈ ಎಲ್ಲಾ ಸಾಹಿತ್ಯ ಘಟ್ಟಗಳು ತನ್ನ ದೇಶೀಯತೆಯ ನೆಲೆಯೊಂದಿಗೆ ವಿದೇಶಿ ಭಾವಲಹರಿಗಳನ್ನು ಮೈಗೂಡಿಸಿಕೊಂಡು ಅಭಿವ್ಯಕ್ತಿ ಪಡೆದವು. ವಿಶೇಷವಾಗಿ ಜನಸಾಮಾನ್ಯರ ಜೀವನಕ್ಕೆ ಅವರ ನೋವು ನಲಿವಿಗೆ ತುಂಬಾ ಹತ್ತಿರವಾಗಿ ಅಭಿವ್ಯಕ್ತಗೊಂಡ ಈ ಕಾಲಘಟ್ಟದ ಸಾಹಿತ್ಯ, ಜೀವನಕ್ಕಾಗಿ ಸಾಹಿತ್ಯ ಎಂಬ ಉದಾತ್ತ ಮೀಮಾಂಸೆಯೊಂದನ್ನು ಹುಟ್ಟು ಹಾಕಿತು. ಹೀಗಾಗಿ ವೈಚಾರಿಕ, ವೈಜ್ಞಾನಿಕ, ಮತ್ತು ಆಶಾಭಾವಕ ಲೇಖಕರನ್ನು ನಾಡಿಗೆ ಪರಿಚಯಿಸಿತು. ಅಂದರೆ ಭಾರತೀಯ ಮತ್ತು ಪಾಶ್ಚಾತ್ಯಾ ಆಲೋಚನೆಗಳನ್ನು ಸಮೀಕರಿಸಿಕೊಂಡು ಹೊಸಗನ್ನಡ ಸಾಹಿತ್ಯದ ಸತ್ವ-ಮಹತ್ವಗಳನ್ನು ತಮ್ಮ ಬರವಣಿಗೆಯ ಮೂಲಕ ಪರಿಚಯಿಸಿದರು. ಬಹುಭಾಷೆ, ಬಹುಸಂಸ್ಕೃತಿಗಳ ಅಧ್ಯಯನದಿಂದ ಹಲವು ಜನ ಲೇಖಕ ವಿದ್ವಾಂಸರು ಶ್ರೇಷ್ಠ ಕವಿಗಳಾಗಿ, ಚಿಂತರಾಗಿ, ವಿಮರ್ಶಕರಾಗಿ ಮತ್ತು ಸಂಶೋಧಕರಾಗಿ ಹೆಸರು ಮಾಡಿದ್ದಾರೆ. ಅಂಥವರಲ್ಲಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಒಬ್ಬರು.

ಕನ್ನಡ ಸಾಹಿತ್ಯದಲ್ಲಿ ಅಪರೂಪವೆನ್ನುವಂತೆ ಬೇರೆ ಭಾಷೆಯಲ್ಲಿ ಪ್ರಾಧ್ಯಾಪಕ ವೃತ್ತಿಯನ್ನು ಅವಲಂಬಿಸಿ ಕನ್ನಡದಲ್ಲಿ ಸಮರ್ಥ ಲೇಖಕರಾಗಿ ಕೆಲ ಜನ ವಿದ್ವಾಂಸರು ನಮ್ಮ ಮುಂದಿದ್ದಾರೆ. ಅವರಲ್ಲಿ ಡಾ.ವಿ.ಕೃ.ಗೋಕಾಕ, ಡಾ. ಚಂದ್ರಶೇಖರ ಪಾಟೀಲ, ಡಾ.ಗಿರಡ್ಡಿಗೋವಿಂದರಾಜ, ಡಾ. ಯು.ಆರ್.ಅನಂತಮೂರ್ತಿ, ಗೋಪಾಲಕೃಷ್ಣ ಅಡಿಗ, ಡಾ. ಸುಮತೀಂದ್ರ ನಾಡಿಗ, ಮುಂತಾದವರು ಇಂಗ್ಲೀಷ್ ಪ್ರಾಧ್ಯಾಪಕರಾಗಿದ್ದು ಕನ್ನಡದಲ್ಲಿ ಪ್ರಸಿದ್ಧ ಲೇಖಕ ವಿಮರ್ಶಕರಾಗಿ ಹೆಸರು ಮಾಡಿದ್ದಾರೆ. ಅದೇರೀತಿ, ಅದೇರೀತಿ ಹಿಂದೀ ಸಾಹಿತ್ಯದ ಪ್ರಾಧ್ಯಾಪಕರಾಗಿ ಡಾ.ಕೆ.ಕೃಷ್ಣಮೂರ್ತಿ, ಡಾ. ಕಾಶೀನಾಥ ಅಂಬಲಗಿ, ಮುಂತಾದವರನ್ನು ಹೆಸರಿಸಬಹುದು. ನಮ್ಮ ಪಕ್ಕದ ರಾಜ್ಯಗಳಾದ ಆಂಧ್ರ, ತಮಿಳುನಾಡು, ಮಹಾರಾಷ್ಟ್ರ, ಕೇರಳ ರಾಜ್ಯಗಳಲ್ಲಿ ಕನ್ನಡ ಪ್ರಾಧ್ಯಾಪಕರಾಗಿ, ಆಯಾ ಪ್ರದೇಶದ ಭಾಷೆಯಲ್ಲಿ ಪರಿಣಿತಿಯನ್ನು ಪಡೆದು ಹತ್ತಾರು ಜನ ವಿದ್ವಾಂಸರು ಕಂಡುಬರುತ್ತಾರೆ. ಅವರಲ್ಲಿ ಡಾ. ತಮಿಳ್ ಸೆಲ್ವಿ ಮುಂತಾದವರನ್ನು ಉಲ್ಲೇಖಿಸಬಹುದು. ಮಹತ್ವದ ಸಂಗತಿಯೆಂದರೆ, ಎ.ಕೆ. ರಾಮಾನುಜನ್ ಮತ್ತು ಪ್ರೊ. ಹಿರೇಮಲ್ಲೂರು ಈಶ್ವರನ್ ಅವರಂಥ ಕನ್ನಡ ವಿದ್ವಾಂಸರು, ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿದ ವಿದ್ವಾಂಸರಾಗಿದ್ದಾರೆ. ಇದನ್ನೆಲ್ಲಾ ಇಲ್ಲಿ ಪ್ರಸ್ತಾಪಿಸುವ ಉದ್ದೇಶವಿಷ್ಟೇ, ಕನ್ನಡದಿಂದ ಬೇರೆ ಭಾಷೆಗೆ, ಬೇರೆ ಭಾಷೆಯಿಂದ ಕನ್ನಡಕ್ಕೆ ಜೀವಪರವಾದ ಸಂಸ್ಕೃತಿಯನ್ನು ವಿನಿಮಯ ರೂಪದಲ್ಲಿ ಪರಿಚಯಿಸಿದ ಕೀರ್ತಿಗೆ ಇವರು ಭಾಜನರಾಗಿದ್ದಾರೆ; ಎಂಬುದು ಇದರಿಂದಾಗಿ ಏಕನೆಲೆಯಲ್ಲಿ ಆಲೋಚಿಸುತ್ತಿದ್ದ ಕನ್ನಡ ಮನಸ್ಸಿಗೆ ಬಹುನೆಲೆಯಲ್ಲಿ ಚಿಂತಿಸುವ ಉಪಕ್ರಮವನ್ನು ಈ ಮಹನೀಯರು ಹಾಕಿಕೊಟ್ಟರೆಂಬುದನ್ನು ಸ್ಥೂಲವಾಗಿಯಾದರೂ ಒಪ್ಪಿಕೊಳ್ಳಬೇಕು. ಹೀಗೆ ವೃತ್ತಿ ಪ್ರವೃತ್ತಿಗಳಲ್ಲಿ ಹಿಂದೀ ಮತ್ತು ಕನ್ನಡತನವನ್ನು ಮೈಗೂಡಿಸಿಕೊಂಡು ಬೆಳೆದ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಮಗ್ರ ಸಾಹಿತ್ಯದ ವಿವಿಧ ಮುಖಗಳನ್ನು ಪರಿಚಯಿಸುವ ಉದ್ದೇಶವನ್ನು ಈ ಮಹಾಪ್ರಬಂಧ ಇರಿಸಿಕೊಂಡಿದೆ.

ನವ್ಯ ಸಾಹಿತ್ಯ ಘಟ್ಟದಲ್ಲಿ ತಮ್ಮನ್ನು ಗುರುತಿಸಿಕೊಂಡ ಡಾ. ಸಿದ್ಧಲಿಂಗ ಪಟ್ಟಣಶೆಟ್ಟರಿಗೆ ಪಾಶ್ಚಾತ್ಯ ಸಾಹಿತ್ಯ ಪ್ರೇರಣೆಯಾಗಿರುವುದನ್ನು ಅವರ ಸಾಹಿತ್ಯದಲ್ಲಿ ಕಾಣಬಹುದು. ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆ, ನವ್ಯಕಾವ್ಯದ ಸ್ವರೂಪಕಾವ್ಯ ಜಿಜ್ಞಾಸೆಯನ್ನು ರೂಪಿಸುವಲ್ಲಿ ಮಹತ್ವದ ಕೊಡುಗೆಯನ್ನು ನೀಡಿತು. ಇದರಿಂದ ಕಾವ್ಯ, ವಸ್ತು, ರೀತಿ, ತಂತ್ರ, ಶೈಲಿ, ಮತ್ತು ಧೋರಣೆಗಳಲ್ಲಿ ಮಹತ್ತರವಾದ ಬದಲಾವಣೆಗಳಾದವು. ಇವುಗಳ ಜೊತೆಗೆ ನವೋದಯ ಸಾಹಿತಿಗಳ ಆದರ್ಶಗಳಾದ ಪ್ರಕೃತಿಪ್ರೇಮ, ಆಧ್ಯಾತ್ಮಿಕತೆ, ಸೌಂದರ್ಯಪ್ರಿಯತೆ, ಕೌಟುಂಬಿಕ ಪ್ರೇಮಗಳನ್ನು ನವ್ಯ ಸಾಹಿತ್ಯ ನಿರಾಕರಿಸಿತು. ಜೀವನದ ಅತೃಪ್ತಿ, ನಿರಾಸೆ, ಬೇಸರ, ಭಿಭತ್ಸಗಳನ್ನು ವೈಭವೀಕರಿಸುತ್ತಾ ಸಿನಿಕತನವನ್ನು ತಮ್ಮ ಸಾಹಿತ್ಯದಲ್ಲಿನವ್ಯ ಕವಿಗಳು ಅಭಿವ್ಯಕ್ತಪಡಿಸಿದರು. ಬಳಕೆಯ ಮಾತು, ಛಂದಸ್ಸಿನಲ್ಲಿ ನವೀನ ಪ್ರಯೋಗತೆ, ವಾಸ್ತವಿಕತೆ, ವೈಚಾರಿಕತೆ, ಪ್ರತಿಮಾ ವಿಧಾನತೆಗಳಿಂದ ಕಾವ್ಯ ರಚನೆಗೈದರು. ಈ ಎಲ್ಲಾ ಅಂಶಗಳನ್ನು ಮೈಗೂಡಿಸಿಕೊಂಡು ಡಾ. ಸಿದ್ಧಲಿಂಗ ಪಟ್ಟಣಶೆಟ್ಟರು ಕಳೆದ ನಾಲ್ಕು ದಶಕಗಳಿಂದ ಸಾಹಿತ್ಯ ಕೃಷಿ ಮಾಡುತ್ತಾಬಂದಿದ್ದಾರೆ. ಹಾಗೆಯೇ ನವ್ಯ ಕವಿಗಳಲ್ಲಿ ಪ್ರಮುಖರಾಗಿದ್ದಾರೆ. ಈ ನವ್ಯದ ಆಲೋಚನೆ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಾಹಿತ್ಯ ಕ್ರಿಯೆಯಲ್ಲಿ ಕುಡಿಯೊಡೆದು ಹೆಮ್ಮರವಾಗಿ ಬೆಳೆದ ಬಗೆಯನ್ನು ಗುರುತಿಸುವುದು ಈ ಮಹಾಪ್ರಬಂಧ ಮತ್ತೊಂದು ಉದ್ದೇಶವಾಗಿದೆ.

ನವ್ಯ ಕಾವ್ಯದ ಕೃಷಿ ಉತ್ಕೃಷ್ಟತೆಯಲ್ಲಿದ್ದ ಕಾಲದಲ್ಲಿ ಕಾವ್ಯ ರಚನೆಗೆ ತೊಡಗಿದ ಸಿದ್ಧಲಿಂಗ ಪಟ್ಟಣಶೆಟ್ಟರು ಕಾವ್ಯ, ವಿಮರ್ಶೆ, ಕಥೆ, ನಾಟಕ, ರಂಗ ಭೂಮಿ, ಜೀವನ ಚರಿತ್ರೆ, ಪತ್ರಿಕೆ ಹಾಗೂ ಅಂಕಣ ಬರಹಗಾರರಾಗಿ ಹೆಸರು ಮಾಡಿದ್ದಾರೆ. ವೃತ್ತಿಯಿಂದ ಹಿಂದೀ ಪ್ರಾಧ್ಯಾಪಕರಾದ ಇವರು ಮರಾಠಿ, ಸಂಸ್ಕೃತ, ಉರ್ದು, ಇಂಗ್ಲೀಷ್, ಹಿಂದೀ ಮುಂತಾದ ಭಾಷೆಗಳ ಶ್ರೇಷ್ಠ ಸಾಹಿತ್ಯವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಬಹುಭಾಷೆ ಬಹು ಸಂಸ್ಕೃತಿಗಳಿಂದ ಕನ್ನಡವನ್ನು ಶ್ರೀಮಂತಗೊಳಿಸಿದ್ದಾರೆ. ಸುಮಾರು ೮೦ ಕ್ಕಿಂತಲೂ ಹೆಚ್ಚು ಕೃತಿಗಳಲ್ಲಿ ಹರಡಿಕೊಂಡಿರುವ ಇವರ ಸಾಹಿತ್ಯಿಕ ಅಧ್ಯಯನವೆಂದರೆ ಒಂದರ್ಥದಲ್ಲಿ ಕನ್ನಡ ಮತ್ತು ಕನ್ನಡೇತರ ಸಂಸ್ಕೃತಿಯ ವೈವಿಧ್ಯತೆಯನ್ನು ಕಟ್ಟಿಕೊಡುವುದೇ ಆಗಿದೆ.

ಡಾ. ಪಟ್ಟಣಶೆಟ್ಟಿಯವರ ಈ ದ್ವಿಭಾಷಿಕ ಸಾಹಿತ್ಯ ಸೃಷ್ಟಿಯ ಶ್ರಮವನ್ನು ತುಲನಾತ್ಮಕವಾಗಿ ವಿಶ್ಲೇಷಿಸುವುದು ಈ ಮಹಾಪ್ರಬಂಧದ ಮೊಗದೊಂದು ಉದ್ದೇಶವಾಗಿದೆ.

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಾಹಿತ್ಯ ಕೃಷಿ ಸೃಷ್ಟಿ, ಅನುವಾದ, ಅಂಕಣ, ಪತ್ರಿಕಾ ಸಾಹಿತ್ಯದಲ್ಲಿ ನೆಡೆದಿದೆ. ಈ ಪ್ರಮುಖ ವಿಭಾಗಗಳಲ್ಲಿ ಮತ್ತೆ ಅವರು ಕಾವ್ಯ, ಕಥೆ, ನಾಟಕ, ಕಾದಂಬರಿ, ಜೀವನ ಚರಿತ್ರೆ, ವಿಚಾರ ಸಾಹಿತ್ಯ ವಿಮರ್ಶೆ ವ್ಯಕ್ತಿ ಚಿತ್ರಣ ಅಂಕಣಸಾಹಿತ್ಯ ಸಂಪಾದನೆ, ಹೀಗೆ ಹಲವು ಪ್ರಕಾರಗಳಲ್ಲಿ ವ್ಯಾಪಿಸಿಕೊಂಡಿದೆ.

ಈ ಎಲ್ಲಾ ಪ್ರಕಾರಗಳನ್ನು ಮುಖಾಮುಖಿಗೊಳಿಸುವುದು ನಮ್ಮ ಮಹಾಪ್ರಬಂಧದ ವ್ಯಾಪ್ತಿಯಾಗಿದೆ. ಈ ಎಲ್ಲಾ ಸಾಹಿತ್ಯ ಪ್ರಕಾರಗಳಲ್ಲಿ ಡಾ. ಸಿದ್ಧಲಿಂಗಪಟ್ಟಣಶೆಟ್ಟಿಯವರು, ನಿರ್ವಹಿಸಿದ ಪಾತ್ರವನ್ನು ಅವರ ಮೇಲಾದ ಅನ್ಯಭಾಷೆಯ ಪ್ರಭಾವವನ್ನು ಸೈದ್ಧಾಂತಿಕವಾಗಿ ಗುರುತಿಸುವುದು ಈ ಪ್ರಬಂಧದ ಆಶಯವಾಗಿದೆ.

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ವಿಶೇಷವಾಗಿ, ಗೋಕಾಕ, ಅಡಿಗ, ಲಂಕೇಶ, ಚಂದ್ರಶೇಖರ ಪಾಟೀಲ, ಅನಂತಮೂರ್ತಿ, ತೇಜಸ್ವಿ ಅವರಂಥ ಸಾಹಿತಿಗಳ ಕೊಡುಗೆ ಅಪಾರ. ನವ್ಯದ ವಾಸ್ತವಿಕ ಪ್ರಜ್ಞೆ, ವಸ್ತು ನಿಷ್ಠೆ ಬದುಕು; ಸ್ವಚ್ಛಂದ ಸರಳ ಭಾಷೆ ಪ್ರಯೋಗ, ವ್ಯವಸ್ಥೆಯ ವಿರುದ್ಧ ಆಕ್ರೋಶ, ಸಂಕೀರ್ಣ ಬದುಕಿನ ನೆಲೆಗಳನ್ನು ಅಳವಡಿಸಿಕೊಂಡ ಅನೇಕ ಕನ್ನಡ ಚಿಂತಕರ ಸಾಲಿನಲ್ಲಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸ್ಥಾನವನ್ನು ನಿರ್ದೇಶಿಸುವುದು ಈ ಮಹಾಪ್ರಬಂಧದ ಮಹತ್ವದ ಅಂಶವಾಗಿದೆ. ವಿಶೇಷವಾಗಿ, ಧಾರವಾಡ ಕನ್ನಡ ಭಾಷೆಯ ಮೂಲಕ ಉತ್ತರ ಕರ್ನಾಟಕದ ಸಂಸ್ಕೃತಿಯನ್ನು, ಸಮಗ್ರ ಕನ್ನಡ ಸಾಹಿತ್ಯಕ್ಕೆ ನೀಡಿದ ಶ್ರೇಯಸ್ಸು ಇವರದಾಗಿದೆ. ನಾಟಕ ರಚನೆ, ರಂಗಭೂಮಿಯ ಪ್ರಯೋಗ, ನಿರ್ದೇಶನಗಳ ಮೂಲಕ ದೃಶ್ಯ ಮಾಧ್ಯಮ ಸಾಹಿತ್ಯಕ್ಕೆ ಬಲವನ್ನು ತಂದುಕೊಟ್ಟವರು. ಹಾಗೆಯೇ ಅಂಕಣ ಸಾಹಿತ್ಯ ಹೀಗೆ ಬಹುಮುಖ ವ್ಯಕ್ತಿತ್ವದ ಪಟ್ಟಣ ಶೆಟ್ಟಿಯವರ ಪತ್ರಿಕಾ ಕೃಷಿ ಶುದ್ಧ ಶೈಕ್ಷಣಿಕ ಪತ್ರಿಕೋದ್ಯಮಕ್ಕೆ ನಾಂದಿ ಹಾಡಿರುವುದನ್ನು ಮರೆಯಲಾಗದು. ಈ ಎಲ್ಲಾ ಅಂಶಗಳನ್ನು ಚರ್ಚಿಸಿರುವುದು ಈ ಮಹಾಪ್ರಬಂಧದ ವ್ಯಾಪ್ತಿ ಮತ್ತು ಉದ್ದೇಶವಾಗಿದೆ.

ಸಾಮಾನ್ಯವಾದ ಅರ್ಥದಲ್ಲಿ ಹೇಳಬೇಕೆಂದರೆ ಒಂದು ಕಾವ್ಯ ಕೃತಿಯನ್ನು ಸಂಪಾದಿಸಿ ಪ್ರಕಟಿಸುವುದು ಸಂಶೋಧನೆ, ಡಾ.ಎಂ. ಚಿದಾನಂದಮೂರ್ತಿಯವರು ಕಾವ್ಯಕೃತಿಯನ್ನು ಕುರಿತುಮಾಡುವ ಆಸ್ವಾದನೆ, ವಿಶ್ಲೇಷಣೆ, ವಿಮರ್ಶೆ, ತೀರ್ಮಾನಗಳೇ ಸಂಶೋಧನೆಯೆಂದು ತಮ್ಮ ಸಂಶೋಧನಾ ಕೃತಿಯಲ್ಲಿ ಅಭಿಪ್ರಾಯಪಡುತ್ತಾರೆ. ಆಧುನಿಕ ಕನ್ನಡ

ಸಾಹಿತ್ಯದಲ್ಲಿ ಸಂಶೋಧನೆ ಎಂಬ ಪರಿಕಲ್ಪನೆಯನ್ನು ವಿಮರ್ಶೆ ಎಂಬ ಚೌಕಟ್ಟಿನಲ್ಲಿ ಗುರುತಿಸಲಾಗುತ್ತದೆ ಎಂದು ಡಾ.ಕೆ.ವಿ. ನಾರಾಯಣ ಅವರು ಅರ್ಥೈಸಿದ್ದಾರೆ. (ಅಂಕಣ ಗ೯ಲಜ) ಆದರೆ ಹಳಗನ್ನಡವೇ ಇರಲಿ ಹೊಸಗನ್ನಡ ಕಾವ್ಯಗಳೇ ಇರಲಿ ಅವನ್ನು ಕುರಿತು ಅಧ್ಯಯನ ಮಾಡುವಾಗ ಸಂಶೋಧನೆ ಮತ್ತು ವಿಮರ್ಶೆ ಎರಡೂ ಕಾರ್ಯಗಳು ಒಟ್ಟಿಗೆ ನೆಡೆಯುತ್ತವೆ. ಆದುದರಿಂದ ಸಂಶೋಧನೆ ಬೇರೆ ಅಲ್ಲ. ವಿಮರ್ಶೆ ಬೇರೆ ಅಲ್ಲ. ಇವೆರಡರ ಪರಿಕಲ್ಪನೆಗಳು ಮೇಲುನೋಟಕ್ಕೆ ಬೇರೆ ಬೇರೆಯಾಗಿರುವಂತೆ ಕಂಡುಬಂದರೂ ಬಹಳ ಹತ್ತಿರದಲ್ಲಿಯೂ ಇವೆ. ಪರಸ್ಪರ ಪೂರಕವಾಗಿವೆ. ಈ ಹಿನ್ನೆಲೆಯಲ್ಲಿ ಈ ಪ್ರಬಂಧದ ಮೂಲಕ ಈ ಬಗೆಯ ಸಂಶೋಧನ ಶಿಸ್ತುಗಳಿಗೆ ನಿಜವಾದ ನ್ಯಾಯ ಒದಗಿಸುವಂತಾಗುತ್ತದೆಂಬುದನ್ನು ಪ್ರಸ್ತುತ ಮಹಾಪ್ರಬಂಧದಲ್ಲಿ ಮೌಲ್ಯನಿಷ್ಠ ಸಂಶೋಧನ ಸ್ವರೂಪವನ್ನು ಅಳವಡಿಸಿಕೊಳ್ಳಲಾಗಿದೆ.

ಒಟ್ಟಿನಲ್ಲಿ ನವ್ಯ ಕಾಲದ ಸಾಹಿತ್ಯ ಚರಿತ್ರೆಯಲ್ಲಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಾಹಿತ್ಯದ ವಿಶೇಷತೆಯನ್ನು ಸಮಾಲೋಚಿಸಿದ ಮಹಾಪ್ರಬಂಧ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಸಮಗ್ರ ಸಾಹಿತ್ಯ ಒಂದು ಅಧ್ಯಯನವಾಗಿದೆ.

* * *

## ಅಧ್ಯಾಯ-೨

## ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಬದುಕು

### ೧. ಬಾಲ್ಯ, ಶಿಕ್ಷಣ

ನವ್ಯಕವಿ ಸಿದ್ಧಲಿಂಗ ಪಟ್ಟಣ ಶೆಟ್ಟಿಯವರ ಬಾಲ್ಯ ಕಷ್ಟಮಯವಾಗಿತ್ತು. ಇವರ ತಂದೆ ಬಸಪ್ಪ ಶೆಟ್ಟರು ತಾಯಿ ಗಿರಿಜವ್ವ, ಇವರ ಹಿರಿಯರು ಅನೇಕ ತಲೆಮಾರುಗಳಿಂದ ಧಾರವಾಡದ ಜವಳಿಪೇಟೆ ಹತ್ತಿರದ ಬಾಳಿಕಾಯಿ ಓಣಿಯಲ್ಲಿ ವಾಸವಾಗಿದ್ದಾರೆ. ಈಗಲೂ ಪಟ್ಟಣಶೆಟ್ಟರ ಸಂಬಂಧಿಗಳು ಅಲ್ಲಿಯೇ ಇದ್ದಾರೆ. ತಾಯಿ ಗಿರಿಜವ್ವನ ಊರು ಧಾರವಾಡದ ೧೦ ಕಿಲೋ.ಮೀ ದೂರದಲ್ಲಿರುವ ಯಾದವಾಡ. ಪಟ್ಟಣಶೆಟ್ಟರ ಮನೆತನದ ಬಗ್ಗೆ ಹೆಳವ ತಮ್ಮಣ್ಣ ಯಲ್ಲಪ್ಪ ಚಣಬತ್ತಿ ಇವನಿಂದ ಕೆಲವೊಂದು ಮಾಹಿತಿಗಳು ದೊರೆಯುತ್ತವೆ. ಈ ಹೆಳವ ತಮ್ಮಣ್ಣನಿಗೆ ಈಗ ಸುಮಾರು ಎಂಬತ್ತಕ್ಕಿಂತ ಹೆಚ್ಚು ವಯಸ್ಸಾಗಿದೆ. ಅವನು ಆಗಾಗ ಪಟ್ಟಣಶೆಟ್ಟರ ಮನೆಗೆ ಬಂದು ಅವರ ಮನೆತನದ ವಿವರಗಳನ್ನು ನೀಡುತ್ತಾನೆ. ಈಗ ಇವನು ಕಲಘಟಗಿ ತಾಲೂಕಿನ ಹಸರಂಬಿ ಹುಲಿಕೊಪ್ಪದ ಹತ್ತಿರ ಅರೇಬಸನ ಕೊಪ್ಪದಲ್ಲಿ ನೆಲೆಸಿದ್ದಾನೆ. ಇವನು ಹೇಳುವ ಪ್ರಕಾರ ಕಲಘಟಗಿಯ ಹಿರೇಮಠದ ಕರಿಬಸಯ್ಯ ಸ್ವಾಮಿ ಪಟ್ಟಣಶೆಟ್ಟರ ಮನೆತನದ ಗುರುಗಳು. ಶ್ರೀಶೈಲದ ಪರ್ವತ ಮಲ್ಲಯ್ಯ ಮನೆದೇವರು. ಮೊದಲು ಇಂಡಿ, ಯಳಮಲಿಗಳಲ್ಲಿ ಗೌಡಕಿಮಾಡಿದ ಮನೆತನ. ದೊಡ್ಡಮಲ್ಲಪ್ಪ, ಪರಪ್ಪಶೆಟ್ಟರು, ಗುರುಸಿದ್ದಪ್ಪ ಮುಂತಾದವರು ಮೂಲ ಪುರುಷರು. ಈತನ ಜೋಪಡಿ ಪುಸ್ತಕದ ಪಟ್ಟಿಯ ಪ್ರಕಾರ ತಂದೆ ಬಸಪ್ಪ ಹದಿಮೂರನೆಯವರು ಪಟ್ಟಣಶೆಟ್ಟರು ಹದಿನಾಲ್ಕನೆಯವರು.

ಪಟ್ಟಣಶೆಟ್ಟರ ಜನ್ಮದಿನಾಂಕ ಶಾಲಾ ದಾಖಲಾತಿಗಳ ಪ್ರಕಾರ ೦೩.೧೧.೧೯೩೯ ಎಂದಿದೆ. ಆದರೆ ತಾಯಿ ಗಿರಿಜವ್ವ ಹೇಳುವ ಪ್ರಕಾರ ನಾಗರಪಂಚಮಿಗಿಂತ ಒಂದು ದಿನ ಮೊದಲು ಶುಕ್ರವಾರ ಬೆಳಿಗ್ಗೆ ೫ ಗಂಟೆ, ೩೦ ನಿಮಿಷಕ್ಕೆ ಎಂದು. ಇದೇ ನಿಜವಾದರೆ ದಿನಾಂಕ ೨೬.೦೫.೧೯೪೦ ಲೇಖಕರ ನಿಜವಾದ ಜನ್ಮದಿನಾಂಕವಾಗುತ್ತದೆ. ಆದರೆ ಶಾಲಾ ಜನ್ಮದಿನಾಂಕವನ್ನು ಲೆಕ್ಕಹಾಕಿ ೫೮ನೇ ವಯಸ್ಸಿನಲ್ಲಿ ಅಂದರೆ ೧೯೯೯ರಲ್ಲಿ ಅಧ್ಯಾಪಕ ವೃತ್ತಿಯಿಂದ ನಿವೃತ್ತಿಯಾಗಿದ್ದಾರೆ. ಪಟ್ಟಣಶೆಟ್ಟರು ಎರಡುವರೆ ವರ್ಷದವರಿದ್ದಾಗ ತಂದೆ ಬಸಪ್ಪನವರು ತೀರಿಕೊಂಡರು. ಮುಂದೆ

ತಾಯಿ ಮತ್ತು ಸೋದರ ಮಾವಂದಿರ ಆಶ್ರಯದಲ್ಲಿ ಬೆಳೆಯಬೇಕಾಯಿತು. ತಂದೆ ಬಸಪ್ಪನವರು ಸ್ಥಿತಿವಂತರಾಗಿರಲಿಲ್ಲ. ಅಪ್ಪಸಾಹೇಬ ಮಿಣಜಿಗಿಯವರ ದಲ್ಲಾಳಿ ಅಂಗಡಿಯಲ್ಲಿ ಮುಖ್ಯ ಕಾರುಕೂನನಾಗಿ ಕೆಲಸ ಮಾಡುತ್ತಿದ್ದ. ತಿಂಗಳ ಪಗಾರ ೨೦ ರೂಪಾಯಿಯಲ್ಲಿಯೇ ಸುಖವಾಗಿ ಸಂಸಾರ ನಡೆಸುತ್ತಿದ್ದ. ಈಗ ತಂದೆ ತೀರಿದ ನಂತರ, ಧಾರವಾಡದಲ್ಲಿ ಬದುಕು ಸಾಗಿಸುವುದು ಕಷ್ಟವಾಯಿತು. ಆದಕಾರಣ ಗಿರಿಜವ್ವ ಮಗನನ್ನು ಕರೆದುಕೊಂಡು ತವರು ಮನೆ ಯಾದವಾಡಕ್ಕೆ ಹೋದಳು. ಆದರೆ ಅಲ್ಲಿಯೂ ಬಡತನ ಕಿತ್ತು ತಿನ್ನುತ್ತಿತ್ತು. ಆಗ ತಾಯಿ ಗಿರಿಜವ್ವನ ಚಿಕ್ಕಪ್ಪ ಮನಗಂಡಿಯಲ್ಲಿದ್ದರು. ಆತನ ಹೆಸರು ಬಸಪ್ಪಜ್ಜ. ಅವರು ಸ್ಥಿತಿವಂತರಾದ ಕಾರಣ ಗಿರಿಜವ್ವ, ಪಟ್ಟಣಶೆಟ್ಟರು ಸೋದರಮಾವಂದಿರು ಮನಗಂಡಿಗೆ ಬಂದಿಳಿದರು.

ಪಟ್ಟಣಶೆಟ್ಟರಿಗೆ ಮನಗಂಡಿಗೆ ಬಂದಾಗ ಆರುವರ್ಷಗಳಾಗಿದ್ದವು, ಆಗಿನ ಕಾಲದ ಶಿಕ್ಷಣ ಪದ್ಧತಿಯಂತೆ ಮೊದಲು ಸಣ್ಣ ಬಿನ್ನೇತ್ತ, ನಂತರ ದೊಡ್ಡ ಬಿನ್ನೇತ್ತ, ಅಮೇಲೆ ಒಂದನೇತ್ತ, ಎರಡನೇತ್ತ ಹೀಗೆ ಅವರ ಪ್ರಾಥಮಿಕ ಶಿಕ್ಷಣ ಆರಂಭವಾಯಿತು. ಸಂಗಪ್ಪ ಅಂಗಡಿ ಎನ್ನುವ ಶಿಕ್ಷಕರೇ ಶೆಟ್ಟರ ಹೆಸರನ್ನು ಶಾಲೆಯಲ್ಲಿ ದಾಖಲಿಸಿಕೊಂಡರು. ಇಡೀ ಶಾಲೆಗೆ ಅವರೊಬ್ಬರೇ ಶಿಕ್ಷಕರಿದ್ದರು. ಚೆನ್ನಾಗಿ ಓದುವ ವಿದ್ಯಾರ್ಥಿಗಳಿಗೆ ತುಂಬಾ ಪ್ರೋತ್ಸಾಹ ನೀಡುತ್ತಿದ್ದರು. ತಾವು ಮಾಡಿಕೊಂಡಿದ್ದ ಜೋಪಡಿಗಳನ್ನು ಪಟ್ಟಣಶೆಟ್ಟರ ಕೈಯಲ್ಲಿ ಕೊಟ್ಟು ಉಳಿದ ವಿದ್ಯಾರ್ಥಿಗಳಿಗೆ ಹೇಳಿಸುತ್ತಿದ್ದರು. ಅವನ್ನು ತಿದ್ದುವ ಕೆಲಸವನ್ನು ಶೆಟ್ಟರಿಗೇ ವಹಿಸುತ್ತಿದ್ದರು. ಅಲ್ಲದೆ ಶಾಲಾ ಗ್ರಂಥಾಲಯದಲ್ಲಿದ್ದ ಚಿಕ್ಕ ಚಿಕ್ಕ ಪುಸ್ತಕಗಳನ್ನು ಕೊಡುತ್ತಿದ್ದರು. ಇದರಿಂದಾಗಿ ಶೆಟ್ಟರಿಗೆ ಬಾಲ್ಯದಲ್ಲಿಯೇ ಓದುವ ಅಭಿರುಚಿ ಬೆಳೆಯಿತು. ಒಮ್ಮೊಮ್ಮೆ ನಿನಗೆ ತಿಳಿದಿದ್ದನ್ನು ಏನಾದರೂ ಆಗಲಿ ಬಿಡಿ ಎಂದು ಹೇಳುತ್ತಿದ್ದರು. ಸಂಗಪ್ಪ ಅಂಗಡಿ ಮಾಸ್ತರರಿಗೆ ಭಾಷೆ ಮತ್ತು ಗಣಿತ ವಿಷಯಗಳಲ್ಲಿ ತುಂಬಾ ಆಸಕ್ತಿಯಿತ್ತು. ಆದರೆ ಶೆಟ್ಟರ ಮನಸ್ಸು ಭಾಷೆಯನ್ನು ಸ್ವೀಕರಿಸಿದಷ್ಟು ಗಣಿತವನ್ನು ಸ್ವೀಕರಿಸಲಿಲ್ಲ. ಅವರು ಹೊಡೆದು ಬಡಿದರೂ ಇಪ್ಪತ್ತಕ್ಕಿಂತ ಹೆಚ್ಚಿನ ಮಗ್ಗಿಗಳನ್ನು ಕಲಿಯಲು ಆಗಲಿಲ್ಲ. ಮುಂದೆ ಹೊಸದಾಗಿ ಬಂದ ಶಿಕ್ಷಕ ಮುತಾಲಿಕರು ರಾತ್ರಿ ಹೊತ್ತಿನಲ್ಲಿಯೂ ಪಾಠ ಹೇಳಿಕೊಡುತ್ತಿದ್ದರು. ಶೆಟ್ಟರು ಗುಬ್ಬಿ, ಕಂದೀಲು ಹಿಡಿದುಕೊಂಡು ಅವರ ಮನೆಗೆ ಹೋಗುತ್ತಿದ್ದರು. ಅಲ್ಲಿಯೇ ಮಲಗಿ ಬೆಳಿಗ್ಗೆ ಎದ್ದು ಓದುತ್ತಿದ್ದರು. ಸಂಗಪ್ಪ ಅಂಗಡಿ ಮತ್ತು ಮುಂತಾದ ಶಿಕ್ಷಕರು ಶೆಟ್ಟರ ಪ್ರಾಥಮಿಕ ಶಿಕ್ಷಣಕ್ಕೆ ಬುನಾದಿಯನ್ನು ಹಾಕಿದರು.

ಶೆಟ್ಟರು ಬಾಲ್ಯದ ಹೆಚ್ಚಿನ ವರ್ಷಗಳು ಮನಗಂಡಿಯಲ್ಲೇ ಕಳೆದವು. ಮೂರನೇ ವರ್ಷದಿಂದ ಆರನೇ ವರ್ಷದವರೆಗೆ ಮಾತ್ರ ಯಾದವಾಡದಲ್ಲಿದ್ದರು. ಮನಗಂಡಿಯಲ್ಲಿ ಐದನೇ ತರಗತಿಯ ನಂತರ ಶಾಲೆಯಿರಲಿಲ್ಲ. ಶೆಟ್ಟರು ಬಿನ್ನೇತ್ತಯಿಂದ ಐದನೇ ತರಗತಿಯವರೆಗೆ ಅಂದರೆ ೧೯೫೧ ರವರೆ ಏಳುವರ್ಷಗಳವರೆಗೆ ಈ ಊರಿನಲ್ಲಿ ಇದ್ದರು. ಅದು ಕಷ್ಟದಲ್ಲಿಯೇ ಬಾಲ್ಯದಲ್ಲಿ ಅನುಭವಿಸಬೇಕಾದ ಅವಕಾಶದಿಂದ ಶೆಟ್ಟರು ವಂಚಿತರಾಗಿದ್ದರು. ಏಕೆಂದರೆ ಬಸಪ್ಪಜ್ಜನ ಚಹಾದಂಗಡಿಯಲ್ಲಿ ಕಸ ಬಳಿಬೇಕಿತ್ತು, ಕಪ್ಪು ಬಸಿಗಳನ್ನು ತೊಳೆಯಬೇಕಿತ್ತು. ಹೋಟಲ್ಲಿಗಾಗಿ ಉಳ್ಳಾಗಡ್ಡಿ ಹಚ್ಚುವುದು. ಬಾಲಕ ಶೆಟ್ಟರ ನಿತ್ಯದ ಕೆಲಸಗಳಾಗಿದ್ದವು. ಸುಗ್ಗಿಯ ಕಾಲದಲ್ಲಿ ದನಗಳನ್ನು ಬಿಟ್ಟುಕೊಂಡು ಹೋಗುವ, ಕಣದಲ್ಲಿದ್ದವರಿಗೆ ರೊಟ್ಟಿಗಂಟು ಒಯ್ಯುವ, ಸಂಜೆ ದನಗಳ ಜೊತೆ ಹುಲ್ಲುಹೊರೆ ಹೊತ್ತು ತರುವ ಕೆಲಸ ಮಾಡಬೇಕಾಗುತ್ತಿತ್ತು. ಅಜ್ಜ ಮಾವಂದಿರ ಜೊತೆಗೆ ಹಂತಿ ತಿರುಗುವುದು, ಹಾಡುವುದು, ರಾತ್ರಿ ನಡುಗುವ

ಚಳಿಯಲ್ಲಿ ಬೆಂಕಿ ಕಾಯಿಸಿಕೊಳ್ಳುವುದೂ ಮುಂತಾದ ಕೆಲಸಗಳು ಹೊರೆಯನಿಸಿದರೂ ಅದರಲ್ಲಿ ಶೆಟ್ಟರು ಆನಂದವನ್ನು ಕಂಡರು.

ಒಂದು ಸಂಜೆ ಶುಕ್ರವಾರ ಬಸಪ್ಪಜ್ಜ, ಅಂಗಡಿಮಾಸ್ತರರು ಗಂಭೀರ ದುಃಖಿತರಾಗಿ ಧಾರವಾಡದಿಂದ ಬಂದರು. ಅವರು ಧಾರವಾಡದ ರೇಡಿಯೋದಲ್ಲಿ ಕೇಳಿದ ಸುದ್ಧಿ ಊರಜನರನ್ನೆಲ್ಲಾ ಸೇರಿಸಿ ನೋವಿನ ಮಡುವಿನಲ್ಲಿ ಮುಳುಗಿಸಿತ್ತು. ಅಂದು ೧೯೪೮ ಜನವರಿ ೩೦ನೇ ತಾರೀಖು ಗಾಂಧೀಜಿಯ ಹತ್ಯೆ ನೆಡೆದಿತ್ತು. ಗೋಡ್ಸೆ ಎಂಬಾತ ರಾಷ್ಟ್ರಪಿತನನ್ನು ಕೊಲೆಗೈದಿದ್ದಾನೆ. ಹೆಚ್ಚಿನ ವರದಿಗಳು ನಾಳಿನ ದಿನಪತ್ರಿಕೆಗಳಲ್ಲಿ ದೊರೆಯುತ್ತವೆ ಎಂದು ಹೇಳಿದರು. ಗಾಂಧೀಜಿಯ ಮೇಲೆ ಗೌರವವಿದ್ದ ಶೆಟ್ಟರು ಅಂದಿನಿಂದ ಚಹಾ ಕುಡಿಯ ಬಾರದೆಂದು ನಿರ್ಧರಿಸಿದರು. ೧೯೫೬ ರ ಕಾರ್ಯಕ್ರಮವೊಂದರಲ್ಲಿ ಕೆಲವು ಅತಿಥಿಗಳು ಒತ್ತಾಯ ಮಾಡಿ ಚಹಾ ಕುಡಿಸಿದರು. ಮುಂದೆ ಶೆಟ್ಟರು ಗಾಂಧೀಜಿಯ ಬಗ್ಗೆ ಬಹಳಷ್ಟು ಓದಿಕೊಂಡರು. ಕೆಲವೊಂದು ವಿಷಯಗಳಲ್ಲಿ ಭಿನ್ನಮತವೆನಿಸಿದರೂ ಗಾಂಧೀಜಿಯ ವಿಶಿಷ್ಟ ಯೋಚನಾಲಹರಿ, ಸಿದ್ಧಾಂತ ಕಾರ್ಯಪ್ರವೃತ್ತಿ ಸುಂದರ ವ್ಯಕ್ತಿತ್ವಗಳಿಂದ ಗಾಂಧೀ ಅಭಿಮಾನಿಗಳಾದರು.

ಮನಗಂಡಿಯಲ್ಲಿ ಐದನೇಯ ತರಗತಿ ನಂತರ ಶಾಲೆಯಿರಲಿಲ್ಲದ ಕಾರಣ ತಾಯಿ ಗಿರಿಜವ್ವನಿಗೆ ಮಗನ ವಿದ್ಯಾಭ್ಯಾಸದ ಬಗ್ಗೆ ದೊಡ್ಡ ಚಿಂತೆಯಾಗಿತ್ತು. ಧಾರವಾಡಕ್ಕೆ ಮುಂದಿನ ವಿದ್ಯಾಭ್ಯಾಸಕ್ಕೆ ಕಳಿಸಲು ಬಸಪ್ಪಜ್ಜನ ವಿರೋಧವಿತ್ತು. ಆದರೆ ಶಿಕ್ಷಕ ಸಂಗಪ್ಪ ಅಂಗಡಿ ಮತ್ತು ತಾಯಿ ಗಿರಿಜವ್ವ ಅಜ್ಜನ ತೀವ್ರ ವಿರೋಧದ ನಡುವೆಯೂ ಧಾರವಾಡದ ಸರಕಾರಿ ಪ್ರಾಕ್ಟಿಸಿಂಗ್ ಶಾಲೆಗೆ ಆರನೇ ತರಗತಿಗೆ ಸೇರಿಸಿದರು. ಅಲ್ಲಿನ ಶಿಕ್ಷಕರಾದ ಘ.ಸ. ಮುಳು ಗುಂದ ಮಠರು ಇವರನ್ನು ಪ್ರೀತಿಯಿಂದ ಕಂಡರು. ಬಿ.ಪಿ. ನವಲಗುಂದ ಶಿಕ್ಷಕರು, ಸಾಹಿತ್ಯಾಸಕ್ತಿಯನ್ನು ಬೆಳೆಸಿದರು. ಅವರಿಂದ ಭಾಷೆ ಮತ್ತು ಛಂದಸ್ಸುಗಳನ್ನು ಕಲಿತರು. ಕಲ್ಪನಾ ಪ್ರಬಂಧಗಳನ್ನು ಬರೆಯಲು ಪ್ರೋತ್ಸಾಹಿಸುತ್ತಿದ್ದರು. ಮುಖ್ಯ ಶಿಕ್ಷಕರಾದ ಮಲ್ಲಪ್ಪ ಬಂಗಾರಿಯವರು ಶೆಟ್ಟರನ್ನು ಸ್ಕಾಲರ್ ಶಿಪ್ ಪರೀಕ್ಷೆಗೆ ಕೂಡಿಸಿದರು. ಇಡೀ ಕರ್ನಾಟಕದಲ್ಲಿ ಮೊದಲ ಸ್ಥಾನಗಳಿಸಿದ ೨೮ ವಿದ್ಯಾರ್ಥಿಗಳಿಗೆ ಮಾತ್ರ ಸ್ಕಾಲರ್‌ಶಿಪ್ ಸಿಗುತ್ತಿತ್ತು. ಇದು ಸಿಕ್ಕರೆ ಮ್ಯಾಟ್ರಿಕ್, ಹನ್ನೊಂದನೇ ತರಗತಿ ಪಾಸಾಗುವವರೆಗೆ ಪ್ರತಿ ತಿಂಗಳು ಹಣ ಬರುತ್ತಿತ್ತು. ಶೆಟ್ಟರು ಈ ಪರೀಕ್ಷೆಯಲ್ಲಿ ಪಾಸಾಗಿ ಸ್ಕಾಲರ್‌ಶಿಪ್ ಪಡೆದರು. ಮಲ್ಲಪ್ಪ ಬಂಗಾರಿ ಶಿಕ್ಷಕರು ಶೆಟ್ಟರ ಹೈಸ್ಕೂಲ್ ವಿದ್ಯಾಭ್ಯಾಸಕ್ಕೆ ಹೀಗೆ ಸಹಾಯ ಮಾಡಿದರು. ಆಗಲೂ ಬಡತನ ಇವರನ್ನು ಕಾಡುತ್ತಿತ್ತು. ನಿಧಾನವಾಗಿ ತಾಯಿ ಗಿರಿಜವ್ವ ಯಾಲಕ್ಕಿ ಶೆಟ್ಟರ ಮನೆಯಲ್ಲಿ ಶೇಂಗಾ ಒಡೆಯುವ, ಸುಣ್ಣ ಹಚ್ಚುವ, ಸಾರಿಸುವ, ಹಬ್ಬ ಹರಿದಿನಗಳಲ್ಲಿ, ಮದುವೆಗಳಲ್ಲಿ, ಅಡಿಗೆಮಾಡುವ ಕೆಲಸಕ್ಕೆ, ಕೆಲವೊಮ್ಮೆ ಹೊಲದಲ್ಲಿ ಕೆಲಸಮಾಡಲು ಹೋಗುತ್ತಿದ್ದಳು. ತಾನು ಕಷ್ಟಪಡುತ್ತಲೇ ಮಗನ ಶಿಕ್ಷಣವನ್ನು ನಿರಂತರವಾಗಿ ಮುಂದುವರಿಯುವಂತೆ ನೋಡಿಕೊಂಡಳು.

ಏಳನೇ ತರಗತಿ ಪರೀಕ್ಷೆಯನ್ನು ಪ್ರಥಮ ವರ್ಗದಲ್ಲಿ ಉತ್ತೀರ್ಣರಾದ ಪಟ್ಟಣ ಶೆಟ್ಟರು ಪ್ರೌಢಶಾಲಾ ಶಿಕ್ಷಣಕ್ಕಾಗಿ ಬಾಸೆಲ್‌ಮಿಶನ್ ಹೈಸ್ಕೂಲ್ ಸೇರಿದರು. ಈ ಅವಧಿಯಲ್ಲಿಯೇ ಶೆಟ್ಟರು ನಿರಂತರವಾಗಿ ಬೇರೆ ಬೇರೆ ಛಂದಸ್ಸುಗಳಲ್ಲಿ ಕವಿತೆಗಳನ್ನು, ಕಲ್ಪನಾತ್ಮಕ ಪ್ರಬಂಧಗಳನ್ನು ಬರೆಯ ತೊಡಗಿದರು. ಆಗ ಆರ್.ಎಲ್.ಎಸ್. ಹೈಸ್ಕೂಲಿನಲ್ಲಿ ಓದುತ್ತಿದ್ದ ಶಿವಶಂಕರ ಕಣಾಜನವರು ಪರಿಚಯವಾದರು. ಇದು ಶೆಟ್ಟರ ಸಾಹಿತ್ಯಾಸಕ್ತಿಗೆ ಇನ್ನೊಂದು ತಿರುವು

ನೀಡಿತು. ಶಿವಶಂಕರ ಸ್ಥಿತಿವಂತರ ಮನೆಯವನಾದ ಕಾರಣ ಅವನು ಎಲ್ಲಾ ಪುಸ್ತಕಗಳನ್ನು ಕೊಂಡುಕೊಳ್ಳುತ್ತಿದ್ದ. ಶೆಟ್ಟರಿಗೆ ಅ.ನ. ಕೃಷ್ಣರಾಯರ 'ಜೀವನದಿ' ಕಾದಂಬರಿ ಓದಲು ನೀಡಿದ್ದ, ಶೆಟ್ಟರು ಓದಿದ ಪ್ರಥಮ ಕಾದಂಬರಿಯಿಂದ ಮುಂದೆ ತ.ರಾ.ಸು. ಬಸವರಾಜ ಕಟ್ಟಿಮನಿ, ಅನಕೃ ಮುಂತಾದವರ ಕಾದಂಬರಿಗಳ ಜೊತೆಗೆ ಅನೇಕ ಪತ್ತೇದಾರಿ ಕಾದಂಬರಿಗಳನ್ನು, ಕವನ ಸಂಕಲನಗಳನ್ನು ಶೆಟ್ಟರಿಗೆ ಓದಲು ಕೊಟ್ಟ. ಮಾರ್ಗದರ್ಶಕನಂತಿದ್ದ ಈ ಶಿವಶಂಕರ ಆಸಕ್ತಿಯಿಂದ ಸಾಹಿತ್ಯಿಕ ವಿಷಯಗಳನ್ನು ಚರ್ಚಿಸುತ್ತಿದ್ದ. ಸುಂದರ ಅಕ್ಷರಗಳಲ್ಲಿ ಕವಿತೆ ಬರೆದು ಹೀಗೆ ಬರೆಯಬೇಕೆಂದು ತೋರಿಸುತ್ತಿದ್ದ. ೧೯೫೭ ರಲ್ಲಿ ಧಾರವಾಡದಲ್ಲಿ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಜರುಗಿತು ಅದರ ಅಧ್ಯಕ್ಷತೆಯನ್ನು ಕುವೆಂಪು ವಹಿಸಿದ್ದರು. ಆಗ ಸಾಹಿತ್ಯ ಪರಿಷತ್ತಿನ ಸದಸ್ಯನನ್ನಾಗಿ ಮಾಡಿ ಈ ಸಮ್ಮೇಳನದಲ್ಲಿ ಹಲವಾರು ಸಾಹಿತಿಗಳನ್ನು ಹತ್ತಿರದಿಂದ ತೋರಿಸಿದ ಕೆಲವರನ್ನು ಪರಿಚಯಿಸಿ ಮಾತನಾಡಿಸಿದ್ದ.

ಬಾಸೆಲ್ ಮಿಶನ್ ಪ್ರೌಢಶಾಲೆಯಲ್ಲಿ ಪಟ್ಟಣ ಶೆಟ್ಟರು ಅಭ್ಯಾಸಮಾಡಿದ ನಾಲ್ಕು ವರ್ಷಗಳು, ಅವರ ಜೀವನದಲ್ಲಿ ಅತ್ಯಂತ ಮಹತ್ವದ ದಿನಗಳಾಗಿವೆ. ಆ ಶಾಲೆಯಲ್ಲಿ ಉತ್ತಮ ಶಿಕ್ಷಕರಿದ್ದರು. ಪಿ.ಸಿ. ತಟಪಟಿ, ಎಂ.ಎಂ. ಕಸ್ತೂರಿ, ವರದರಾಜ ಹುಯಿಲಗೋಳ್ಳ ಎಚ್.ಎಸ್. ನೆಗಳೂರು, ಆರ್.ಎಸ್. ಬಂಗಾರ, ಎಸ್.ವಿ.ಭಟ್ಟ ಮುಂತಾದ ಶಿಕ್ಷಕರು ಪಟ್ಟಣ ಶೆಟ್ಟರ ಮೇಲೆ ತುಂಬಾ ಪ್ರಭಾವ ಬೀರಿದರು. ಈ ಶಾಲೆಯಲ್ಲಿ ಶೆಟ್ಟರು ಮೊದಲು ಎರಡು ವರ್ಷ ಜರ್ಮನ್ ಭಾಷೆ ಕಲಿತರು. ಮೂಲ ಜರ್ಮನ್ ಭಾಷೆಯಿಂದ ಇಂಗ್ಲೀಷ್‌ಗೆ, ಕನ್ನಡಕ್ಕೆ ನೇರವಾಗಿ ಗಯಟೆ ಮುಂತಾದವರ ಪದ್ಯಗಳನ್ನು ಅನುವಾದಿಸುವಷ್ಟು ಶಕ್ತಿ ಬರುವಂತೆ, ತಟಪಟಿ ಮತ್ತು ಕಸ್ತೂರಿ ಶಿಕ್ಷಕರಿಂದ ಕಲಿತರು. ಅನಂತರ ಎರೆಡು ವರ್ಷಗಳಲ್ಲಿ ಅರ್ಧಮಾಗಧೀ ಕಲಿತರು. ಅನಂತರ ಕಾಲೇಜಿನಲ್ಲಿಯೂ ಅರ್ಧಮಾರ್ಗಧೀ ಮತ್ತು ಹೊರಗೆ ಕಾರಾಂತ ಎಂಬ ಶಿಕ್ಷಕರಲ್ಲಿ ಸಂಸ್ಕೃತವನ್ನು ಕಲಿತರು. ಬಹು ಭಾಷೆಗಳನ್ನು ಕಲಿಯುವುದು ಶೆಟ್ಟರಿಗೆ ಬಹು ಪ್ರೀಯವಾದ ಆಸಕ್ತಿಯಾಗಿತ್ತು.

ಎಂಟನೇ ತರಗತಿ ಓದುವಾಗ ಅಲ್ಲಿ ಹಿಂದೀ ಕಡ್ಡಾಯ ವಿಷಯವಾಗಿತ್ತು. ಧಾರವಾಡವು ಮುಂಬೈ ಪ್ರಾಂತ್ಯಕ್ಕೆ ಸೇರಿತ್ತು. ಆಗಿನ ಮುಂಬೈ ಸರಕಾರದಲ್ಲಿ ಮುಖ್ಯಮಂತ್ರಿಯಾಗಿದ್ದ ಮುರಾರ್ಜಿದೇಸಾಯಿಯವರು ಮತ್ತು ಶಿಕ್ಷಣ ಮಂತ್ರಿಯಾಗಿದ್ದ ಬಿ.ಜಿ. ಖೇರ್ ಅವರು ಹಿಂದೀ ಪರವಾಗಿಯೇ ಇದ್ದರು ಹಿಂದಿಯನ್ನು ಕಡ್ಡಾಯವಾಗಿ ಕಲಿಯಲೇಬೇಕೆಂದು ಆದೇಶ ಹೊರಡಿಸಿದ್ದರು. ಗ್ರಾಮೀಣ ಹಿನ್ನೆಲೆಯಿಂದ ಬಂದ ಪಟ್ಟಣಶೆಟ್ಟರಿಗೆ ದೇವನಾಗರೀಲಿಪಿ ಮತ್ತು ಹಿಂದೀ ಭಾಷೆ ಕಲಿಯಲು ಆರಂಭದಲ್ಲಿ ಬಹಳ ಕಷ್ಟದಾಯಕವಾಗಿತ್ತು. ಮೊದಲ ತ್ರೈಮಾಸಿಕ ಪರೀಕ್ಷೆಯಲ್ಲಿ ಶೆಟ್ಟರು ಹಿಂದಿಯಲ್ಲಿ ಅನುತ್ತೀರ್ಣರಾದರು. ಬಹಳ ಅವಮಾನವಾದಂತೆ ಆಯಿತು. ಇದರಿಂದ ಬಹುವಾಗಿ ನೊಂದುಕೊಂಡರು; ಜೀವನದಲ್ಲಿ ಪರೀಕ್ಷೆಗಳಲ್ಲಿ ಮೊದಲ ಸಲ ಅನುತ್ತೀರ್ಣರಾಗಿದ್ದರು. ಹೇಗಾದರೂ ಮಾಡಿ ನನ್ನನ್ನು ಅವಮಾನಗೊಳಿಸಿದ ಈ ಹಿಂದಿಯ ಮೇಲೆ ಪ್ರಭುತ್ವ ಸಾಧಿಸಬೇಕೆಂದು ದೃಢ ನಿರ್ಧಾರ ಮಾಡಿದರು. ತತ್‌ಕ್ಷಣವೇ ಕಾರ್ಯ ಪ್ರವೃತ್ತರಾದರು.

ಧಾರವಾಡದ ಆರ್.ಎಲ್.ಎಸ್. ಪ್ರೌಢಶಾಲೆಯಲ್ಲಿ ದಕ್ಷಿಣ ಭಾರತ ಹಿಂದಿ ಪ್ರಚಾರ ಸಭೆಯ ಪರವಾಗಿ ಕಾ.ಚಾ. ಸಾರಂಗಮಠರು ಹಿಂದಿ ತರಗತಿಗಳನ್ನು ನೆಡೆಸುತ್ತಿದ್ದರು. ಶೆಟ್ಟರು ಅವರಲ್ಲಿ ಹಿಂದೀ ಕಲಿಯತೊಡಗಿದರು. ಸಾರಂಗ

ಮಠರು ಉತ್ತಮ ಹಿಂದಿ ಶಿಕ್ಷಕರಾಗಿದ್ದರು. ಶೆಟ್ಟರು ಪ್ರತಿ ಆರು ತಿಂಗಳಿಗೊಮ್ಮೆ ಪರೀಕ್ಷೆಗಳನ್ನು ಕಟ್ಟುತ್ತಾ ದಕ್ಷಿಣ ಭಾರತ ಹಿಂದೀ ಸಭೆಯು ನೆಡೆಸುವ ಎಲ್ಲಾ ಪರೀಕ್ಷೆಗಳನ್ನು ಅಂದರೆ ಪ್ರವೀಣದವರಿಗೆ ಪಾಸಾದರು. ಪ್ರವೇಶಿಕ ಎಂಬ ನಾಲ್ಕನೇ ಪರೀಕ್ಷೆ ಪಾಸಾಗುವ ಹೊತ್ತಿಗೆ ಸಾರಂಗಮಠರು ಪಟ್ಟಣಶೆಟ್ಟರನ್ನು ತಮ್ಮ ಭಾರತೀಯ ಹಿಂದೀ ವಿದ್ಯಾಲಯದಲ್ಲಿ ಶಿಕ್ಷಕನನ್ನಾಗಿ ಸೇರಿಸಿಕೊಂಡು ಬೋಧನೆಗೆ ಅವಕಾಶ ಮಾಡಿಕೊಟ್ಟರು. ಶೆಟ್ಟರು ಆಗ ನಾಟಕ, ಕಾವ್ಯ, ವ್ಯಾಕರಣ, ಕಥೆಗಳನ್ನು ಕಲಿಸತೊಡಗಿದರು. ಆಗ ನಾನು ಏನೇ ಕಲಿಸಿದರೂ ವಿಶಿಷ್ಟ ರೀತಿಯಲ್ಲಿ ಕಲಿಸ ಬಲ್ಲೆನೆಂಬ ಆತ್ಮಶಕ್ತಿ ಪಟ್ಟಣಶೆಟ್ಟರಲ್ಲಿ ಜಾಗೃತವಾಯಿತು. ಹಿಂದಿ ಭಾಷೆಯ ಉಚ್ಚಾರ, ಅಭಿವ್ಯಕ್ತಿಯ ರೀತಿಯನ್ನು ಶೆಟ್ಟರು ಈ ಸಂದರ್ಭದಲ್ಲಿ ಚೆನ್ನಾಗಿಯೇ ಕಲಿತರು.

ಪ್ರಹ್ಲಾದ ನರೇಗಲ್ಲರು ಮುಕ್ತ ಶೈಲಿಯಲ್ಲಿ ರವೀಂದ್ರನಾಥ ಠಾಗೂರರ ಗೀತಾಂಜಲಿಯನ್ನು ಅನುವಾದಿಸಿದ್ದರು. ಇದನ್ನು ಶೆಟ್ಟರ ಓದಿ ಮೆಚ್ಚಿದ್ದರು. ಇವೆಲ್ಲವೂ ಅವರನ್ನು ಮುಕ್ತವಾಗಿ ಬರೆಯಲು ಪ್ರೇರೇಪಿಸಿದವು.

ಹನ್ನೊಂದನೇ ತರಗತಿಯಲ್ಲಿದ್ದಾಗ ಸ್ವತಂತ್ರ್ಯ ಪದ್ಯಗಳ ರಚನೆ ವಚನಸ್ಪರ್ಧೆ ಏರ್ಪಡಿಸಲಾಗಿತ್ತು. ಮುಂಬೈ ವಿಶ್ವವಿದ್ಯಾನಿಲಯದ ಪ್ರೊ. ಚಿದಂಬರ ಕೆ. ದೀಕ್ಷಿತರು ಮುಖ್ಯ ಅತಿಥಿಯಾಗಿ ಬಂದಿದ್ದರು. ಆ ದಿನ ಶೆಟ್ಟರ ಭೃಂಗ ಎನ್ನುವ ಕವನ ಪ್ರಥಮ ಸ್ಥಾನ ಪಡೆಯಿತು. ದೀಕ್ಷಿತರು ಶೆಟ್ಟರ ಕವನವನ್ನು ಓದುವ ಶೈಲಿಯನ್ನು ಮೆಚ್ಚಿ ಒಳ್ಳೆಯ ನುಡಿಗಳನ್ನು ಆಡಿದ್ದರು. ಹೀಗೆ ಎಸ್.ಎಸ್.ಸಿ. ಮುಗಿಯುವ ಹೊತ್ತಿಗೆ ಶಾಲೆಯಲ್ಲಿ ಕನ್ನಡ ಕವಿ, ಲೇಖಕ, ಒಳ್ಳೆಯ ಭಾಷಣಕಾರ ಎಂದು ಪಟ್ಟಣಶೆಟ್ಟರು ಹೆಸರುವಾಸಿಯಾಗಿದ್ದರು.

**೨. ಕಾಲೇಜು ಶಿಕ್ಷಣ**

೧೯೫೭ ರಲ್ಲಿ ಡಿಸ್ಟಿಂಕ್ಷನ್‌ನಲ್ಲಿ ಎಸ್.ಎಸ್.ಸಿ. ಉತ್ತೀರ್ಣರಾದ ಪಟ್ಟಣಶೆಟ್ಟರು, ಕರ್ನಾಟಕ ಕಾಲೇಜು ಸೇರಿದರು. ಎಫ್.ವಯ್. ಆರ್ಟ್ ವಿಷಯ ತೆಗೆದುಕೊಂಡರು. ಆಗ ವಿನಾಯಕಕೃಷ್ಣ ಗೋಕಾಕರು ಕಾಲೇಜಿನ ಪ್ರಾಂಶುಪಾಲರಾಗಿದ್ದರು. ಇವರು ಕಲಿಸಿದ ಕೀಟ್ಸ್, ಶೆಲ್ಲಿ, ಬ್ಲಾಯರ್‌ನ ಮುಂತಾದ ಆಂಗ್ಲ ಕವಿಗಳ ಕವಿತೆಗಳು ಗೋಕಾಕರಿಗೆ ಸಾಹಿತ್ಯದ ಹೊಸ ಆಶಯಗಳನ್ನು ತೆರೆದು ತೋರಿಸಿತು. ಕಾಲೇಜಿನ ವಾತಾವರಣ ವಿಸ್ತಾರವಾಗಿದ್ದರೂ ಶೆಟ್ಟರ ಏಕಾಂಗಿತನ ಕಡಿಮೆಯಾಗಲಿಲ್ಲ. ಆದಿನಗಳಲ್ಲಿ ರಾಷ್ಟ್ರಮಟ್ಟದಲ್ಲಿ ದಿಲ್ಲಿಯಲ್ಲಿ ನೆಡೆಯುತ್ತಿದ್ದ ಯುವಜನೋತ್ಸವದ ಅಂಗವಾಗಿ ಹಂತಹಂತವಾಗಿ ಸ್ಪರ್ಧೆಗಳು ನಡೆಯುತ್ತಿದ್ದವು.

ನಾಟಕ, ಗಾಯನ, ಸಮೂಹಗೀತೆ, ಇಂಗ್ಲೀಷ್, ಹಿಂದಿಯಲ್ಲಿ ಆಶುಭಾಷಣ ಸ್ಪರ್ಧೆಗಳು ನೆಡೆಯುತ್ತಿದ್ದವು. ೧೯೫೭ ಮತ್ತು ೧೯೫೮ ರಲ್ಲಿ ಹಿಂದೀ ಆಶು ಭಾಷಣಸ್ಪರ್ಧೆಗಳಲ್ಲಿ ಪಟ್ಟಣಶೆಟ್ಟರು ಪ್ರಥಮ ಸ್ಥಾನವನ್ನು ಪಡೆದರು. ಆಗ ಇಡೀ ಕಾಲೇಜಿನ ಎಲ್ಲಾ ಅಧ್ಯಾಪಕರಿಗೆ, ವಿದ್ಯಾರ್ಥಿಗಳಿಗೆ, ಹೆಚ್ಚು ಪರಿಚಯವಾದರು. ಈ ಎರಡು ವರ್ಷ ಕರ್ನಾಟಕ ವಿಶ್ವವಿದ್ಯಾಲಯದ ತಂಡದ ಜೊತೆಗೆ ದೆಹಲಿಯ ತಾಲ್‌ಕಟೋರಾ ಬಾಗ್‌ನಲ್ಲಿ ನೆಡೆದ ಯುವ ಜನೋತ್ಸದಲ್ಲಿ ಭಾಗವಹಿಸಿದರು. ಇಂಗ್ಲೀಷ್‌ನ್ನು ಚೆನ್ನಾಗಿ ಓದಬೇಕು, ತಿಳಿಯಬೇಕು. ಎನ್ನುವ ಹಂಬಲ ಶೆಟ್ಟರಲ್ಲಿ ಬಲವಾಗಿತ್ತು. ಆದ ಕಾರಣ ಜ್ಯೂನಿಯರ್ ಬಿ.ಎ.ದಲ್ಲಿ ಹಿಂದೀಯನ್ನು ಐಚ್ಛಿಕವಾಗಿ ಇಂಗ್ಲೀಷನ್ನು ಸಬ್‌ಸಿಡಿಯ

ವಿಷಯವಾಗಿ ತೆಗೆದುಕೊಂಡು ಕಲಿತರು. ಶೆಟ್ಟರೆ, ಬಿ.ಎ. ಪದವಿಯನ್ನು ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾಗುವಂತೆ ಅಭ್ಯಾಸ ಮಾಡಿದರು. ಆಗ ಮಾಲತಿ ಪ್ರಿನ್ಸಿಪಾಲ್ ಇಂಗ್ಲೀಷ್ ಜೊತೆಗೆ ಸಬ್‌ಸಿಡಿಯರಿ ಆಗಿ ಹಿಂದಿ ತೆಗೆದುಕೊಂಡರು. ಈ ಸಂದರ್ಭದಲ್ಲಿ ಇಬ್ಬರ ನಡುವೆ ಒಂದುಷ್ಟು ಆಪ್ತತೆ ಬೆಳೆಯಲು ಸುರುವಾಯಿತು. ವಿಶ್ವವಿದ್ಯಾನಿಲಯದಲ್ಲಿ ಗಿರೀಶ್ ಕಾರ್ನಾಡ್‌ರ ಸಾಹಿತ್ಯದಿಂದ ಇಂಗ್ಲೀಷ್ ನಾಟಕ ಚರ್ಚಾ ಕೂಟಗಳು ನೆಡೆದರೆ, ಪಟ್ಟಣಶೆಟ್ಟರು ಸಾಹಿತ್ಯದಿಂದ ಕನ್ನಡ, ಉರ್ದು, ಹಿಂದಿ ಕಾರ್ಯಕ್ರಮಗಳು ನೆಡೆಯುತ್ತಿದ್ದವು. ೧೯೬೩ ರಲ್ಲಿ ಎಂ.ಎ.ದಲ್ಲಿ ಪ್ರಥಮ ಶ್ರೇಣಿಯಲ್ಲಿ ಉತ್ತೀರ್ಣರಾದ ಏಕಮಾತ್ರ ವ್ಯಕ್ತಿಯಾದರೂ ಎಲ್ಲಿಯೂ ಉದ್ಯೋಗ ದೊರಕಲಿಲ್ಲ. ಈ ಮಧ್ಯ ನಿರುದ್ಯೋಗದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲು ಸಮಾಜ ಪುಸ್ತಕಾಲಯದ ಮಾಲೀಕರಾದ ಮನೋಹರ ಘಣೇಕರರ ಕೋರಿಕೆಯಂತೆ ಶರತ್‌ಚಂದ್ರರ 'ಶೇಷಪ್ರಶ್ನೆ', 'ಭಾರತೀ' ಮತ್ತು ಹೆಚ್ಚಿನ ಸ್ಥಾನಮಾನವೆಂಬ ಮೂರು ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದರು.

**೩. ವೃತ್ತಿ ಜೀವನ**

೧೯೬೩ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಹಿಂದೀ ವಿಷಯದಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದ ಪಟ್ಟಣಶೆಟ್ಟರು; ಮುಂದೆ ೨ ವರ್ಷಗಳ ಕಾಲ ಎಲ್ಲಿಯೂ ಉದ್ಯೋಗ ದೊರೆಯಲಿಲ್ಲ. ಅತಿ ಹೆಚ್ಚು ಅಂಕಗಳನ್ನು ಪಡೆದದ್ದೇ ಅವರಿಗೆ ಉದ್ಯೋಗ ದೊರಕಲು ಮುಳುವಾಗಿತ್ತು. ಬಹುತೇಕ ಸಂದರ್ಶನಗಳಲ್ಲಿ ನೀವು ಹೆಚ್ಚಿನ ಅಂಕಗಳನ್ನು ಪಡೆದು ಉತ್ತೀರ್ಣರಾಗಿದ್ದೀರಿ; ನಿಮಗೆ ಕೆಲಸ ನೀಡಿದರೂ ನೀವು ನಮ್ಮಲ್ಲಿ ಬಹಳ ದಿನಗಳ ಕಾಲ ಇರಲಾರಿರಿ ಎಂದು ಹೇಳಿ ಅವರನ್ನು ಕೆಲಸಕ್ಕೆ ಆಯ್ಕೆ ಮಾಡಿಕೊಳ್ಳುತ್ತಿರಲಿಲ್ಲ. ಇಂತಹ ಸಂದರ್ಭಗಳಲ್ಲಿ ಪಟ್ಟಣ ಶೆಟ್ಟರು ಬಹಳ ನೊಂದು ಕೊಂಡಿದ್ದಾರೆ. ಇವರಿಗಿಂತ ಕಡಿಮೆ ಅಂಕಪಡೆದ ಎರಡನೇ ದರ್ಜೆಯಲ್ಲಿ ಉತ್ತೀರ್ಣರಾದ ಎಷ್ಟೋಜನ ಗೆಳೆಯರಿಗೆ ಕೆಲಸ ದೊರಕಿತ್ತು. ಆದರೆ ಇವರಿಗೆ ಕೆಲಸ ದೊರಕದೆ ಎರಡು ವರ್ಷ ನಿರುದ್ಯೋಗಿಯಾಗಿ ಕಾಲ ಕಳೆದರು. ಈ ದಿನಗಳಲ್ಲಿ ಶೆಟ್ಟರಿಗೆ ಕವಿತೆ ಬರೆಯುವ ಕಾತುರ ಹೆಚ್ಚಾಗಿತ್ತು. ಒಮ್ಮೊಮ್ಮೆ ದಿನಕ್ಕೆ ನಾಲ್ಕೈದು ಕವಿತೆಗಳನ್ನು ಬರೆಯುತ್ತಿದ್ದರು. ಮಿತ್ರರಾದ ಶಿವಶಂಕರ ಹಿರೇಮಠರು ನೂರಾರು ಕವಿತೆಗಳಲ್ಲಿ ಕೆಲವನ್ನು ಆಯ್ದು, 'ನೀನಾ' ಸಂಕಲನ ಹೊರಬರಲು ಶ್ರಮಿಸಿದರು. ಕೆ.ಎಸ್. ನರಸಿಂಹಸ್ವಾಮಿಯವರೇ ಈ ವಿಪ್ರಲಂಬ ಶೃಂಗಾರದ ಕವನಗಳಿಗೆ ಮುನ್ನುಡಿ ಬರೆಯಲಿ ಎಂದರು ಹಾಗೆಯೇ ಅವರಿಂದಲೇ ಬರೆಸಿದರು.

ಈ ನಡುವೆ ಸಮಾಜ ಪುಸ್ತಕಾಲಯದವರಿಂದ ಅನುವಾದ ಮಾಡಿಕೊಟ್ಟಿದ್ದ ಮೂರು ಕೃತಿಗಳಿಗೆ ಮೂರುನೂರು ರೂಪಾಯಿ ಸಂಭಾವನೆ ಬಂದವು. ಇದರಿಂದಲೇ ನೀನಾ ಪ್ರಕಟಿಸಲು ಸಹಾಯವಾಯಿತು. ಆಗ ಸಮಾಜ ಪುಸ್ತಕಾಲಯಕ್ಕೆ ಬರುತ್ತಿದ್ದ ಬಸವರಾಜ ಕಟ್ಟೀಮನಿಯವರು ಇವರ ಕವಿತೆಗಳನ್ನು ಓದಿ ಮೆಚ್ಚಿದರು, ಬಹಳ ಆಪ್ತರಾದರು.

೧೯೬೪ ರಲ್ಲಿ ನೀನಾ ಪ್ರಕಟವಾಯಿತು. ಆನಂತರ ಎರೆಡು ಮೂರು ತಿಂಗಳಲ್ಲಿ ಮೈಸ್ ಇಂಡಿಯಾದಲ್ಲಿ ಪ್ರಕಟವಾದ ಸಿ.ಹೆಚ್. ಪ್ರಹ್ಲಾದರ ವಿಮರ್ಶೆಗಳ ಹಾಗೂ ಕನ್ನಡ ಸಾರಸ್ವತ ಲೋಕದ ಪ್ರತಿಕ್ರಿಯೆಗಳು ಸಿದ್ಧಲಿಂಗ ಪಟ್ಟಣಶೆಟ್ಟಿಯವರನ್ನು ಕನ್ನಡದ ನವ್ಯ ಕವಿಗಳ ಪ್ರಮುಖ ಸ್ಥಾನದಲ್ಲಿ ನಿಲ್ಲಿಸಿದವು.

ಅದೇ ತಿಂಗಳು ಗೋಕಾಕರು ಬೆಂಗಳೂರಿನಲ್ಲಿ ಇಂಗ್ಲೀಷ್ ಅಧ್ಯಾಪಕರಾಗಿ ಒಂದು ಶಿಬಿರ ನೆಡೆಸಿದ್ದರು. ಚಂದ್ರಶೇಖರ ಪಾಟೀಲ ಮತ್ತು ಪಟ್ಟಣಶೆಟ್ಟರು ಅಲ್ಲಿಗೆ ಹೋಗಿದ್ದರು. ಅವರಿಗೆ 'ನೀನಾ' ಓದಲು ಕೊಡಲಾಯಿತು. ಕೆಲವು ಕವಿತೆಗಳನ್ನು ಓದಿ ಇಷ್ಟಾದರೂ ಬದುಕಿದ್ದೀಯಲ್ಲಾ ಎಂದರು. ಕಾವ್ಯದಲ್ಲಿಯ ನೋವು, ವಿರಹ ಆ ತೆರನಾಗಿತ್ತು.

೧೯೬೫ ರಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟರಿಗೆ ಕೆಲಸ ದೊರೆಯುವ ಯೋಗ ಕೂಡಿ ಬಂತು. ಶಿರಸಿಯ ಎಂ.ಇ. ಕಲಾ ಮತ್ತು ವಿಜ್ಞಾನ ಕಾಲೇಜಿನಲ್ಲಿ ಪಟ್ಟಣಶೆಟ್ಟಿಯವರ ಆತ್ಮೀಯ ಸ್ನೇಹಿತರಾದ ಪಿ.ಎಂ. ಹೆಗಡೆಯವರು ಇಂಗ್ಲೀಷ್ ಉಪನ್ಯಾಸಕರಾಗಿ ಕಾರ್ಯನಿರ್ವಸುತ್ತಿದ್ದರು. ೧೯೬೫ ಜೂನ್ ಮೊದಲ ವಾರದಲ್ಲಿ ಪಟ್ಟಣಶೆಟ್ಟರು ಹೆಗಡೆಯವರ ಕರೆಯ ಮೇರೆಗೆ ಶಿರಸಿಗೆ ಹೋದರು. ಕಾಲೇಜಿಗೆ ಆಗ ರಜೆಯಿತ್ತು; ಹೆಗಡೆಯವರ ಜೊತೆಗೆ ಕಾಲೇಜಿನ ಕಛೇರಿಯಲ್ಲಿ ಆಗಿನ ಪ್ರಾಂಶುಪಾಲರಾದ ಎಲ್.ಟಿ. ಶರ್ಮಾ ಮತ್ತು ಉಪಪ್ರಾಂಶುಪಾಲರಾದ ಬಿ.ಹೆಚ್. ಶ್ರೀಧರ ಅವರನ್ನು ಕಂಡರು. ಅವರಿಬ್ಬರ ಜೊತೆಗೆ ಸುಮಾರು ಎರೆಡು ಮೂರು ತಾಸು ಅನೇಕ ವಿಷಯಗಳ ಕುರಿತಾಗಿ ಹರಟೆ ಮಾತುಕತೆ ನೆಡೆಯಿತು. ಅವರುಗಳು ಕನ್ನಡ, ಇಂಗ್ಲೀಷ್, ಹಿಂದಿ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಅನೇಕ ಪ್ರಶ್ನೆಗಳನ್ನು ಕೇಳಿದರು. ಆ ದಿನ ಸಾಯಂಕಾಲ ಅನಿರೀಕ್ಷಿತವಾಗಿ ಅವರು ಪಟ್ಟಣಶೆಟ್ಟಿಯವರಿಂದ ಒಂದು ಸಲ ಅರ್ಜಿಯನ್ನು ಬರೆಯಿಸಿಕೊಂಡು ಅಧ್ಯಾಪಕರಾಗಿ ಸೇರಲು ನೇಮಕಾತಿ ಪ್ರತಿಯನ್ನು ನೀಡಿದರು. ಇದು ಪಟ್ಟಣಶೆಟ್ಟಿಯವರಿಗೆ ಆಕಸ್ಮಿಕ ಮತ್ತು ಆನಂದದ ಸಂಗತಿಯಾಗಿತ್ತು. ಈ ಮುಂಚಿತವಾಗಿ ಅವರು ಮಾಡಿದ ಚರ್ಚೆ ಪರೋಕ್ಷವಾಗಿ ಸಂದರ್ಶನವೇ ಆಗಿತ್ತು. ಪಿ.ಎಂ. ಹೆಗಡೆ ಮತ್ತು ಶಿರಸಿಯ ಕಾಲೇಜಿನ ಪ್ರೀತಿಯ ಕೊಡುಗೆಯನ್ನು, ಮೊದಲು ವೃತ್ತಿ ಜೀವನ ಆರಂಭಿಸಲು ಕಲ್ಪಿಸಿದ. ಅನ್ನ ನೀಡಿದ ಊರು ಶಿರಸಿಯನ್ನು ಈಗಲೂ ಪಟ್ಟಣಶೆಟ್ಟರು ನೆನೆಯುತ್ತಿರುತ್ತಾರೆ.

ಅದರ ಮರು ವರ್ಷವೇ ಧಾರವಾಡದ ಕರ್ನಾಟಕ ಕಾಲೇಜಿನ ಒಂದು ಹಿಂದಿ ಅಧ್ಯಾಪಕ ಹುದ್ದೆಗೆ ಜಾಹೀರಾತು ಬಂದಾಗ ಪಟ್ಟಣಶೆಟ್ಟರು ಅರ್ಜಿ ಹಾಕಿದರು. ಆಗ ಇವರು ಆಯ್ಕೆಯಾಗುವುದು ಕಷ್ಟವಾಗುವಂತೆ ಕಾಣದ ಕೈಗಳು ಕೆಲಸ ಮಾಡಿದವು. ಆಗ ಶಿರಸಿ ಕಾಲೇಜಿನ ಪ್ರಾಂಶುಪಾಲರಾಗಿದ್ದ ಎಲ್.ಟಿ. ಶರ್ಮಾ ಅವರು ಸಿದ್ಧಲಿಂಗ ಪಟ್ಟಣಶೆಟ್ಟರ ವಿದ್ವತ್ತು ಯೋಗ್ಯತೆಯನ್ನು ಆಗಿನ ಮುತ್ಸದಿ ರಾಜಕಾರಣಿಯಾದ ಹಳ್ಳಿಕೇರಿ ಗುದ್ಲೆಪ್ಪನವರಿಗೆ ತಿಳಿಸಿದಾಗ ಗುದ್ಲೆಪ್ಪನವರು ಆಗ ಕರ್ನಾಟಕ ವಿಶ್ವವಿದ್ಯಾಲಯದ ಕುಲಪತಿಗಳಾದ ಡಾ.ಡಿ.ಸಿ. ಪಾರ್ವತಿ ಯವರಿಗೆ ತಿಳಿಸಿದರು. ಸಂದರ್ಶದ ವೇಳೆ ತಾವೇ ಖುದ್ದಾಗಿ ಹಲವಾರು ಪ್ರಶ್ನೆಗಳನ್ನು ಕೇಳಿ ಪಟ್ಟಣ ಶೆಟ್ಟರನ್ನು ಸಂತೋಷದಿಂದ ಆಯ್ಕೆ ಮಾಡಿಕೊಂಡರು.

ಧಾರವಾಡದ ಕರ್ನಾಟಕ ಕಾಲೇಜು ಕರ್ನಾಟಕದ ಪ್ರತಿಷ್ಠಿತ ಕಾಲೇಜುಗಳಲ್ಲಿ ಒಂದು. ಕೆ.ಜಿ.ಕುಂದಣಗಾರ ಶ್ರೀರಂಗರು, ಸ.ಸ.ಮಾಳವಾಡ, ಬಿ.ಎಂ. ಇನಾಂದಾರ, ವಿಕೃ. ಗೋಕಾಕ ಮುಂತಾದ ಖ್ಯಾತ ಸಾಹಿತಿಗಳು ವಿದ್ವಾಂಸರೂ ಇಲ್ಲಿ ಕಾರ್ಯ ನಿರ್ವಹಿಸಿದ್ದಾರೆ. ಇಂತಹ ಕಾಲೇಜಿನಲ್ಲಿ ಉಪನ್ಯಾಸಕ ವೃತ್ತಿ ದೊರಕಿದ್ದು, ಪಟ್ಟಣಶೆಟ್ಟರಿಗೆ ಹೆಮ್ಮೆಯ ಅಭಿಮಾನದ ಸಂಗತಿಯಾಗಿತ್ತು. ಮುಂದೆ ಪ್ರವಾಚಕರಾಗಿ, ಪ್ರಾಧ್ಯಾಪಕರಾಗಿ, ಹಿಂದೀ ವಿಭಾಗದ ಮುಖ್ಯಸ್ಥರಾಗಿ ಗೌರವಯುತವಾಗಿ ಕೆಲಸ ಮಾಡಿದರು.

ಪಟ್ಟಣಶೆಟ್ಟರು ಕರ್ನಾಟಕ ಕಾಲೇಜಿನಲ್ಲಿ ಸಾಂಸ್ಕೃತಿಕ ಚಟುವಟಿಕೆಗಳ ಮುಖ್ಯಸ್ಥರಾಗಿ ನಾಟಕ, ಸಾಹಿತ್ಯ, ಸಂಗೀತ, ಸಂಸ್ಕೃತಿ ಪರಂಪರೆಯನ್ನು ಸಮೃದ್ಧಗೊಳಿಸಲು ಶ್ರಮಿಸಿದರು. ಅಪಾರ ಶಿಷ್ಯ ಬಳಗವನ್ನು ಸಂಪಾದಿಸಿದರು. ಅನೇಕ ಪ್ರತಿಭೆಗಳನ್ನು ಗುರುತಿಸಿ ಪ್ರೋತ್ಸಾಹಿಸಿದರು. ೧೯೬೬ ಜುಲೈ ಒಂದರಿಂದ ಹಿಡಿದು ೧೯೯೯ ನವೆಂಬರ್ ತಿಂಗಳವರೆಗೆ ನಿವೃತ್ತಿಯಾಗುವ ತನಕ ತಮ್ಮ ಬಹುಕಾಲದ ವೃತ್ತಿ ಜೀವನವನ್ನು ಕರ್ನಾಟಕ ಕಾಲೇಜಿನಲ್ಲಿಯೇ ಕಳೆದರು.

ಪಟ್ಟಣಶೆಟ್ಟರು ಕರ್ನಾಟಕ ಕಾಲೇಜಿನಲ್ಲಿ ಕೆಲಸಕ್ಕೆ ಸೇರಿದ ಮೇಲೆ ಮನೆಯಲ್ಲಿ ತಾಯಿ ಗಿರಿಜವ್ವ ಮಗನಿಗೆ ಮದುವೆ ಮಾಡಿಕೊಳ್ಳುವಂತೆ ಒತ್ತಾಯ ಪಡಿಸತೊಡಗಿದಳು. ಆಗ ೧೯೬೪ ರಲ್ಲಿ ಎಂ.ಎ. ಮುಗಿಸಿ ಬೆಳಗಾವಿಯ ಆರ್.ಪಿ.ಡಿ. ಕಾಲೇಜಿನಲ್ಲಿ ಇಂಗ್ಲೀಷ್ ಉಪನ್ಯಾಸಕಿಯಾಗಿದ್ದ. ಮಾಲತಿಯವರೊಂದಿಗೆ ಶೆಟ್ಟರ ಆತ್ಮೀಯತೆ ಹೆಚ್ಚಾಗತೊಡಗಿತು. ಶೆಟ್ಟರು ಎರೆಡು ಮೂರುಬಾರಿ ಬೆಳಗಾವಿಗೆ ಹೋಗಿ ಭೇಟಿಯಾಗಿ ಬಂದಿದ್ದರು. ಮಾಲತಿಯವರು ಧಾರವಾಡಕ್ಕೆ ಬಂದಾಗ ಶೆಟ್ಟರ ಮನೆಗೆ ಬಂದು ಹೋಗುತ್ತಿದ್ದರು. ಮಾಲತಿಯವರನ್ನು ಕೇಳಿನೋಡು ಆಕೆ ಒಪ್ಪಿದರೆ ಮಾಡಿಕೋ ಎಂದು ಅವ್ವ ಹೇಳಿದ ಮಾತಿನಂತೆ ವಿಚಾರಿಸಿದಾಗ ಮಾಲತಿ ಒಪ್ಪಲಿಲ್ಲ. ಆಗ ಬಸವರಾಜ ಕಟ್ಟೀಮನಿಯವರು ಶೆಟ್ಟರಿಗಾಗಿ ಕನ್ಯಾನ್ವೇಷಣೆಗೆ ತೊಡಗಿದರು. ಕಟ್ಟಿಮನಿ ಮತ್ತು ಬ.ಗಂ. ತುರಮುರಿಯವರು ತೋರಿಸಿದ್ದ ಕನ್ಯೆಯನ್ನು ಒಪ್ಪಿದರು. ಒಂದು ದಿನ ಮಾತುಕತೆಗೆ ಬರುವ ವಿಷವನ್ನು ತಿಳಿದ ಮಾಲತಿಯವರು ಆ ಮಾತುಕತೆಯನ್ನು ನಿಲ್ಲಿಸಬೇಕೆಂದು ತಾವೇ ಮದುವೆಯಾಗುವುದಾಗಿಯೂ ಹೇಳಿದರು. ಅದೇ ರೀತಿ ನೆಡೆಯಿತು. ೧೯೬೭ ಜೂನ್ ೧೩ ರಂದು ಸಿದ್ಧಲಿಂಗ ಪಟ್ಟಣಶೆಟ್ಟರ ಜೊತೆ ಮಾಲತಿಯವರ ಮದುವೆಯಾಯಿತು. ಆನಂತರ ಪ್ರಿ.ವ್ಹಿ.ಜಿ.ಕುಲಕರ್ಣಿಯವರ ಸಹಾಯದಿಂದ ಜೆ.ಎಸ್.ಎಸ್. ಕಾಲೇಜಿನಲ್ಲಿ ಮಾಲತಿಯವರಿಗೆ ನೌಕರಿಯೂ ದೊರೆಯಿತು. ಆದರೆ ಈ ದಾಂಪತ್ಯದ ಬದುಕು, ದೀರ್ಘಕಾಲ ನೆಡೆಯಲಿಲ್ಲ. ಇಬ್ಬರೂ ದೂರವಾದರು. ಕೆಲ ವರುಷಗಳ ನಂತರ, ಪಟ್ಟಣಶೆಟ್ಟರು ಹೇಮಾರನ್ನು ಮದುವೆಯಾದರು. ಈಗ ಮಗಳು 'ಹೂ' ಮಗ 'ಸಮುದ್ರ' ಹೆಂಡತಿ ಹೇಮಾ ಪಟ್ಟಣಶೆಟ್ಟರೊಂದಿಗೆ ತುಂಬು ಹೃದಯದ ಜೀವನವನ್ನು ಸಾಗಿಸುತ್ತಿದ್ದಾರೆ.

**೪. ರಂಗಭೂಮಿ**

ಸಿದ್ಧಲಿಂಗ ಪಟ್ಟಣಶೆಟ್ಟರಿಗೆ ನಾಟಕಗಳನ್ನು ನೋಡುವ ಮತ್ತು ಓದುವ ಹವ್ಯಾಸ ಬಾಲ್ಯದಿಂದಲೇ ಬೆಳೆದು ಬಂದಿತ್ತು. ಪಟ್ಟಣ ಶೆಟ್ಟರ ತಾಯಿಯ ತಮ್ಮಂದಿರಾದ ಮಲ್ಲೇಶಪ್ಪ, ಗುರುಪಾದಪ್ಪ ಮತ್ತು ಗುರುಸಿದ್ಧಪ್ಪ ಸೋದರ ಮಾವಂದಿರು ನಾಟಕದಲ್ಲಿ ಅತ್ಯಂತ ಆಸಕ್ತಿಯನ್ನು ತಳೆದಿದ್ದರು. ಮಲ್ಲೇಶಪ್ಪ ತಬಲ ಮತ್ತು ಹಾರ್ಮೋನಿಯಂ ಬಾರಿಸುತ್ತಿದ್ದ. ಗುರುಪಾದಪ್ಪ ಸ್ತ್ರೀಪಾತ್ರಗಳನ್ನು ಭಾವಪೂರ್ಣವಾಗಿ ಅಭಿನಯಿಸುತ್ತಿದ್ದ. ಗುರುಸಿದ್ದಪ್ಪ ತಬಲ ಹಾರ್ಮೋನಿಯಂ ನುಡಿಸುವುದಲ್ಲದೇ ಉತ್ತಮ ಹಾಡುಗಾರನಾಗಿದ್ದ. ಈ ಮೂವರೂ ಒಂದು ರೀತಿಯಲ್ಲಿ ಸಿದ್ಧಲಿಂಗ ಪಟ್ಟಣ ಶೆಟ್ಟರಿಗೆ ಗೆಳೆಯರಂತೆಯೇ ಇದ್ದರು. ಮನಗುಂಡಿ, ಮನಸೂರು, ಯಾದವಾಡ ಮುಂತಾದ ಕಡೆಗಳಲ್ಲಿ ಎಲ್ಲೇ ನಾಟಕ ನೆಡೆದರೂ ಪಟ್ಟಣ ಶೆಟ್ಟರನ್ನು ನೋಡಲು ಕರೆದುಕೊಂಡು ಹೋಗುತ್ತಿದ್ದರು. ಶೆಟ್ಟರ ಸೋದರ ಮಾವಂದಿರ ನಾಟಕಗಳನ್ನು ಆಡುವಾಗ ತಿಂಗಳು ಗಟ್ಟಲೇ ದಿನಲು ರಾತ್ರಿ ರಂಗತಾಲೀಮು ಮಾಡುತ್ತಿದ್ದರು. ಅವರೊಂದಿಗೆ ಕಾಲ ಕಳೆಯುತ್ತಿದ್ದ. ಶೆಟ್ಟರು ನಾಟಕದ ಪಾತ್ರಾಧಾರಿಗಳಿಗೆ ಸಂಭಾಷಣೆಗಳನ್ನು ಭಾವಪೂರ್ಣವಾಗಿ

ಓದಿ ಹೇಳುತ್ತಿದ್ದರು. ಅವರು ಕಂಠಪಾಠಮಾಡುವ ಸಲುವಾಗಿ ಮಾತುಗಳನ್ನು ಪ್ರತ್ಯೇಕ ಪುಸ್ತಕಗಳಲ್ಲಿ ಬರೆದು ಕೊಡುತ್ತಿದ್ದರು. ಮಧ್ಯರಾತ್ರಿಯಾದರೂ ಸರಿಯೇ ರಂಗತಾಲೀಮು ಮುಗಿಯುವವರೆಗೂ ಅವರೊಂದಿಗೇ ಇರುತ್ತಿದ್ದರು. ಹೀಗೆ ಬಾಲ್ಯದಲ್ಲಿ ಬೆಳೆದ ರಂಗಭೂಮಿಯ ನಂಟಸ್ತಿಕೆ ಮುಂದೆ ಸಾಹಿತ್ಯದ ಜೊತೆ ಜೊತೆಗೇ ಬೆಳೆದು ಬಂತು.

ಪಟ್ಟಣ ಶೆಟ್ಟರು ಧಾರವಾಡಕ್ಕೆ ಬಂದ ನಂತರ ಹಿಂದೀ ಪರೀಕ್ಷೆಗಳ ಅಭ್ಯಾಸ ಮಾಡುತ್ತಿದ್ದ ಸಂದರ್ಭದಲ್ಲಿ ಆಗಿನ ಗುರುಗಳಾಗಿದ್ದ ಕಾಶೀನಾಥಸ್ವಾಮಿ ಸಾರಾಂಗಮಠರು ಸಿದ್ಧಲಿಂಗ ಪಟ್ಟಣಶೆಟ್ಟರ ರಂಗ ಪ್ರೀತಿಗೆ ನೀರೆರೆದರು. ಗುಬ್ಬಿ ವೀರಣ್ಣನವರ 'ಗುಲೀಬ ಕಾವಲಿ' ನಾಟಕವನ್ನು ತೋರಿಸಿದರು. ಅಲ್ಲಿಂದ ಧಾರವಾಡಕ್ಕೆ ಪ್ರತಿವರ್ಷ ಅನೇಕ ಕಂಪನಿಗಳು ಒಂದು ನಾಟಕ ಪ್ರದರ್ಶನ ಮಾಡುತ್ತಿದ್ದವು. ಅವುಗಳಿಗೆ ಶೆಟ್ಟರನ್ನು ಕರೆದುಕೊಂಡುಹೋಗಿ ತೋರಿಸುತಿದ್ದರು. ಸ್ವತಃ ಸಾರಂಗಮಠರು ಶಾಲೆಯ ವಾರ್ಷಿಕೋತ್ಸವಕ್ಕೆಂದು ಮಾಡಿಸಿದ ಸೂಬ್‌ಕೆ ಗರ್‌ಧೂಮ್ ಎನ್ನುವ ಹಿಂದೀ ನಾಟಕದಲ್ಲಿ ಪಟ್ಟಣ ಶೆಟ್ಟಿವರಿಗೆ ಜಿಪುಣನ ಪಾತ್ರವನ್ನು ಕೊಡಿಸಿ ಅಭಿನಯಿಸುವಂತೆ ಮಾಡಿದರು.

ಈ ಅಪಾರವಾದ ಹಿನ್ನೆಲೆ ಪಟ್ಟಣ ಶೆಟ್ಟರಿಗೆ ತಾನಾಗಿಯೇ ಒದಗಿ ಬಂದಿತ್ತು. ಕಾರಣ ಅವರು ತರಗತಿಗಳಲ್ಲಿ ನಾಟಕಗಳನ್ನು ಓದುವಾಗ ಅಥವಾ ಕಲಿಸುವಾಗ ಅತ್ಯಂತ ಯಶಸ್ವಿಯಾಗಿ, ಭಾವಪೂರ್ಣವಾಗಿ ಓದುತ್ತಿದ್ದರು. ಪರಿಣಾಮಕಾರಿಯಾಗಿ ಪಾಠಮಾಡುತ್ತಿದ್ದರು. ಕಾಲೇಜಿನ ವಾರ್ಷಿಕೋತ್ಸವಗಳಲ್ಲಿ ಸ್ವತಃ ಅಭಿನಯಿಸಿ ವಿದ್ಯಾರ್ಥಿಗಳಲ್ಲಿ ನಾಟಕಾಭಿರುಚಿಯನ್ನು ಬೆಳೆಸಿದರು. ೧೯೬೫ ರ ಹೊತ್ತಿಗೆ ದೆಹಲಿಯಿಂದ ಬಂದಿದ್ದ ಹೆಸರಾಂತ ರಂಗ ನಿರ್ದೇಶಕರಾದ ಬಿ.ವಿ. ಕಾರಂತರ ಜೊತೆಗೆ ಎರೆಡು ಮೂರು ತಿಂಗಳು ಒಟ್ಟಿಗಿರುವ ಸಂದರ್ಭ ಶೆಟ್ಟರಿಗೆ ಒದಗಿ ಬಂದಿತ್ತು. ದೆಹಲಿಯ ನಾಟಕ ಶಾಲೆಯಿಂದ ಬಂದಿದ್ದ ಬಿ.ವಿ. ಕಾರಂತರು ಈ ಮೊದಲೇ ಪಟ್ಟಣ ಶೆಟ್ಟರಿಗೆ ಪರಿಚಯದವರಾಗಿದ್ದರು. ಆಗ ಡಾ. ಶಾಂತಿನಾಥ ದೇಸಾಯಿ, ಡಾ.ಕೆ.ಜಿ. ಮಹಾಲೆ ಅವರ ಸಲಹೆಯ ಮೇರೆಗೆ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನೆಡೆಸಲಾದ ರಂಗ ತರಬೇತಿ ಶಿಬಿರ ಮತ್ತು ನಾಟಕದ ಸಿದ್ಧತೆಯಲ್ಲಿ ಪಟ್ಟಣ ಶೆಟ್ಟರು ಮತ್ತು ಚಂದ್ರಶೇಖರ ಪಾಟೀಲರು ಸೇರಿಕೊಂಡರು. ಆಗ ಶೆಟ್ಟರು ಕರ್ನಾಟಕ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇರಿಕೊಂಡಿದ್ದರು. ಕಾರಂತರ ನಿರ್ದೇಶನದ ಮತ್ತು ತರಬೇತಿಯ ಸಂಪೂರ್ಣ ಲಾಭ ಪಡೆದುಕೊಂಡು 'ಗುರುತಿನವರು' ಮುಂತಾದ ನಾಟಕಗಳಲ್ಲಿ ಅಭಿನಯಿಸಿದರು.

ಈ ತರಬೇತಿ ಮುಗಿದ ನಂತರ ಧಾರವಾಡದಲ್ಲಿ ರಂಗಾಸಕ್ತಿ ಹೆಚ್ಚಿಗೆ ಬೆಳೆಯಿತು. ಇದರಿಂದ ಸ್ಫೂರ್ತಿಪಡೆದ ರಂಗಾಸಕ್ತರು ಒಂದು ರಂಗಸಂಸ್ಥೆಯನ್ನು ಹುಟ್ಟಿಹಾಕುವ ಪ್ರಯತ್ನ ಮಾಡಿದರು. ಪಟ್ಟಣಶೆಟ್ಟರು, ಚಂದ್ರಶೇಖರ ಪಾಟೀಲ, ಶಾಂತಿನಾಥ ದೇಸಾಯಿ, ಡಾ.ಎ.ಮುರಿಗೆಪ್ಪ. ಸಂಪಿಗೆ ತೋಂಟದಾರ್ಯ, ಬಿ.ಟಿ.ದೇಸಾಯಿ, ಅನಿಲ್ ಕುಮಾರ್ ಮುಂತಾದವರೆಲ್ಲಾ ಸೇರಿ 'ಅಂತರಂಗ' ಎಂಬ ಹವ್ಯಾಸಿ ನಾಟಕ ಸಂಸ್ಥೆಯನ್ನು ಹುಟ್ಟು ಹಾಕಿದರು. ಧಾರವಾಡದ ರಂಗಭೂಮಿ ಚರಿತ್ರೆಯಲ್ಲಿ ಇದೊಂದು ಐತಿಹಾಸಿಕ ಘಟನೆಯಾಗಿದೆ. ಮುಂದೆ ಕರ್ನಾಟಕದ ಹವ್ಯಾಸಿರಂಗ ಭೂಮಿಗೆ ಅಂತರಂಗ ದೊಡ್ಡ ಕಾಣಿಕೆಯನ್ನು ನೀಡಿತು. ಪಟ್ಟಣ ಶೆಟ್ಟರು ಮತ್ತು ಚಂದ್ರಶೇಖರ ಪಾಟೀಲರು ಸೇರಿಕೊಂಡು ಈ ಅಂತರಂಗಕ್ಕೆ ಒಂದು ಸಾಂಸ್ಥಿಕ ರೂಪವನ್ನು ನೀಡಿದರು. ಪ್ರತಿ ಮೂರು ತಿಂಗಳಿಗೆ ಒಂದು ನಾಟಕವನ್ನು ಸಿದ್ಧಪಡಿಸಿ ಆಡಿಸುವ ಹೊಣೆಗಾರಿಕೆ ಇವರ ಮೇಲಿತ್ತು. ಈ ಕಾರ್ಯವನ್ನು ಇಬ್ಬರೂ ಯಶಸ್ವಿಯಾಗಿ ನಿರ್ವಹಿಸಿದರು. ಸಾಹಿತ್ಯ ಪತ್ರಿಕೆಗಳಿಗೆ ಕೇಳಿ-ಕೇಳಿ ಚಂದಾದಾರರನ್ನು ಮಾಡಿಕೊಳ್ಳುವಂತೆ ಅಂತರಂಗ ನಾಟಕ ಕೂಟಕ್ಕೆ ಮನೆಮನೆಗೆ

ಹೋಗಿ ಮನವೋಲಿಸಿ ಸದಸ್ಯರನ್ನಾಗಿ ಮಾಡಿಕೊಂಡರು. ಅಂತರಂಗದ ಸದಸ್ಯರಾದ ಸಂಪಿಗೆ ತೋಂಟದಾರ್ಯ ಅವರೇ ಹೇಳುವಂತೆ ಈ ಸಂಘಟನೆಯಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟರದ್ದು ಸಿಂಹಪಾಲು, ಇಂತಹ ಯೋಜನೆಗಳನ್ನು ಜಾರಿಗೊಳಿಸುವಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟರು ಯಾವಾಗಲೂ ಮುಂದಾಗಿರುತ್ತಿದ್ದರು. ಇವರಿಂದಾಗಿಯೇ ಹೊಸ ನಾಟಕಗಳು ಸಾಲು ಸಾಲಾಗಿ ಪ್ರದರ್ಶಿತಗೊಳ್ಳ ತೊಡಗಿದವು. ತೆರೆಗಳು, ವಿದೂಷಕ, ಹಳ್ಳಾಕೊಳ್ಳ ನೀರು, ಆನೆಮರಿ, ಖಾಸ್ಯಗತ ಸಂಭಾಷಣೆ, ಏವಂ ಇಂದ್ರಜಿತ್ ಯಾಂಗ್ ಮಾಡ್ತಿ ಮ್ಯಾಂವ್, ಕಾಡು ಪರಾಣಿ, ಗೊಂಬೆಯಾಟದಲ್ಲಿ, ಟಿಂಗರ ಬುಡ್ಡಣ್ಣ, ಬಾಕಿ ಇತಿಹಾಸ, ಗೋಕರ್ಣದ ಗೌಡಸಾನಿ, ಏಕಲವ್ಯ, ಪ್ರದರ್ಶನಗೊಂಡವು. ಪ್ರೇಕ್ಷಕರಲ್ಲಿ ನಾಟಕದ ಬಗ್ಗೆ ಕುತೂಹಲ ವಿಚಿತ್ರ ಚರ್ಚೆಗಳು ಪ್ರಾರಂಭವಾದವು. ಅರ್ಥವಾಗದ ನಾಟಕದ ಬಗ್ಗೆ ಟೀಕೆ. ತಮ್ಮದೇ ಆದ ರೀತಿಯಲ್ಲಿ ಅರ್ಥೈಸಿ ತಮಗೆ ಅರ್ಥವಾಗಿದೆಯೆಂದು ಹೇಳಿಕೊಳ್ಳುವುದು ಹೀಗೆ ಅನೇಕ ಬಗೆಯಲ್ಲಿ ಪ್ರೇಕ್ಷಕರು ನಾಟಕಗಳಿಗೆ ಸ್ಪಂದಿಸ ತೊಡಗಿದರು. ಧಾರವಾಡದ ಹವ್ಯಾಸಿ ರಂಗಭೂಮಿಯಲ್ಲಿ ಪ್ರೇಕ್ಷಕರು ನಾಟಕಗಳಿಗೆ ಈ ರೀತಿ ಬೌದ್ಧಿಕವಾಗಿ ಪ್ರತಿಕ್ರಿಯಿಸಿ. ನೋಡಿದ ಎಷ್ಟೋ ದಿನಗಳಾದ ಮೇಲೆ ಅದರ ಬಗ್ಗೆ ಚರ್ಚಿಸುತ್ತಾ ನಮ್ಮ ಜೊತೆ ಅವರ ವಿಚಾರಗಳನ್ನು ಹಂಚಿಕೊಂಡದ್ದು ಬಹುಶಃ ಅದೇ ಮೊದಲು ಮತ್ತು ಇಲ್ಲಿವರೆಗೂ ಅದೊಂದೇ ಬಾರಿ''[೮] ಶ್ರೀರಂಗರು, ಚಂಪಾ, ಚಂದ್ರಕಾಂತ ಕುಸುನೂರು, ಕೈಲಾಸಂ, ಎಂ.ಎಸ್.ಕೆ. ಪ್ರಭು. ಬಾದಲ್ ಸರ್ಕಾರ್ ಮುಂತಾದ ಕನ್ನಡ ಮತ್ತು ಕನ್ನಡೇತರ ನಾಟಕಗಳನ್ನು ಆಡಿಸಲಾಯಿತು. ಜೊತೆಗೆ ವಿದೇಶಿ ಭಾಷೆಯ ಅನುವಾದ ನಾಟಕಗಳನ್ನು ಅಂತರಂಗದಿಂದ ಪ್ರದರ್ಶಿಲಾಯಿತು. ಈ ಸಂದರ್ಭದಲ್ಲಿ ಅಂತರಂಗವನ್ನು ಕಟ್ಟಿ ಬೆಳೆಸಲು ಶೆಟ್ಟರೊಂದಿಗೆ ಹಲವಾರು ರಂಗಪ್ರೇಮಿಗಳಾದ ಡಾ.ಎ.ಮುರಿಗೆಪ್ಪ ಸಂಪಿಗೆ ತೋಂಟದಾರ್ಯ, ಬಿ.ಟಿ. ದೇಸಾಯಿಯವರು ಬಹುವಾಗಿ ಶ್ರಮಿಸಿದರು. ಕರ್ನಾಟಕದ ಸಾಗರ, ಹೂವಿನ ಹಡಗಲಿ, ಬೆಂಗಳೂರು, ಮೈಸೂರು ಮುಂತಾದ ಕಡೆಗಳಿಂದ ಬೇರೆ ಬೇರೆ ನಾಟಕ ತಂಡಗಳನ್ನು ಕರೆಸಿ ಧಾರವಾಡದಲ್ಲಿ ಪ್ರದರ್ಶಿಸಲಾಯಿತು. ಅಂತರಂಗ ತಂಡವು ಕರ್ನಾಟಕದ ಹಲವಾರು ಸ್ಥಳಗಳಲ್ಲಿ ರಂಗ ಪ್ರಯೋಗಗಳನ್ನು ನೀಡಿತು. ಇದರಿಂದಾಗಿ ಕರ್ನಾಟಕದ ಹಲವಾರು ಕಡೆಗೆ ಹವ್ಯಾಸಿ ನಾಟಕ ಚಳುವಳಿಯ ಬಗ್ಗೆ ಒಲವು ಮೂಡಿತು. ಧಾರವಾಡದಲ್ಲಿ ಕಂಡುಬಂದ ಉತ್ತಮ ಪ್ರತಿಕ್ರಿಯೆಯಿಂದಾಗಿ ಬಿ.ವಿ. ಕಾರಾಂತರು ಬೆಂಗಳೂರಿಗೆ ಹೋಗಿ ಅಲ್ಲಿ ಜೋಕುಮಾರಸ್ವಾಮಿ, ಸಂಕ್ರಾಂತಿ, ಮತ್ತು ದೊರೆ ಈಡಿಪಸ್ ನಾಟಕಗಳನ್ನು ಮಾಡಿಸಿದರು.

ಬಿ.ವಿ. ಕಾರಾಂತರ ಸಂಪರ್ಕದಿಂದಾಗಿ ಪಟ್ಟಣಶೆಟ್ಟರಿಗೆ ಹಿಂದೀಯ ಹೆಸರಾಂತ ನಾಟಕಕಾರರಾದ ಮೋಹನ್ ರಾಕೇಶರ ಪರಿಚಯವಾಯಿತು. ಆ ಹೊತ್ತಿಗಾಗಲೇ ಪಟ್ಟಣಶೆಟ್ಟರು ಓದಿ ಮೆಚ್ಚಿಕೊಂಡಿದ್ದ ಮೋಹನ್ ರಾಕೇಶರ 'ಆಷಾಢ್ ಕಾ ಏಕ್ ದಿನ್' ನಾಟಕವನ್ನು ಪಟ್ಟಣಶೆಟ್ಟರು ಕನ್ನಡಕ್ಕೆ ಅನುವಾದಿಸಿ ಕೊಡಬೇಕೆಂದು ನೀನಾಸಂನ ಕೆ.ವಿ.ಸುಬ್ಬಣ್ಣನವರು ಒತ್ತಾಯಿಸಿದರು. ಹೆಗ್ಗೊಡಿನಲ್ಲಿ ಪ್ರದರ್ಶನ ಮಾಡಬೇಕೆಂದು ಕಾರಾಂತರು ಪ್ರೀತಿ ಪೂರ್ವಕವಾಗಿ ಅಗ್ರಹ ಪಡಿಸಿದರು. ಈ ಮೇರೆಗೆ ಶೆಟ್ಟರು ಈ ನಾಟಕವನ್ನು 'ಆಷಾಢದ ಒಂದುದಿನ' ಎಂದು ಅನುವಾದ ಮಾಡಿದರು. ಇದು ಯಶಸ್ವೀ ಅನುವಾದವಾಗಿದೆ. ಸಿದ್ಧಲಿಂಗ ಪಟ್ಟಣಶೆಟ್ಟರು ಸಂಸ್ಕೃತ, ಹಿಂದಿ, ಉರ್ದು, ಮರಾಠಿ, ಭಾಷೆಗಳಿಂದ ಹಲವಾರು ರಂಗಪ್ರೇಮಿಗಳ ಒತ್ತಾಸೆಗೆ ಒಳಗಾಗಿ ಇಲ್ಲಿಯವರೆಗೆ ಹದಿಮೂರು ನಾಟಕಗಳನ್ನು ಕನ್ನಡಕ್ಕೆ

ಅನುವಾದಿಸಿದ್ದಾರೆ. ಈ ಎಲ್ಲಾ ನಾಟಕಗಳು ಭಾರತೀಯ ರಂಗಭೂಮಿಯಲ್ಲಿ ಪರಿಚಿತವಾಗಿರುವ ಪ್ರಸಿದ್ಧ ನಾಟಕಗಳಾಗಿವೆ. ಪಟ್ಟಣಶೆಟ್ಟರು ಎರೆಡು ಸಲ ಕರ್ನಾಟಕ ನಾಟಕ ಅಕಾಡೆಮಿಯ ಸದಸ್ಯರಾಗಿ ಮಹತ್ವ ಪೂರ್ಣವಾದ ಕಾರ್ಯ ಮಾಡಿದ್ದಾರೆ. ಕರ್ನಾಟಕದ ರಂಗಕಲಾವಿದರ ಜೀವನ ಸಾಧನೆಗಳ ದಾಖಲೀಕರಣ ಮತ್ತು ಜೀವನ ಚರಿತ್ರೆಗಳನ್ನು ಬರೆಸಿದ್ದಾರೆ. ಕರ್ನಾಟಕದ ಎಲ್ಲಾ ಕಡೆಗಳಲ್ಲಿ ರಂಗ ಚಟುವಟಿಕೆಗಳು ಕ್ರಿಯಾಶೀಲವಾಗಿರುವಂತೆ ಮಾಡುವಲ್ಲಿ ಶ್ರಮವಹಿಸಿದ್ದಾರೆ. ಇವರು ರಂಗಭೂಮಿಯನ್ನು ಕುರಿತಂತೆ ಅನೇಕ ಲೇಖನಗಳನ್ನು ಕೃತಿಗಳನ್ನು ರಚಿಸಿದ್ದಾರೆ. ೧೯೯೮ರಲ್ಲಿ ಕರ್ನಾಟಕ ನಾಟಕ ಅಕಾಡೆಮಿಯು ಇವರಿಗೆ ಗೌರವ ಫಿಲೋಶಿಪ್ ನೀಡಿರುವುದು ಪಟ್ಟಣಶೆಟ್ಟರು ರಂಗಭೂಮಿಯ ಬಹುಮುಖ ಸೇವೆಗೆ ಬಂದ ಪ್ರತಿಫಲವಾಗಿದೆ.

ಮೈಸೂರಿನಲ್ಲಿರುವ ರಂಗಾಯಣದೊಂದಿಗೆ ಪಟ್ಟಣಶೆಟ್ಟರದು ಅತ್ಯಂತ ನಿಕಟಸಂಬಂಧ ಹೊಂದಿದ್ದಾರೆ. ರಂಗಾಯಣದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ರಂಗಾಯಣಕ್ಕೆ ಹೆಸರು ತಂದು ಕೊಟ್ಟಂಥ ಪ್ರಸನ್ನ, ಚಿದಂಬರ ಜಂಬೆಯಂಥವರು ನಿರ್ದೇಶಕರಾಗಿ ಬರುವಲ್ಲಿ ಪಟ್ಟಣಶೆಟ್ಟರು ಪ್ರಮುಖ ಕಾರಣ ಕರ್ತೃಗಳಾಗಿದ್ದಾರೆ.

ಪಟ್ಟಣ ಶೆಟ್ಟಿಯವರು ಎರಡನೆಯ ಬಾರಿಗೆ ನಾಟಕ ಅಕಾಡೆಮಿ ಸದಸ್ಯರಾಗಿದ್ದಾಗ ಅಕಾಡೆಮಿಗೆ ಒಂದು ಅಪರೂಪದ ಯೋಜನೆಯನ್ನು ಹಾಕಿಕೊಟ್ಟರು. ಕನ್ನಡನಾಡಿನ ಹೆಸರಾಂತ ಮೂವತ್ತು ರಂಗಕಲಾವಿದರ ಬದುಕನ್ನು ಕುರಿತು ವಿವಿಧ ಲೇಖಕರಿಂದ ಬರೆಸಲಾಯಿತು. ಶೆಟ್ಟರ ಪ್ರಧಾನ ಸಂಪಾದತತ್ವದಲ್ಲಿ ರಂಗಕರ್ಮಿಗಳಾದ ಎಚ್.ಎನ್. ಹೂಗಾರ, ಬಿ.ವಿ.ಕಾರಾಂತ, ಆರ್.ನಾಗರತ್ನಮ್ಮ, ಚಿಂದೋಡಿ ಲೀಲಾ, ಪಿ.ಬಿ.ಧುತ್ತರಿಗಿ ಮುಂತಾದವರ ರಂಗಪರಿಚಯ ಕೃತಿಗಳನ್ನು ಹೊರತರಲಾಯಿತು.

ಅಂತರಂಗ ಸಂಸ್ಥೆಗೆ ಸ್ವತಃ ಬೆಳಕಿನ ವ್ಯವಸ್ಥೆಗಳನ್ನು ಪರಿಣಾಮಕಾರಿಯಾಗಿ ಉಪಯೋಗಿಸುವ ಸಲಕರಣೆಗಳಿರಲಿಲ್ಲ. ಕೈಗಡವಾಗಿ ಹಣಪಡೆದು ಮುಂಬೈಗೆ ಹೋಗಿ ಸಲಕರಣೆಗಳನ್ನು ತಂದರು. ಹೂವಿನ ಹಡಗಲಿಯ ಎಂ.ಪಿ. ಪ್ರಕಾಶರ ಆಹ್ವಾನದ ಮೇರೆಗೆ ಆಡಲಾದ 'ಬಾಕಿ ಇತಿಹಾಸ' ನಾಟಕದಲ್ಲಿ ಮೊದಲು ಇದನ್ನು ಬಳಸಲಾಯಿತು.

ಈ ನಾಟಕದಲ್ಲಿ ಪಟ್ಟಣಶೆಟ್ಟಿಯವರು ವಹಿಸಿದ ಪಾತ್ರವೂ ಪ್ರಸಿದ್ಧಿ ಪಡೆಯಿತು.

ಹೀಗೆ ಡಾ.ಸಿದ್ಧಲಿಂಗ ಪಟ್ಟಣಶೆಟ್ಟರು ರಂಗಭೂಮಿಗೆ ಅನೇಕ ಕೊಡುಗೆಗಳನ್ನು ನೀಡಿದ್ದಾರೆ. ಸಂಪಿಗೆ ತೋಂಟದಾರ್ಯ ಅವರು ಅಭಿಪ್ರಾಯಪಡುವಂತೆ, ''ಉತ್ತಮ ಸಲಹೆಗಳ ಮೂಲಕ, ಉತ್ತಮ ಯೋಜನೆಗಳ ಮೂಲಕ ರಂಗಭೂಮಿಯ ಕೆಲಸವನ್ನು ಮುಂದುವರಿಸಿರುವ ಸಿದ್ಧಲಿಂಗ ಪಟ್ಟಣಶೆಟ್ಟಿ ಒಬ್ಬ ನಿಷ್ಠಾವಂತ ರಂಗಕರ್ಮಿ, ರಂಗಭೂಮಿಯ ಹಿತೈಷಿ, ಹಾಗೂ ಸಂಪನ್ನ ಮನುಷ್ಯ ಎಂದಿದ್ದಾರೆ.''[೨] ಇವರಿಂದ ಕನ್ನಡ ರಂಗಭೂಮಿ ಶ್ರೀಮಂತವಾಗಿದೆ.

**೫. ಸಾಹಿತ್ಯ**

ಮನಗಂಡಿಯ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದಾಗ ಅಂಗಡಿ ಸಂಗಣ್ಣ ಶಿಕ್ಷಕರು ಓದಲು ಕೊಡುತ್ತಿದ್ದ ಪುಸ್ತಕಗಳು ಸಿದ್ಧಲಿಂಗ ಪಟ್ಟಣಶೆಟ್ಟಿಯವರಲ್ಲಿ ಸಾಹಿತ್ಯಸಕ್ತಿಯನ್ನು ಕೆರಳಿಸಿದ್ದವು. ನಂತರ ಧಾರವಾಡಕ್ಕೆ ಬಂದ

ಮೇಲೆ ಸರ್ಕಾರಿ ಪ್ರಾಯೋಗಿಕ ಪಾಠಶಾಲೆಯಲ್ಲಿ ಮುಳುಗುಂದಮಠ, ಬಿ.ಪಿ.ನವಲಗುಂದ ಮುಂತಾದ ಶಿಕ್ಷಕರು ಏಳನೆಯ ತರಗತಿಯ ಶಿಕ್ಷಕರಾಗಿದ್ದಾಗ ಅವರು ಕನ್ನಡದ ಸರಿಸುಮಾರು ಎಲ್ಲಾ ಛಂದಸ್ಸುಗಳು ಪಟ್ಟಣಶೆಟ್ಟರಿಗೆ ಕುತೂಹಲ ಹುಟ್ಟಿಸಿದವು. ಅವರು ಕಲಿಸಿದ ಛಂದಸ್ಸುಗಳಲ್ಲಿಯೇ ಕವಿತೆಗಳನ್ನು ಬರೆದು ತೋರಿಸುತ್ತಿದ್ದರು. ಈ ಕಾರಣಗಳಿಂದಾಗಿಯೇ ಪಟ್ಟಣ ಶೆಟ್ಟರಲ್ಲಿ ಹೇಳುವ ಮತ್ತು ಬರೆಯುವ ಚೈತನ್ಯ ಹೆಚ್ಚಾಯಿತು. ಅಲ್ಲಿಂದ ಬಾಷೆಲ್ ಮಿಷನ್ ಹೈಸ್ಕೂಲಿನಲ್ಲಿ ಕಲಿಯಲು ಬಂದಾಗ ಅಲ್ಲಿದ್ದ ಎಸ್.ಎ. ಪುರೋಹಿತರು, ವರದರಾಜ ಹುಯಿಲಗೋಳರು, ಪಟ್ಟಣಶೆಟ್ಟರ ಸಾಹಿತ್ಯಾಭಿರುಚಿಗೆ ಪ್ರೋತ್ಸಾಹ ನೀಡಿದರು. ಅದರಲ್ಲಿ ವರದರಾಜ ಹುಯಿಲಗೋಳರು ಶಾಲೆಯ ಮತ್ತು ತಮ್ಮ ಶೆಟ್ಟರಿಗೆ ಓದಲು ಎಂಟನೇ ವರ್ಗದಿಂದ ಹಿಡಿದು ಹನ್ನೊಂದನೇ ವರ್ಗಕ್ಕೆ ಬರುವರೆಗೆ ಸಿದ್ಧಲಿಂಗ ಪಟ್ಟಣಶೆಟ್ಟರ ಕಥೆ ಕವಿತೆ ಮುಂತಾದವುಗಳನ್ನು ತಪ್ಪದೇ ಪ್ರಕಟಿಸುತ್ತಿದ್ದರು. ಅದೇ ಕಾಲಕ್ಕೆ ಬೇಂದ್ರೆಯವರಿಗೆ, ಅರವತ್ತು ತುಂಬಿದ ಸಂದರ್ಭದಲ್ಲಿ ನಡೆದ ಕಾರ್ಯಕ್ರಮದಲ್ಲಿ ಪಟ್ಟಣಶೆಟ್ಟರು ಬೇಂದ್ರೆಯವರನ್ನು ಕುರಿತು ಬರೆದ ಮೂರು ಪದ್ಯಗಳನ್ನು ಓದಿದರು. ಅದನ್ನು ಕೇಳಿದ ಬೇಂದ್ರೆ ಬಹುವಾಗಿ ಮೆಚ್ಚಿಕೊಂಡರು. ನಿರಂತರವಾಗಿ ಬರೆಯುತ್ತಾ ಇರುವಂತ ಶೆಟ್ಟರಿಗೆ ಕಿವಿಮಾತು ಹೇಳಿದರು. ಮುಕ್ತಕಂಠದಿಂದ ಹೊಗಳಿ ಆಶೀರ್ವಾದಿಸಿದರು. ಇನ್ನೊಂದು ಸಂದರ್ಭದಲ್ಲಿ ಅದೇ ಶಾಲೆಯಲ್ಲಿ ಕಲಿಯುತ್ತಿದ್ದ ಪಟ್ಟಣಶೆಟ್ಟಿಯವರಿಗಿಂತ ಮೂರು ವರ್ಷ ಹಿರಿಯವರಾದ ಗಿರೀಶ್ ಕಾರ್ನಾಡರನ್ನು ವರದರಾಜ ಶಿಕ್ಷಕರು ಪರಿಚಯ ಮಾಡಿಸಿಕೊಟ್ಟರು.

ಆದಿನಗಳಲ್ಲಿಯೇ ಧಾರವಾಡದ ವನಿತಾ ಸಮಾಜ ಸೇವದಿಂದ ಪ್ರಕಟವಾಗುತ್ತಿದ್ದ 'ವೀರಮಾತೆ' ಮಾಸಿಕ ಪತ್ರಿಕೆಯಲ್ಲಿ ಪಟ್ಟಣಶೆಟ್ಟರ, ಕಥೆ, ಕವನಗಳು ಪ್ರಕಟವಾಗುತ್ತಿದ್ದವು. ಪತ್ರಿಕೆಯ ಸಂಪಾದಕರಾಗಿದ್ದ ವೆಂಕಮ್ಮ ಕೊಯಮೊತ್ತೂರು ಮತ್ತು ಸರೋಜಿನಿ ಮಹಿಷಿಯವರುಗಳು ಪಟ್ಟಣಶೆಟ್ಟರ ಬರವಣಿಗೆಯನ್ನು ಮೆಚ್ಚಿ ಪ್ರೋತ್ಸಾಹಿಸಿದರು.

ಎಸ್.ಎಸ್.ಸಿ. ಪರೀಕ್ಷೆಗಳು ಮುಗಿದ ನಂತರ ೧೯೫೭ ರ ಮೇ ತಿಂಗಳಲ್ಲಿ ಧಾರವಾಡದಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಪಟ್ಟಣಶೆಟ್ಟರ ಮೇಲೆ ತುಂಬಾ ಪ್ರಭಾವ ಬೀರಿತು. ಅನೇಕ ಜನ ಸಾಹಿತಿಗಳನ್ನು ಹತ್ತಿರದಿಂದ ಕಂಡರು. ಅನೇಕರನ್ನು ಮಾತನಾಡಿಸಿದರು. ನಾನು ಅವರಂತೆ ಉನ್ನತ ಬರಹಗಾರನಾಗಬೇಕೆಂಬ ಹಂಬಲ ಮನದಲ್ಲಿ ಮೂಡಿತು.

ಶೆಟ್ಟರು ಕಾಲೇಜಿಗೆ ಬಂದ ಮೇಲೆ ಸಾಹಿತ್ಯದ ಸಂಪರ್ಕ ಇನ್ನಷ್ಟು ಹೆಚ್ಚಿತು. ಧಾರವಾಡದ ಕರ್ನಾಟಕ ಕಾಲೇಜಿನ ಪ್ರಾಂಶುಪಾಲರಾದ ವಿನಾಯಕ ಕೃಷ್ಣ ಗೋಕಾಕ, ಕನ್ನಡ ವಿಭಾಗದ ಸ.ಸ. ಮಾಳವಾಡ, ಪ್ರೊ.ಎಸ್.ಆರ್. ಮಾಳಗಿ ಇಂಗ್ಲೀಷ್ ಪ್ರೊ.ವಿ.ಎಂ. ಇನಾಂದಾರ್ ಮುಂತಾದ ಪ್ರಸಿದ್ಧರ ಒಡನಾಟದಿಂದ ಸಾಹಿತ್ಯ ಸೃಷ್ಟಿ ಹೆಚ್ಚಾಯಿತು.

ಕಾಲೇಜಿನಲ್ಲಿ ಶೆಟ್ಟರ ಸ್ನೇಹಿತರಾದ ಪಿ.ಎಂ.ಹೆಗಡೆ, ಗಿರಡ್ಡಿ ಗೋವಿಂದರಾಜು, ಚಂದ್ರಶೇಖರ ಪಾಟೀಲ ಮುಂತಾದವರ ಜೊತೆಗೆ ನಾಟಕ, ಸಾಹಿತ್ಯಿಕ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುತ್ತಿದ್ದರು. ಆ ದಿನಗಳಲ್ಲಿಯೇ ಪಿ.ಎಂ. ಹೆಗಡೆಯವರ ಮೂಲಕ ಆಧುನಿಕ ಕನ್ನಡದಲ್ಲಿ ಮೊದಲು ರಾಮಾಯಣವನ್ನು ಬರೆದ ಸಾಹಿತಿ ಸಾಲಿರಾಮಚಂದ್ರರಾಯರ ಸಂಪರ್ಕ ಲಭಿಸಿತು. ಮುಂದೆ ಆಗಿನ ಕಾಲದ ಸಾಹಿತ್ಯ ಪತ್ರಿಕೆಗಳಾದ 'ಜಯಂತಿ',

‘ಜಯಕರ್ನಾಟಕ’ ಮುಂತಾದ ಪತ್ರಿಕೆಗಳಲ್ಲಿ ಶೆಟ್ಟರ ಬರವಣಿಗೆಗಳು ಪ್ರಕಟಗೊಂಡವು. ಪಟ್ಟಣಶೆಟ್ಟರ ಒಲವು ಕಾವ್ಯದ ಮೇಲೆಯೇ ವಿಶೇಷವಾಗಿದ್ದ ಕಾರಣ ಕಾವ್ಯರಚನೆ ನಿರಂತರವಾಗಿ ಸಾಗಿತ್ತು.

ಈ ಮಧ್ಯ ಹೈಸ್ಕೂಲಿನಲ್ಲಿ ಓದುತ್ತಿದ್ದಾಗ ಹಿಂದಿ ಭಾಷೆ ಮತ್ತು ಸಾಹಿತ್ಯವನ್ನು ಪ್ರೀತಿಯಿಂದ ಓದುತ್ತಿದ್ದ ಪಟ್ಟಣಶೆಟ್ಟರು ಹಿಂದಿಯಲ್ಲಿ ಕಾವ್ಯ ಬರೆಯುವ ಹವ್ಯಾಸವನ್ನು ರೂಢಿಸಿಕೊಳ್ಳ ತೊಡಗಿದರು. ೧೯೫೭-೧೯೫೮ ರಲ್ಲಿ ಕರ್ನಾಟಕ ಕಾಲೇಜಿನಲ್ಲಿ ಓದುತ್ತಿದ್ದಾಗ ದೆಹಲಿಯ ಯುವಜನೋತ್ಸವದಲ್ಲಿ ಹಿಂದಿ ಆಶುಭಾಷಣ ಸ್ಪರ್ಧೆಗಳಲ್ಲಿ ಭಾಗವಹಿಸಿದರು. ಹೀಗೆ ಏಕ ಕಾಲಕ್ಕೆ ಕನ್ನಡ ಮತ್ತು ಹಿಂದೀ ಎರೆಡೂ ಸಾಹಿತ್ಯಗಳಲ್ಲಿ ಬರವಣಿಗೆ ಮತ್ತು ಸಂಪರ್ಕ ಉಳಿಸಿಕೊಂಡರು.

ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಎಂ.ಎ. ಹಿಂದೀ ಕಲಿಯುವಾಗ ಪಟ್ಟಣಶೆಟ್ಟರ ಜೊತೆಗೆ ಓದುತ್ತಿದ್ದ ಅಪ್ಪಾಸಾಹೇಬ ಸನದಿಯವರ ಒತ್ತಾಸೆಯಿಂದಾಗಿ ಹಿಂದೀಯ ಕೆಲವು ಕವಿತೆಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಿದರು. ಎಂ.ಎ. ಎರಡನೆಯ ವರ್ಷದಲ್ಲಿ ಓದುತ್ತಿದ್ದಾಗ ಸನದಿ ಮತ್ತು ಪಟ್ಟಣಶೆಟ್ಟರು ಸೇರಿಕೊಂಡು ಹಿಂದಿಯಲ್ಲಿ ‘ಶೈಲ್ ಔರ್ ಸಾಗರ್’, ಕವನ ಸಂಕಲನ ಪ್ರಕಟಿಸಿದರು. ಮುಂದೆ ಈ ಸಂಕಲನದ ವಿಮರ್ಶೆ ಪ್ರಸಿದ್ಧ ಹಿಂದಿ ಪತ್ರಿಕೆಯಾದ ಧರ್ಮಯುಗದಲ್ಲಿ ಬಂದಿತು. ಆಗಿನ ಮೂರು ವರ್ಷಗಳಲ್ಲಿ ಆಯ್ದು ಶ್ರೇಷ್ಠ ಇಪ್ಪತ್ತು ಕವನ ಸಂಕಲನಗಳಲ್ಲಿ ‘ಶೈಲ್ ಔರ್ ಸಾಗರ್’ ಒಂದೊಂದು ಪತ್ರಿಕೆ ಹೇಳಿತು. ಪಟ್ಟಣಶೆಟ್ಟರ ಕವಿತೆಗಳನ್ನು ಮೆಚ್ಚಿಕೊಂಡು ಪ್ರಖ್ಯಾತ ಹಿಂದೀ ವಿಮರ್ಶಕ ಅಜಯ್ ಕುಮಾರ್ ಅವರು ವಿಮರ್ಶೆ ಬರೆದದ್ದೂ ಒಂದು ಹೆಗ್ಗಳಿಕೆಯಾಗಿದೆ.

ಹೀಗೆ ಅನಿರೀಕ್ಷಿತವಾಗಿ ಕನ್ನಡಕ್ಕಿಂತ ಮುಂಚಿತವಾಗಿ ಹಿಂದೀ ಪುಸ್ತಕ ಪ್ರಕಟವಾಯಿತು. ಎಂ.ಎ. ಮುಗಿದ ನಂತರ ಒಂದು ವರ್ಷದಲ್ಲಿ ೧೯೬೪ ಮೇ ತಿಂಗಳಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟರ ‘ನೀನಾ’, ಎಂಬ ಕನ್ನಡದ ಮೊದಲ ಕವನ ಸಂಕಲನ ಪ್ರಕಟವಾಯಿತು. ಈ ಸಂಕಲನದ ಕವನಗಳು ಕರ್ನಾಟಕದ ಬಹುತೇಕ ಎಲ್ಲಾ ವಿಮರ್ಶಕರ ಗಮನ ಸೆಳೆದವು. ಆಗಿನಿಂದ ನಾಡಿನ ಪ್ರತಿಷ್ಠಿತ ಕವಿಗಳ ಜೊತೆಗೆ ಪಟ್ಟಣಶೆಟ್ಟರ ಬಾಂಧವ್ಯ ಬೆಳೆಯಿತು. ಅದಾದ ಕೆಲ ತಿಂಗಳಲ್ಲಿ ಗೆಳೆಯ ಚಂದ್ರಶೇಖರ ಪಾಟೀಲರ ಜೊತೆ ‘ಸಂಕ್ರಮಣ ಸಾಹಿತ್ಯ’ ಪತ್ರಿಕೆ ಆರಂಭಿಸಿದ್ದು, ಕನ್ನಡ ಸಾಹಿತ್ಯ ಪತ್ರಿಕೆ ಆರಂಭಿಸಿದ್ದು, ಕನ್ನಡ ಸಾಹಿತ್ಯ ಪತ್ರಿಕಾಕಾರ್ಯ ಜಗತ್ತಿನಲ್ಲಿ ಒಂದು ಇತಿಹಾಸ, ಸಂಕ್ರಮಣ ಪ್ರಕಟಣೆಯ ಹೊಣೆಗಾರಿಕೆ ಪಟ್ಟಣಶೆಟ್ಟರ ಮೇಲಿತ್ತು. ಇವರದೇ ವಿಳಾಸ, ಪತ್ರವ್ಯವಹಾರ, ಲೆಕ್ಕನಿರ್ವಹಣೆ ಇದ್ದುದರಿಂದ ಒಂದು ರೀತಿಯಲ್ಲಿ ಸಮರ್ಥವಾಗಿ ಪತ್ರಿಕೆಯನ್ನು ಕಟ್ಟಿ ಬೆಳೆಸಿದರು. ಇವರ ಜೊತೆಗೆ ಗಿರಡ್ಡಿಗೋವಿಂದರಾಜು ಸೇರಿ ಕೊಂಡಿದ್ದರಿಂದ ಮೂವರೂ ಸೇರಿ ಪತ್ರಿಕೆಗೆ ಹೊಸ ಆಯಾಮವನ್ನು ತಂದು ಕೊಟ್ಟರು. ಸಂಕ್ರಮಣದ ಅನುಭವದ ಹಿನ್ನೆಲೆಯಲ್ಲಿಯೇ ಧರ್ಮಪತ್ನಿ, ಡಾ. ಹೇಮಾ ಪಟ್ಟಣಶೆಟ್ಟಿಯವರ ಜೊತೆ ಸೇರಿ, ಸಂಕಲನ, ತ್ರೈಮಾಸಿಕ ಪತ್ರಿಕೆಯನ್ನು ಈಗಲೂ ಯಶಸ್ವಿಯಾಗಿ ನೆಡೆಸುತ್ತಿದ್ದಾರೆ.

ಕಾವ್ಯಕೃಷಿಯ ಜೊತೆಗೆ ಸಾಹಿತ್ಯದ ಎಲ್ಲಾ ಬರವಣಿಗೆಗಳಲ್ಲಿ ಯಶಸ್ಸನ್ನು ಪಟ್ಟಣಶೆಟ್ಟರು ಸಾಧಿಸಿದ್ದಾರೆ. ಇವರು ಕಥೆ, ವಿಮರ್ಶೆ, ಪ್ರಬಂಧ ಮತ್ತು ಅಂಕಣ ಬರಹಗಳಲ್ಲೂ ಸ್ವಂತಿಕೆಯನ್ನು ಮರೆತು ಕನ್ನಡದ, ನವ್ಯ ಸಾಹಿತಿಗಳಲ್ಲಿ ಪ್ರಮುಖರೆನಿಸಿದ್ದಾರೆ.

ಹಿಂದೀಭಾಷೆ, ವ್ಯಾಕರಣ, ದಕ್ಷಿಣಭಾರತದ ಭಾಷೆಗಳೊಂದಿಗೆ ಹಿಂದೀ ಸಾಹಿತ್ಯದ ಸಂಬಂಧವನ್ನು ಕುರಿತು ಆಗ್ರಾ, ಸಿಲ್ಲಾಂಗ್, ದೆಹಲಿ, ಹೈದ್ರಾಬಾದ್ ಹೀಗೆ ಭಾರತದ ನಾನಾ ಭಾಗಗಳಲ್ಲಿ ಶ್ರೇಷ್ಠ ಉಪನ್ಯಾಸಗಳನ್ನು ನೀಡಿದ್ದಾರೆ. ರಾಷ್ಟ್ರೀಯ ನಾಟಕಶಾಲೆ ದೆಹಲಿ, ಮತ್ತು ಮುಂಬೈ ಮುಂತಾದ ಕಡೆ ಪ್ರಮುಖ ಗೋಷ್ಠಿಗಳಲ್ಲಿ ಪಾಲ್ಗೊಂಡು ಕನ್ನಡ ರಂಗಭೂಮಿಯ ವಿಶೇಷತೆಗಳನ್ನು ಪರಿಚಯಿಸಿದ್ದಾರೆ. ದಕ್ಷಿಣ ಭಾರತ ಹಿಂದೀ ಪ್ರಚಾರ ಸಭಾ ಮದ್ರಾಸ್ ಇವರು ಹಿಂದೀ ಭಾಷೆ, ಸಾಹಿತ್ಯ ಮತ್ತು ಶಿಕ್ಷಣಕ್ಕೆ ನೀಡಿದ ಸೇವೆಯನ್ನು ಗೌರವಿಸಿ ಮದ್ರಾಸಿನಲ್ಲಿ ಸನ್ಮಾನಿಸಿದ್ದಾರೆ.

**೬.ವ್ಯಕ್ತಿತ್ವ**

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರದು ವರ್ಣಮಯ ವ್ಯಕ್ತಿತ್ವ ಅವರು ಬಾಲ್ಯದಲ್ಲಿಯೇ ಸಾಕಷ್ಟು ಕಷ್ಟ ನೋವುಗಳನ್ನು ಅನುಭವಿಸಿದರು. ಇದರಿಂದ ತಾಳ್ಮೆ, ಸಹನೆ ಶಕ್ತಿಗಳು, ಸಮಸ್ಯೆಗಳನ್ನು ಹೆದುರಿಸುವ ಛಲಗಾರಿಕೆ, ಅವರಿಗೆ ಬಂದಿತ್ತು. ಅವರಿಗೆ ನೂರಾರು ಸಮಸ್ಯೆಗಳಿದ್ದರೂ ಅವನ್ನು ತೋರುಗೊಡದೆ ತಮ್ಮಮಾತಿಗೆ ತಾವೇ ಅನುಭವಿಸುವ ವ್ಯಕ್ತಿಯಾಗಿದ್ದರು. ಸಿದ್ಧಲಿಂಗ ಪಟ್ಟಣಶೆಟ್ಟರು ಬಾಲ್ಯದಿಂದಲೇ ಚುರುಕುತನ ಹೊಂದಿದ್ದರು. ತಮಗೆ ವಹಿಸಿದ ಕೆಲಸಗಳನ್ನು ಅಚ್ಚು ಕಟ್ಟಾಗಿ ಮಾಡುವುದರಲ್ಲಿ, ಓದುವುದರಲ್ಲಿ ಸದಾಕಾಲ ಇತರರಿಗಿಂತ ಮುಂದಾಗಿರುತ್ತಿದ್ದರು. ಪಟ್ಟಣಶೆಟ್ಟಿಯವರದು ಮೂಲತಃ ಶಾಂತ ಸ್ವಭಾವ ಅವರು ಅನ್ಯರಮೇಲೆ ಕೋಪಗೊಂಡಿದ್ದನ್ನು ನೋಡಿದವರು ತೀರಾಕಡಿಮೆ. ಪೂಜ್ಯಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಗಳು, ತೋಂಟದಾರ್ಯಮಠ ಗದಗ ಇವರು ಹೇಳುವಂತೆ ''ತಮ್ಮ ಸ್ವಭಾವಕ್ಕೆ ತಕ್ಕಂತೆ ಶೆಟ್ಟರು ಸಮುದಾಯದ ಬದುಕಿಗಿಂತ ಖಾಸಗಿ ಬದುಕಿಗೆ ಹೆಚ್ಚು ಸಂದಿದ್ದಾರೆ. ಅದು ಅವರ ಕಾವ್ಯದ ಮಿತಿ ಎನ್ನುವುದು ತಪ್ಪು ನಿರ್ಣಯವಾದೀತು. ಖಾಸಗೀ ನೋವುಗಳನ್ನು ಸಾರ್ವತ್ರಿಕಗೊಳಿಸುವ ವಿಶಿಷ್ಟ ಪ್ರತಿಭೆ ಅವರಲ್ಲಿದೆ. ಶೆಟ್ಟರ ಬದುಕೂ ಒಂದು ಕಾವ್ಯವೇ, ಒಂದಿಷ್ಟು ಪ್ರೀತಿ, ಒಂದಿಷ್ಟು ಸಿಟ್ಟು, ಒಂದಿಷ್ಟು ವಿಷಾದ, ಒಂದಿಷ್ಟು ವೈರಾಗ್ಯ, ಕೆಲವಡೆಗೆ ಆತ್ಮ ಸಂಮಾನ, ಇನ್ನೂ ಕೆಲವೆಡೆಗೆ ಆತ್ಮ ವರ್ತನೆ. ಮಣ್ಣು, ನೀರು, ಬಯಲು, ಬೆಳಕು, ಗಾಳಿ, ಮಳೆ, ಬೆಳೆ, ಉಕ್ಕು ಬಿಕ್ಕು ಹೀಗೆ ಏನೆಲ್ಲವನ್ನೂ ಒಳಗೊಂಡ ಅವರ ಬದುಕು ಸಮೃದ್ಧ ಸಂತೃಪ್ತ.''[೩]

ಸಿದ್ಧಲಿಂಗ ಪಟ್ಟಣಶೆಟ್ಟರದು ಜಾತ್ಯಾತೀತ ಮನೋಧರ್ಮ ಸರ್ವಸಮಭಾವದ ನಿಲುವು. ಎಂದೇ ಆಗಲೀ ಯಾರೊಡನೆಯೇ ಆಗಲಿ, ಅವರು ಒರಟುತನದಿಂದ ಮಾತನಾಡಿದ್ದು, ಅನುಚಿತವಾಗಿ ವರ್ತಿಸಿದ್ದು ಕಂಡುಬರುವುದಿಲ್ಲ. ವಯಸ್ಸು, ಅಂತರ ಪರಿಗಣಿಸಿದೆ. ಆತ್ಮೀಯವಾಗಿ, ಆಪ್ತವಾಗಿ ಮಾತನಾಡುವ ಗುಣ ಅವರದ್ದಾಗಿದೆ. ಈ ಗುಣವೇ ಅವರ ಸ್ನೇಹ ವರ್ತುಲವನ್ನು ಹಿಗ್ಗಿಸಿದೆ. ಎಲ್ಲರನ್ನೂ, ಎಲ್ಲವನ್ನೂ, ಪ್ರೀತಿಸುವ ಔದಾರ್ಯವನ್ನು ನಾವು ಅವರಲ್ಲಿ ಕಾಣಬಹುದು. ಪ್ರೊ.ಹಾ.ವೆಂ. ನಾಗೇಶ್ ಅವರು ಅಭಿಪ್ರಾಯದಂತೆ ಹೇಳುವುದಾದರೆ ''ಡಾ. ಪಟ್ಟಣಶೆಟ್ಟರು ವ್ಯಕ್ತಿಗಳ ವ್ಯಾವಹಾರಿಕ ಸಂಬಂಧಗಳನ್ನು ಮೀರಿ ನೋಡಬಲ್ಲ. ಮೆಚ್ಚಬಲ್ಲ, ಅವರ ಬಗೆಗೆ ನಿರಂತರವಾಗಿ ಭಕ್ತಿ ಶ್ರದ್ಧೆ ಸ್ನೇಹಗಳನ್ನು ಉಳಿಸಬಲ್ಲ ಸಜ್ಜನರು. ನನ್ನ ಜನರಿಗೆ ಬಂದ ಇಂಥ ಉದಾಹರಣೆಗಳಿಗೆ ಲೆಕ್ಕವಿಲ್ಲ. ಗದುಗಿನ ಯತಿ ಸಿದ್ಧಲಿಂಗ ಮಹಾಸ್ವಾಮಿಗಳವರು, ಶುದ್ಧ ಹಸ್ತ ರಾಜಕಾರಣಿಗಳಾದ ಶಾಂತವೇರಿ ಗೋಪಾಲಗೌಡರು ಶುದ್ಧಾಂತಃ ಕರಿಣಿಗಳಾದ ಕವಿ ಸಾಲಿರಾಮಚಂದ್ರರಾಯರು, ಮಾರ್ಗದರ್ಶಿ ವಿದ್ವಾಂಸ ಡಾ.ಮ.ಸು. ಕೃಷ್ಣಮೂರ್ತಿ, ವೈದ್ಯ

ಸಾಹಿತಿಗಳಾದ ಡಾ.ಹೆಚ್.ಸಿ. ವಿಷ್ಣುಮೂರ್ತಿ ಮತ್ತು ಡಾ.ಹೆಚ್.ಎಸ್. ಪಾರ್ಶ್ವನಾಥ, ಹಿರಿಯ ಪೋಲೀಸ್ ಅಧಿಕಾರಿ ಶ್ರೀ.ಡಿ.ಎನ್. ಮುನಿಕೃಷ್ಣ, ನಾಟಕದ ಗೀಳಿನ ಹತ್ತಿಪ್ಪತ್ತು ಸ್ನೇಹಿತರು. ಹತ್ತಿಪ್ಪತ್ತು ಆತ್ಮೀಯ ಶಿಷ್ಯರು ಇವರೆಲ್ಲರ ಬಗೆಗೆ ಅವರು ಏಕ ಪ್ರಕಾರದ ಪ್ರೀತಿ ತೋರಿಸುತ್ತಾರೆ. ಪ್ರತಿಯಾಗಿ ಎಲ್ಲರಿಂದ ಪ್ರೀತಿ ಪಡೆಯುತ್ತಾರೆ. ಅನೇಕರಿಗೆ ಇದು ಸುಲಭವಾಗಿ ದಕ್ಕುವ ಸಂಪತ್ತಲ್ಲ. ಆದರೆ ಸಿದ್ಧಲಿಂಗ ಪಟ್ಟಣಶೆಟ್ಟರಿಗೆ ಅದು ದೈವದತ್ತವಾಗಿ ಬಂದ ಸಂಪತ್ತು. ತಮಗೆ ಉಪಕಾರ ಮಾಡಿದವರಿಗೆ, ಪ್ರೋತ್ಸಾಹಿಸಿದವರಿಗೆ ಒಟ್ಟಾಗಿ ದುಡಿದವರಿಗೆ ಧಾರಾಳವಾಗಿ ಋಣಭಾರ ಮನ್ನಿಸುವುದು ಅವರ ಜಾಯಮಾನ, ಕೇವಲ ಮಾತಿನಿಂದಲ್ಲ ಕೃತಿಯಿಂದಲೂ ಮನ್ನಿಸುತ್ತಾರೆ.''[೪]

ಸಿದ್ಧಲಿಂಗ ಪಟ್ಟಣಶೆಟ್ಟರು ಸದಾ ಸಹಾಯ ಸಿದ್ಧರು. ತಮ್ಮ ಸಂಪರ್ಕಕ್ಕೆ ಬರುವ ಯಾರೇ ಇರಲಿ, ಮೊದಲು ಅವರನ್ನು ಮಾನವೀಯ ದೃಷ್ಟಿಯಿಂದ ಅಪ್ಪಿಕೊಳ್ಳುತ್ತಾರೆ. ತಮ್ಮಿಂದ ಸಾಧ್ಯವಿರುವ ಸಹಾಯ ಸಹಕಾರ ನೀಡುತ್ತಾರೆ. ಕೆಲಸದಲ್ಲಿ ಯಶಸ್ವೀಯಾಗುವಂತೆ ಪ್ರೇರೇಪಿಸುತ್ತಾರೆ. ಅವರಿಗೆ ಬಾಲ್ಯದಿಂದಲೂ ಬಡತನ ಹಲವು ಬಗೆಯ ನೋವುಗಳನ್ನು ನೀಡಿದ್ದರಿಂದ ಕೈಲಾಗದವರಿಗೆ ಸಹಾಯ ಮಾಡುವುದರಲ್ಲಿ ಆನಂದವನ್ನು ಕಾಣುತ್ತಿದ್ದರು. ಪ್ರೊ.ಪಿ.ಎಂ. ಹೆಗಡೆ ಯವರು ಹೇಳುವಂತೆ, ''ಇವರ ಪರಿಸ್ಥಿತಿಯ ಅರಿವಿಲ್ಲದವರು ಸಹಾಯ ಯಾಚಿಸಿದರೆ ಹಿಂದೆ ಮುಂದೆ ನೋಡದೇ ತನ್ನಲ್ಲಿದ್ದುವನ್ನು ಕೊಟ್ಟು ಬಿಡುವ ದೊಡ್ಡತನವನ್ನು ಅವರಲ್ಲಿ ನಾನು ಕಂಡಿದ್ದೇನೆ. ಒಮ್ಮೆ ಸಿಟಿ ಬಸ್ ನಿಲ್ದಾಣದಲ್ಲಿ ನಾನು ಹಾಗೂ ಪಟ್ಟಣಶೆಟ್ಟಿಯವರು ನಿಂತಿದ್ದೇವು ಆಗ ಅವರ ಪರಿಚಿತ ಬಡವ್ಯಕ್ತಿ ಅಲ್ಲಿಗೆ ಬಂದು ಸಿದ್ಧಲಿಂಗ ಪಟ್ಟಣಶೆಟ್ಟರಿಂದ ತನಗೆ ಪರೀಕ್ಷಾ ಶುಲ್ಕ ತುಂಬಲು ಹಣದ ಸಹಾಯ ಬೇಡಿದ. ಇವರು ತಮ್ಮ ಜೇಬಿನೊಳಗೆ ಕೈಹಾಕಿ ಅಲ್ಲಿದ್ದ ಹತ್ತು ರೂಪಾಯಿ ಅವನಿಗೆ ಕೊಟ್ಟು ಬೆನ್ನು ತಟ್ಟಿ ಕಳಿಸಿದರು. ನಾವು ನಡೆದುಕೊಂಡು ಹೋಗೋಣ ಬನ್ನಿ ಎಂದು ನನಗೆ ಹೇಳಿದರು. ಪಟ್ಟಣಶೆಟ್ಟರ ಹೃದಯವಂತಿಕೆ ದೊಡ್ಡದಾಗಿದೆ. ಈಗಿನ ಕಾಲದಲ್ಲಿ ಸುಖವಿದ್ದಾಗ ಮಾತ್ರ ಜನಪ್ರೀತಿಯಿಂದ ಮಾತನಾಡಿಸುವುದುಂಟು, ಕಷ್ಟಕಾಲದಲ್ಲಿ ಯಾರೊಬ್ಬರೂ ಹತ್ತಿರ ಸುಳಿಯುವುದಿಲ್ಲ. ಆದರೆ ಪಟ್ಟಣಶೆಟ್ಟರೂ ಯಾವಾಗಲೂ ಒಂದೇ ತರನಾಗಿ ವರ್ತಿಸುತ್ತಾರೆ. ಸುಖದಲ್ಲಿ ಭಾಗಿಯಾಗುವುದಕ್ಕಿಂತಲೂ, ದುಃಖದಲ್ಲಿ ಭಾಗಿಯಾಗಿ ಮನಸ್ಸಿಗೆ ಧೈರ್ಯ ಹಾಗೂ ಸಮಾಧಾನಗಳನ್ನು ಹೇಳುತ್ತಾರೆ. ತಾವೇ ನಿಂತು ಕೈಲಾದ ಸಹಾಯ ಮಾಡುತ್ತಾರೆ. ಎದುರಿಗೆ ಇದ್ದವರು ದೊಡ್ಡವರೇ ಇರಲಿ, ಚಿಕ್ಕವರೇ ಇರಲಿ ಇದ್ದುದನ್ನು ಇದ್ದಹಾಗೆ ಹೇಳುವ ಸ್ವಭಾವ ಪಟ್ಟಣಶೆಟ್ಟರದ್ದಾಗಿದೆ.''[೫] ಡಾ.ಬಿ.ನಂ. ಚಂದ್ರನವರು ಹೇಳುವ ಹಾಗೆ ''ಬೂಟಾಟಿಕೆಯನ್ನು ಕಂಡರೆ ಹರಿದಾರಿ ಹರಿದು ಹೋಗುವ ಪಟ್ಟಣಶೆಟ್ಟರದು ನಿಷ್ಠುರ ನಿರ್ಧಾಕ್ಷಿಣ್ಯ ಸ್ವಭಾವ. ನಗುನಗುತ್ತಲೇ ಚಾಟಿ ಏಟುಕೊಡುವಲ್ಲಿ ನಿಸ್ಸೀಮರು. ಇಲ್ಲಿನ ವಂಚನೆಯನ್ನು ಕಂಡರೆ ಕೆಂಡವಾಗುವ ಇವರು ತಮ್ಮ ಮನಸ್ಸಿಗೆ ಬಂದದ್ದನ್ನು ಬಂದಹಾಗೆ ನಿಷ್ಠುರವಾಗಿ ಹೇಳಿಬಿಡುತ್ತಾರೆ.''[೬]

ಸಿದ್ಧಲಿಂಗ ಪಟ್ಟಣಶೆಟ್ಟರದು ಅಂತಃಕರಣ ಪ್ರೀತಿಗಳಿಂದ ಕೂಡಿದ ಸೂಕ್ಷ್ಮ ಮನಸ್ಸು. ತಂದೆಯನ್ನು ಬಾಲ್ಯದಲ್ಲಿ ಕಳೆದುಕೊಂಡು ತಾಯಿಯ ಕಷ್ಟದಲ್ಲಿ ಭಾಗಿಯಾಗಿ, ಜೀವನ ಪ್ರೀತಿಯಿಂದ, ಕಣ್ಣುಗಳಲ್ಲಿ ಕನಸುಗಳನ್ನು ತುಂಬಿಕೊಂಡು ಕಷ್ಟ ಕಾರ್ಪಣ್ಯಗಳಲ್ಲಿಯೇ ಬೆಳೆದ ಸಿದ್ಧಲಿಂಗ ಪಟ್ಟಣಶೆಟ್ಟರು, ಜೀವನದಲ್ಲಿ ತಾಳ್ಮೆಯನ್ನು, ಕಠಿಣ ದುಡಿತವನ್ನು, ಆಶಾವಾದವನ್ನು, ವಿನಯವಂತಿಕೆಯನ್ನು ಕಲಿತರು. ಅನ್ಯರ ನೋವು ದುಃಖಗಳನ್ನು ತಡೆದು ಕೊಳ್ಳುವ ಶಕ್ತಿ

ಅವರಿಗಿರಲಿಲ್ಲ. ಅವರ ಮುಗ್ಧ, ಸರಳ ಸ್ವಭಾವ ಬೇರೆಯವರ ಕಷ್ಟಗಳಿಗೆ ತೀವ್ರವಾಗಿ ಸ್ಪಂದಿಸುತ್ತಿತ್ತು. ಬಾಳಾಸಾಹೇಬ ಲೋಖಾಪುರ ಹೇಳುವಂತೆ ''ಸಾಲಿರಾಮಚಂದ್ರರಾಯರು ತೀರಿಕೊಂಡಾಗ ಅವರ ನಿಶ್ಚಲ ಶರೀರದ ಮುಂದೆ ಪಟ್ಟಣಶೆಟ್ಟರು ಬಿಕ್ಕಿ ಬಿಕ್ಕಿ ಅತ್ತದ್ದನ್ನು ನಾವು ನೋಡಿದೆವು. ಸಪ್ತಾಪುರದಿಂದ ಜೆ.ಎಸ್.ಎಸ್. ಕಾಲೇಜಿನ ಹಿಂದೆ ಇರುವ ಈಗಿನ ಪಟ್ಟಣಶೆಟ್ಟರ ಮನೆಯ ಹತ್ತಿರ ಇರುವ ಸ್ಮಶಾನದವರೆಗೂ ಪಟ್ಟಣಶೆಟ್ಟರು ಬಿಕ್ಕಿ ಬಿಕ್ಕಿ ಅಳುತ್ತಲೇ ಇದ್ದರು. ಒಬ್ಬ ಮಹಾಕವಿಯ ಸಾವು ಇನ್ನೊಬ್ಬ ಕವಿಯ ಅಂತರಾಳದಲ್ಲಿ ಹುಟ್ಟಿಸುವ ವಿಪ್ಲವದ ಆಳದ ಪರಿ ಎಷ್ಟಿತ್ತೋ ಯಾರು ಬಲ್ಲರು. ನಮಗೆ ಇವರು ಅಳುವ ಬಾಹ್ಯಕ್ರಿಯೆ ಮಾತ್ರ ಕಾಣುತ್ತಿತ್ತು. ಹುಡುಗರಾದ ನಾವು ಮೊಟ್ಟಮೊದಲು ಭಾಗವಹಿಸಿದ ಶವಸಂಸ್ಕಾರ ಅದಾಗಿತ್ತು. ಅಲ್ಲಿಯೇ ಪಟ್ಟಣಶೆಟ್ಟರು ಅಳುತ್ತಲೇ ಭಾಷಣ ಮಾಡಿದರು. ಸಿದ್ಧಲಿಂಗ ಪಟ್ಟಣಶೆಟ್ಟರದು ಸರಳ ಜೀವನ, ಶಾಂತ ಸ್ವಭಾವ ಅವರೊಬ್ಬ ಯಶಸ್ವೀ ಶಿಕ್ಷಕರಾಗಿದ್ದರು. ವಿದ್ಯಾರ್ಥಿಗಳನ್ನು ಸ್ನೇಹಿತರಂತೆ ಕಾಣುತ್ತಿದ್ದರು.

ವಿನಯದ ಪ್ರತಿರೂಪವೇ ಆಗಿದ್ದ ಅವರು ಎಂದಿಗೂ ವಿದ್ಯಾರ್ಥಿಗಳನ್ನು ದೂಷಿಸಲಿಲ್ಲ. ಶಿಕ್ಷಕ ವಿದ್ಯಾರ್ಥಿ ಎಂಬ ಬೇಧಭಾವವನ್ನು ಮರೆತು ಎಲ್ಲರೊಂದಿಗೂ ಬೆರೆಯುವ ಸ್ವಭಾವ ಅವರದಾಗಿತ್ತು. ಸದಾಕಾಲ ನಗುಮುಖವೇ ಅವರಿಗೆ ಸನ್ಮೋಹನ ಅಸ್ತ್ರವಿದ್ದಂತೆ, ಮುಗಳ್ನಗೆಯ ಮೂಲಕವೇ ಸ್ವಾಗತಿಸುತ್ತಾರೆ, ಮಾತನಾಡಿಸುತ್ತಾರೆ. ಬೀಳ್ಕೊಡುತ್ತಿದೆ. ಅವರ ನಗೆಯಲ್ಲಿ ಒಂದು ರೀತಿಯ ಮಾದ ಕಥೆಯಿದೆ ಆದ್ದರಿಂದಲೇ ಎಲ್ಲಾ ವಿದ್ಯಾರ್ಥಿಗಳು ಅವರನ್ನು ಪ್ರೀತಿಯಿಂದ ಮಾತನಾಡಿಸುತ್ತಿದ್ದರು. ಇವರ ಮಾತು ನಡೆ, ವರ್ತನೆ ಎಲ್ಲವೂ ತಾವು ಪಾಠ ಮಾಡುತ್ತಿದ್ದ ಹಿಂದೀ ಭಾಷೆಯ ಕೋಮಲತೆಯನ್ನು ಪಡೆದುಕೊಂಡು ಬಿಟ್ಟಿದ್ದವು.''[೭] ನಾಡಿನ ಖ್ಯಾತ ಕಥೆಗಾರರಾದ ಕುಂ.ವೀರಭದ್ರಪ್ಪನವರು ಹೇಳುವ ಹಾಗೆ ನೋಡಿದಾಗಲೆಲ್ಲಾ, ಓದಿದಾಗಲೆಲ್ಲಾ ಹೊಸ ಹೊಸದಾಗಿ ಕಾಣುತ್ತಿರುವ ಶ್ರೇಯಸ್ಸು ಸ್ವಾತಂತ್ರ್ಯ ಪೂರ್ವದಲ್ಲಿ ಹುಟ್ಟಿರುವವರ ಪೈಕಿ ಸಿದ್ಧಲಿಂಗ ಪಟ್ಟಣಶೆಟ್ಟಿಯವರಿಗೆ ಹೋದರೆ ಸ್ವಾತಂತ್ರ್ಯೋತ್ತರವಾಗಿ ಹುಟ್ಟಿರುವವರ ಪೈಕಿ ನಮ್ಮ ಸರೂಜ್‌ಗೆ ಸಲ್ಲಬೇಕು. ಇವರಿಬ್ಬರು ಮುಖ ಗಂಟಿಕ್ಕಿರುವುದನ್ನು ನೋಡಿರುವವರು ಕಡಿಮೆಯೇ ಇವರಿಬ್ಬರು ಕುಲಕುಲು ನಗುವುದರಲ್ಲಿ ಹೆಸರಾಗಿದ್ದಾರೆ. ಹೊಟ್ಟೆಯಲ್ಲಿ ಕುಡಿದ ನೀರು ಅಲ್ಲಾಡದಂತೆ ನೆಡೆಯುವ ವ್ಯಕ್ತಿ ಸಿದ್ಧಲಿಂಗ ಪಟ್ಟಣಶೆಟ್ಟರು.''[೮]

ಸಿದ್ಧಲಿಂಗ ಪಟ್ಟಣಶೆಟ್ಟರು ಅನೇಕ ಚಳುವಳಿಗಳಲ್ಲಿ ಭಾಗವಹಿಸಿದ್ದರು. ಇಂದಿರಾಗಾಂಧೀ ದೇಶದ ಮೇಲೆ ತುರ್ತು ಪರಿಸ್ಥಿಯನ್ನು ಹೇರಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಕಿತ್ತುಕೊಂಡು ದಮನಕಾರಿ ನೀತಿಯನ್ನು ಅನುಸರಿಸಿದಾಗ ಅದನ್ನು ವಿರೋಧಿಸಿ ಲಂಕೇಶ, ಪೂರ್ಣಚಂದ್ರ ತೇಜಸ್ವಿ, ಎಂ.ಪಿ. ಪ್ರಕಾಶ್, ಎಂ.ಡಿ. ನಂಜುಂಡಸ್ವಾಮಿ, ರಾಮದಾಸ್, ರಾಚಪ್ಪ ಹಡಪದ, ರಾಚಪ್ಪ ಕೊಟ್ಟೂರು ಮುಂತಾದ ಸಮಾನ ಮನಸ್ಕರ ಜೊತೆಗೂಡಿ ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ಸುತ್ತಾಡಿ ಇಂದಿರಾಗಾಂಧಿಯ ಲೋಕವಿರೋಧಿ ಕಾರ್ಯಗಳನ್ನು ಜನರಿಗೆ ಮನವರಿಕೆ ಮಾಡಿಕೊಟ್ಟರು. ಉತ್ತರ ಕರ್ನಾಟಕದಲ್ಲಿ ಈ ಮೂಲಕ ದೊಡ್ಡ ಚಳುವಳಿಯನ್ನು ಹುಟ್ಟು ಹಾಕಿದರು. ಆಗಿನ ಕಾಂಗ್ರೆಸ್ಸಿನ ವಿರುದ್ಧ ಜನಾಂದೋಲನೆ ಯಶಸ್ವಿಯಾಗುವಂತೆ ಪ್ರಯತ್ನಪಟ್ಟರು. ಲೋಕನಾಯಕ ಜಯಪ್ರಕಾಶ ನಾರಾಯಣರನ್ನು ಧಾರವಾಡಕ್ಕೆ ಕರೆಯಿಸಿ ಅವರಿಗಾಗಿಯೇ ಸಂಗ್ರಹಿಸಿದ್ದ ದೊಡ್ಡ ಮೊತ್ತವನ್ನು ಕೊಟ್ಟರು. ಆಗಿನ ಪೋಲೀಸರು

ಚಲನವಲನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಅವರನ್ನು ತಪ್ಪಿತಸ್ಥರೆಂದು ಗುರುತಿಸಲು ಪ್ರಯತ್ನಪಟ್ಟರು. ಆದರೆ ಅದು ಪೋಲೀಸರ ಕೈಯಿಂದ ಸಾಧ್ಯವಾಗಲಿಲ್ಲ. ಕೊನೆಗೆ ಪೋಲೀಸರು ಇವರ ಮನೆಯನ್ನು ಜಪ್ತಿಮಾಡಿದರೂ ಅವರಿಗೆ ಏನೂ ಸಿಗಲಿಲ್ಲ.

೧೯೮೨ ರಲ್ಲಿ ಕರ್ನಾಟಕದಲ್ಲಿ ಕನ್ನಡ ಪರವಾದ ಗೋಕಾಕ್ ವರದಿಯನ್ನು ಬೆಂಬಲಿಸಿ, ಇಡೀ ಕರ್ನಾಟಕದಾದ್ಯಂತ, ಕನ್ನಡದ ಜನತೆ, ಕನ್ನಡ ಸಂಘಟನೆಗಳು ತಿಂಗಳುಗಟ್ಟಲೆ ಹೋರಾಟ ನಡೆಸಿದವು. ಈ ಹೋರಾಟಕ್ಕೆ ಡಾ.ರಾಜಕುಮಾರ ಮತ್ತು ಕರ್ನಾಟಕದ ಚಿತ್ರ ರಂಗಭೂಮಿ ಬೆಂಬಲ ಸೂಚಿಸಿತ್ತು. ಈ ಚಳುವಳಿ ಧಾರವಾಡ ಜಿಲ್ಲೆಯಲ್ಲಿಯೂ ತೀವ್ರ ಸ್ವರೂಪವನ್ನು ಪಡೆದಿತ್ತು. ಇಲ್ಲಿ ಪಾಟೀಲ ಪುಟ್ಟಪ್ಪನವರು ಹೋರಾಟದ ಅಸ್ತಿತ್ವವನ್ನು ವಹಿಸಿದ್ದರೆ, ಸಿದ್ಧಲಿಂಗ ಪಟ್ಟಣಶೆಟ್ಟರೂ ಅವರ ಸ್ನೇಹಿತರು ಹೋರಾಟದ ಮುಂಚೂಣಿಯಲ್ಲಿದ್ದರು. ಆಗ ದಾವಣಗೇರೆಯಲ್ಲಿ ಹಿಂಸಾಚಾರ ನಡೆಯಿತು. ಕಾರಣ ಸಾಹಿತಿಗಳಾದ ಪಾಟೀಲ ಪುಟ್ಟಪ್ಪ, ಚೆನ್ನವೀರ ಕಣವಿ, ರಾ.ಯ ಧಾರವಾಡಕರ, ಎಂ.ಎಂ.ಕಲ್ಬುರ್ಗಿ, ಗೀತಾಕುಲಕರ್ಣಿ, ಸಿದ್ಧಲಿಂಗ ಪಟ್ಟಣಶೆಟ್ಟಿ ಮುಂತಾದವರುಗಳನ್ನು ದಸ್ತಗಿರಿ ಮಾಡಲಾಯಿತು.

ಸಿದ್ಧಲಿಂಗ ಪಟ್ಟಣಶೆಟ್ಟರದು ನೇರ ಮಾತುಗಾರಿಕೆ, ತಮ್ಮ ಮನದಲ್ಲಿ ಮೂಡಿದ ಭಾವನೆಗಳನ್ನು ಯಾವ ಮುಲಾಜೂ ಇಲ್ಲದೆ ಹೇಳಿಬಿಡುತ್ತಿದ್ದರು. ಹೂಲಿ ಶೇಖರ ಅವರ ಮಾತಿನಲ್ಲಿ ಹೇಳುವುದಾದರೆ, ''ಒಂದು ಸುಡು ಮಧ್ಯಾಹ್ನ ಇಬ್ಬರೂ ವಿದರ್ಭದ ಸೇವಾ ಗ್ರಾಮ ಪ್ರವೇಶಿಸಿದೆವು. ಗಾಂಧೀಜಿ ೧೯೨೨-೪೨ ರ ಅವಧಿಯಲ್ಲಿ ಅಲ್ಲಿದ್ದು ಕುಟೀರ ಗ್ರಾಮ ನಿರ್ಮಿಸಿದ ಸ್ಥಳವಿದು. 'ಚಲೇ ಜಾವ್ ಚಳುವಳಿ' ಅಲ್ಲಿಂದಲೇ ದೇಶಕ್ಕೆ ಘೋಷಿಸಲ್ಪಟ್ಟಿತು. ನಾವಿಬ್ಬರೂ ಎದೆಯಲ್ಲಿ ಭಕ್ತಿ ಗೌರವ ತುಂಬಿಕೊಂಡು ಅಲ್ಲಿಂದ ಪ್ರತಿಯೊಂದು ಕುಟೀರ ಮತ್ತು ಅವುಗಳಿಗೆ ಸಂಬಂಧಿಸಿದ ವಸ್ತುಗಳನ್ನು ಕುತೂಹಲದಿಂದ ನೋಡುತ್ತಾ ಸಾಗಿದವು. ಆಗ ನನ್ನನ್ನು ತಡೆದು ಸಿದ್ಧಲಿಂಗ ಪಟ್ಟಣಶೆಟ್ಟಿ ಅವರು ಕೈಮಾಡಿ ಆ ಕಡೆ ತೋರಿಸಿದರು. ಕಾತುರದಿಂದ ಅತ್ತ ನೋಡಿದ ನಾನು ಅರೇ! ಕಸ್ತೂರಬಾ ಎಂದು ಉದ್ಗರಿಸಿದೆ. ಅಲ್ಲಿರುವ ಪೋಟೋ ಗಮನ ಸೆಳೆಯಿತು. ಗಾಂಧೀಜಿಯವರ ಕಾಲು ತೊಳೆಯುತ್ತಿರುವ ಬಾ ಅವರ ಪೋಟೋ ಅದು ಭಾರತದ ನಾರೀ ಪರಂಪರೆಯ ದ್ಯೋತಕವದು. ಗಾಂಧೀಜಿ ಎಂಥ ಸ್ವಾರ್ಥಿ..... ಪಟ್ಟಣಶೆಟ್ಟರು ಮೆಲ್ಲಗೆ ಹೇಳಿದಾಗ ನಾನು ಅಚ್ಚರಿಪಟ್ಟೆ ಮಹಿಳೆಯರಿಗೆ ಸಮಾನ ಹಕ್ಕು ಕೊಡಿ ಎಂದು ಹೇಳಿದವರೂ ಅವರೇ, ಮಹಿಳೆಯನ್ನು ಗುಲಾಮನಂತೆ ನಡೆಸಿ ಕೊಂಡವರೂ ಅವರೇ ಅಂದರು. ಅಸ್ತಿತ್ವಕ್ಕೆ ಯಾವಾಗಲೂ ಎರಡು ರೂಪಗಳಿರುತ್ತವೆ. ಎದುರಿಗೆ ಇದ್ದದ್ದು ಒಂದಾದರೆ, ಅದರಾಚೆ ಇರುವುದು ಬೇರೆ; ನೆರಳು ಯಾವಾಗಲೂ ಕಪ್ಪಾಗಿರುತ್ತದೆ. ಅವರ ಈ ಮಾತುಗಳು ನನ್ನನ್ನು ಈಗಲೂ ಯೋಚಿಸುವಂತೆ ಮಾಡುತ್ತದೆ.''[೬]

ಪಟ್ಟಣಶೆಟ್ಟರು ತಮ್ಮನ್ನು ಕುರಿತು ತಾವೇ ಎಂದೂ ಹೊಗಳಿಕೊಂಡಿಲ್ಲ. ಜಂಬ ಪಟ್ಟುಕೊಂಡಿಲ್ಲ. ಆಗ ಬೇಕಾದ ಕೆಲಸಗಳನ್ನಾಗ ಪಡೆಯಬೇಕಾದ ಸ್ಥಾನಗಳಿಗಾಗಿ ಯಾರಿಂದಲೂ ಎಂದಿಗೂ ವಶೀಲಿ ಮಾಡಿಸಿಲ್ಲ. ಅವರದು ಅಹಂಕಾರ ವಿಲ್ಲದ ಸರಳ ಸಜ್ಜನಿಕೆಯ ವ್ಯಕ್ತಿತ್ವ. ನೋಡಲೇನು ಅಜಾನು ಬಾಹುವಾಗಿರದ ಇವರನ್ನು ಪ್ರೊ.ದೇ.ಜವರೇಗೌಡರು ಹೀಗೆ ಹೇಳಿದ್ದಾರೆ. ಪಟ್ಟಣಶೆಟ್ಟಿಯವರ ವಯಸ್ಸು ಅರವತ್ತು ಮುಗಿದು ಮೇಲೊಂದು ಆಗಿದೆ. ಅವರ ಕೂದಲಿನ ಕಾಡಿಗೆಯ ಕಪ್ಪು, ಕಣ್ಣುಗಳಲ್ಲಿ ಸುರಿಯುವ ಬೆಳ್ಳಿಬೆಳಕು, ಮುಖದಲ್ಲಿ ಲಲ್ಲೆಗೆರೆಯುವ ತಾರಾಕಾಂತಿ ಅವರ ಅಂತರಂಗ

ಬಹಿರಂಗ, ಶುದ್ಧಿಯ ಫಲತೆಗಳಾಗಿವೆ. ಆದ್ದರಿಂದಲೇ ಅವರು ಚಿರಯುವಕರಾಗಿದ್ದಾರೆ.''[೧೦] ಹೀಗೆ ಪಟ್ಟಣ ಶೆಟ್ಟರದು ವರ್ಣಮಯವಾದ ವಿಶಿಷ್ಟ ವ್ಯಕ್ತಿತ್ವವಾಗಿದೆ.

**ಟಿಪ್ಪಣಿಗಳು**

೧. ದೇ.ಜ.ಗೌ. ಪ್ರ.ಸಂ, ಸಹೃದಯ ವನಲಿ ಪ್ರಕಾಶನ ಮೈಸೂರು ೨೦೦೪ ಪು.ಸಂ ೭೪

೨. ಅದೇ, ಪುಟ ೭೭

೩. ಅದೇ, ಪುಟ ೦೨

೪. ಅದೇ, ಪುಟ ೨೩

೫. ಅದೇ, ಪುಟ ೪೩

೬. ಅದೇ, ಪುಟ ೨೨೨

೭. ಅದೇ, ಪುಟ ೧೨೮

೮. ಡಾ. ಸರೋಜ್ ಕಾಟ್ಕರ್ ಮರಾಠಿ ದ ಲಿತಕಾವ್ಯ, ಲೋಹಿಯಾ ಪ್ರಕಾಶನ ಬಳ್ಳಾರಿ ೨೦೦೦ ಮುನ್ನಡಿ, ೨.

೯. ದೇ.ಜಗೌ., ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ, ಮೈಸೂರು ೨೦೦೪ ಪುಟ ೧೧೬

೧೦. ಅದೇ ಪುಟ-೪

* * *

# ಅಧ್ಯಾಯ-೩

## ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಮಗ್ರ ಸಾಹಿತ್ಯ ಸಮೀಕ್ಷೆ

ಭಾಗ-೧ ಕನ್ನಡ ಸ್ವತಂತ್ರ ಕೃತಿಗಳು

ಭಾಗ-೨ ಹಿಂದೀ ಸ್ವತಂತ್ರಕೃತಿಗಳು

ಭಾಗ-೩ ಅನುವಾದ ಕೃತಿಗಳು

ಭಾಗ-೪ ಅಂಕಣ ಸಾಹಿತ್ಯ

ಭಾಗ-೫ ಪತ್ರಿಕಾ ಸಾಹಿತ್ಯ

## ಭಾಗ-೧, ಕನ್ನಡ ಸ್ವತಂತ್ರ ಕೃತಿಗಳು

**೩.೧.೧. ಕಾವ್ಯ ಸಂಕಲನ**

೧. ನೀನಾ
೨. ಔರಂಗಜೇಬ ಮತ್ತು ಇತರ ಕವನಗಳು
೩. ಪರದೇಶಿ ಹಾಡುಗಳು
೪. ನೂರಾರು ಪದ್ಯಗಳು
೫. ಪ್ರತೀಕ್ಷೆ
೬. ಮತ್ತೆ ಬಂದಿದ್ದಾಳೆ
೭. ಪಟ್ಟಣಶೆಟ್ಟರ ಆಯ್ದ ಕವಿತೆಗಳು
೮. ಆಯಸ್ಕಾಂತ
೯. ಇಂದು ರಾತ್ರಿಯ ಹಾಗೆ
೧೦. ಅಂತರಂಗದ ಕವನಗಳು
೧೧. ಇಷ್ಟೇ ಹೇಳಿದ ಮೇಲೆ
೧೨. ಪಟ್ಟಣಶೆಟ್ಟಿಯವರ ಸಮಗ್ರ ಕಾವ್ಯ
೧೩. ಅಪರಾವತಾರ

**೩.೧.೨. ಕಥಾ ಸಂಕಲನ**

೧. ಮಾವು ಮತಮಿತರ ಕಥೆಗಳು
೨. ಹಕ್ಕಿಗಳು

**೩.೧.೩. ವಿಮರ್ಶೆ ಸಂಕಲನ**

೧. ಆಧುನಿಕ ಹಿಂದೀ ಕನ್ನಡ ಕಾವ್ಯ
೨. ಅನುಶೀಲನ
೩. ರಂಗಾಯಣ
೪. ಪರಿಭಾವನ
೫. ಅನುಸ್ವಾದನ

**೩.೧.೪ ಜೀವನ ಚರಿತ್ರೆ**

೧. ಹಳ್ಳಿಕೇರಿ ಗುದ್ಲೆಪ್ಪನವರು
೨. ಧರ್ಮಸ್ಥಳ

**೩.೧.೫. ವ್ಯಕ್ತಿ ಚಿತ್ರಣ**

೧. ಋಣಾನುಬಂಧ

**೩.೧.೬. ಸಂಪಾದನೆ**

**ಸ್ವತಂತ್ರ ಸಂಪಾದಿತ ಕೃತಿಗಳು**

೧. ನಾನಿ ಕಾಕಾ ಎಸ್ಕೆ ಬದುಕು
೨. ನಾನಿ ಕಾಕಾ ಎಸ್ಕೆ ಬರಹ
೩. ನಾನಿಯ ನೆನಹುಗಳು
೪. ಕೈಲಾಸಂ
೫. ಸಾಲಿರಾಮಚಂದ್ರರಾಯರ ಸಮಗ್ರ ಕಾವ್ಯ
೬. ಕಲ್ಯಾಣದ ಹಾದಿ

**ಇತರರೊಂದಿಗೆ ಸಂಪಾದಿತ ಕೃತಿಗಳು**

೧. ಸಂಕ್ರಮಣ ಕಾವ್ಯ
೨. ಸಾಲಿರಾಮಚಂದ್ರರಾಯ ಹ
೩. ಎಸ್. ಎಂ. ಕೃಷ್ಣ
೪. ಎನ್. ಎನ್. ಹೂಗಾರ
೫. ಬಿ.ವಿ. ಕಾರಂತ
೬. ಆರ್ ನಾಗರತ್ನಮ್ಮ
೭. ಮಾಸ್ಟರ್ ಹಿರಣ್ಯಯ್ಯ
೮. ಎಚ್. ಕೆ. ಯೋಗಾನರಸಿಂಹ
೯. ಬಿ. ಎನ್. ವಾಣಿ
೧೦. ಚಿಂದೋಡಿಲೀಲಾ
೧೧. ಆರ್. ನಾಗೇಶ್
೧೨. ಎಂ. ಎಸ್. ಸತ್ಯು
೧೩. ಬಿ. ಪಿ. ಧುತ್ತರಿಗಿ

## ಭಾಗ-೧, ಕನ್ನಡ ಸ್ವತಂತ್ರ ಕೃತಿಗಳು

### ೩.೧.೧. ಕಾವ್ಯ ಸಂಕಲನ

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ರಚಿಸಿದ ಕನ್ನಡ ಸ್ವತಂತ್ರ ಕೃತಿಗಳಲ್ಲಿ ಕಾವ್ಯಕ್ಕೆ ಮೊದಲ ಸ್ಥಾನ ಸಲ್ಲುತ್ತದೆ. ಗೋಪಾಲಕೃಷ್ಣ ಅಡಿಗ ಹಾಗೂ ವಿನಾಯಕ ಕೃಷ್ಣಗೋಕಾಕ ಅವರುಗಳಿಂದ ಆರಂಭಗೊಂಡ ನವ್ಯ ಕಾಲಘಟ್ಟದಲ್ಲಿ ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರು ತಮ್ಮ ಕಾವ್ಯ ಕೃಷಿಯನ್ನು ಆರಂಭಿಸಿದರು.

ಅರವತ್ತರ ದಶಕದಿಂದ ಇಂದಿನವರೆಗೆ ರಚನೆಗೊಂಡ ಅವರ ಕಾವ್ಯಗಳನ್ನು ಅವಲೋಕಿಸಿದಾಗ ಕಾವ್ಯವೇ ಜೀವನ, ಜೀವನವೇ ಕಾವ್ಯ, ಎಂಬಂತೆ ಬದುಕಿನ ಸತ್ಯಾಸತ್ಯತೆಗಳನ್ನು ತಮ್ಮ ಕಾವ್ಯಗಳಲ್ಲಿ ಎರಕಹೊಯ್ದಿದ್ದಾರೆ. ಅಂದರೆ ಬದುಕಿನ ಪ್ರೀತಿ, ಪ್ರೇಮ, ಸಿಟ್ಟು, ವಿಶಾದ, ವೈರಾಗ್ಯ, ಅನುಕಂಪ ಮುಂತಾದ ಸಂವೇದನೆಗಳನ್ನು ವೈಯಕ್ತಿಕ ಎಲ್ಲೆಯನ್ನು ಮೀರಿದ ಸಾಮಾಜಿಕ ಅಭಿವ್ಯಕ್ತಿಯ ಧ್ವನಿಯಾಗಿ ಪಟ್ಟಣಶೆಟ್ಟರ ಕಾವ್ಯಗಳು ರಚನೆಗೊಂಡಿವೆ. ಅವುಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

### ೧. ನೀನಾ

'ನೀನಾ' ಸಿದ್ಧಲಿಂಗ ಪಟ್ಟಣಶೆಟ್ಟರು ಕನ್ನಡದಲ್ಲಿ ರಚಿಸಿದ ಪ್ರಥಮ ಕವನ ಸಂಕಲನ. ೧೯೬೪ರಲ್ಲಿ ಹಾಗೂ ೧೯೮೮ರಲ್ಲಿ ದ್ವಿತೀಯ ಮುದ್ರಣವನ್ನು ಕಂಡಿದೆ. ಅನನ್ಯ ಪ್ರಕಾಶನ ಮೈಸೂರಿನಿಂದ ಪ್ರಕಟಣೆಗೊಂಡಿದೆ. ಇಲ್ಲಿಯ ಕವನಗಳು ಮೊದಲು 'ಕವಿತೆ' ಮುಂತಾದ ಸಾಹಿತ್ಯ ಪತ್ರಿಕೆಗಳಲ್ಲಿ ಪ್ರಕಟಗೊಂಡು ಓದುಗರ ಕುತೂಹಲವನ್ನು ಕೆರಳಿಸಿದ್ದವು. ಈ ಸಂಕಲನಕ್ಕೆ ಒಲವಿನ ಕವಿ ಕೆ.ಎಸ್. ನರಸಿಂಹಸ್ವಾಮಿಯವರು ಮುನ್ನುಡಿಯನ್ನು ಬರೆದು ಪ್ರೋತ್ಸಾಹಿಸಿದ್ದಾರೆ. ಇದು ಒಂದು ದೃಷ್ಟಿಯಿಂದ ಅರ್ಥಪೂರ್ಣ ವಿಷಯವಾದರೂ ಇನ್ನೊಂದು ರೀತಿಯಲ್ಲಿ ವೈರುಧ್ಯವೂ ಆಗಿದೆ. ನವದಂಪತಿಗಳ ಪಿಸುಮಾತಿನ ಸೊಗಸುಗಾರಿಕೆಯುಳ್ಳ, ಕೆ.ಎಸ್.ನರಸಿಂಹಸ್ವಾಮಿಯವರ ಕವನಗಳ ಸ್ಥಾಯಿ ಸುಕುಮಾರ ದಾಂಪತ್ಯದ ಪ್ರೀತಿ ಮತ್ತು ಪ್ರೇಮಗಳಾಗಿವೆ. ಆದರೆ ಇದಕ್ಕೆ ವಿರುದ್ಧವಾದ ಶೃಂಗಾರದ ವಿಯೋಗವೇ ಪಟ್ಟಣಶೆಟ್ಟರ 'ನೀನಾ' ಕವನ ಸಂಕಲನದ ಸ್ಥಾಯಿ ಭಾವವಾಗಿದೆ.

ತಾವು ರಚಿಸಿದ ಮಾರ್ಗವನ್ನು ತುಳಿಯದೇ ಭಿನ್ನವಾದ ಹಾದಿ ಹಿಡಿದು ಹೊರಟ ಯುವ ಕವಿಯೊಬ್ಬನ ಕಾವ್ಯಗಳನ್ನು ಕೆ.ಎಸ್ ನರಸಿಂಹಸ್ವಾಮಿಯವರು ಮೆಚ್ಚಿದ್ದಾರೆ. ಒಳ್ಳೆಯ ಮಾತುಗಳನ್ನು ಹೇಗೆ ಆಡಿದ್ದಾರೆ. ಕವಿತೆ ಕಾಲದಂತೆ ಅನಂತ; ಯಾವ ಸೋಲು, ಗೆಲುವೂ, ನೋವು ನಲಿವುಗಳನ್ನು ಮೀರಿದ ಆಸ್ವಾದನೀಯೇ ಕವಿತೆಯ ಆತ್ಮವೆನ್ನಬಹುದು, ಅನಾದಿ ಕಾಲದಿಂದಲೂ, ಕವಿಕರ್ಮ ವಿಪುಲವಾಗಿ ಬೆಳೆದು ಬಂದು ಹಲವಾರು ಶಿಖರಗಳನ್ನು ಮುಟ್ಟಿದ್ದರೂ ಮಾನವ ಜೀವನದ ಇನ್ನೆಷ್ಟೋ ಅನುಭವಗಳು ಬಾಗಿಲು ಮುಚ್ಚಿಯೇ ಕುಳಿತಿವೆ. ಅವುಗಳನ್ನು ಹಾಡಿಗೆಳೆದು ತರಬೇಕಾಗಿದೆ. ಆದ್ದರಿಂದ ಕವಿಗಳ ದುಡಿಮೆಗೆ ಬಿಡುವಿಲ್ಲದಂತಾಗಿದೆ. ಕಾಲದ ಕೃಪೆಯಿಂದ ಮಾತ್ರ ಜೀವನಾನುಭವಗಳನ್ನು ಅನುಭವ ಪರಂಪರೆಗಳನ್ನು ಹೊಕ್ಕು ನೋಡಿ ಅಲ್ಲಿ ಕಾಳಾಗಿ ನಿಲ್ಲುವುದಕ್ಕೆ ಬಾಳುವ ಮಾತಿನ ಸ್ವರೂಪ ಧ್ವನಿ ವಿಲಾಸಗಳನ್ನು ನೀಡುವ ರಸವ್ಯಾಪಾರ ಸುಲಭವಲ್ಲ. ಕವಿ ಹೋರಾಡದೇ ಗೆಲ್ಲುವ ಮಾತೇ ಇಲ್ಲ. ಆದರೆ ಈ ದೇವರಿಗೆ ನೇಮ ಹೊತ್ತ ಮೇಲೆ ಈ ಕಷ್ಟದ ದಾರಿಗೆ ಒಲಿದು ಕಾಲಿಟ್ಟ ಈ ಹೊಸ ಕವಿಗೆ ನನ್ನ ಶುಭಾಶಯಗಳು ಎಂದು ಹಾರೈಸಿದ್ದಾರೆ.

ಕವಿತಾ ಪತ್ರಿಕೆಯಲ್ಲಿ ಪ್ರಕಟವಾದ ಪಟ್ಟಣಶೆಟ್ಟರ 'ಚಿತ್ರಕಾರ' ಎಂಬ ಕವನವು ತನ್ನ ವಿಶಿಷ್ಟತೆಯಿಂದ ನನಗೆ ಪ್ರಿಯವೆನಿಸಿತ್ತು. ಸ್ವಲ್ಪ ಕಾಲದನಂತರ ಪಟ್ಟಣಶೆಟ್ಟರು ನನಗೊಂದು ಕಾಗದ ಬರೆದು ತಮ್ಮ ಮೊದಲ ಕವನ ಸಂಕಲನಕ್ಕೆ ಮುನ್ನುಡಿ ಬರೆದುಕೊಡಲು ಕೇಳಿದಾಗ ಹೊಸ ಸ್ನೇಹದ ಸಲುವಾಗಿ ಮುನ್ನುಡಿ ಬರೆಯಲು ಒಪ್ಪಿದೆ. 'ನೀನಾ'ದಲ್ಲಿಯ ಎಲ್ಲ ಕವನಗಳನ್ನು ಓದಿದ ಮೇಲೆ ಈ ಕೆಲಸಕ್ಕೆ ಕೈಹಾಕಿದ್ದು ಸಾರ್ಥಕವೆನಿಸಿತು ಎಂದು ಅಭಿಪ್ರಾಯ ಪಡುತ್ತಾ ಈ ಸಂಕಲನದ ಕವಿ ಕಾವ್ಯವನ್ನು ಕುರಿತು ಈ ರೀತಿ ಹೇಳಿದ್ದಾರೆ.[೧] ''ತರುಣರೂ ಸಾಹಸಿಗಳೂ ಆದ ಈ ಮಿತ್ರರಿಗೆ ತಮ್ಮ ಹೊಸ ಹೊಣೆಗಾರಿಕೆಯ ಅರಿವು ಆಗತೊಡಗಿರುವುದು ಇವರು ಬೆಳೆಯುತ್ತಿರುವ ಕವಿ ಎನ್ನುವುದು, ಈ ಕವನಗಳ ಓದುಗರಿಗೆ ತಿಳಿಯುವಂತಿದೆ. ಕವನಗಳುದ್ದಕ್ಕೂ ಬಳಸಿರುವ ನುಡಿಗಳು ಖಚಿತವಾಗಿ, ಹರಿತವಾಗಿ, ಸಾವಧಾನವಾಗಿ ಸಾಗುತ್ತವೆ. ಹೇಳ ಬಯಸಿದ್ದನ್ನು ಆದಷ್ಟು ಅಡಕವಾಗಿ ಹೇಳಲು ಪ್ರಯತ್ನ ನಡೆದಿದೆ, ಬಹುಮಟ್ಟಿಗೆ ಫಲಿಸಿದೆ. ಈ ಶೈಲಿಯ ಸಂಯಮ ತುಂಬಾ ಆರೋಗ್ಯಕರವಾಗಿದೆ. ಅರ್ಥದ ಮೈಗೆ ಮಾತ್ರವಲ್ಲದೆ ನೆರಳಿಗೂ ಎಡೆಗೊಡುವ ಈ ಕವನಗಳ ರೀತಿ ಬಹು ಬೆಲೆಯಾದ ಸಾಧನೆ.''[೧]

ಕವನಗಳ ವಿಷಯವಸ್ತುವನ್ನು ಕುರಿತು ಒಂದು ಮುಖ್ಯ ಭಾವವನ್ನು, ಇದನ್ನೂ ಕವಿ ವಿಪ್ರಲಂಬ ಎಂದಿದ್ದಾರೆ. ಪಟ್ಟುಹಿಡಿದು ಆಕ್ರಮಿಸಲು ನಡೆಸಿರುವ ಹೋರಾಟ ಇಲ್ಲಿನ ಒಂದೊಂದು ಕವನದಲ್ಲೂ ಕಂಡುಬರುತ್ತದೆ. ''ಒಂದು ಕಂಬದ ಸುತ್ತ ಸುತ್ತುವ ಹಲವಾರು ಮಕ್ಕಳಂತೆ, ಹಲವಾರು ವೇದನೆಗಳು, ಕಹಿಗಳು ಪರಿಭ್ರಮಿಸುವುದನ್ನಿಲ್ಲಿ ಕಾಣುತ್ತೇವೆ. ಒಂದೇ ಕೃತಿಯ ಹಲವು ಪುಟ್ಟ ಪುಟ್ಟ ಅಧ್ಯಾಯಗಳು ಎಂದರೂ ಸಲ್ಲುತ್ತದೆ. ಈ ಏಕಮುಖತೆ ಒಟ್ಟು ಸಂಗ್ರಹದ ಯಶಸ್ಸಿಗೆ ಕಾರಣವಾಗಿದೆ. ಕಹಿ ತಿರುಳಿನ ಬಣ್ಣ ಬಣ್ಣಗಳ ಈ ಕವನಗಳನ್ನು ಕಂಡು ಕವಿ ಇತರ ಭಾವಗಳಿಗೆ ಕಣ್ಣು ಮುಚ್ಚಿದ್ದಾನೆ ಎನ್ನುವುದು ತಪ್ಪಾಗುತ್ತದೆ. ನೊಂದ ಜೀವವೊಂದರ ವೈಯಕ್ತಿಕ ಭಾವನೆಗಳೆಂದ ಮಾತ್ರಕ್ಕೆ ಜೀವನ ನಾಟಕದಲ್ಲಿ ಇಂಥ ಘಟ್ಟಗಳು ಎಂದೂ ಬರುವುದಿಲ್ಲವೆಂದು ಯಾರು ಹೇಳಿದರು? ಬದುಕೆಂದರೆ ಇಷ್ಟೇ ಎಂದವರು ತಾನೇ ಯಾರು? ಎಂದು ಕವನಗಳಲ್ಲಿಯ ನಿವೇದನೆಯನ್ನು ಸಮರ್ಥಿಸಿದ್ದಾರೆ.''[೨]

ಈ ಕವನ ಸಂಕಲನದಲ್ಲಿ ಒಟ್ಟು ಅರವತ್ತೆರಡು ಕವನಗಳಿವೆ. ಈ ಸಂಕಲನದ ಎಲ್ಲಾ ಕವನಗಳು ಸಂಕಲನದ ಶೀರ್ಷಿಕೆಯಾದ 'ನೀನಾ'ವನ್ನು ಪ್ರತಿನಿಧಿಸುತ್ತವೆ. ನೀನು ಮತ್ತು ನಾನು ಎಂಬ ಎರಡು ಭಾವಗಳನ್ನೇ ಪ್ರಧಾನವಾಗಿಟ್ಟುಕೊಂಡು ಇಲ್ಲಿಯ ಕವಗಳು ರಚನೆಯಾಗಿವೆ. 'ನೀನಾ' ಪದವು ಹಲವಾರು ರೀತಿಯಲ್ಲಿ ಇಲ್ಲಿ ಬಳಕೆಯಾಗಿದೆ. ಪ್ರಶ್ನಾರ್ಥಕವಾಗಿ, ಭಾವಸೂಚಕವಾಗಿ, ಕಾರಣಾರ್ಥವಾಗಿ, ಕಾರಕಾರ್ಥವಾಗಿ ಮುಂತಾದ ರೀತಿಯಲ್ಲಿ ಬಳಕೆಯಾಗಿರುವದು ವಿಶಿಷ್ಟವಾಗಿದೆ.

ವಿರಹ ವಿಷಾದಗಳು, ಅದಮ್ಯವಾಗಿ ಪ್ರೀತಿಸಿ ಅದರಿಂದ ಸಕಾರಾತ್ಮಕವಾಗಿ ಪ್ರತಿಕ್ರಿಯೆ ಸಿಗದೆ ಅನುಭವಿಸಿದ ನೋವು, ಮರಳಿ-ಮರಳಿ ಕಾಡುತ್ತಿರುವ ವೇದನೆಯ ನೆನಪುಗಳು ಕಾವ್ಯದ ಮುಖ್ಯವಸ್ತುಗಳಾಗಿವೆ. 'ಸಮತೆ' ಕವಿತೆಯಲ್ಲಿ ಈ ರೀತಿಯಾಗಿ ಬಂದಿದೆ.

ವೇದನೆಯ ಅತಿ ಚಹವ ಮಿತಿ ಮೀರಿ ಕುಡಿದು
ವ್ಯಥೆಯ ಕತೆಯನು ಕಕ್ಕಿ
ಅಗ್ನಿ ಮಂಚದ ಮೇಲೆ ವಿಶ್ರಾಂತಿ ಹೊಂದಿದರೆ
ನಾನು ಕಕ್ಕಾವಿಕ್ಕಿ
ನೀನೋ? ರೆಕ್ಕೆಯಿಲ್ಲದ ಹಕ್ಕಿ!

ಇದೇ ಭಾವ ಶೂನ್ಯ ಕವಿತೆಯಲ್ಲಿದೆ.

ನೆನಪಾಗಿ ಬಂದು ನೀನೊಮ್ಮೆ ಚುಚ್ಚಿದರೂನು
ನನ್ನದೆಯ ಬಿಳಿಹಾಳೆಗಳ ಮೇಲೆ
ಗಾಯಗೊಂಡ ಕಲೆ ಕವನವಾಗುವುದು

ನಿನಗಾಗಿ, ನನಗಾಗಿ ಬರೆದಿಟ್ಟ ಕವನಗಳು
ಎಲ್ಲಿ ಹೋಗಿವೆ ಕಾಣೆ
ನಯಾ ಪೈಸೆ ಕಳೆದಂತೆ!

ಇಷ್ಟೆಲ್ಲಾ ನೋವಿಗೆ ಕಾರಣಳಾಗಿರುವ ಪ್ರಿಯತಮೆಯ ಮೇಲೆ ಕವಿಗೆ ಇರುವುದು ಕೇವಲ ಸಾತ್ವಿಕವಾದ ಸಿಟ್ಟು, ಇದಕ್ಕೆ ಹೊರತಾಗಿಯೂ ಸುಂದರ ಪ್ರೀತಿಯ ಕವಿತೆಗಳಿವೆ, ಕವಿ ತಾನು ಪ್ರೀತಿಸಿದ ಹುಡುಗಿಯ ಆಗಮನಕ್ಕೆ ಕಾಯುತ್ತಲಿದ್ದಾನೆ 'ಸ್ವಾಗತ' ಕವಿತೆಯಲ್ಲಿ ವಿಶಿಷ್ಟ ರೀತಿಯ ಸ್ವಾಗತಕ್ಕೆ ಸಜ್ಜಾಗಿದ್ದಾನೆ.

ನಿನ್ನ ಆಗಮನಕೆಂದೆ
ಆಕಾಶ ಗಂಗೆಯನು

ಹಾಲ್ಜೇನುಗಳಲಿದ್ದಿ ನಿರ್ಮಿಸಿದ್ದೆ,

ಸಿಂಗಾರ ಗೊಂಡಿರುವೆ ನಿನ್ನ ಬಯಕೆಯನುಟ್ಟು

ಹಂಬಲವನುಸಿರಿರುವೆ

ಕನಸು ಕಣ್ಣೆವೆಗಳನು ಅರ್ಥ ತೆರೆದು

ನೀಲಗಗನದ ಮಹಾದ್ವಾರವನೆ ತೆರೆದಿರುವೆ

ಬಾ ಸ್ವರ್ಣ ಸ್ವಾಗತವು

ಈ ರೀತಿ ಸ್ವರ್ಣ ಸ್ವಾಗತವನ್ನು ಬಯಸುವ ಕವಿ ಕಣ್ಣಾರೆ ಕಂಡ ತನ್ನ ಪ್ರೇಯಸಿಯನ್ನು ತನ್ನ ಕಲ್ಪನೆಗಳಲ್ಲಿ ಸಿಂಗಾರ ಮಾಡುವ ರೀತಿಯೂ ಅದ್ಭುತವಾಗಿದೆ. ಕವಿ ಅವಳ ಲಿಂಗಗಳ ಮೇಲೆ ವಿಪರೀತ ವ್ಯಾಮೋಹಗೊಂಡಿದ್ದಾನೆ. ಅಮವಾಸ್ಯೆಗಳನ್ನು ತೇಯ್ದು ಲೇಪಿಸಿಹ, ಬಿರುಗಾಳಿಯನ್ನು ಹಿಡಿದು ಕಟ್ಟಿರುವ ಕೇಶ ಕುಂತಲಗಳಿಗೆ ಭಾಷ್ಯವನ್ನು ಬರೆಯಲು ಹೊರಟಿದ್ದಾನೆ. ಈ ರೀತಿಯಾಗಿ ಪ್ರಿಯತಮೆಯನ್ನು ಪ್ರೀತಿಸುವ ಮೋಹ ಚಹದಂತೆ ಚಟವಾಗಿ ಬಿಟ್ಟಿದೆ. ಕವಿಗೆ ಈ ಮೋಹದ ಚಟಕ್ಕೆ ಕವಿ ಒಮ್ಮೊಮ್ಮೆ ಹೆದರುತ್ತಾನೆ. ದೂರ ಸರಿದು ನಿಲ್ಲುವ ಪ್ರಯತ್ನ ಮಾಡುತ್ತಾನೆ. ಆದರೆ ಅದು ಕವಿಗೆ ಸಾಧ್ಯವಾಗುತ್ತಿಲ್ಲ. ಗುರುತ್ವಾಕರ್ಷಣೆ ಕವಿತೆಯಲ್ಲಿ ಇದನ್ನು ಹೇಳಿದ್ದಾರೆ.

ನನ್ನ ಕನಸಿನ ಆಣೆ, ನನ್ನ ಕವನದ ಆಣೆ

ನಿನ್ನನ್ನು ಮರೆಯುವುದು ಸಾಧ್ಯವಿಲ್ಲದ ಮಾತು.

ಕವಿ ವೇದನೆಗೆ ಕಾರಣ ಹೆಣ್ಣು. ಕವಿಕಾವ್ಯದ ವಸ್ತು ಹೆಣ್ಣು ಮತ್ತು ವೇದನೆ 'ಸಿದಿಗೆ' ಕವಿತೆಯಲ್ಲಿ ಆಕೆಯನ್ನು ಕುರಿತು ಹೀಗೆ ಹೆಳಿದ್ದಾರೆ.

ನನ್ನ ಕವನ ಸಿದಿಗೆಯಲಿ

ನೂರು ಹೂ ಬಣ್ಣಗಳ ಹೊಂದಿ ಸಿಂಗರಿಸಿಕೊಂಡು

ಮೆರೆವ ಹೆಣ ನೀನು

ಎಂದು ತೆಗಳುತ್ತಾನೆ. ಇದರಿಂದ ಕವಿ ಮತ್ತು ಕಾವ್ಯ ಎರಡೂ ಶಕ್ತಿಹೀನವಾಗಿವೆ ಎಂದು 'ತಾಪ' ಕವಿತೆಯಲ್ಲಿ ಹೇಳುತ್ತಾರೆ.

ಜ್ವರ ಬಂದು, ಎದೆ ನಡುಗಿ, ಕವನ ತತ್ತರಿಸಿರಲು

ನೆತ್ತಿ ನೆತ್ತರವನೇ ಕಾರುತಿದೆ.

ಕಂದೀಲು ಕಾಯ್ದು, ಸ್ನೇಹ ತೀರಿ ಉರಿಯುತಿದೆ ಬತ್ತಿ.

ಕಾಂತಿ ಪುರುಪುರುನೆ ಹಾರುತಿದೆ

ಈ ಸಂಕಲನದ ಬಹುತೇಕ ಕವನಗಳಲ್ಲಿ ವೇದನೆ ಹೆಪ್ಪುಗಟ್ಟಿ ನಿಂತಿದ್ದರೂ ಶೃಂಗಾರ ಗೀತೆಗಳನ್ನು ಸುಂದರ ಭಾವ ಗೀತೆಗಳನ್ನು ಕಾಣಬಹುದು. ಭಾವಗೀತೆ ಮತ್ತು ಸಣ್ಣ ಕತೆಗಳು ಆ ಕ್ಷಣದ ಉತ್ಕಟ ಭಾವನೆಯನ್ನು ಅಭಿವ್ಯಕ್ತ

ಪಡಿಸುತ್ತವೆ. ಒಟ್ಟಾರೆ ಜೀವನಾನುಭವವನ್ನಲ್ಲ ಎಂಬುದು ಸತ್ಯವಾದರೂ, ಕವನದ ಆರಂಭದಲ್ಲಿರುವ ಪ್ರೀತಿ, ಕವನ ಮುಗಿಯುವುದರೊಳಗಾಗಿ ವಿಷಾದವೋ, ವಿರಹವೋ, ನೋವೋ ಆಗಿಬಿಡುವುದು, ಪಟ್ಟಣಶೆಟ್ಟರ ಕೆಲವು ಕವನಗಳ ಸಹಜ ಗುಣವಾಗಿದೆ 'ಗೀತ' ಕವನದಲ್ಲಿ ಇದನ್ನು ಕಾಣಬಹುದಾಗಿದೆ.

ಧರೆಯ ಅದರ ವನದುಮಿ ಮಾವು ಚಿಗಿತವು ಬನದಿ

ಒಂದೊಂದು ಕುಸುಮ ಕಣ ಕುಣಿ ಕುಣಿದು ಹೇಳುತಿದೆ

ನಿನ್ನ ಬರವನೆ ಸಾರಿ

ಮಧುರ ಹೃದಗಳೆರೆಡು ಕೂಡಿದ್ದ ಬಗೆ ನೆನೆದು

ನಭದ ನೀಲಿಯ ರೂಪ ತಾಳಿರುವ ವೇದನೆಯು

ಬರುತಲಿದೆ ಕಿಡಿಕಾರಿ

ಮನಸಿನಂಗಳದಲ್ಲಿ ಮತ್ತೆ ಸುಂಟರಗಾಳಿ

ಈ ಎಲ್ಲಾ ಸಂಕಟಗಳ ಮಧ್ಯ ಸಿಂಗಾರಗೊಂಡ ಪ್ರಿಯತಮೆಯ ಕವಿ ಹೀಗೆ ವರ್ಣಿಸುತ್ತಾನೆ.

'ಸ್ವಲ್ಪ ಸರಿದು ಹೀಗೆ ನಲ್ಲು

ಬ್ರಹ್ಮ ಕೌಶಲ್ಯವೂ ಗೋಲನ್ನೊಪ್ಪಬೇಕು'

ನಿತ್ಯ ಚೈತನ್ಯದಾಯಿಣಿಯಾದ ಪ್ರಕೃತಿಯೂ ತನ್ನ ಪ್ರಿಯತಮೆಯಿಂದ ಸ್ಫೂರ್ತಿಪಡೆಯಬೇಕು. ಮತ್ತು ಬ್ರಹ್ಮ ಕೌಶಲ್ಯವೂ ಕಳೆಗುಂದಬೇಕು. ಇಷ್ಟೊಂದು ಪ್ರೀತಿಸುವ ಕವಿಗೆ ಅಗಲಿಕೆ ತಡೆದುಕೊಳ್ಳಲಾರದ ಒಂದು ನೋವು. ಅಗಲಿಕೆ ಸ್ವರ್ಗಕ್ಕೆ ಬೆಂಕಿಹಚ್ಚಿದ ಹಾಗೆ, ಪ್ರೀತಿಸುವ ವಸ್ತು ಜೊತೆಯಲ್ಲಿದ್ದರೆ ಕವಿಗೆ ಅಧೀಮ ಶಕ್ತಿ ಬಂದು ಬೀಡುತ್ತದೆ. ಆಗ ಏನೆಲ್ಲವನ್ನು ಮಾಡಲು ಉತ್ಸಾಹದಿಂದ ಸಿದ್ಧನಾಗುತ್ತಾನೆ. ಕವಿಯ ಜೀವನ ಸ್ಫೂರ್ತಿಗೆ ಜೀವದ ಗೆಳತಿ ಅವಶ್ಯವಾಗಿ ಬೇಕು 'ನೀ ಬಂಧು ಹೋದೊಡನೆ' ಗೀತೆಯಲ್ಲಿ ಕವಿ ಹೀಗೆ ಹೇಳುತ್ತಾರೆ.

ಲಕ್ಷ ತಾಂಡವಗಳನು ಎಡ ಬೆರಳಿನಲಿ ತುಳಿವೆ

ನಿನ್ನ ನೋಡಿದ ಚಣಕೆ

ಕತ್ತಲೆಯ ಮೈತುಂಬ ಹೊದ್ದು

ಕೋಟಿ ಕೋಟಿ ತಾರೆಗಳನ್ನು ನುಂಗಿ ಬಿಡುವೆ

ನೀ ಬದಿಯಲಿದ್ದಾಗ

ಜೀವನದಲ್ಲಿ ಸುಖ ದುಃಖಗಳು ಸಹಜ ಆದರೆ ಇಲ್ಲಿ ಕವಿ ಮನಸಿಗೆ ಆಗಿರುವ ದುಃಖಕ್ಕೆ ಹತ್ತು ಹಲವು ಕಾರಣಗಳಲ್ಲಿ ಪ್ರಾಣಕ್ಕಿಂತ ಹೆಚ್ಚಾಗಿ ಪ್ರೀತಿಸುವ ಗೆಳತಿ ದೂರವಾಗುತ್ತಾಳೆ ಎಂಬ ಬಲವಾದ ಸಂಶಯವಿದೆ. ಒಂದು ವೇಳೆ ದೂರವಾಗಿ ದುಃಖ ಹಿಮಗಿರಿಯಂತೆ ಹೆಪ್ಪು ಗಟ್ಟಿದರೂ ಆಕೆಯನ್ನು ಕಂಡ ತಕ್ಷಣ ನೂರು ಗಂಗಾ ಯಮುನೆಯರು ಹುಟ್ಟಿ, ಹರಿಯಲಾರಂಭಿಸುತ್ತಾರೆ. ಕವಿಗೆ ಆಕೆಯನ್ನು ಮರೆಯುವುದು ಸಾಧ್ಯವಿಲ್ಲದ ಮಾತಾಗಿದೆ. 'ನಿನ್ನ ಮರೆಯೋ ಮಾತು' ಕವನದಲ್ಲಿ ಕವಿ ಈ ರೀತಿಯಾಗಿ ಹೇಳಿದ್ದಾರೆ.

ನಿನ್ನ ಮದುವೆಯ ರಾತ್ರಿ ಮೆರವಣಿಗೆಯಾಗುತಿರೆ
ಕಣ್ಣುಗುಡ್ಡೆಗಳ ಹಿಲಾಲನ್ನೇ ಹಿಡಿದೇನು.
ಸರಿಯಾಚೆ ತೊಲಗೆಂದು ನೀ ನೂರೆ ತಳ್ಳಿದರು
ದೈನ್ಯದಲಿ ನಿನ್ನೆದೆಯ ಬಾಗಿಲ ತಟ್ಟೇನು
ಡಬಗಳ್ಳಿ ಮಳೆಯೊಳಗೆ ಅಳು ಅಳುಕಿ ಸತ್ತೇನು
ನನ್ನ ರಕುತವ ಹೀರಿ ಒಳಗೊಳಗೆ ಅತ್ತೇನು
ಎಲ್ಲಿ ಹೋದರು ಕೂಡಾ ಏನಾದರೂ ಕೂಡ
ನಿನ್ನ ನೆನಪಿನ ಅಡವಿ ತಿರುತಿರುಗಿ ಹೊಕ್ಕೇನು
ನಿನ್ನ ಮರೆಯೋ ಮಾತು ಮರೆತು ಬಿಡು ನೀನು.

ಡಾ. ಎಚ್.ಎಸ್. ವೆಂಕಟೇಶಮೂರ್ತಿಯವರು ಹೇಳುವ ಹಾಗೆ, ''ಈ ಸಂಕಲನದಲ್ಲಿನ ಎಲ್ಲಾ ಕವನಗಳು 'ನಾ' ಆಗಿರುವ ಕವಿ ದೂರವಾಗಿ ವಿರಹಕ್ಕೆ ನೋವಿಗೆ ಕಾರಣವಾದ 'ನೀ'ಗೆ ಹೇಳುವಂತಿದೆ. ಇಲ್ಲಿ 'ನೀ' ದುಃಖಾಂತಗಳ ಸಫಲ ಅಭಿನೇತ್ರಿಯಾದ ಅಗ್ನಿಕನ್ಯೆ, 'ನಾ' ಆಕೆಯ ಅಗಲಿಕೆಯಿಂದ ನಿರಂತರ ವೇದನೆಗೆ ಆಹುತಿಯಾದ ಅಜ್ಞದವತಾರ. ಅಗಲಿಕೆಯೇ ಇಲ್ಲಿ ಒಪ್ಪಿತ ಸ್ಥಿತಿ ಎನ್ನುವಂತಾಗಿದೆ. ಮತ್ತು ಅಗಲಿಕೆಯ ನೋವಿನ ಪರಿಭಾವನೆ ಗಂಡಿನ ನಿಟ್ಟಿನಿಂದಲೇ ಬಹುಪಾಲು ನಡೆಯುತ್ತದೆ. ಇಲ್ಲಿ ಹೆಣ್ಣು ಅರ್ಥವಾಗದ ನಿಗೂಢ. ಆಕೆಯ ಬಗೆಗಿನ ತೀವ್ರವಾದ ಗಂಡಿನ ಭಾವನೆಗಳು ಭಾವಗೀತಾತ್ಮಕವಾಗಿ, ಚಿತ್ರವತ್ತಾಗಿ, ಕರುಣಾಜನಕವಾಗಿ ಮೂಡಿಬಂದಿವೆ. ಅಗಲಿಕೆಗೆ ಗಂಡಿನ ಜವಾಬ್ದಾರಿ ಉಂಟೆ? ಇದ್ದರೂ ಎಷ್ಟು? ಈ ಬಗೆಯ ಆತ್ಮ ಪರೀಕ್ಷೆಯೂ ಇಲ್ಲಿ ನಡೆಯುವುದಿಲ್ಲ. ತನ್ನ ಬಗ್ಗೆ ಅಪಾರವಾದ ಅನುಕಂಪ ಮತ್ತು ಆತ್ಮ ಮರುಕ ಇಲ್ಲಿಯ ವೇದನೆಯ ಬಾಯಿಗೆ. ಈ ಆತ್ಮ ಮರುಕದಿಂದ ಕರುಣೆಯ ಮತ್ತು ಅನುಕಂಪದ ಸೆಲೆ ಒಡೆಯುವುದು ಇಲ್ಲಿ ಅನುದ್ದಿಶ್ಯವಾಗಿಯೇ ಸಿದ್ದಿಸಿದೆ.''[೩]

ಕವಿ ದೂರದಲ್ಲಿ ಕುಳಿತು ಕವನಗಳೊಂದಿಗೆ ಒಂಟಿಯಾಗಿ ಬೇಸರದ ಬದುಕನ್ನು ನಡೆಸುತ್ತಾ ಅವಳ ನೆನಪಿನಲ್ಲಿ ವೇದನೆಯನ್ನು ಅನುಭವಿಸುತ್ತಾ ಕಾಲ ಕಳೆದ ಭಾವ ಜೀವಿಯಾಗಿದ್ದಾನೆ. ಈ ಉತ್ಕಟವಾದ ಭಾವನೆಗಳೇ ಕನ್ನಡಕ್ಕೊಬ್ಬ ವಿಶಿಷ್ಟ ಕವಿಯನ್ನು ನೀಡಿದೆ. ಕವಿ ಕವನಗಳಲ್ಲಿ ಏನೆಲ್ಲವೂ ಆಗಿ ಎಲ್ಲವನ್ನು ಅನುಭವಿಸಲು ಸಿದ್ಧವಾಗಿರುವುದು 'ಚಿತ್ರಗಾರ' ಕವಿತೆಯಲ್ಲಿ ಕಾಣಬಹುದಾಗಿದೆ.

ನಿನ್ನ ಎದೆಯೂರಲ್ಲಿ ಬರಗಾಲ ಬಿದ್ದಾಗ
ಗುಳೆ ಹೊರಟ ದರಿದ್ರ ಚಿತ್ರಕಾರನು ನಾನು

ನನ್ನ ಭಾವ ಕುಂಚವನು
ನಿನ್ನ ಕಣ್ಣ ಬಟ್ಟಲದ ದಿಟ್ಟ ಬಣ್ಣದಲದ್ದಿ

ನಾ ತೆಗೆದ ಚಿತ್ರಗಳನಲ್ಲಿಯೇ ಬಿಟ್ಟಿರುವೆ
ಚಿತ್ರಗಳ ಛಾಯೆಯನು ಹೊತ್ತು ತಂದಿರುವೆ
ಛಾಯೆಗಳ ಅಭಾಸ ನುಂಗಿ ನಿಂದಿರುವೆ.

ಎನ್ನುವ ಕವಿ ದೀಪಾವಳಿಯ ಅಮವಾಸ್ಯೆಯೆಂದು ಅಶ್ರು ಅಭ್ಯಂಜನವ ಮಾಡಿ ಹುಚ್ಚು ಹಂಬಲವನ್ನೇ ಮೆಲುಕು ಹಾಕುತಲಿರುವ ಗುಳೆ ಹೊರಟ ದರಿದ್ರ ಚಿತ್ರಕಾರ ನಾನು ಎಂದು ತನ್ನ ದುರಾದೃಷ್ಟವನ್ನು ಹೆಳಿಕೊಳ್ಳುತ್ತಾನೆ. ಈ ದುರಂತವನ್ನು ಮರೆಯುವುದು ಕವಿಗೆ ಸಾಧ್ಯವಾಗಿಲ್ಲ. ಮತ್ತೆ ಹೊಗೆಯಾಡುತ್ತಲೇ ಇದೆ. ವೇದನೆ ಜನಕೆ ನಮ್ಮಯ ಬದುಕು ನಗೆಯಾಗುತಿಹುದು ಎನ್ನುವ ಸಾಮಾಜಿಕ ಜವಾಬ್ದಾರಿಯೂ ಕವಿಗಿದೆ. ತಡೆಯಲಾರದ ದುಃಖ ತಾಪವಾಗಿ ಹೊರಬಂದು ಬಿಡುವುದು 'ತಾಪ' ಕವಿತೆಯಲ್ಲಿದೆ.

ಹೊಡಮರಳಿ ಗಡ ಬಡಸಿ
ಎದೆಯೊಳಗೆ ನಡುಗುತಿವೆ ಧೂಮಕೇತುಗಳು
ಹೊಯ್ದಾಡಿ ನರಳುತಿವೆ
ನಮ್ಮ ನಡುವಣ ಎಲ್ಲ ಮಿಲನ ಸೇತುಗಳು
ನೀ ಬೇಟೆ ಹೊರಟರುವ ಹೊನ್ನಿಗದ ಹಿಂಡು
ನಾನೊರಗಿ ಮೈಮರೆತ ಮೊಲದ ದಂಡು

ಎಂದು ಕವಿ ಮನಸು ಹಪಹಪಿಸುತ್ತಿದೆ. ಅಶ್ರು ಅಭ್ಯಂಜನವ ಮಾಡಿಕೊಂಡು ಅಗ್ನಿ ಮಂಚದ ಮೇಲೆ ಮಲಗಿ ವಿಶ್ರಾಂತಿ ಪಡೆಯಲು ಯತ್ನಿಸುತ್ತಿರುವಾಗ ನೆನಪುಗಳು ಮತ್ತೆ ಬಂದು ಕಾಡುತ್ತಿವೆ. ನಿಸರ್ಗದ ಸುಂದರ ಚೆಲುವಿನಲ್ಲಿಯೂ ವಿಕಾರತೆಗಳು ಮೂಡುತ್ತಿವೆ. ಕಾಲ್ಮುಂದು ಮೂಲೆ ಗುಂಪಾದ ಕಾಮನ ಬಿಲ್ಲು, ಕುಷ್ಠರೋಗದಿ ಬಳಲುತಿಹ ಬೆಳದಿಂಗಳು, ಕೊಳೆತು ಕಳಚುವ ರಾತ್ರಿ, ಆದ್ದರಿಂದ ಕವಿ ಪ್ರೇಯಸಿಯನ್ನು ಸ್ಪಷ್ಟವಾಗಿ ನಿರಾಕರಿಸುತ್ತಾನೆ. ಏಕೆಂದರೆ ಮತ್ತೆ ಪ್ರೀತಿಸಿ ನೋವು ಅನುಭವಿಸುವುದು ಕವಿಗೆ ಬೇಡವಾಗಿದೆ. ಇದನ್ನು ಪಲಾಯನ ಕವನದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ.

ನೀನಡಿಯ ಮುಂದಿಡಲು
ಮತ್ತೆ ಒಡೆಯುತಲಿಹವು
ಹೂವು ಬಾಡುತಲಿಹವು
ಯಾವ ಪಾಪದ ವಿಷದ ಲೇಪನವೋ ಈ ದೇಹಕೆ
ನೀ ಮುಟ್ಟಿದ ಹವೆಯು ಭುಗಿಲ್ಲೆನುತಲಿದೆ
ಆಕಾಶದೆತ್ತರಕೆ ಜ್ವಾಲೆಗಳ ತಾಂಡವ
ಬಂಡೆಗಲ್ಲುಗಳ ಪುಡಿ ಪುಡಿ ಧೂಳು

ನೋಡದಿರು ಈ ರೀತಿ

ಸರಿಯಾಚೆ ತೊಲಗಾಚೆ

ಬಿಟ್ಟು ಬಿಡು ಜುಟ್ಟು

ಓಡಿ ಹೋಗುವೆನು

ನೋವನ್ನು ಸಹಿಸಲಾರದ ಕವಿ ಭಯಗೊಂಡು ವಿಷಾದದಿಂದ ಓಡಿಹೋಗುತ್ತಾನೆ. ಈ ಸಂಕಲನದ ಕಾವ್ಯ ಮತ್ತು ಪಟ್ಟಣಶೆಟ್ಟರನ್ನು ಕುರಿತು ಡಾ. ಶಾಂತಿನಾಥ ದೇಸಾಯಿಯವರು ಹೀಗೆ ಪ್ರತಿಕ್ರಿಯೆ ನೀಡಿದ್ದಾರೆ. ''ಇಲ್ಲಿ ಕವಿ ತಾರುಣ್ಯ ಸಹಜವಾದ ತನ್ನ ವೈಯಕ್ತಿಕ ಭಾವನೆಗಳೊಡನೆ, ಸಮಸ್ಯೆಗಳೊಡನೆ ಒಂದು ತೀವ್ರವಾದ ಆವೇಶಪೂರ್ಣವಾದ ಹೋರಾಟ ನಡೆಸಿದ್ದಾನೆ. ನಿಜವಾದ ಕವಿ ಇಂಥ ಹೋರಾಟ ಮಾಡಬೇಕಾದದ್ದೇ, ಅದೂ ಇಂದಿನ ಸಂಕೀರ್ಣವಾದ ಆಧುನಿಕ ಯುಗದಲ್ಲಿ ಇಂಥ ಹೋರಾಟವನ್ನು ಕವಿಯಾದವನು ಹಿಂದಿನ ಸಾಂಪ್ರದಾಯಕ ಸಂಸ್ಕಾರಗಳ ಬೆಂಬಲವಿಲ್ಲದೆ ತನ್ನ ಅಂತಃಸತ್ವದ ಸಾಮರ್ಥ್ಯದಿಂದಲೇ ಮಾಡಬೇಕಾದ್ದರಿಂದ ಆ ಹೋರಾಟದಲ್ಲಿ ತೀವ್ರತೆಯ ಜೊತೆಗೆ ಒಂದು ಬಗೆಯ ಅಸ್ತವ್ಯಸ್ತತೆ ಬಂದು ಬಿಡುತ್ತದೆ. ಪಟ್ಟಣಶೆಟ್ಟರಲ್ಲಿ ಹೋರಾಡುವ ಧೈರ್ಯ, ಸಾಮರ್ಥ್ಯ, ಜನ್ಮತಃ ಇದ್ದಿರಬೇಕು. ಅನುಭವದೊಡನೆ ಸೆಣಸಾಡಿ ಅದನ್ನು ಗೆದ್ದೇ ತಿರುವನೆಂಬ ಹಟ, ಹವ್ಯಾಸ ನೀನಾದ ಎಲ್ಲಾ ಕವಿತೆಗಳ ಕೇಂದ್ರ ಪ್ರೇರಣೆಯಾಗಿದೆಯೆಂದು ಹೇಳಬಹುದು. ಚಕ್ರವ್ಯೂಹದಲ್ಲಿ ಸಿಕ್ಕ ಅಭಿಮನ್ಯುವಿನಂತೆ. ಅನುಭವದ ವ್ಯೂಹದಲ್ಲಿ ಸಿಕ್ಕ ಸಿದ್ಧಲಿಂಗ ಪಟ್ಟಣಶೆಟ್ಟರು 'ನೀನಾ'ದಲ್ಲಿ ಕಾವ್ಯವನ್ನೇ ಆಯುಧವನ್ನಾಗಿ ಉಪಯೋಗಿಸಿ ಝಳಪಿಸಿ ಸೋತುಗೆದ್ದಿದ್ದಾರೆ.''೪

ಹೀಗೆ ಈ ಕವನ ಸಂಕಲನದ ಪ್ರೇರಣೆಯನ್ನು ಸ್ಥೂಲವಾಗಿ ಹೇಳಬಹುದಾದರೂ ಕವಿ ಅದನ್ನು ಅಭಿವ್ಯಕ್ತಪಡಿಸುವ ವಿಷಯದಲ್ಲಿ ವೈವಿಧ್ಯತೆಯಿದೆ. ವೇದನೆಗಳನ್ನು ತೋಡಿಕೊಳ್ಳುವುದರಲ್ಲಿಯೂ ಒಂದು ರೀತಿಯ ಲವಲವಿಕೆಯಿದೆ. ತಮಗಾದ ಮಾನಸಿಕ ಯಾತನೆಗಳನ್ನು ಬಹಳ ಪ್ರಾಮಾಣಿಕತೆಯಿಂದ ಯಾವ ಮುಚ್ಚುಮರೆಯಿಲ್ಲದೆ ಎಲ್ಲರೆದುರು ಹೇಳಿಕೊಳ್ಳುವ ಎದೆಗಾರಿಕೆ 'ಅಡ್ಡಮಳೆ' ಕವಿತೆಯಲ್ಲಿದೆ.

ನೀ ಬದಿಗೆ ಸುಳಿದರೂ

ಮೈ ತುಂಬ ಸೆರೆ ಮತ್ತು ಬೆಂಕಿ

ನಿನ್ನ ಹುಬ್ಬಿದ ಕಣ್ಣು

ನೂರು ಬಾಣಗಳೆದೆಗೆ ನಟ್ಟ ಸಾವಿರ ಹುಣ್ಣು

ನೀ ಬಳುಕಿ ನಡೆಯುತಿರೆ

ನನ್ನ ಕೈದೀಪದಲಿ ಕುಡಿ ನಡುಗುತಿಹದು

ಈ ಬದುಕಿನಲಿ ನಿದ್ರೇ, ಸುಖವೆಲ್ಲಾ ನಿನಗೊಮ್ಮೆ
ಮಾರಿ ಬಿಟ್ಟಿರುವೆ
ಬಹಳ ಕಡಿಮೆ ಬೆಲೆಗೆ

ಸೆರಗ ಝಾಡಿಸಬೇಡ
ನನ್ನ ಭವಿತವ್ಯದೊಳು ಹೋಯ್ದಾಡಿಸದಿರು

ಎಂದು ತನಗಾಗಿರುವ ನಿರಾಶೆಗಳನ್ನು ಬಿಚ್ಚಿ ಹೇಳುತ್ತಾನೆ. ಭವಿಷ್ಯದಲ್ಲಿಯಾದರೂ ಸುಖವಾಗಿ ಬದುಕಲು ಬಿಡು ಎಂದು ಕಳಕಳಿಯಿಂದ ಬೇಡಿಕೊಳ್ಳುತ್ತಾನೆ. ನನಗೂ ಅನೇಕ ಮಿಂಚು ಕನಸುಗಳಿವೆ, ನನ್ನ ಸುಖ ಮಿಂಚುತಿರಲಿ, ನನ್ನ ನಗೆ ಅರಳುತಲಿರಲಿ, ನಡುವಿನಿಂದ ಕವಿ ಆಶಾವಾದಿಯಾಗಲು ಯತ್ನಿಸುತ್ತಾನೆ. ಭವಿತವ್ಯವನ್ನಾದರೂ ಸುಂದರ ಮಾಡಿಕೊಳ್ಳೋಣ ಎಂಬ ನಿರ್ಧಾರಕ್ಕೆ ಬರುತ್ತಾನೆ. ಆದರೆ ಭೂತದ ನೆನಪುಗಳ ಸೆಳೆವಿಗೆ ಸಿಕ್ಕು ಚಡಪಡಿಸುತ್ತಾನೆ. ಶ್ರಾವಣದ ಸಳಕುಗಳು ಗಾಳಿಯಲಿ ಹರಿದು ಬರುವ ಹಾಗೆ ನೆನಪುಗಳು, ತಡೆತಡೆದು ಬರತಲಿವೆ, ಬದುಕಿನ ಮಳೆಗಾಲದಲ್ಲಿ ನೆನಪುಗಳು ಬಂದು ಮತ್ತೆ ಭಯಂಕರ ಬರಗಾಲ ಬಂದಿರುವುದು 'ಮಳೆಗಾಲ' ಪದ್ಯದಲ್ಲಿ ನೋಡಬಹುದಾಗಿದೆ.

ನನ್ನ ಬದುಕೆ ನೀ ಮಳೆಗಾಲದಲ್ಲಿ
ಮೆದುಳ ಮನೆ ಮರಗಳಲಿ
ವ್ಯಥೆಯ ಕಥೆ ದಿನವೂನು ಜಂಪಲಿಕ್ಕುತಿದೆ

ಹಂತಿ ಹೊಡೆಯುತಲಿರುವೆ ದಿನದ ದನಗಳ ಕಟ್ಟಿ
ನೆನಪುಗಳ ಪೈರನ್ನು ತುಳಿಸುತಿರುವೆ.

ಹೀಗೆ ನೆನಪುಗಳಲ್ಲಿ ಬದುಕುತ್ತಿರುವ ಕವಿ ಭಾವಜೀವಿಯಾಗಿದ್ದಾನೆ. ಒಮ್ಮೊಮ್ಮೆ ಈ ಕಹಿ ನೆನಪುಗಳು ಪ್ರವಾಹದ ರೀತಿಯಲ್ಲಿ ಒಂದು ತೀವ್ರತರದಿಂದ ನೋವನ್ನು ನೀಡುತ್ತವೆ. ಮತ್ತೆ ಮನಸಿನಲಿ ಆಸೆಗಳ ವ್ಯಭಿಚಾರ ಆರಂಭವಾಗುತ್ತದೆ. ಆಸೆಗಳು ಬಹುಬೇಗನೆ ನಿರಾಸೆಗಳಾಗಿ ಬಿಡುತ್ತವೆ. ಆಗ ತಲೆಯಲ್ಲಿ ದಾರಿಕಾಣದ ನೂರೆಂಟು ಯೋಚನೆಗಳು ಪ್ರವಾಹ ಕವನದಲ್ಲಿವೆ.

ಕಣ್ಣ ಬೇಲಿಯ ಮೇಲೆ
ಉಪ್ಪು ನೀರಿನ ಮುತ್ತು
ದಿನವರಳಿ ಬೀಳುತಿವೆ ಹೂವುಗಳು ಸತ್ತು
ಯಾವುದೋ ಕನಸನ್ನು ಕಣ್ಣಿನಲಿ ಹೊತ್ತು

ಈಗ ಮಳೆ

ಋತು ಸೂತ್ರಗಳ ಮೀರಿ

ಬೋರ್ಗರೆಯುತಿದೆ ಯೋಚನೆ

ಹೊಳೆ

ಡಾ.ಶಾಂತಿನಾಥ ದೇಸಾಯಿಯವರು ಅಭಿಪ್ರಾಯಪಡುವ ಹಾಗೆ ''ನೀನಾ ಕಾವ್ಯ ಪ್ರಜ್ಞೆ ಪ್ರಮುಖವಾಗಿ ಆತ್ಮ ನಿಷ್ಠವಾದದ್ದು. ಅದು ಹಳೆ, ಹೊಸ, ರಮ್ಯ, ನವ್ಯ ಎಂಬ ಬೇಧ ಭಾವದ ಗೋಜಿಗೆ ಹೋಗದೆ ಯಾವುದೆ ಕಟ್ಟುನಿಟ್ಟುಗಳ ಚೌಕಟ್ಟಿನಲ್ಲಿಯೇ ಬಂಧಿತವಾಗಿ ಕೆಲಸಮಾಡಲು ಒಪ್ಪದೇ, ತನ್ನದಾರಿ ತಾನೇ ಕಂಡುಕೊಳ್ಳಬೇಕು. ತನ್ನತನವನ್ನು ಶೋಧಿಸಬೇಕು ಎಂಬ ಹವ್ಯಾಸವುಳ್ಳದ್ದು. ಈ ಹವ್ಯಾಸದ ಮೂಲಕ ಶಬ್ದಗಳೊಡನೆ, ಪ್ರತಿಮೆಗಳೊಡನೆ, ಲಯಗಳೊಡನೆ ಸ್ವಚ್ಛಂದವಾಗಿ ಪ್ರಯೋಗ ಮಾಡಬೇಕೆನ್ನುವ ವೃತ್ತಿ ಸೋಲು ಗೆಲುವುಗಳನ್ನು ಲೆಕ್ಕಿಸದೆ ಅತ್ತ ಲಕ್ಷ್ಯ ಕೂಡಕೊಡದೆ ತನ್ನ ಅಭಿವ್ಯಕ್ತಿಯನ್ನು ತಾನೇ ರೂಪಿಸಿಕೊಳ್ಳಬೇಕೆನ್ನುವ ಮನೋಧರ್ಮ (ಇದು ನವ್ಯದ ಮನೋಧರ್ಮಗಳಲ್ಲಿ ಒಂದು) ಇವರ ಕವಿತೆಯನ್ನು ರೂಪಿಸಿದೆ.''[ೠ]

ಈ ಕವನ ಸಂಕಲನವು ತನ್ನ ಪ್ರೇರಣೆ ಮತ್ತು ಪ್ರಜ್ಞೆಗಳ ಮೂಲಕ ಅನಿವಾರ್ಯವಾಗಿ ಕೆಲವು ವೈಶಿಷ್ಟ್ಯಪೂರ್ಣವಾದ ಲಕ್ಷಣಗಳನ್ನು ಹೊಂದಿದೆ. ನನ್ನ ಕನಸಿನ ಆಣೆ ನನ್ನ ಕವನದ ಆಣೆ ನಿನ್ನನ್ನು ಮರೆಯುವುದು ಸಾಧ್ಯವಿಲ್ಲ. ಎನ್ನುವ ಕವಿ ಮನಸು ಹೊಯ್ದಾಟದಲ್ಲಿ ಕಾಲ ನೂಕುತ್ತದೆ. ಮತ್ತೆ ಕಳೆದು ಹೋದ ರಮ್ಯ ಕಾಲದ ರಸಘುಟ್ಟಗಳನ್ನು ನೆನಪಿಸಿಕೊಳ್ಳುತ್ತದೆ. ಹೀಗೆ ಕಳೆದುಹೋದ ಸುಖ ಸಮಯದ ಸವಿನೆನಪುಗಳು ಕವಿಗೆ ದುಃಖವನ್ನು ನೀಡಿವೆ. ಈ ಸಂಕಲನದ ಬಹುತೇಕ ಕವನಗಳು ಈ ಹಿನ್ನೆಲೆಯಲ್ಲಿಯೇ ಮೂಡಿ ಬಂದಿವೆ. ಪ್ರೀತಿಯಿಲ್ಲದೆ ಮಾತಿಲ್ಲ, ಕೆಲಸವಿಲ್ಲ ಅದರ ಸೆಳೆತದಿಂದ ಪಾರಾಗಲು ಸಾಧ್ಯವಿಲ್ಲದಿರುವುದನ್ನು 'ಗುರುತ್ವಾಕರ್ಷಣೆ' ಕವಿತೆಯಲ್ಲಿ ಹೇಳಿಕೊಂಡಿದ್ದಾರೆ.

ನಿನ್ನ ಗುರುತ್ವಾಕರ್ಷಣೆಗೆ ಸೋತು ಸಾವಿರ ಬಾರಿ

ಆಕಾಶದಲಿ ತೂರಿ ಹೋದ ಕಲ್ಲಿನ ಹಾಗೆ

ಬಿರುವೆ ಬರ್ರೆಂದು ಬರಸೆಳೆದು ಮತ್ತೆ

ನಿನ್ನ ನೆನಪಿನ ರಮ್ಯ ಪಾತಾಳದೆಡೆಗೆ

ಹೀಗೆ ಕವಿ ರಮ್ಯಲೋಕದೊಳಗೆ ಹೊಕ್ಕು ಅಲ್ಲಿ ವಿಹಾರ ಮಾಡಿದರೂ ತನ್ನ ಪ್ರೀತಿಯ ಬಯಕೆಯನ್ನು ಅಧಿಕಾರವಾಣಿಯಿಂದ ಕೇಳುವುದಿಲ್ಲ. ಅಧಿಕಾರ ಚಲಾಯಿಸಿ ಪ್ರೀತಿಮಾಡುವುದು ಸಾಧ್ಯವಿಲ್ಲ. ಹಾಗೆ ಮಾಡಿದ್ರೇ ಆದರೂ ಅದು ಪ್ರೀತಿಯಾಗಿರಲು ಸಾಧ್ಯವಿಲ್ಲ. ಕವಿಯ ಮನಸ್ಸು ಬಹಳ ಸೂಕ್ಷ್ಮವಾಗಿದೆ. ಅಲ್ಲದೆ ಪ್ರತಿಕ್ರಿಯೆ ಸಂಪೂರ್ಣ ನಿರಾಶಾದಾಯಕವಾಗಿದೆಯೆಂದು ಕವಿಗೆ ತಿಳಿದಿದೆ. ಆದರೂ ಕವಿಗೆ ಪ್ರೀತಿಸುವ ಮನಸಿದೆ. ಮನಸು ದೊಡ್ಡದಾಗಿದೆ. ಇಲ್ಲಿ ಬೇಕು ಬೇಡಗಳ ಪ್ರಶ್ನೆಗಳ ಸುರಿಮಳೆಗೆ ಮೆದುಳು ಮನಸು ತೊಯ್ದರೂ ಕವಿಗೆ ಶಾಕುಂತಲಾ

ಮತ್ತು ಮೃಚ್ಛಿಕಟಿಕಗಳಲ್ಲಿಯ ವಿರಹ ಬೇಡವಾಗಿದೆ. ಆದ್ದರಿಂದ ಕವಿ ಅತೀ ನವಿರಾದ ಮಾತುಗಳಿಂದ ದೈನ್ಯತೆಯ ಭಾವನೆಗಳನ್ನು ತುಂಬಿಕೊಂಡಿರುವುದನ್ನು 'ಮಿಡುಕಾಡಬೇಡ' ಕವಿತೆಯಲ್ಲಿ ಕಾಣಬಹುದು.

ನಿನ್ನ ಅಂಗಾಲಿನ ಮದರಂಗಿಯಾದೆ
ಮುಳ್ಳಾಗಲಿಲ್ಲ
ತಿಕ್ಕಿ ಬ್ರುಶ್ಯನು ನೀನು ತೊಳೆಯ ಬೇಡ!

ಕಣ್ಣಿನಲಿ ಕಾಡಿಗೆ, ಕಾಂತಿ ನಾನಾದೆ
ಕಳವಳದ ಹರಲಾಗಲಿಲ್ಲ
ಉಜ್ಜಿ ಆ ಚೆಲುವನ್ನು ಕೆಡಿಸಬೇಡ!

ನಿನ್ನ ಕವನಗಳಲ್ಲಿ ಬಸಂತ, ಮೇಘ ಮಲ್ಹಾರವಾದೆ
ಎಂದಿಗೂ ಹರಿದ ತಂತಿಯ ವೀಣೆ ನಾನಾಗಲಿಲ್ಲ
ಭೈರವಿಯ ಹಾಡಬೇಡ

ನಾನು ನೀನಾಗುವೆನು
ಕಣ್ಣಂಚಿನಲಿ ಕುಣಿವ ಕಣ್ಣೀರ ಹನಿಕಂಡು
ಒದ್ದೆಯಾಯಿತು ಎಂದು ಒದ್ದೆಯಾಯಿತು ಎಂದು
ಮಿಡುಕಾಬೇಡ, ತುಡುಕಾಡಬೇಡ.

ಹೀಗೆ ಸಾಗುವ ಪಟ್ಟಣಶೆಟ್ಟರ ಕವನಗಳಲ್ಲಿ ಅಪಾರವಾದ ದುಃಖವಿದೆ, ಆಳವಾದ ನಿರಾಶೆಯಿದೆ, ವಿಶಾಲವಾದ ವಿಷದವಿದೆ, ಹೆಪ್ಪುಗಟ್ಟಿರುವ ಹತಾಶೆಗಳಿವೆ, ನುಗ್ಗಿ ಬರುವ ಉತ್ಕಟವಾದ ನೋವಿನ ಭಾವನೆಗಳಿವೆ. ಓದುಗನಿಗೆ ಇವುಗಳ ಸ್ಪರ್ಶ ಸ್ಪಷ್ಟವಾಗಿ ಅರ್ಥವಾಗುವ ಮನಕರಗಿಸುವಂತ ಶಕ್ತಿಯಿದೆ. ಒಮ್ಮೆ ಇವರ ಸ್ನೇಹಿತರಾದ ಶಿವಶಂಕರ ಹಿರೇಮಠರು 'ಚಿತ್ರಕಾರ' ಕವನ ಓದಿ ಉದ್ವೇಗಕ್ಕೊಳಗಾಗಿ ಪಟ್ಟಣಶೆಟ್ಟರ ಎರಡೂ ಕೈಗಳನ್ನು ಹಿಡಿದು ಶೆಟ್ಟರೆ ''ನಾನು ನಿಮ್ಮ ಜತೆಗೆ ಇದೀನಿ, ನಿಮ್ಮ ಹುಡುಗಿನ್ನ ಸ್ವಲ್ಪ ತೋರಿಸಿ ನನಗ. ನಿಮ್ಮ ಎಲ್ಲಾ ಕವನಗಳನ್ನು ಆಕಿಮ್ಯಾಲ ತೂರಿಬಿಡೋಣ ಒಂದು ಓದಿದರೆ ಸಾಕು ಆಕಿ ಓಡಿಕೋತ ಬರತಾಳ''[೬] ಎಂದಾಗ ಪಟ್ಟಣಶೆಟ್ಟರು ಕಣ್ಣಲ್ಲಿ ನೀರು ತುಂಬಿಕೊಂಡು ವಿಷಾದದ ನಗೆ ಬೀರಿದ್ದರಂತೆ. ಸಹೃದಯರ ಆಳಕ್ಕಿಳಿದು ಪರಿಣಾಮವನ್ನುಂಟುಮಾಡಬಲ್ಲ ಶಕ್ತಿ ಈ ಕಾವ್ಯಗಳಿಗಿದೆ.

ಕನ್ನಡದ ನವ್ಯ ಕವಿಗಳಲ್ಲಿ ಪ್ರಮುಖರೆಂದು ಒಳ್ಳೆಯ ಹೆಸರನ್ನು ಗಳಿಸಿದ ಪಟ್ಟಣಶೆಟ್ಟರು, 'ನೀನಾ'ದ ಮೂಲಕ ಕಾವ್ಯ ಜಗತ್ತಿಗೆ ಒಳ್ಳೆಯ ಕೊಡುಗೆ ನೀಡಿದರು. ಪ್ರೊ.ಅಬ್ದುಲ್ ಮಜೀದ್‌ಖಾನ್ ಅವರು ಹೇಳುವಂತೆ.

''ತರುಣಾವಸ್ಥೆಯ ವ್ಯಕ್ತಿಯೊಬ್ಬನ ಮನದ ತುಡಿತಗಳನ್ನು ಆಸೆ-ನಿರಾಸೆಗಳನ್ನು ಕಲ್ಪನೆಗಳ, ಕನಸುಗಳ ಸಾಕ್ಷಾತ್ಕಾರಕ್ಕಾಗಿ ಹಂಬಲಿಸುವ ಭಾವನಾ ತೀವ್ರತೆಯನ್ನು ಸಹಜ ಶೈಲಿಯಲ್ಲಿ ಅಭಿವ್ಯಕ್ತಿಗೊಳಿಸುವ ವಸ್ತುವುಳ್ಳ ಕವಿತೆಗಳ ಸಂಕಲನವಾದುದರಿಂದ 'ನೀನಾ' ವೈಯಕ್ತಿಕ ಅನುಭವ ಅನಿಸಿಕೆಗಳನ್ನು ವೈಯಕ್ತಿಕ ಸ್ತರದಿಂದ ಎತ್ತರಿಸಿ ಸಾರ್ವತ್ರಿಕ ಸ್ತರಕ್ಕೆ ತಲುಪಿಸುತ್ತದೆ. ಕವನವೊಂದನ್ನು ಓದಿದಾಗ ಸಹೃದಯಿಯಾದವನು ಅದು ತನ್ನದೇ ಆದ ಅನುಭವ ಅನಿಸಿಕೆಯಾಗಿದೆ; ಎಂದುಕೊಳ್ಳುವಂತಹ ಪರಿಣಾಮವನ್ನುಂಟುಮಾಡುವ ಶಕ್ತಿಯಲ್ಲಿ ಕವನದ ಸಫಲತೆ ಮತ್ತು ಸಾರ್ಥಕತೆ ಅಡಗಿರುತ್ತದೆ. 'ನೀನಾ'ದ ಬಹುತೇಕ ಕವನಗಳು ಓದುಗನಲ್ಲಿ ಅಂತಹ ಪ್ರತಿಕ್ರಿಯೆಯನ್ನುಂಟುಮಾಡುವ ಗುಣವುಳ್ಳವು. ಯೌವನ ಸಹಜ ಅವಸರ ಆತುರಗಳು, ಮನದ ಚಂಚಲತೆಗಳು, ಹಂಬಲಗಳು, ಪ್ರಿಯತಮೆಯನ್ನು ಪಡೆಯಲು ಎಂತಹ ಸಾಹಸವನ್ನಾದರೂ ಕೈಗೊಳ್ಳುವ ಛಲವನ್ನು ಪ್ರಕಟಿಸುವೆ. ಕವನ ಸಂಕಲನ 'ನೀನಾ' ತರುಣ ಹೃದಯಗಳ ತುಡಿತಗಳನ್ನು ಸೆರೆಹಿಡಿದಿರುವ ಪ್ರಾತಿನಿಧಿಕ ಸಂಕಲನವಾಗಿದೆ.''[೭]

ಸಿದ್ಧಲಿಂಗ ಪಟ್ಟಣಶೆಟ್ಟರು ವಿರಹ, ವಿಷಾದ, ವೇದನೆಗಳಂತಹ ಒಂದೇ ತೆರನಾದ ಭಾವವನ್ನು ಇಟ್ಟುಕೊಂಡು 'ನೀನಾ' ಸಂಕಲನದ ಎಲ್ಲಾ ಕವನಗಳನ್ನು ರಚಿಸಿರುವುದು ಒಂದು ವಿಶಿಷ್ಟ ಸಾಧನೆಯಾಗಿದೆ. ಇಂತಹ ಸಂದರ್ಭದಲ್ಲಿ ಕವಿ ಭಾಷೆಯನ್ನು ಬಳಸಿಕೊಳ್ಳುವಲ್ಲಿ ಬಹಳ ಜಾಗರೂಕನಾಗಿರಬೇಕಾಗುತ್ತದೆ. ಇಲ್ಲದಿದ್ದರೆ ಭಾಷೆಯ ಏಕತಾನತೆಯಿಂದ ಪದ್ಯಗಳು ಯಶಸ್ವಿಯಾಗುವುದಿಲ್ಲ. ಈ ದೃಷ್ಟಿಯಿಂದ ಪಟ್ಟಣಶೆಟ್ಟರು ಭಾಷೆಯನ್ನು ಸಮರ್ಥವಾಗಿ ದುಡಿಸಿಕೊಂಡಿದ್ದಾರೆ. ಪ್ರೊ.ಸಿ. ನಾಗಣ್ಣನವರು ಉಲ್ಲೇಖಿಸಿರುವ ಶಂಕರ್ ಮೊಕಾಶಿ ಪುಣೇಕರ ಅವರ ಅಭಿಪ್ರಾಯ ಈ ರೀತಿಯಾಗಿದೆ. ''ಕನ್ನಡ ಕಾವ್ಯದಲ್ಲಿ ಈವರೆಗಿನ ಸಂಗ್ರಹಗಳಲ್ಲಿ ಯಾವವೂ ಒಂದೇ ಒಂದು ಉತ್ಕಟ ಭಾವನೆಯ ಅಭಿವ್ಯಕ್ತಿಯಾಗಿ ಬಂದಿರಲಿಲ್ಲ. ಆ ಭಾವನೆಯನ್ನು ಇಷ್ಟೊಂದು ಉತ್ಕಟವಾಗಿ, ವಿಷದವಾಗಿ, ತೀಡಿದುದು ಕೌತುಕದ ವಿಷಯ ನಿರಂತರವಾದ, ಏಕಮುಖವಾದ ಅನುರಾಗವನ್ನೇ ವಸ್ತುವಾಗಿಟ್ಟುಕೊಂಡ ಅಖಂಡ ಸಂಕಲನವಿದು. ಈ ಬಗೆಯ ಭಾವನೆಗೆ ಭಾಷೆಯ ಪರಿಪಾಕವು ಬಹಳ ಬೇಕಾಗಿರುತ್ತದೆ. ಕನ್ನಡ ಭಾಷೆಗೆ ಈ ಸಂಸ್ಕಾರವಿಲ್ಲ. ಆದರೆ ಪಟ್ಟಣಶೆಟ್ಟರು ಇದ್ದಬಿದ್ದ ಭಾಷೆ ಸಂಸ್ಕಾರಗಳನ್ನೇ ಅಳವಡಿಸಿಕೊಂಡು ಈ ಸಾಹಸಕ್ಕೆ ಮೊದಲು ಮಾಡಿದ್ದು ಸ್ವಾಗತಾರ್ಹವಾಗಿದೆ. ದೇಶೀಯ ಹದ ಆಗಾಗ ಪಟ್ಟಣಶೆಟ್ಟಿಯವರಿಗೆ ನೆರವಾದಾಗ ಸಾಲುಗಳು ಚಕಿತಗೊಳಿಸುತ್ತವೆ. ಆದರೆ ಒಂದೇ ಈ ಅನುರಾಗಕ್ಕೆ ಇದು ಸಾಲದು ಅದಕ್ಕೆ ಸಾಕಷ್ಟು ಅಭಿಜಾತತೆ, ಪ್ರತ್ಯೇಕತೆ, ಅತಿರೇಕಗಳ ಸಂಸ್ಕಾರವೂ ಭಾಷೆಯಲ್ಲಿಯೇಬೇಕು''[೮]

ಪಟ್ಟಣಶೆಟ್ಟಿಯವರ ಕವನಗಳ ಭಾಷೆಯನ್ನು ಕುರಿತು ಮುನ್ನುಡಿಯನ್ನು ಬರೆದಿರುವ ಕೆ.ಎಸ್.ನರಸಿಂಹಸ್ವಾಮಿಯವರು ಈ ರೀತಿ ಸಲಹೆ ನೀಡಿದ್ದಾರೆ. ''ಈ ನವಕವಿಗೆ ಉಜ್ವಲವಾದ ಭವಿಷ್ಯವಿದೆ. ಆದರೆ ಈ ಕವನಗಳಲ್ಲಿ ಸ್ವಲ್ಪ ಮಿತಿಮೀರಿ ಇಂಗ್ಲೀಷ್ ಪದಗಳು ತಲೆಹಾಕಿವೆ ಎನ್ನಬೇಕಾಗಿದೆ. ಇದರಿಂದ ಒಂದಿಷ್ಟು ಹೊಸತನ ಬರಬಹುದಾದರೂ ಶೈಲಿಯ ಹದಗೆಡುವ ಸಾಧ್ಯತೆಯಿದೆ. ಇದು ಕೇವಲ ತಂತ್ರಕ್ಕೆ ಸಂಬಂಧಿಸಿದ ಟೀಕೆ ಎನ್ನಬಹುದು. ಆದರೆ ಹೊಸತನ ತಿರುಳಿನಿಂದ ಬರುವುದೇ ಹೊರತು ತಂತ್ರದಿಂದಲ್ಲ. ಕವಿಯ ಗಮನ ಇತ್ತ ಹರಿದರೆ ಒಳಿತು.''[೯]

ಜಗತ್ತಿನ ಬಹುತೇಕ ಸಾಹಿತ್ಯಕ್ಕೆ ಸ್ಫೂರ್ತಿತನಗಿಂತ ಮುಂಚಿನ ಸಾಹಿತ್ಯದಿಂದಲೇ ಬಂದಿರುವುದನ್ನು ಕಾಣಬಹುದಾಗಿದೆ. ಸಾಹಿತಿಯಾದವನು ಒಳ್ಳೆಯ ಮನಸ್ಸಿನಿಂದ ಸ್ವೀಕರಿಸಿ ತನ್ನ ಪ್ರತಿಭೆಯ ಮೂಸೆಯಲ್ಲಿ ಹೊಸದೊಂದನ್ನು ನಿರ್ಮಿಸುತ್ತಾನೆ. ಇದು ಅಪಹರಣದಲ್ಲಿ ಸ್ವೀಕರಣ ಮಾತ್ರವೆಂಬುದು ಹಿರಿಯರ ಅಭಿಪ್ರಾಯ. ಹಳೆ ಮೈಸೂರು ಪ್ರಾಂತ್ಯದ ತೀನಂಶ್ರೀ, ಕುವೆಂಪು, ಮುಂತಾದವರಿಗೆ ಆಂಗ್ಲ ಸಾಹಿತ್ಯ ಪ್ರಭಾವ ಬೀರಿರುವುದನ್ನು ಅನೇಕರು ಗುರುತಿಸಿದ್ದಾರೆ. ಇದರಿಂದ ಕನ್ನಡದಲ್ಲಿ ಹೊಸಬಗೆಯ ಸಾಹಿತ್ಯ ರಚನೆಗೆ ಪ್ರೇರಕ ಶಕ್ತಿಯಾಯಿತು. ಆದರೆ ಉತ್ತರ ಕರ್ನಾಟಕದ ಅನೇಕ ಕವಿಗಳ ಮೇಲೆ ಜನಪದ ಸಾಹಿತ್ಯ ಮತ್ತು ಜಾನಪದ ಭಾಷೆಯ ಪ್ರಭಾವ ಬೀರಿದೆ. ಸಾಹಿತ್ಯ ರಚನೆಗೆ ಸ್ಫೂರ್ತಿಯೂ ಆಗಿದೆ. ದ.ರಾ. ಬೇದ್ರೆ, ಮಧುರ ಚೆನ್ನ, ಚಂದ್ರಶೇಖರ ಕಂಬಾರ ಮುಂತಾದ ಕವಿಗಳ ಕವನಗಳಲ್ಲಿ ಈ ಅಂಶ ಹೆಚ್ಚಾಗಿ ಕಂಡುಬರುತ್ತದೆ. ಪಟ್ಟಣಶೆಟ್ಟರು ಈ ರೀತಿಯಲ್ಲಿ ತಕ್ಕಮಟ್ಟಿಗೆ ಜನಪದದ ಪ್ರಭಾವಕ್ಕೆ ಒಳಗಾಗಿರುವುದು ಕಂಡುಬರುತ್ತದೆ.

ಶ್ರಾವಣದ ಸಳಕುಗಳು ಗಾಳ್ಯಾಗ ಹರಿದಾಂಗ
ತಡತಡದ ಬರುತೈತೆ ನೆನಪು ನನಗ
ಬೆಂಕೀನ ನುಂಗೇನು ಬೆಳತನಕ ಕುಂತೇನು
ಮೈಯಲ್ಲಿ ಸುಣ್ಣದ ಭಟ್ಟಿ ಆತ.

(ಸಳಕು)

ಚೆನ್ನ! ನಿನ್ನ ಕಣ್ಣಾಗ ಮೂಡಿದ್ದ ನನಗೊಂಬಿ
ಮ್ಯಾಣ ಕರಗಿದ ಹಂಗ ಕರಿಗಿತೇನ
ನಿನ್ನ ಕಣ್ಣೀರಾಗ, ನನ್ನ ಮಣ್ಣಿನ ಮೂರ್ತಿ
ಮುಖದ ಕಳಿ ಕಳಕೊಂಡ ಬರಗೀತೆನ?

(ಹೀಗಾಯಿತೇನ)

ಇಲ್ಲಿ ಉತ್ತರ ಕರ್ನಾಟಕದ ಜಾನಪದ ಭಾಷೆ ಬಳಕೆಯಾದರೂ ಭಾವಮಾತ್ರ ಬದಲಾಗಿಲ್ಲ.

ಕವಿಗೆ ನೋವಿನ ಭಾವ ಮತ್ತೆ ಮತ್ತೆ ಕಾಡುವುದೇ ಒಂದು ದೊಡ್ಡ ಚಿಂತೆಯಾಗಿದೆ. ಚಿಂತಿಸಿದಷ್ಟೂ ಅದು ಹೆಚ್ಚಾಗಿದೆ. ಚಿಂತೆಯೇ ಕಾವ್ಯವಾಗಿದೆ.

ಪಟ್ಟಣಶೆಟ್ಟರು ಪ್ರತಿಮೆಗಳನ್ನು ಬಳಸುವುದರಲ್ಲಿ ಸಿದ್ಧಹಸ್ತರು. ಇವರ ಯಾವುದೇ ಕವನಗಳನ್ನು ನೋಡಿದರೂ ಪ್ರತಿಮೆಗಳು ವಿಪುಲವಾಗಿವೆ. ತನಗರಿವಿಲ್ಲದಂತೆ ಪದಗಳಲ್ಲಿ ಸಾಲುಗಳು, ನುಡಿಗಳು ಪ್ರತಿಮೆಗಳಾಗಿವೆ. ರಾಮಮ್ಮ ಕ್ಯಾತನಹಳ್ಳಿ ಅವರು ಅಭಿಪ್ರಾಯಪಡುವಂತೆ ''ನೀನಾ ಉಪಮೇಗಳ ಪ್ರತಿಮೆಗಳ ಮಹಾಪೂರ; ಬಹುಶಃ ಇದರ ಸತ್ವವೇ ಪ್ರತಿಮೆಗಳಲ್ಲಿ ಅಡಗಿದೆ. ಹೇಳುವ ಪ್ರತಿಯೊಂದು ಮಾತನ್ನು ಪ್ರತಿಮೆಗಳ ಮೂಲಕ ಹೇಳುವುದು

ಪಟ್ಟಣಶೆಟ್ಟಿಯವರ ವೈಶಿಷ್ಟ್ಯವಾಗಿದೆ. ಪ್ರತಿಮೆಗಳಿಲ್ಲದಾಗಲೂ ಲೀಲಾಜಾಲವಾಗಿ ಪಟಪಟನೆ ಪುಟಿದೇಳುವ ಶಬ್ದಗಳ ಸಮೂಹವೇ ಒಂದು ರೀತಿಯಲ್ಲಿ ಪ್ರತಿಮಾವತಾರಿಗಳಾಗಿ ಬಿಡುತ್ತವೆ.''[೧೦]

ಅಶ್ರು ಅಭ್ಯಂಜನ, ಭಾವಕುಂಚ, ಎದೆಯ ಬಿಳಿಹಾಳೆ, ಅಗ್ನಿಕನ್ಯೆ, ಉರಿದ ಬೇಗೆಯ ಮೇಲೆ ಮಳೆಯು ಹೊಯ್ದಂತೆ, ನಿತ್ಯ ಸುಡುತಿರುವೆ ಹಸಿಬಾಳೆಯ ದಿಂಡಿನೊಳು ಹೀಗೆ ಪರಿಣಾಮಕಾರಿಯಾಗಿ ಬಳಕೆಯಾಗಿವೆ.

ಅನ್ಯರ ಪ್ರಭಾವಕ್ಕೆ ಒಳಗಾಗದಂತೆ ಕನ್ನಡ ಸಾರಸ್ವತ ಲೋಕಕ್ಕೆ ಹೊಸ ಬಗೆಯ ಕವನಗಳನ್ನು 'ನೀನಾ'ದ ಮೂಲಕ ಸಿದ್ಧಲಿಂಗ ಪಟ್ಟಣಶೆಟ್ಟರು ನೀಡಿದಾಗ ಅನೇಕರು ಸ್ವಾಗತಿಸಿದರು. ಓದುಗಲೋಕ ಮೆಚ್ಚಿಕೊಂಡಿತು. ವಿಮರ್ಶಕರು ಪ್ರತಿಕ್ರಿಯಿಸಿದರು. ಅನೇಕ ಸಾಹಿತಿಗಳಿಗೆ ಇವರ ಕವನಗಳು ಒಂದೊಂದು ತೆರನಾಗಿ ಕಂಡುಬಂದವು. ಕಟ್ಟಿಮನಿಯವರಿಗೆ ಮುತ್ತಾಗಿ, ಲಂಕೇಶರಿಗೆ ಭಾಷೆ ಪ್ರತಿಮೆಗಳ ತೇಜಸ್ವಿಯಾಗಿ, ಪು.ತಿ.ನ ಅವರಿಗೆ ಶೈಲಿಯಾಗಿ ವೀ.ಸಿ.ಅವರಿಗೆ ಭಾವಪೂರಕ ಕಲ್ಪಕಗಳಾಗಿ, ಅಕಬರಲಿ ಅವರಿಗೆ ಪ್ರಾಮಾಣಿಕ ಭಾಷಾ ಶೈಲಿಯಾಗಿ, ನಿಸಾರ್ ಅಹಮದ್ ಅವರಿಗೆ ಪ್ರತಿಭಾ ಸಾಮರ್ಥ್ಯವಾಗಿ, ಸುಮತೀಂದ್ರ ನಾಡಿಗರಿಗೆ ಅಸಾಧಾರಣತೆಯಾಗಿ, ಕಣವಿಯವರಿಗೆ ಭಾಷೆ ಶೈಲಿ ಛಂದಸ್ಸುಗಳಾಗಿ, ಮೊಕಾಶಿಯವರಿಗೆ ಕಾವ್ಯ ಶಕ್ತಿಯಾಗಿ ಹೀಗೆ ಒಬ್ಬೊಬ್ಬರ ಕಣ್ಣಿಗೆ ವಿಶಿಷ್ಟವಾಗಿ ಕಂಡುಬಂದಿದೆ. 'ನೀನಾ' ಕನ್ನಡ ಕಾವ್ಯಲೋಕದಲ್ಲಿ ಉತ್ಕಟವಾದ ಭಾವ, ಪ್ರತಿಮೆ, ಶೈಲಿಗಳಿಂದ ವಿಶಿಷ್ಟವಾದ ಸ್ಥಾನಗಳಿಸಿಕೊಂಡಿದೆ.

**೨. ಔರಂಗಜೇಬ ಮತ್ತು ಇತರ ಕವನಗಳು**

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಎರಡನೆಯ ಕವನ ಸಂಕಲನ ಔರಂಗಜೇಬ ಮತ್ತು ಇತರ ಕವನಗಳು. ೧೯೬೭ರಲ್ಲಿ ಇದು ಪ್ರಕಟವಾಯಿತು. 'ನೀನಾ' ಪ್ರಕಟಿಸಿದ ನಂತರ ಮೂರುವರೆ ವರ್ಷಗಳ ಅವಧಿಯಲ್ಲಿ ಬರೆದ ಕವನಗಳು ಈ ಸಂಕಲನದಲ್ಲಿವೆ. ಸ್ವತಃ ಕವಿಗಳೇ ಆಯಾ ವರ್ಷಗಳಲ್ಲಿ ರಚಿಸಿದ ಕವನಗಳನ್ನು ವಿಂಗಡಿಸಿ ಕೊಟ್ಟಿದ್ದಾರೆ. ಪ್ರಥಮ ಕವನ ಸಂಕಲನವಾದ 'ನೀನಾ' ೧೯೬೪ ರಲ್ಲಿ ಪ್ರಕಟಿಸಿದ ನಂತರ ಅದೇ ವರ್ಷದಲ್ಲಿ ಬರೆದ ಆರು ಕವನಗಳು, ೧೯೬೫ರಲ್ಲಿ ಬರೆದ ೧೦ ಕವನಗಳು, ೧೯೬೬ರಲ್ಲಿ ಬರೆದ ಆರು ಕವನಗಳು, ೧೯೬೭ರಲ್ಲಿ ಬರೆದ ಐದು ಕವನಗಳು ಈ ಸಂಕಲನದಲ್ಲಿವೆ. ಒಟ್ಟು ಇಪ್ಪತ್ತೇಳು ಕವಿತೆಗಳು ಈ ಸಂಕಲನದಲ್ಲಿವೆ.

'ನೀನಾ' ಕವನ ಸಂಕಲನದ ಕವಿಗೂ ಇಲ್ಲಿನ ಕವಿಗೂ ಬಹಳ ವ್ಯತ್ಯಾಸಗಳಿವೆ. 'ನೀನಾ'ದ ಕವನಗಳಲ್ಲಿ ಉಕ್ಕಿ ಬಂದಿರುವ ಉತ್ಕಟವಾದ ಭಾವನೆಗಳು ಇನ್ನೂ ಹಸಿಹಸಿಯಾಗಿವೆ. ಡಾ. ಶಾಂತಿನಾಥ ದೇಸಾಯಿಯವರು ಹೇಳುವ ಹಾಗೆ ''ನೀನಾದಲ್ಲಿ ಕಾವ್ಯವನ್ನು ಉಪಯೋಗಿಸುತ್ತಿದ್ದ ಕವಿ ಇಲ್ಲಿ ಕಾವ್ಯ ಬರೆಯ ತೊಡಗಿದ್ದಾರೆ. 'ನೀನಾ'ದಲ್ಲಿ ಯೌವನದ ಸಹಜ ಭಾವನೆ, ಸಮಸ್ಯೆ, ಯಾತನೆಗಳೊಡನೆ ಚೆಲ್ಲಾಟವಾಡುತ್ತಾ ಕಾವ್ಯವನ್ನು ರಚಿಸಿದರೆ, ಇಲ್ಲಿ ಕವಿ ತಣ್ಣಗಾಗಿದ್ದಾನೆ. ಆವೇಶಗಳನ್ನು ಅದುಮಿ ಹಿಡಿದುಕೊಂಡ ನಂತರ ಮನದ ಭಾವನೆಗಳನ್ನು ಅಭಿವ್ಯಕ್ತಪಡಿಸುತ್ತಾನೆ.''[೧೧] ಇಲ್ಲಿಯ ಪ್ರೇರಕ ಪ್ರಜ್ಞೆಗಳಲ್ಲಿ ಬದಲಾವಣೆಯಾಗಿದೆ. ಕಾವ್ಯ ಶಿಲ್ಪ ಪ್ರತಿಮಾ ವಿಧಾನಗಳ ಬಗ್ಗೆ ಕಲಾಪ್ರಜ್ಞೆ ಬೆಳೆದಿದೆ. ಇಲ್ಲಿ ಅನುಭವಿಸಿದ ಬಿಸಿ ಆರಿದ ನಂತರ ಅದನ್ನು ಸ್ವಲ್ಪ ದೂರದಿಂದ, ಶಾಂತತೆಯಿಂದ, ಆದಷ್ಟು ತಟಸ್ಥತೆಯಿಂದ, ನಿರ್ಲಿಪ್ತತೆಯಿಂದ ಅಂದರೆ ಪ್ರೌಢತ್ವದಿಂದ ನೋಡಿ, ಪರೀಕ್ಷಿಸಿ ರೂಪಿಸಿಡುವ ಯತ್ನವಿದೆ. ಇದಕ್ಕೆ ಮುಖ್ಯಕಾರಣ ಬಹುಶಃ ಕವಿಯ ವ್ಯಕ್ತಿತ್ವಕ್ಕೆ ಅಷ್ಟೇ ಅಲ್ಲದೆ ಅವನ ಜೀವನಕ್ಕೆ ಒದಗಿಬಂದ ಸ್ಥೈರ್ಯವೆನ್ನಬಹುದು. ಕವಿಗೆ ಹಿಂದಿನ

ದುಃಖ ಇಂದಿನ ಸಂಪತ್ತಾಗಿದೆ. ಹಿಂದಿನ ವೇದನೆ ಇಂದಿನ ತಿಳುವಳಿಕೆಯಾಗಿದೆ. ಈಗ ಕವಿ ಹಳೆಯ ದುಃಖಗಳನ್ನು ಅರಗಿಸಿಕೊಂಡು ನಗುವ ಕಲೆ ಕಲಿತಿದ್ದಾನೆ. ದುಃಖಗಳನ್ನು ಕಾಲತಾಳಕ್ಕೆ ಹಾಕಿ ಸೈಕಲ್ ಲೋಕದ ರಾಜಮಾರ್ಗದ ಮೇಲೆ ರಾಜಕುವರನ ಠೀವಿಯಲ್ಲಿ ಪ್ರೌಢಿಮೆಯಿಂದ ನಡೆಯಬಲ್ಲವನಾಗಿದ್ದಾನೆ. ಕವಿಯ ಜೀವನದಲ್ಲಿಯೂ ಕತ್ತಲೆ ಹೋಗಿ ಮಂಜುಕರಗಿ, ಹೊಸ ಕನಸು ಬಂದಿದೆ. ದುಃಖ ದುಃಖವನ್ನಪ್ಪಿ ಸುಖವಾಗಿದೆ. ಅವನ ಅವಳ ಕತೆ ಒಂದಾಗಿದೆ. ವ್ಯಥೆ ಕೂಡಾ ಕೊನೆಗೆ ಮಿಣುಕು ನಗೆ ತೋರಿಸುವ ಹಾದಿಯಾಗಿದೆ.

ಕವಿ ತನ್ನ ಮೊದಲ ಸಂಕಲನವಾದ 'ನೀನಾ'ದಲ್ಲಿಯ ಭಾವ ತನ್ಮಯತೆಯಿಂದ ಹೊರಗೆ ಬಂದಿರುವುದನ್ನು ಗುರುತಿಸಿಕೊಂಡಿದ್ದಾನೆ. ತಾನು ಮಾಡಿದ್ದು ಮಾಡುತ್ತಿರುವುದು ಯೋಚಿಸುತ್ತಿರುವುದು ಸರಿಯೇ? ತಪ್ಪೇ? ಎಂದು ಸ್ವವಿಮರ್ಶೆಮಾಡಿಕೊಳ್ಳುತ್ತಾನೆ. ತಪ್ಪುಗಳನ್ನು ಯಾವ ಮುಲಾಜಿಗೆ ಒಳಗಾಗದೆ ಒಪ್ಪಿಕೊಳ್ಳುತ್ತಾನೆ. ತಾನು ಈ ಮೊದಲು ಬರೆದ ಕವನಗಳನ್ನು ಕುರಿತು ತಾತ್ಸಾರದ ಮಾತುಗಳನ್ನಾಡುತ್ತಾನೆ. ಇದನ್ನು 'ನಾನು' ಎನ್ನುವ ಕವನದಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ.

ಪೆಂಡಿ ಪೆಂಡಿ ಅನುಭವ ತಂದು
ಹರವಿ ಚೆಲ್ಲಾಪಿಲ್ಲಿ ಮನಬಂದಂತೆ
ಪ್ರತಿಮೆ ಶಬ್ದ ಬಣವೆಯ ಮೇಲೆ
ಏನೇನೋ ಗುಣಗುತ್ತ ವಟಗುಟ್ಟುತ್ತ
ಹೊರಳಾಡಿದವ
ಉದ್ಗಾರ ವಾಚಕವೇ ಕಾವ್ಯ
ವೆಂದವ

ಹೀಗೆ ತನ್ನ ಕವನಗಳ ಬಗ್ಗೆ ಉಪವಾಸಮಾಡುವ ಕವಿಗೆ ತನ್ನ ತನದ ಬಗ್ಗೆ ಇರಿವಿದೆ. ಜೀವನದಲ್ಲಿ ಸವಾಲುಗಳನ್ನು ಸ್ವೀಕರಿಸಿ; ಸರ್ವಾಂಗ ಸುಂದರವಾಗಿ ಶಕ್ತಿತುಂಬಿಕೊಂಡು ನಿಂತ ವ್ಯಕ್ತಿತ್ವದಂತೆ ಕಂಡರೂ 'ನಾನು' ಯಾರು ಎಂಬ ಸ್ಪಷ್ಟ ತಿಳುವಳಿಕೆ ಕವಿಗೆ ಗೊತ್ತಿದೆ. ನಾನು ಯಾರೆಂದರೆ

ಅದು ಇದು ತುರುಕಿ ವಿವರಣೆಗಳಿಂದ ಹೊಲಿದ
ಗೋಣಿ ಚೀಲ
ಸಿಕ್ಕಲ್ಲಿ ಸಿಕ್ಕಿದ್ದು ಹೊಡೆದು ಹುಸಿನಕ್ಕ ಭಟ್ಟರ
ಹೊಟ್ಟೆ.

ಪ್ರೀತಿಗಾಗಿ ಹಂಬಲಿಸಿ ವೇದನೆ, ಜಿರಕಿ, ಚಪ್ಪಲಿಮೆಟ್ಟಿ, ಹರಗಾಡಿ ದಣಿಯುವ, ಎಂದು ಹೇಳುತ್ತ ಪ್ರೀತಿ ಮತ್ತು ಅದರಿಂದ ದೊರಕುವ ಯಾತನೆ ಕವಿ ಕಾವ್ಯದ ಅವಿಭಾಜ್ಯ ಅಂಗವಾಗಿದ್ದರೂ, ಕವಿ ಮಾತ್ರ ಮತ್ತೆ ಪ್ರೀತಿಸುವುದನ್ನು ಬಿಡಲಾರ. ಕವಿಯ ಪ್ರೀತಿ ನಿಷ್ಕಲ್ಮಷ ಮತ್ತು ಪಾವಿತ್ರ್ಯತೆಯಿಂದ, ಮನಸು ಸರಳ ಮತ್ತು ಮುಗ್ಧತೆಯಿಂದ ಕೂಡಿದೆ. ಕಾರಣ ಮತ್ತೆ ಮತ್ತೆ ನಾನು ಕವನದಲ್ಲಿ ಪ್ರೀತಿಯ ಭಿಕ್ಷೆ ಬೇಡುತ್ತಾರೆ.

ಅನ್ನ ಬಿಟ್ಟು

ಜೀವಂತ

ಪ್ರೀತಿಸೆನ್ನನೆಂದು

ಪ್ರೀತಿಯನ್ನೇ ಕಾಡಿ ಬೇಡಿದವ

ಪ್ರೀತಿ ವಿಫಲವಾಗಿ ಯಥಾಪ್ರಕಾರ ಕವಿ ನೋವು ಅನುಭವಿಸುತ್ತಾನೆ. ತನ್ನ ಎಳೆ ಮನಸಿಗೆ ಬಳೆತೊಟ್ಟು ಬದುಕಲು ಪ್ರಯತ್ನಿಸುತ್ತಾನೆ. ಜೊತೆಜೊತೆಗೆ ನಾನು ಏನಾಗಿದ್ದೆನೆಂಬ ನೆನಪೂ ಇದೆ. ಆ ನೆನಪು ಭಯಂಕರ ಮತ್ತು ವಾಸ್ತವವಾಗಿದೆ.

ಕಾಳ ರಾತ್ರಿಯನ್ನರೆದು ಕುಡಿದು

ವೀರ್ಯ ಸಾಗರವೇ ಸ್ಖಲಿತವಾಗಿ ಇಚ್ಛೆ

ಮುಕ್ಕಾಗಿ, ಮಚ್ಚೆಯ ಕೊಳಕು ಅಟ್ಟೆಯಾಗಿ

ಗುರಿಸುಟ್ಟ ಹದ್ದಾಗಿ ಮಣ್ಣು ಮುಕ್ಕಿದವ

ನಾನು.

ನಾನು ಎನ್ನುವ ಕವಿ ವ್ಯಕ್ತಿತ್ವ ಸಂಪೂರ್ಣವಾಗಿ ಸೋಲುಂಡಿದೆ. ಜೀವನವೇ ಸೋಲಾಗಿದೆ. ಇಷ್ಟೇಲ್ಲಾ ಆದರೂ ಹೊಸ ಬಗೆಯ ಹುಡುಕಾಟ ನಿರಂತರವಾಗಿ ಮುಂದುವರಿಯುವ ಸೂಚನೆ ಈ ಕವನದಲ್ಲಿದೆ. ಇದನ್ನೇ ರಾಮಣ್ಣ ಕ್ಯಾತನಹಳ್ಳಿ ಇವರು ಹೇಳಿರುವಂತೆ ''ಇಷ್ಟಾದರೂ ಪೂರ್ಣ ಚಿತ್ರ ಇಲ್ಲಿಲ್ಲ, ಎಂಬ ಭಾವದಲ್ಲಿ ಕವನ ಮುಗಿಯುವುದರೊಂದಿಗೆ ಈ ನಾನು ಎಂಬ ವ್ಯಕ್ತಿತ್ವ ಮತ್ತೆ ನಿಗೂಢವಾಗಿ ಕುತೂಹಲವಾಗಿ ನಿಂತು ಬಿಡುವುದೆ ಶ್ರೇಷ್ಠ ಗುಣವಾಗುತ್ತದೆ.''[೨]

ಪುರಾಣಗಳನ್ನೇ ಬರೆಯ ಬೇಕಾದೀತು

ಬರುವ ಯುಗ ಯುಗಕ್ಕೆ

ನನ್ನನ್ನು ತಳಿಸಿ ಹೇಳುವುದಕ್ಕೆ

ಸಮಾಜ ಮುಖಿಯಾಗಿರುವ ಕವಿ ಸಮಾಜದಲ್ಲಿನ ಲೋಪದೋಷಗಳನ್ನು ಕಂಡು ದಂಡಿಸುತ್ತಾನೆ. ತನ್ನ ಜೊತೆ ಬಂದರೆ ಸಮಾಜದಲ್ಲಿನ ಅಚಾತುರ್ಯಗಳನ್ನು ತೋರಿಸುತ್ತಿದ್ದೆ ಎಂದು ಹೇಳುತ್ತಾನೆ. ನನ್ನೊಡನೆ ಬಂದಿದ್ದಾರೆ. ಎನ್ನುವ ಕವನದಲ್ಲಿ ತನಗಾದ ನೋವುಗಳ ಜೊತೆ ಜೊತೆಗೆ ಸಮಾಜದ ಅಂಕುಡೊಂಕುಗಳನ್ನು ಕುರಿತು ಹೇಳುತ್ತಾರೆ. ಬದುಕಿನ ಹಲವಾರು ಮಗ್ಗಲುಗಳನ್ನು ತೋರಿಸುವ ಈ ಕವನ ಸಮಾಜವನ್ನು ಟೀಕಿಸಿದೆ.

ನನ್ನೊಡನೆ ಬರದಂತೆ ನಿನ್ನನ್ನು ತಡೆದಿದ್ದ

ನಿನ್ನ ಮನೆ ಹೊರಗೆ ಅಂಡಲೆಯುತ್ತಿರುವ

ಉಂಡಲೆಯುತ್ತಿರುವ

ಈ ಊರ ನಾಗರೀಕತೆಯ ಕರಿ ಉಸಿರು

ನಿನಗೆ ತಟ್ಟಿಸುತ್ತಿದ್ದೆ

ಸಂಜೆ

ಹೃದ್ಬಂಜೆತನದ ಹರಕು ಪಂಚೆ

ತಮ್ಮ ಜಿಡ್ಡು ದೇಹಕ್ಕೆ ಸುತ್ತಿಕೊಂಡ ಕಾಮುಕ ಗಂಡುಗಳ ದಂಡು

ನಿನ್ನನ್ನು ಕಂಡು ಹೀಗೆ ಹರಿಹಾಯುತ್ತಿದ್ದವೆಂದು

ನಿನಗೆ ರಾವುಗನ್ನಡಿ ಹಿಡಿದು ತೋರಿಸುತ್ತಿದ್ದೆ.

ಈ ಪದ್ಯ ಭಾಗದಲ್ಲಿನ 'ಹೃದ್ಬಂಜೆತನ' ಹರಕುಪಂಚೆ, ಜಿಡ್ಡುದೇಹ, ರಾವುಗನ್ನಡಿ ಮುಂತಾದ ಶಬ್ದಸಮೂಹಗಳು ತಮ್ಮ ಉದ್ದೇಶದ ಜೊತೆಗೆ ಸಾಮಾಜಿಕ ಸ್ಥಿತಿಗತಿಗಳನ್ನು ಯಶಸ್ವಿಯಾಗಿ ಹೇಳುತ್ತವೆ.

ಕವಿ ಮನಸು ಬಹಳ ಮೃದುವಾಗಿದೆ. ಆದ್ದರಿಂದಲೇ ಸಣ್ಣ ತೊಂದರೆಗಳಿಗೆ ಸಿಕ್ಕರೂ ಬಹಳ ಘಾಸಿಗೊಳಗಾಗುತ್ತದೆ. ಮೌಲ್ಯಗಳನ್ನೇ ಕಳೆದುಕೊಂಡ ಸಮಾಜದಲ್ಲಿ ಅನ್ಯಾಯ, ಅಧರ್ಮಗಳು ಸಹಜ ಇದರಿಂದ ಕವಿಗೆ ಬಹಳ ನೋವಾಗಿದೆ. ಯಾರೇ ಆಗಲಿ ತಮ್ಮಲ್ಲಿ ಹೆಚ್ಚಾಗಿರುವುದನ್ನು ಇನ್ನೊಬ್ಬರಿಗೆ ಕೊಡುತ್ತಾರೆ ಅಥವಾ ಮಾರುತ್ತಾರೆ. ಆದರೆ ಕವಿ ಇಲ್ಲಿ ಮಾರಾಟ ಮಾಡಲು ಹೊರಟಿರುವ ರೀತಿ ವಿಶಿಷ್ಟವಾಗಿದೆ. ಕವಿ 'ಕೊಳ್ಳುವಿರಾ' ಕವನದಲ್ಲಿ ಭಾವನೆಗಳನ್ನು ಮಾರಲು ಹೊರಟಿದ್ದಾರೆ.

ನನ್ನದೆಯ ಕಳವಳದ

ತಳಮಳವನೆಲ್ಲಾ ಹರವಿ ಬಿಟ್ಟಿದ್ದೇನೆ

ಮಾರಲಿಟ್ಟಿದ್ದೇನೆ, ಕೊಳ್ಳುವಿರಾ?

ನನ್ನ ನಂಬಿಕೆ, ಸಾಚಾತನ

ಮುಗ್ಧತೆ ಕಣ್ಣಾಲಿಗಳ ಮಿಂಚ

ಮಾರಬೇಕೆಂದಿರುವೆ

ಕೊಳ್ಳುವಿರಾ

ಯಾವುದೇ ವ್ಯಕ್ತಿಯ ಜೀವನದಲ್ಲಿ ಬಾಲ್ಯದ ನೆನಪುಗಳು ಹೃದಯಕ್ಕೆ ಸಂತೋಷವನ್ನು ನೀಡುತ್ತವೆ. ಬಾಲ್ಯದ ಒಡನಾಟಗಳು, ಹುಟ್ಟಿ ಬೆಳೆದ ಊರು, ಗೆಳೆಯರು ಅಲ್ಲಿನ ಪ್ರಕೃತಿ, ಆಗಿನ ನಿರ್ಮಲವಾದ ಮನಸ್ಸು ಒಟ್ಟಾರೆಯಾಗಿ ಬಾಲ್ಯದ ಕಾಲ ಸ್ವರ್ಗಸುಖಕ್ಕೆ ಸಮಾನ; ಕಳೆದುಹೋದ ಬಾಲ್ಯವನ್ನು ಮತ್ತೆ ಅನುಭವಿಸಲು ಸಾಧ್ಯವಿಲ್ಲ. ಬಯಸುವುದು ತರವಲ್ಲ; ಅದರ ಸವಿನೆನಪುಗಳು ಮಾತ್ರ ಬದುಕಿಗೆ ನೆಮ್ಮದಿಯನ್ನು ನೀಡುತ್ತವೆ. ಆದರೆ ಕವಿ ಮನಸ್ಸು ಬಾಲ್ಯದ ದಿನಗಳನ್ನು ಬಯಸುತ್ತದೆ. ಬಾಲ್ಯದ ಆ ಸುಂದರ ಆಕರ್ಷಕ ಮುಗ್ಧತೆಗಳಿಗಾಗಿ ಚಡಪಡಿಸುತ್ತದೆ. ಮಾಸಲಾರದ ಆ ದಿನಗಳು ಕವಿ ಮನದಲ್ಲಿ ಹರಿದಾಡತೊಡಗುತ್ತವೆ. ಬಾಲ್ಯಕ್ಕೆ ಅಂತಹ ಸವಿರುಚಿಯಿದೆ 'ನೆನಪ ಗಂಧರ್ವರು' ಎನ್ನುವ ಕವನದ ತಲೆ ಬರಹವೇ ಬಾಲ ಗಂಧರ್ವಲೋಕವನ್ನು ಹೇಳುತ್ತದೆ. ಬದುಕಿನ ಬವಣೆಗಳನ್ನು ಬದಿಗಿರಿಸಿ ಕ್ಷಣಕಾಲವಾದರೂ ಬಾಲ್ಯದ ದಿನಗಳನ್ನು ನೆನಪಿಸಿಕೊಂಡು ಸಂತೋಷ ಪಡಬೇಕೆನ್ನುವ ಆಸೆ ಕವಿಯದು.

ಬನ್ನಿ ಬಾಲ್ಯದ ಸಖಿರೇ ಬನ್ನಿ ಆಡೋಣ
ಮನಸು ಮನಸುಗಳೆದುರು ಹರಡಿ ಎಳೆಎಳೆಯ ನೋಡೋಣ
ನಮ್ಮ ಭೂತದ ಮೈಯ ರೋಮಗಳ ನಮುಕಿ
ಎದುರು ನಿಲ್ಲಿಸಿಕೊಂಡು ಯೋಚಿಸೋಣ
ಏಕೆ ಭವಿಷ್ಯತ್ತು, ಪ್ರಶ್ನೆ - ಕೂಟ?
ಸಖಿರೇ ಬರೇ ಬನ್ನಿ

ಕಾಯುತ್ತಲಿದ್ದೇನೆ
ನನ್ನ ಭೂತ ಭವಿತವ್ಯಗಳ ಕ್ಷಿತಿಜದಂಚಲ್ಲಿ
ಮರೆಯಾದ ಗಂಧರ್ವರಿನ್ನೊಮ್ಮೆ ಬರುವಿದೆ
ಬರಲೇ ಬೇಕು.

ರಾಮಣ್ಣ ಕ್ಯಾತನಹಳ್ಳಿ ಇವರು ಹೇಳುವಂತೆ ''ಸವಿನೆನಪುಗಳಿಗೆ ಮುಪ್ಪಿಲ್ಲ, ಸಾವಿಲ್ಲ, ಗಂಧರ್ವರಂತೆ ಚಿರಯೌವನಿಗರು ಬಾಲ್ಯ ಸಖರು. ಅವರು ಮತ್ತೊಮ್ಮೆ ಬರುವರೇ ಎಂದು ಪ್ರಶ್ನೆ ಹಾಕಿದ ಕವಿ ಸುಮ್ಮನಿರುವುದಿಲ್ಲ. ಇಲ್ಲಿನ ಕವಿ ತುಂಬಾ ಆಶಾವಾದಿ ಬಂದೇ ಬರುತ್ತಾರೆ. ಎಂಬ ತುಂಬು ಭರವಸೆ ಕವಿಗಿದೆ. ಬರಲೇ ಬೇಕು ಎಂಬ ಅಚಲ ಛಲವೂ ಇದೆ.''[೧೩]

ಅಲ್ಲದೆ ಕವಿ ಕಾವ್ಯಕಟ್ಟುವ ಕಲೆ ಮತ್ತು ಪ್ರಯೋಗಗಳನ್ನು ಕುರಿತು ಕ್ಯಾತನಹಳ್ಳಿ ರಾಮಣ್ಣನವರು ಈ ರೀತಿಯಾಗಿ ಹೇಳಿದ್ದಾರೆ. ''ಕವಿ ಸಿದ್ಧಲಿಂಗ ಪಟ್ಟಣಶೆಟ್ಟರು ಪದ ಪ್ರತಿಮೆಗಳನ್ನು, ಸಾಲು ಪ್ರತಿಮೆಗಳನ್ನು ಬಳಸುವುದರ ಜೊತೆಗೆ ಶ್ಲೇಷಾಲಂಕಾರವನ್ನು ಬಳಸಿದ್ದಾರೆ. ಈ ನಿಟ್ಟಿನಲ್ಲಿ 'ನಿರ್ಗಮನ' ಮತ್ತು ಒಂಟಿ ಕವಿತೆಗಳನ್ನು ಉದಾಹರಿಸಬಹುದು.

ಇದೇನು ವಿರಹಗೀತವೇ ಅಥವಾ ತಣ್ಣನೆಯ ನೆನಪೇ ಎರಡೂ ಹೌದು ಅಥವಾ ಎರಡೂ ಅಲ್ಲ, ಅದು ಭಾವಸೂತ್ರ ನೀ ಹರಿದು ಹೋದಿ ಎಂಬ ಮಾತು ಶ್ಲೇಷೆಯಾಗಿ, ಶ್ಲೇಷಯಾಚೆಗಿನ ಭಿನ್ನ ಪರಿಣಾಮವಾಗಿ ನಿರ್ಗಮನ ಕವನದ ಜೀವಾಳವಾಗಿ ನಿಲ್ಲುತ್ತದೆ.''[೧೪]

ಬಂಜೆಯ ಬಯಲಿನಲ್ಲಿ ನದಿಯಾಗಿ ಹರಿದು ಬಂದು ರೇವಚಿಮ್ಮಿ ನಗೆ ಹಸಿರನು ಚಿಗುರಿಸಿ ನೀಹರಿದು ಹೋದಿ ಎನ್ನುವ ಸೂಕ್ಷ್ಮ ಭಾವನೆಗಳಿಗೆ ತಕ್ಕ ಪದಗಳು ದಕ್ಕಿವೆ. ನೆನಪಿನ ಹಸಿರನುಟ್ಟು ನಿಲ್ಲದೆ ಹರಿದು ಹೋದ ಭಾವವನ್ನು ಸಮರ್ಥವಾಗಿ ನಿರೂಪಿಸುವುದನ್ನು ನಿರ್ಗಮನ ಕವನದಲ್ಲಿ ಕಾಣಬಹುದು.

ಅಲ್ಲಲ್ಲಿ ಮಿಡಿದ ಚಿಗುರ ಹಸುರಲ್ಲಿ ನಕ್ಕು
ಹಾಯಾಗಿ ಎಳೆ ಬಿಸಿಲ ಪುಚ್ಛ ತಿಕ್ಕಿ
ಮಿದುವಾಗಿ ತೊಳೆಯುತ್ತಲಿದ್ದೇನೆ ಕಣ್ಣು ಹುಣ್ಣು

ಇದೇ ರೀತಿಯ ಇನ್ನೊಂದು ಕವಿತೆ ಒಂಟಿ ಮರುಭೂಮಿ ಹಡಗು ಒಂಟಿಯಾಗಿ, ಏಕಾಂಗಿ ಒಂಟಿಯಾಗಿ ಬಳಕೆಯಾಗುವ ಒಂಟಿಪದ ಕಾವ್ಯದುದ್ದಕ್ಕೂ ಬಳಸಿಕೊಂಡಿರುವುದನ್ನು ಕವಿ ಚೆನ್ನವೀರ ಕಣವಿಯವರು ಈ ರೀತಿಯಾಗಿ ಹೇಳಿದ್ದಾರೆ. ''ಕವಿ ಪಳಗಿಸಿಕೊಳ್ಳುತ್ತಿರುವ ಪ್ರತಿಮಾ ವಿಧಾನ. ಒಂಟಿಯಲ್ಲಿ ಶ್ಲೇಷಾರ್ಥವನ್ನು ಸೂರೆಗೊಂಡು ಸಾರ್ಥಕವಾಗಿದೆ. ಅದರ ಛಂದಸ್ಸಿನ ನಡಿಗೆಯಲ್ಲಿಯೇ ಕವಿತೆಯ ಯಶಸ್ಸನ್ನು ನಡೆದು ಬರುವಂತೆ ತೋರುತ್ತದೆ.''[೧೫]

ಅತೀಯಾದ ದುಃಖ ದುಮ್ಮಾನಗಳನ್ನು ಅನುಭವಿಸಿದ ಕವಿ ಒಂಟಿಯಾಗಿದ್ದಾನೆ. ಈ ಏಕಾಂಗಿತನದಲ್ಲಿಯೇ ಸಂತೃಪ್ತಿಯ ಭಾವ ತೋರ್ಪಡಿಸಿದ್ದಾನೆ.

ನಿಶ್ಚಿತನಾಗಿ
ಸಮೀಪದಲ್ಲೇಲ್ಲಿಯಾದರೂ ಒಂದು  ಬಯಾಸಿಸ್ ಕಂಡರೆ
ಸತ್ತು ಹೋಗುವೆ
ಯಾರ ತಂಟೆಗೂ ಬರದೆ

ಚೆನ್ನವೀರ ಕಣವಿಯವರು ಹೇಳುವಂತೆ ''ಇಲ್ಲಿಯ ನಾಟ್ಯ ಪೂರ್ಣವಾದ ವಿರೋಧ ಅರ್ಥಪೂರ್ಣವಾಗಿದೆ. ದುಃಖ ನಿರಾಸೆಗಳೇ ಜೀವನವಾಗಿ ಪರಿಣಮಿಸಿದಾಗ ಸುಖ-ಸೌಕರ್ಯಗಳ ಆರಾಮ ಜೀವನ ಒಂದು ಬಗೆಯ ಮರಣವಾಗಿ ತೋರಬಹುದಾಗಿದೆ; ಎಂಬ ಮನೋವಿಜ್ಞಾನದ ಸತ್ಯ ಸಹಜವಾಗಿ ಮೂಡಿಬಂದಿದೆ.''[೧೬]

ಒಂಟಿ ಕವಿತೆಯ ಪ್ರತಿಯೊಂದು ಸಾಲುಗಳು ಭಾವಪೂರ್ಣತೆಯಿಂದ ಕೂಡಿವೆ.

ಕತ್ತೆ ಮನಸ್ಸಿನ ಹುಚ್ಚು ಹಂಬಲದ ಹಿರಿಯ ಸುಖ ಕಾಲ ತಳಕ್ಕೆ ಹಾಕಿ
ರಾಜನವರನು ರೀತಿಯಲ್ಲಿ ನಡೆಯುತ್ತ
ಸೈಕತ ಲೋಕದ ರಾಜಮಾರ್ಗದ ಮೇಲೆ
ಬಾಗಿ ನಡೆದಿದ್ದೇನೆ.

ಶಾಂತಿನಾಥ ದೇಸಾಯಿಯವರು ಗುರುತಿಸಿರುವಂತೆ ''ಇಲ್ಲಿಯ ಒಂದೊಂದು ಸಾಲು, ಭಾವದ ಗಾಂಭೀರ್ಯಕ್ಕೆ ತಕ್ಕಂತೆ ಬೀಗಿಸಿ ಬಾಗಿ ಭಾವಾಭಿನ್ನಯವನ್ನು ಅರ್ಥಪೂರ್ಣವಾಗಿ ಸಾಧಿಸುತ್ತದೆ. ಕವಿತೆಯ ಕೊನೆಯಲ್ಲಿಯ ಭಾವದ ತಿರುವು, ಕವಿಯ ಅನಿಸಿಕೆ, ವಿಚಾರ ಸಂಕೀರ್ಣತೆ, ಭಾವಪರವಶತೆ ಮೂರನ್ನೂ ಮುಪ್ಪುರಿಗೊಳಿಸಿ ಕಾವ್ಯಾರ್ಥವನ್ನು ಹುರಿಗೊಳಿಸಿದೆ. ಈ ಸಂಗ್ರಹದ ಬಹುಮಟ್ಟಿನ ಕವಿತೆಗಳ ಮುಕ್ತಾಯ ಹೀಗೆ ಸಹಜತೆಯಿಂದ ನಿರಾಯಾಸವಾಗಿ ತಮ್ಮ ಭಾರವನ್ನು ಇಳಿಸಿಕೊಳ್ಳುತ್ತವೆ.''[೧೭]

ಕವಿ ತನ್ನ ಬದುಕಿನಲ್ಲಿ ಏನೆಲ್ಲವನ್ನು ಮಾಡಲು ಪ್ರಯತ್ನಿಸುತ್ತಾನೆ. ಎಲ್ಲವನ್ನೂ ಮಾಡಿ ಸಂತೋಷ ಪಡಬೇಕೆಂಬ ಉತ್ಸಾಹವೂ ಇದೆ. ಆದರೆ ಎಲ್ಲವನ್ನೂ ಮಾಡುವುದು ಕಷ್ಟ ಸಾಧ್ಯ. ಕೆಲವು ಸಂದರ್ಭಗಳಲ್ಲಿ ಪ್ರಯತ್ನ ಶೀಲವಾದ ಕವಿ ನೋವು ಅನುಭವಿಸುತ್ತಾನೆ. ಕವಿಯ ಅನುಭವವೇ ಕಾವ್ಯದ ಆತ್ಮವಾಗಿ ಮಾತಾಡಿದಂತೆ 'ಸೋಲು' ಕವಿತೆ ವೈಶಿಷ್ಟ್ಯ ಪೂರ್ಣವಾಗಿದೆ. ಆಳವಾದ ನೀರಿನಲ್ಲಿ ಮುಳ ಮುಳುಗಿ ಈಜು ಕಲಿಯದೇ ಸೋತರೂ ತೆರೆಗಳ ಏರಿಳಿತಗಳನ್ನು ಓಡಿಯಬೇಕೆನ್ನುವ ಆಸೆ ಕವಿಗಿದೆ. ಪ್ರತಿಸಾರಿ ಮುಳ ಮುಳುಗಿ ಸೋತಾಗಲೂ ಕವಿ ಎದೆಗುಂದುವುದಿಲ್ಲ. ಬದಲಾಗಿ ಈ ಜೀವನ ಸಾಗರದಲ್ಲಿ ಈಜಬೇಕೆಂದು ಧೈರ್ಯದಿಂದ ಮಾತನಾಡುತ್ತಾರೆ.

ಕೊನೆಯಲ್ಲಿ

ಕಲಿಸು ಈಸುವುದಕ್ಕೆ

ಇಲ್ಲಿ ಕೊಲ್ಲು

ಆದಕಾಗಿ ನಿನ್ನಲ್ಲಿ ಮುಳಗಲೀ ?

ಎಂದು

ಸಾಗರ ಬಿದ್ದು ಕೈಕಾಲು ಬಡಿದೆ

ಮತ್ತು ದಂಡೆಗೆ ಬಂದೆ. ಬಿದ್ದೆ

ಒದ್ದೆ ಬರಿಮೈಯಲ್ಲಿ ಒಳೊಳಗಿನಲ್ಲಿ

ಹಸಿಮನಸಿನಲ್ಲೇ ಬಿಸಿಮಾಂಸದಲ್ಲೆ ಹೂಳಿದ್ದ

ಎಲುಬು ಕೂಡ ತೊಯ್ಯ ಬೇಕೆ ?

ಕವಿ ಚೆನ್ನವೀರ ಕಣವಿಯವರು ಹೇಳುವಂತೆ ''ಕವಿಯ ಅನುಭವ ಅವನ ಭಾವಸ್ತರಗಳಲ್ಲಿ ಹಾಯ್ದು ಸೂಸಿ ಬಂದಾಗಿನ ನಿರಾಭರಣ ಸೌಂದರ್ಯವನ್ನೂ ಅದರದೇ ಆದ ಅಚ್ಚರಿಯನ್ನು ಇಂಥ ಕಾವ್ಯ ನೀಡುತ್ತದೆ.''[೧೮]

ಚೆಂದನ್ನ ಬಿಗಿದಾರ ಹೊಸೆದು ಕೈಯ ಕೋಲಲ್ಲಿ ಬಿಗಿದು ಬಲು ಖುಷಿಯಿಂದ ದೂರ ದೂರದಾಕಾಶದಲ್ಲಿ ಕವಿ ಹಾರಿಬಿಟ್ಟಿದ್ದ ಗಾಳಿಪಟ, ಮನಸ್ಸು ಮತ್ತು ಬುದ್ಧಿಯ ಸಂಕೇತವಾಗಿ ಬಂದಿದೆ. ಮನಸು ತೊಂದರೆಗಳಿಗೆ ಒಳಗಾಗುವ ಹಾಗೆ ಪಟವೂ ವಿದ್ಯುತ್ತಿನ ತಂತಿಗೂ ಹಸಿರು ಮರಕ್ಕೊ ಸಿಕ್ಕಿ ಹಾಕಿಕೊಂಡಿದೆ. ದಾರ ಹರಿಯದ ಹಾಗೆ ಸಿಕ್ಕ ಗಂಟನ್ನು ಬಿಡಿಸಬೇಕಾಗಿದೆ. ಕವಿ ಬಹು ಎಚ್ಚರಿಕೆಯಿಂದ ಪ್ರಯತ್ನಿಸುತ್ತಾನೆ. ಪಟವೆಂಬ ಮನಸ್ಸು ಮತ್ತು ಬುದ್ದಿಗೆ ಏನೊಂದೂ ಆಗಬಾರದೆಂಬ ಕಾಳಜಿಯೂ ಕವಿಗಿರುವುದನ್ನು 'ಪಟ' ಪದ್ಯದಲ್ಲಿರುವುದನ್ನು ಕಾಣಬಹುದಾಗಿದೆ.

ತೋಳ ತಬ್ಬಿದ್ದ

ಕೋಟಿ ಕೀಟ ಹತ್ತಿ ಗುಡಿ ಗಿಡಿದಿದ್ದ

ದಿಮಾರದ ಕೋಟಿ ಕಳಚಿ ಬಿಸಾಕಿದೆ

ಈಗೆಲ್ಲ ಹಗುರ

ಮನಸು ಹೀಗೆ ಮುಕ್ತವಾಗಿದೆ. ನಿರಂಹರಕಾರಿಯಾಗಿದೆ, ನಿರ್ಮಲವಾಗಿದೆ. ಈಗಲ್ಲಿ ತೋಪದ ಲವಲೌಷವೂ ಇಲ್ಲಿ ಕಾರಣ ಹಗುರವಾಗಿದೆ. ಹೀಗೆ ಮತ್ತೆ ಮೊದಲಿನಂತಾದ ಪಟ ಆಕಾಶದಲ್ಲಿ ಹಾರಬೇಕಾಗಿದೆ. ಸ್ವಚ್ಛಂದವಾಗಿ ಯಾವ ಹಂಗೂ ಇಲ್ಲದೆ ಅಂಗಾಂಗಳು ಕಂಗೊಳಿಸುವಂತೆ ಹಾರಾಡುತ್ತದೆ. ಕವಿಗೆ ಬೇಕಾದದ್ದೂ ಇದೆ. ಇದರಿಂದ ಕವಿ ಸಮಾಧಾನಿಯಾಗಿರುವುದನ್ನು ಈ ಪದ್ಯದಲ್ಲಿ ಕಾಣಬಹುದು.

ಮತ್ತೆ ಸೀಮಾ ವಿಹೀನ ವೋಮದಲ್ಲೇರಿ

ಕೈಹತೋಟಿಯಲ್ಲಿಯೇ ಹಾರಾಡತೊಡಗದೆ

ಕಣ್ತುಂಬ

ಎದೆ ತುಂಬ

ಈ ಕವನ ಸಂಕಲನದಲ್ಲಿರುವ 'ಬಯಲು', 'ಡೊಂಬರಾಟ', 'ರಿಣ', 'ಸಿಸಿರಮಳೆ', 'ಪೈಲಾ', 'ಹೆಣ್ಣು', 'ನಾಗರ', 'ನಿದ್ದೆ', 'ಆಹ್ವಾನ', 'ಕವನಗಳು' ಹನಿಗವಿತೆಗಳಾಗಿವೆ. ಆದರೆ ಚುಟುಕು ಪದ್ಯಗಳಿಗಿರುವ ವ್ಯಂಗತನ, ಕಟೋಕ್ತಿ, ಚುಚ್ಚುವಗುಣ, ಹಾಸ್ಯ ಈ ಹನಿಗವಿತೆಗಳಲ್ಲಿಲ್ಲ ಈ ಹನಿಗವಿತೆಗಳು ಬದುಕಿನ ಬಹುಮುಖ್ಯವಾದ ಅಂಶಗಳನ್ನು ಗಹನ ಗತಿಗಳನ್ನು ಕುರಿತು ದೊಡ್ಡ ಕವನಗಳಂತೆಯೇ ಹೇಳುತ್ತವೆ. ಜಪಾನಿಭಾಷೆಯ ಸಾಹಿತ್ಯದಲ್ಲಿರುವ ಹೈಕುಗಳಂತೆ ಕಂಡು ಬರುತ್ತವೆ. ಈ ಹನಿಗವಿತೆಗಳ ವಿಷಯವಸ್ತು ವೈವಿಧ್ಯಮಯವಾಗಿದ್ದು, ಇಲ್ಲಿ ಭೂತ ಭವಿಷ್ಯತ್ತುಗಳ ನಡುವಿನ ವರ್ತಮಾನದ ಬದುಕು ಜೋಲಿ ಹೊಡೆದರೂ ಸಾವಕಾಶವಾಗಿ ಸಾಗುತ್ತದೆ. 'ಡೊಂಬರಾಟದ'ಲ್ಲಿ ನೋವು ಅನುಭವಿಸುವುದನ್ನು ರೂಢಿಮಾಡಿಕೊಂಡಿರುವ ಕವಿ ನೋವುಗಳನ್ನು ಆಹ್ವಾನಿಸುತ್ತಾನೆ. ತಕ್ಕ ಪ್ರತಿಫಲ ನೀಡುತ್ತಾನೆ. ಏಕೆಂದರೆ ಕವಿಗೆ ಋಣಭಾರ ಬೇಕಾಗಿಲ್ಲ. ಕಷ್ಟ ನೀಡಿದವರಿಗೆ ಒಳ್ಳೆಯದನ್ನು ನೀಡುವ ಒಳ್ಳೆಯತನ ಕವಿಗಿರುವುದನ್ನು 'ರಿಣ' ಪದ್ಯದಲ್ಲಿ ನೋಡಬಹುದು.

ನನಗೆ
ನೀಡು ಅಭಾವ, ಗೊಂದಲ, ಶೋಕ
ಪ್ರತಿಯಾಗಿ ಸಮತೂಕದಲ್ಲಿ ಉತ್ತಮೊತ್ತಮ ಕವಿತೆ ನಿನ್ನಡಿಗೆ ಹಾಕುವೆ
ನಿನ್ನ ರಿಣನನ್ನ ಮೇಲಿರಲಾರದು
ಇರಬಾರದು
ನನ್ನ ತಕ್ಕಡಿಯಲ್ಲಿ ಬಂಗಾರ ತೂಕ
ನಿನಗೆ

ಕವಿಗೆ ಜೀವನದಲ್ಲಿ ಹೆಣ್ಣು ಅರ್ಥವಾಗಲಾರದ ವಸ್ತುವಾಗಿದ್ದಾಳೇ. ಪ್ರೀತಿಗೆ, ನೋವಿಗೆ, ನೆನಪಿಗೆ, ವಿರಹಕ್ಕೆ, ವಿಷಾದಕ್ಕೆ ಎಲ್ಲಕ್ಕೂ ಬೇಕಾಗಿದ್ದಾಳೆ. ಆದರೆ ಆಕೆಯ ಪರಿಪೂರ್ಣ ವ್ಯಕ್ತಿತ್ವದ ಪರಿಚಯ ಮಾಡಿಕೊಳ್ಳಲು ಕವಿಗೆ ಸಾಧ್ಯವಾಗುತ್ತಿಲ್ಲ. ಮುಗ್ಧನನ್ನಾಗಿ ಕವಿಯನ್ನಾಗಿರಿಸಿರುವುದನ್ನು 'ಹೆಣ್ಣು' ಕವಿತೆಯಲ್ಲಿ ಕಂಡುಬರುತ್ತದೆ.

ಹೆಣ್ಣು
ಸಮಸ್ಯೆಯ ನೆಗೆಟಿವ್
ಎಷ್ಟುಪ್ರತಿ ಮುದ್ರಿಸಿದರೇನು
ಬೃಹತ್ತಿಸಿದರೇನು ?
ಹಂಬಲ ರಸಾಯನ ತಿಕ್ಕಿದಷ್ಟು
ಅದೇ ಚಿತ್ರ ಇನ್ನೂ
ಸ್ಪಷ್ಟ

ಪ್ರಜಾಪ್ರಭುತ್ವದ ಮೌಲ್ಯಗಳನ್ನು ಗಾಳಿಗೆ ತೂರಿ ಕೇವಲ ಆಷಾಢಭೂತಿತನದಲ್ಲಿ ಬದುಕು ಸಾಗಿಸುವುದು ನಮಗೆಲ್ಲಾ ಹವ್ಯಾಸವಾಗಿದೆ. ಈ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟ ಭಾರತ ಭಾಗ್ಯವಿದಾತನ ಆದರ್ಶಗಳು ಆಸೆಗಳು ಕಮರಿಹೋಗಿವೆ. ಆದರೂ ನಮಗೆ ಗಾಂಧೀಜಿ ಬೇಕೇಬೇಕು. ಆತನ ಹೆಸರೇಳಿಕೊಂಡು ಹೇಗಾದರೂ ಬದುಕಬಹುದು.

ಈ ದೇಶದಲ್ಲಿ ಮುಂದಿನ ಐವತ್ತು ವರ್ಷಗಳ ನಂತರ ಬರುವ ಪೀಳಿಗೆಯು ರಕ್ತ ಮಾಂಸಗಳಿಂದ ಕೂಡಿದ ಈ ನೆಲದ ಮೇಲೆ ನಡೆದಾಡಿದ ಒಬ್ಬ ವ್ಯಕ್ತಿ ಇಷ್ಟೆಲ್ಲಾ ಸಾಧನೆ ಮಾಡಿದ ಎಂದು ಹೇಳಿದರೆ ನಂಬುವುದು ಕಷ್ಟ; ಎಂದು ಹೇಳಿದ ವಿಜ್ಞಾನಿ ಐನ್‌ಸ್ಟೈನ್‌ರ ಮಾತಿಗೆ ನಾವೆಲ್ಲಾ ಜೀವಂತ ಉದಾಹರಣೆಗಳಾಗಿಬಿಡುತ್ತೇವೋ ಏನೋ ಎಂದು ಕವಿಗೆ ಅನ್ನಿಸಿದೆ. ಗಾಂಧೀಜಿಯವರ ಬಗ್ಗೆ ಭಾರತೀಯರು ತೋರುತ್ತಿರುವ ಅನಾದರಗಳನ್ನು ಕುರಿತು ಹೇಳುವ ಕವನ 'ಗಾಂಧೀ ಜಯಂತಿ' ನಮ್ಮ ಗಾಂಧೀತನಕ್ಕೆ ಹಿಡಿದ ಕೈಗನ್ನಡಿಯಾಗಿದೆ.

ಅಜ್ಜ ಇಂದು ನಿನ್ನ ಜಯಂತಿ
ಇಷ್ಟಾದರೂ ನಮಗೆ ನೆನಪಿದೆ
ಇದೆ ಸಮಾಧಾನ
ಶತಮಾನನೋತ್ಸವಕ್ಕೆ ಭಾರೀ ತಯಾರಿ ನಡೆಸಿದ್ದೇವೆ
ಈ ಎಲ್ಲಾ ಮೋಡಿ ನೋಡಿ
ನಿನ್ನ ಬಚ್ಚಿ ಬಾಯ್ತುಂಬ ನಗೆ ಹಲ್ಲಾಗಿ ನಗಬೇಕು ನೀನು

ಗಾಂಧೀಜಿಯ ತತ್ವಗಳನ್ನು ಗಾಳಿಗೆ ತೂರಿ ಗಾಳಿಪಟ ಮಾಡಿ ಆಡಿಕೊಂಡು ಕಾಲಕಳೆಯುತ್ತಲಿದ್ದೇವೆ. ನಿನ್ನ ತ್ಯಾಗ ಬಲಿದಾನಗಳಿಗೆ ಕೊಟ್ಟ ಕಾಣಿಕೆಗಳೆಲ್ಲಾ ಜಡತ್ವ ತುಂಬಿಕೊಂಡ ಸ್ಥಾವರಗಳಾಗಿವೆ. ನೀನು ಇಷ್ಟೆಲ್ಲಾ ಸಾಧನೆ ಮಾಡಿದ್ದಕ್ಕಾಗಿ ನಾವು ನಿನ್ನನ್ನು ಕುರಿತು ಬರೆದು ನೂರಾರು ಜನ ಕವಿಗಳಾಗಿದ್ದೇವೆ ಎಂದು ಪಟ್ಟಣಶೆಟ್ಟರು ಹೇಳಿದ್ದಾರೆ. ಆದರೂ ಕವಿಗಳಿಗೆ ಗಾಂಧೀಜಿಯ ರೇಖಾಚಿತ್ರ ಸಂಧಿಕಾಲ ಪ್ರಶ್ನಾರ್ಥಕವಾಗಿಯೇ ಕಂಡಿದೆ.

ಇಂದು
ನೂರು ಯೋಚನೆಗಳಿಂದ ನಿನ್ನ ಬಾಗಿದ ದೇಹ
ನನ್ನ ಭೂತವನ್ನೇ ನನ್ನೆದುರು ಹಿಡಿದು
ಪ್ರಶ್ನಿಸುತ್ತಿದೆ ಮತ್ತೆ ಮತ್ತೆ

ಕವಿ ಗಾಂಧೀಜಿಯವರಲ್ಲಿ ದೈನ್ಯತೆಯ ಭಾವಹೊಂದಿದ್ದಾರೆ. ನೀ ತಂದುಕೊಟ್ಟ ಸ್ವಾತಂತ್ರ್ಯ ಸಾರ್ಥಕ ಹೊಂದಬೇಕಾದರೆ ಮತ್ತೆ ನಿನ್ನ ಕಾರುಣ್ಯದ ಬೆಳಕುಬೇಕೆಂದು ಬೇಡುತ್ತಾರೆ.

ಓ ಹಸುಳೆ ಮುದುಕ
ನಿನ್ನ ಈ ಗಂಭೀರ ಮುಗ್ಧತೆಯ ನೀರಲ್ಲಿ
ನಮ್ಮ ದಿಗ್ಧತೆಯನ್ನು ತೊಳಕೊಂಡು ಬರುವಂತೆ
ಒಮ್ಮೆ ಆಶೀರ್ವದಿಸು

ಕಾವ್ಯಾಂಶಗಳ ದೃಷ್ಟಿಯಿಂದ ಈ ಕವಿತೆಯಲ್ಲಿನ ಚಿಕ್ಕ ಕೊರತೆಗಳನ್ನು ಚೆನ್ನವೀರ ಕಣವಿಯವರು ಹೀಗೆ ಹೇಳಿದ್ದಾರೆ. ''ಈ ಕವಿತೆಯಲ್ಲಿ ನಿರೂಪಣೆ ವಾಚ್ಯವಾಗಿ ಕಾವ್ಯಾಂಶಕ್ಕೆ ವರವಾಗಿದೆ. ಈ ಕವಿಗೆ ಸಹಜವಾಗಿ ಒಲಿದಿರುವ ಶ್ಲೇಷಾರ್ಥದ ಸೊಗಸನ್ನು ಅಲ್ಲಲ್ಲಿ ಕಾಣಬಹುದಾದರೂ ಅದು ಗದ್ಯಕ್ಕೆ, ವಾಚಾಳಿತನಕ್ಕೆ ಎಡೆಮಾಡಿಕೊಟ್ಟಿದೆ.''[೨೯]

ಶೆಟ್ಟರ ಕಾವ್ಯಗಳನ್ನು ಮೆಚ್ಚುತ್ತ ಕಣವಿಯವರು ಒಳ್ಳೆಯ ಮಾತುಗಳನ್ನು ಹೇಳಿದ್ದಾರೆ'. ''ಭಾಷೆ ಹಾಗೂ ಶೈಲಿಯ ದೃಷ್ಟಿಯಿಂದಲೂ ಮೊದಲ ಸಂಗ್ರಹಕ್ಕಿಂತ ಪ್ರೌಢವಾದ ಸ್ಥಿತಿಯನ್ನು ಇಲ್ಲಿ ಕಾಣುತ್ತೇವೆ. ಜೊತೆಯಲ್ಲಿ ಗಡಸುತನವೂ ಸೇರಿಕೊಂಡಿದೆ. ಆಡುನುಡಿಯ ಅಚ್ಚು ಮೆಚ್ಚನ್ನು ಉಳಿಸಿಕೊಂಡು ಅದರ ಕಾವನ್ನು ಆರಗೊಡದಂತೆ ಕವಿ ಬಳಸುವುದರಿಂದ ಇಲ್ಲಿಯ ಭಾವಾಭಿವ್ಯಕ್ತಿಗೆ ಒಂದು ಬಗೆಯ ಕೆಚ್ಚು ಬಂದಿದೆ. ಅಂಗಾತ ಬಿದ್ದಿದೆ, ಕೊಡವಿ ಕ್ಯಾಕರಿಸಿ, ಹರವಿ ಚೆಲ್ಲಾಪಿಲ್ಲಿ, ಗುಳುಗುಳು ಅಳು, ದಿಮಾಕ, ಹೊಸಮಾಲಗಿತ್ತಿ, ನಸೀಬ, ಸಪುರಮಾಪರ ಇತ್ಯಾದಿ ದೇಶೀ ಪದಗಳು ಪದಗುಚ್ಛಗಳು ಅಲ್ಲಲ್ಲಿ ಸಮಯೋಚಿತವಾಗಿ ಬಂದು ಆಯಾ ಸಂದರ್ಭದ ಅರ್ಥ ಧ್ವನಿಯನ್ನು ಪುಷ್ಟಿಗೊಳಿಸಿ ತೀರಾ ಸಾದಾ ಎನಿಸುವ ಮಾತಿನಲ್ಲಿಯೂ ಕಾವ್ಯದ ಸತಿಯನ್ನು ಹೊರಡಿಸಲು ಪಣ ತೊಟ್ಟಿವೆ. ಪದಗಳನ್ನು ವ್ಯರ್ಥವಾಗಿ ಪೋಲು ಮಾಡದೆ ಆದಷ್ಟು ಸಂಗ್ರಹವಾಗಿ ನಾನಾ ಭಾವಾರ್ತಗಳಿಗೆ ಎಡೆಗೊಡದಂತೆ ಬಳಸಲಾಗಿದೆ. ಶಬ್ಧಗಳ ಸಾಹಚರ್ಯದಿಂದ ಭಾವಕ್ಕೆ ತಟ್ಟನೆ ಒದಗುವ ತಿರುವನ್ನೂ, ಹರವನ್ನೂ ತರಲು ಅಲ್ಲಲ್ಲಿ ಸಹಜವಾಗಿ ಪ್ರಯತ್ನಿಸಲಾಗಿದೆ. ಸಖರೇಖರೇ ಬನ್ನಿ, ಅಂಡಲೆಯುತ್ತಿರುವ, ಉಪಜೀವನದುಪ್ಪಿಗೆಂದು, ಇತ್ಯಾದಿ ಭಾಷೆ ಸ್ವಲ್ಪ ಒರಟಾಗಿ ಕಂಡರೂ ಅದೇ ಇಲ್ಲಿ ಒಂದು ಗಾಣವಾಗಿದೆ. ಈ ಭಾಷೆ ಗಿರಣಿಯಲ್ಲಿ ಪಾಲಿಶ್ ಮಾಡಿದ ಅಕ್ಕಿಯಲ್ಲ, ಮನೆಯಲ್ಲಿಯೇ ಕುಟ್ಟಿದ್ದು ನೋಡಲಿಕ್ಕೆ ಬಿಳುಪು ಕಡಿಮೆ. ಆದರೆ ಜೀವಸತ್ವವನ್ನು ಒಳಗೊಂಡ ಎಣ್ಣೆ ಕಾಳು.''[೨೦]

ಲಂಕೇಶ ಮತ್ತು ಔರಂಗಜೇಬ ಕವಿತೆಗಳಲ್ಲಿ ಕವಿ ಈ ಪೌರಾಣಿಕ ಇತಿಹಾಸದ ಪಾತ್ರಗಳ ಒಳಹೊಕ್ಕು ತನ್ನ ಸಂಕೀರ್ಣವಾದ ವ್ಯಕ್ತಿತ್ವವನ್ನು ಹೇಳುತ್ತಾನೆ. ಲಂಕೇಶನಿಗೆ ಶಿವನನ್ನು ಕುರಿತು ಮಾಡಿದ ತಪೋ ಬಲವಿದೆ. ಸತಿಮಂಡೋದರಿಯ ಸತ್ವ ಸತಿತ್ವವಿದೆ ವಜ್ರದೇಹಿಸುತನಿದ್ದಾನೆ. ಆದರೂ ನನ್ನ ಲಂಕಾಪುರಿ ಹೊತ್ತಿ ಉರಿಯುತ್ತಿದೆ ಎಂಬ ಮನದಾಳದ ಅನುಪಾತ ಭಾವಗಳು ಹುಟ್ಟಿಬರುತ್ತವೆ. ತಾಪ ಶಮನವಾಗಿ ಸಾವರಿಸಿಕೊಂಡು ಎದ್ದು ನಿಂತು ಕಾರ್ಯಕ್ಕಿಳಿದಿದೆ ಎಂದೂ ದೊರಕದ ಶಾಂತಿ ಲಂಕೆಗೆ ದೊರಕುತ್ತದೆ ಎಂಬ ಆಶಾಭಾವ ಕವಿಗಿದೆ. ಪ್ರೊ. ನಾಗಣ್ಣನವರು ಅಭಿಪ್ರಾಯ ಪಡುವಂತೆ ''ಇತಿಹಾಸದ ಪಾತ್ರಗಳ ಒಳಹೊಕ್ಕು ಸಂಕೀರ್ಣ ಬೆಳೆ ತೆಗೆದ ಕಾರ್ನಾಡರು, 'ತುಘಲಕ್'ನನ್ನು ವಿವಿಧ ಕೋನಗಳಿಂದ ಕಾಣಿಸಿದರೆ, ಲಂಕೇಶರು 'ಗುಣಮುಖ'ದ ಮೂಲಕ ಆದಿಲ್‌ಷಾನ ಒಳ ಸಂಘರ್ಷಗಳನ್ನು ತೆರೆದು ತೋರಿಸಿದರು. ಕಾರ್ನಾಡ ಮತ್ತು ಲಂಕೇಶರು ವಿಶಾಲವಾದ ಕ್ಯಾನ್‌ವಾಸುಗಳನ್ನು ಆರಿಸಿಕೊಂಡರೇ ಪಟ್ಟಣಶೆಟ್ಟರು ಪದ್ಯದ ಪುಟ್ಟ ಕ್ಯಾನವಾಸಿನ ಮೇಲೆ ಅಷ್ಟೇ ಜಟಿಲವಾದ ಚಿತ್ರವನ್ನು ಮೂಡಿಸುವಲ್ಲಿ ಯಶಸ್ವಿಯಾಗಿದ್ದಾರೆ. ನಮ್ಮೊಳಗೂ ಇರಬಹುದಾದ ಔರಂಗಜೇಬನನ್ನು ದರ್ಶಿಸಿದ್ದಾರೆ. ಈ ಕಾರಣದಿಂದಾಗಿಯೇ ರಾಜಕೀಯದ ತಪ್ಪು ಲೆಕ್ಕಾಚಾರಕ್ಕೆ ನಿಲುಕದ ಅರಿವು ಒಬ್ಬ ಕವಿಗೆ ದಕ್ಕುವುದು. ಒಬ್ಬ ನಾಟಕಕಾರನಿಗೆ ಸಿಕ್ಕುವುದು, ಹಾಗಾಗಿಯೇ ನಾವು ವಾಸ್ತವವನ್ನು ಸಮಗ್ರವಾಗಿ ಅರ್ಥಮಾಡಿಕೊಳ್ಳಲು ಕವಿಗೆ ಶರಣು ಹೋಗುವುದು.''[೨೧] 'ಔರಂಗ ಜೇಬ' ಕವನದಲ್ಲಿ ಕವಿ ಆತ್ಮ ವಿಮರ್ಶೆಮಾಡಿಕೊಳ್ಳುತ್ತಾನೆ. ಬದುಕು ತನಗೆ ನೀಡಿದ ಅನುಭವಗಳಲ್ಲಿ ತೊಳಲಾಡಿದ್ದನ್ನು ಖಚಿತತೆ ಕಂಡುಕೊಳ್ಳಲಾರದೇ ಇರುವುದನ್ನು, ಜಂಜಾಟಗಳನ್ನು ಪಾಪ ತಾಪಗಳನ್ನು ಹೇಳಿಕೊಳ್ಳುತ್ತಾನೆ. ಈ ಕಾವ್ಯಕ್ಕೆ ಕ್ಯಾತನಹಳ್ಳಿ ರಾಮಣ್ಣನವರು ಹೀಗೆ ಪ್ರತಿಕ್ರಿಯಿಸಿದ್ದಾರೆ. ''ಪ್ರಬುದ್ಧ ಕವಿ ಮನಸೊಂದು ಕಡೆದ ಸುಂದರ ಶಿಲ್ಪ ಔರಂಗಜೇಬ, ಇಲ್ಲಿ ವ್ಯಕ್ತವಾಗುವ ಭಾವನೆಗಳು ಅವುಗಳ ತಾಕಲಾಟ,

ವಾಸ್ತವವನ್ನರಸುವ ಮನಸ್ಸು, ರಂಗುರಂಗಿನ ಚಿತ್ತಾರಗಳ ಸರಮಾಲೆಯನ್ನು ಸೃಷ್ಟಿಸುತ್ತಾ ಸಾಗುವ ಪದಬಂಧಗಳು, ನುಡಿರತ್ನಗಳು, ಅಕ್ಷರಗಳ ರಿಂಗಣ ಗುಣಿತಗಳು ಯಾವುದು ಸುಂದರ? ಯಾವುದು ಅದ್ಭುತ? ಕವಿಯೇ ಔರಂಗಜೇಬನಾಗಿ ಅಥವಾ ಔರಂಗಜೇಬನೇ ಕವಿಯಾಗಿ, ಔರಂಗಜೇಬನ ಸರ್ವಸ್ವವನ್ನು ನಮ್ಮ ಮುಂದೆ ಗುಡ್ಡ ಹಾಕಿರುವ ಅದ್ಭುತ ರೀತಿ ಕಲಾವಂತಿಕೆಯ ಮೇರುವಾಗಿ ವಿಜೃಂಭಿಸುತ್ತದೆ.''[೨೨]

ನನ್ನನ್ನು, ನಿನ್ನನ್ನು, ಅವಳನ್ನು
ಹವಳ ಮುತ್ತುಗಳನ್ನು, ಧವಳ
ಪಾಪಗಳನ್ನು, ಮರಳ ಮುತ್ತುಗಳನ್ನು
ಕತ್ತು ಹಿಸುಕಿದೆ ಕಣೋ
ನಾನೇ ಸಂಗ್ರಹಿಸಿದ್ದ ಸಂರಕ್ಷಿಸಿದ್ದ ಶಂಕೆಸೈನ್ಯ

ತಾಜಮಹಲಿನ ಗರ್ಭದಲ್ಲಿರುವ ಇನ್ನೊಂದು ಸಮಾಧಿಯಾಳು ಹೊಕ್ಕು ಉಸಿರುಬಿಡುತ್ತಿದೆ. ಕವಿಯ ಸ್ನೇಹ ಕವಿಯೇ 'ನಾನು ತಳೂರಿರದ ಔರಂಗಜೇಬ' ಎನ್ನುತ್ತಾರೆ. ಕವಿ ಮನಸಿಗೆ ಸದಾ ನೆಮ್ಮದಿ ನೀಡುವ ಶಾಶ್ವತವಾದ ನೆಲೆ ಸಿಕ್ಕಿಲ್ಲ. ಔರಂಗಜೇಬ ಪದ್ಯವನ್ನು ಕುರಿತು ಸ್ವತಃ ಪಟ್ಟಣಶೆಟ್ಟರೇ ಹೇಳುವ ಮಾತುಗಳನ್ನು ಪ್ರೊ. ನಾಗಣ್ಣನವರು ಉಲ್ಲೇಖಿಸಿರುವುದು ಮನನೀಯವಾಗಿವೆ. ''ನಮ್ಮ ಅನುಭವಗಳನ್ನು ಇನ್ನೊಂದು ಪಾತ್ರದಲ್ಲಿ ಪಲ್ಲಟಿಸಿ, ಪರಿವರ್ತಿಸಿ ನೋಡುವುದರಲ್ಲಿಯೇ ಸಾಹಿತ್ಯದ ಪ್ರತಿಮಾ ವಿಧಾನದ ಸಾರ್ಥಕತೆಯಿದೆ. ಪುರಾಣ ಇತಿಹಾಸಗಳ ಹಲವಾರು ಪಾತ್ರಗಳಲ್ಲಿ ನಮ್ಮ ಅನೇಕ ಮುಖ ವ್ಯಕ್ತಿತ್ವಗಳನ್ನು ದರ್ಶಿಸುವಂತಹ ಉದಾಹರಣೆಗಳು ಹೇರಳವಾಗಿ ಸಿಗುತ್ತವೆ.

ನಮ್ಮ ಸುತ್ತಲಿನ ಪರಿಸರದಲ್ಲಿಯೂ ಪರಕಾಯ ಪ್ರವೇಶಮಾಡಿ ನಮ್ಮ ವ್ಯಕ್ತಿತ್ವಗಳನ್ನು ಪರೀಕ್ಷಿಸಿಕೊಳ್ಳುವುದರ ಜೊತೆಗೆ ಅನ್ಯ ಚಿತ್ರಣ ಹಾಗೂ ಸ್ವ ವಿಮರ್ಶೆಯ ಸೂತ್ರದಿಂದ ಜೀವನವನ್ನು ಹಗುರಗೊಳಿಸಿಕೊಳ್ಳುವ ಸಮಾಧಾನದ ನೆಲೆಗೆ ತಂದುಕೊಳ್ಳುವ ಪ್ರಯತ್ನ ನಡೆಯುತ್ತದೆ.''[೨೩] ಔರಂಗಜೇಬನ ಅಂತರಂಗವನ್ನು ದರ್ಶಿಸುವ ಈ ಮಾತುಗಳು ಇದಕ್ಕೆ ಸಾಕ್ಷಿಯಾಗಿವೆ.

ನಾನೆಯ್ದು ಬಲೆಯಲ್ಲಿ ಬಿದ್ದ ವಿಲಿವಿಲಿ ನಾನು
ರಾಜ್ಯವಾಳಿದ್ದೇನೆ. ಸ್ವಂತ ದುಡಿದಿದ್ದೇನೆ, ಪ್ರಜರ
ಸಹಿದ್ದೇನೆ, ಪ್ರಖರ ಸಂಯಮದಿಂದ
ದಿನವೂ ಕುರಾನು ನೂರು ಬಾರಿ ಓದಿದ್ದೇನೆ
ವರ್ಷವಿಡೀ ರೋಜ, ರಮಜಾನು,
ಮಹಾ ಫಕೀರ
ನಂತೆ ಬದುಕಿದ್ದೇನೆ ನಿಟ್ಟುಸಿರ ಬುಟ್ಟಿಯಲ್ಲಿ
ಜಪೋ-ಫಲ ತುಂಬಿದ್ದೇನೆ.
ಆದರೂ......

ಯಾವುದೋ ಸಂದೇಹದಂಗಡಿಯ
ಸಾವಿರ ಗೊಂಬೆಗಳಲ್ಲಿ ನಾನೂನು ನಿಂತಿರುವೆ
ಹೌದು ನಾನು ತಳ ಊರಿರದ ಔರಂಗಜೇಬ

## ೩. ಪರದೇಸಿ ಹಾಡುಗಳು

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಮೂರನೆಯ ಕವನ ಸಂಕಲನ 'ಪರದೇಸಿ ಹಾಡುಗಳು'. ಎರಡನೆಯ ಸಂಕಲನವಾದ ಔರಂಗಜೇಬ ಮತ್ತು ಇತರ ಕವನಗಳು ಪ್ರಕಟಿಸಿದ ಒಂಬತ್ತು ವರ್ಷಗಳ ನಂತರ ೧೯೭೬ರಲ್ಲಿ ಇದು ಪ್ರಕಟವಾಯಿತು. ೧೯೭೯ರಲ್ಲಿ ಎರಡನೇಯ ಮುದ್ರಣ ಕಂಡಿತು. ಈ ಕವನ ಸಂಕಲನದಲ್ಲಿ ಒಟ್ಟು ೨೬ ಕವನಗಳಿವೆ.

ಕವಿ ನೀನಾದಲ್ಲಿ 'ನೀ' ದೊಂದಿಗೆ ಮಾತ್ರ ಸಂವಾದ ನಡೆಸಿದರೆ ಔರಂಗಜೇಬದಲ್ಲಿ ಆತ್ಮವಿಮರ್ಶೆ ಮತ್ತು ಆತ್ಮ ನಿವೇದನೆಯ ಕವನಗಳನ್ನು ರಚಿಸಿದ್ದಾರೆ. ಈ ಸಂಕಲನದಲ್ಲಿ ಮೊದಲಿನ ಎರೆಡು ಸಂಕಲನಗಳಿಗಿಂತ ಭಿನ್ನತೆ ಕಂಡುಬರುತ್ತದೆ. ಕವಿ ಇಲ್ಲಿ ಸಂಪೂರ್ಣವಾಗಿ ಸಮಾಜಮುಖಿಯಾಗಿದ್ದಾನೆ. ಡಾ. ಎಚ್.ಎಸ್. ವೆಂಕಟೇಶ ಮೂರ್ತಿಯವರು ಹೇಳಿರುವಂತೆ ''ಚಿತ್ರಗಳನ್ನು ಪ್ರತಿಮಾ ನಿರ್ಮಿತಿಯನ್ನು ಹೆಚ್ಚಾಗಿ ಅವಲಂಬಿಸಿದ ಒಂದು ಬಗೆಯ ಸಲೀಸು ಲೋಕಾಭಿರಾಮದ ಶೈಲಿ ಇಲ್ಲಿ ಕಂಡುಬಂತು. ಸುತ್ತಲ ಪರಿಸರ ಸಾಮಾಜಿಕ ಸಂದರ್ಭದ ವಿಷಮತೆ, ಮೌಲ್ಯಮಾಪನದ ನಡುವೆ ತನ್ನ ಸ್ಥಿತಿಯ ಅರಿವು ಇಲ್ಲಿ ಮುಖ್ಯವಾಯಿತು.''[೨೪]

ಸ್ವಾತಂತ್ರ್ಯ ಪಡೆದ ಈ ದೇಶ ರಸದ ಬೀಡಾಗಬೇಕೆಂದು ಅನೇಕರು ಕನಸುಕಂಡಿದ್ದರು. ಆದರೆ ನಾವು ಆಯ್ಕೆ ಮಾಡಿದ ನಮ್ಮ ನಾಯಕರು ತಮ್ಮ ಆಷಾಡಭೂತಿತನದಿಂದ ಸಮೃದ್ಧನಾಡು ನಿರ್ಮಿಸುವಲ್ಲಿ ವಿಫಲವಾದರು. ಇವರುಗಳ ಸೋಗಲಾಡಿತನವನ್ನು, ಭಾರತದ ರಾಜಕಾರಣಿಗಳನ್ನು 'ನಿನ್ನ ಭೆಟ್ಟಿಯಾಗಿದ್ದರು' ಕವನದಲ್ಲಿ ಕವಿಗಳು ಬಹು ವ್ಯಂಗವಾಗಿ ಹೇಳಿದ್ದಾರೆ. ದೇಶ ಕಟ್ಟುವ ಇವರು ಗಡ್ಡದ ಸನ್ಯಾಸಿಗಳು, ನಾಟಕದಲೆಮಾರಿಗಳು, ಒಮ್ಮೊಮ್ಮೆ ದಿನಗಟ್ಟಲೆ ಬ್ರಹ್ಮಚಾರಿಗಳು ಇವರು ಪ್ರತಿನಿತ್ಯ ಮಾಡುವ ಕೆಲಸವೆಂದರೆ.

ವಿಶ್ರಾಂತಿ ವಿಸ್ಕಿ ಕುಡಿದು
ಕ್ರಾಂತಿಯುಚ್ಚೆಯ ಹೊಯ್ದು
ದೇಶ ಡಿಸ್ಕಸ್ ಮಾಡಿದ ಮಹನೀಯರು
ಸಕಲ ಸುದ್ದಿಗಳ ವಿಕಲಬುದ್ದಿಗಳ ಹಾ
ರುವ ತಟ್ಟೆಗಳ ಹರಿದ ಬಟ್ಟೆಗಳ
ಬಂಜರು ತಂಗಳ ಎಂಜಲೆಲೆಗಳ
ಅಂಜಿದಬಲೆಯರ ನಂಜಿನ ಧರೆಗಳ
ದೇಶಸೇವಾ ನಿರತ ನಿರಹಂಕಾರಿ ಪರಮಾತ್ಮ ನಾಮ ರೂಪಿ ಲಿಂಗಿಗಳು.

ಹೀಗೆ ನಮ್ಮನ್ನು ಆಳುವ ವ್ಯಕ್ತಿಗಳ ವ್ಯಭಿಚಾರಗಳನ್ನು ಕುರಿತು ಹೇಳುತ್ತಾರೆ. ನಡೆಯಬಾರದ ಎಲ್ಲವೂ ಈ ದೇಶದಲ್ಲಿ ನಡೆಯುತ್ತದೆ. ಸ್ಪಷ್ಟವಾಗಿ ಕಣ್ಣಿಗೆ ಕಾಣಿಸುತ್ತಿದೆ. ಇದೆಲ್ಲವನ್ನು ಸಹಿಸಿಕೊಂಡು ಸುಮ್ಮನೆ ಇರುವ ನಾವುಗಳು ಯಾರು? ನಾವೆಲ್ಲಾ ಪ್ರತಿಭಟಿಸುವ ಶಕ್ತಿಯನ್ನು ಕಳೆದುಕೊಂಡಿದ್ದೇವೆಯೇ ಅಥವಾ ಈ ವ್ಯವಸ್ಥೆಯ ಜೊತೆಗೆ ಬದುಕುವುದನ್ನು ರೂಡಿ ಮಾಡಿಕೊಂಡಿದ್ದೇವೆಯೇ? ಎಂಬ ಪ್ರಶ್ನೆಗಳಿಗೆಲ್ಲಾ ಒಂದು ಉತ್ತರ ನಾವು ಹೇಡಿಗಳು. ಆದರೆ ನಾವು ಹೆಡಿಗಳೆಂದು ಒಪ್ಪಿಕೊಳ್ಳಲಾರದೆ ನೂರೆಂಟು ಸಬೂಬುಗಳನ್ನು ಹೇಳುತ್ತೇವೆ. ಈ ಕುಂಟು ನೆಪಗಳಲ್ಲಿ ನಮ್ಮ ಹೇಡಿತನವನ್ನು ಮುಚ್ಚಿಟ್ಟು ವೀರರಂತೆ ತೋರ್ಪಡಿಸಿಕೊಂಡು ನಡೆಯುತ್ತೇವೆ. ನಮ್ಮ ನೋವುಗಳಿಗೆ ನಮ್ಮ ಸೋಲುಗಳಿಗೆ, ನಮ್ಮ ಢಾಂಬಿಕ ವರ್ತನೆಗಳಿಗೆ, ಹೇಡಿತನಕ್ಕೆ, ನಮ್ಮ ದುರ್ಬಲ ವ್ಯಕ್ತಿತ್ವಕ್ಕೆ ನಾವೇ ಕಾರಣರೆಂದು ಕವಿಗಳು 'ನಿರ್ಮಾಣ' ಕವಿತೆಯಲ್ಲಿ ಹೇಳಿದ್ದಾರೆ.

ನಾವೇ ನಿರ್ಮಿಸಿಕೊಂಡ
ಕನಸ ಕಂಬಿಯ ಗುಂಟ
ಮನಸ ಗಾಡಿಯ ಮುಂದೆ ನಡೆಯದೇ ಹೋದಾಗ
ಬದುಕ ಬೈಯುತ್ತೇವೆ ಬದುಕಿ
ನಾವು ಪರಂಪರೆಯ ಇಲ್ಲಿ ಕ್ರಾಂತಿಯ ಹೆಸರ
ಹೇಳಿ ಸ್ವಾರ್ತಕ್ಕಾಗಿ ನೀತಿಗಳ ನಿರ್ಣಯಿಸಿ
ಮುಖವಾಡದದ್ಭುತ ಪವಾಡಗಳ ಮಾಡುತ್ತೇವೆ
ನಾವು ಮಾಡಿದ
ನಾಟಕದ ಪ್ರತಿಯೊಂದು ಪಾತ್ರದಲಿ
ನಾವೆ ನಾಯಕರು ನಿರ್ದೇಶಕರು.

ನಮ್ಮೆಲ್ಲಾ ಹಾಗೂ ಹೋಗುಗಳಿಗೆ ನಾವೇ ಕಾರಣವಾಗಿರುವಾಗಿದ್ದೇವೆ. ನಿತ್ಯವೂ ಸೋಲು ಅಪಮಾನಗಳಲ್ಲಿ ಬದುಕು ಸಾಗಿಸುವುದು ಒಳ್ಳೆಯದಲ್ಲ. ಅವರಿವರೆ ಅನುಕರಣೆ ಮಾಡಹೋಗಿ. ಹುಚ್ಚೆದ್ದು ಯೋಚಿಸುವುದರ ಬದಲಾಗಿ ನಮ್ಮತನಕ್ಕೆ ನಾವೇ ರೂಪಕೊಡಬೇಕು. ಬರುವ ಬದುಕನ್ನು ಹಾಗೆಯೇ ಸ್ವೀಕರಿಸಿ ಸಹಜತೆಯಿಂದಲೇ, ಪ್ರಾಮಾಣಿಕತೆಯಿಂದಲೇ ಬದುಕುವುದನ್ನು ಕಲಿಯೋಣ ಎಂದು ಕವಿ ಹೇಳುತ್ತಾರೆ. ಈ ದೇಶದ ಪ್ರತಿಯೊಬ್ಬರು ಮೊದಲು ತಮ್ಮ ವ್ಯಕ್ತಿತ್ವವನ್ನು ಪರಿಶುದ್ಧವಾಗಿ ನಿರ್ಮಾಣಮಾಡಿಕೊಂಡು ಶುದ್ಧ ಚಾರಿತ್ರ್ಯದಿಂದ ಬದುಕುವುದನ್ನು ಕಲಿತಾಗ ಸಮೃದ್ಧ ಭಾರತವನ್ನು ನಿರ್ಮಿಸಲು ಸಾಧ್ಯ; ಎಂದು ಕವಿಗಳು 'ನಿರ್ಮಾಣ' ಕವಿತೆಯಲ್ಲಿ ಆಶಯ ವ್ಯಕ್ತಪಡಿಸುತ್ತಾರೆ.

ನಮ್ಮನ್ನೆ ನಮ್ಮ ಬದುಕನ್ನೆ
ವಿತ್
ಧರಿಸಿಕೊಂಡರು ಸಾಕು.

ಹೊಸದಾರಿ ಹೊಸ ನಲಿವಿನಂತರಂಗವ ಹೊಕ್ಕು

ದೇಶ ನಿರ್ಮಿಸಬಹುದು. ದೇಶ

ನಿರ್ಮಿಸಬೇಕು.

ವೈಯಕ್ತಿಕ ಉದ್ಧಾರದ ಜೊತೆಗೆ ಸಮಾಜದ ಉದ್ಧಾರಮಾಡಿ ದೇಶ ನಿರ್ಮಿಸಬೇಕೆಂಬ ಛಲವಿರುವ ಕವಿ ಮತ್ತೆ ದೇಶದ ವ್ಯವಸ್ಥೆಗೆ ಅಸಹ್ಯಗೊಂಡಿದ್ದಾರೆ. ನಾನು ಸತ್ತಿದ್ದೇನೆ; ಬದುಕಿ ಮಾಡುವುದಾದರೂ ಏನು? ಈ ದೇಶದಲ್ಲಿ ಈ ವಯಸ್ಸಿನಲ್ಲಿ ಎಂದು ಪ್ರಶ್ನಿಸುವ ಮೂಲಕ ಸಾಯಲು ಕೊಡುವ ಕಾರಣಗಳು ಸಮಂಜಸವಾಗಿಯೇ ಕಾಣುತ್ತವೆ. ಇಲ್ಲಿ ಬದುಕು ಅರ್ಥವನ್ನು ಕಳೆದುಕೊಂಡಿದೆ. ರಾಷ್ಟ್ರೀಯ ಆರೋಗ್ಯ ಮಿತಿಗನುಸಾರ ಮಾನವನ ಸರಾಸರಿ ಆಯುರ್ಮಾನ ಮೂವತ್ಮೂರು ಆಗಿರುವುದರಿಂದ ಬದುಕುವ ಹಕ್ಕಿಲ್ಲ ಎಂದು 'ಚೀಲ' ಕವಿತೆಯಲ್ಲಿ ಹೇಳುತ್ತಾರೆ.

ನಾ ಅನುಭವಸ್ಥ, ಯಾಕೆಂದರೆ ನಾ ಗೃಹಸ್ಥ, ವಯಸ್ಸಾಗಿದೆ

ನೋಡಿದ್ದೇನೆ. ಸಂಜೆ ಪೇಟೆಯಲ್ಲಿ ದಿನಾ

ಪುಸ್ತಕ ತರಹೋಗಿ ತರಕಾರಿ ತರುತ್ತೇನೆ.

ಯೋಚನೆ ಮಾಡಹೋಗಿ ಸರಕಾರ ಸರಿಯುವುದನ್ನ ಓದುತ್ತೇನೆ

ಸಾಯುವುದಕ್ಕೆ ಇಷ್ಟು ಸಾಕಾಗದೇ

ಈ ದೇಶದಲ್ಲಿ

ಸಂಸಾರದ ಸಮಸ್ಯೆಗಳಿಂದ, ಎಲ್ಲೆಡೆಯೂ ಪ್ರಭಾವ ಬೀರುವ ರಾಜಕೀಯಗಳಿಂದ ಕವಿ ಬೇಸರಗೊಂಡಿದ್ದಾರೆ. ಬದುಕುವ ಹಕ್ಕು ನನಗೆ ಉಳಿದಿಲ್ಲ, ನಾನು ಸಾವಿನ ಚೀಲ, ಎಲ್ಲರ ಪರಿಸ್ಥಿತಿಯೂ ಇದಕ್ಕೆ ಹೊರತಾಗಿಲ್ಲ ಎನ್ನುತ್ತಾರೆ. ಮಹಾಬಲೇಶ್ವರ ಕಾಟ್ರಹಳ್ಳಿ ಹೇಳಿರುವಂತೆ ''ಚೀಲದ ವಸ್ತು ಸಾವಿನ ಪ್ರಜ್ಞೆಯೊಂದೇ ಅಲ್ಲ; ವಾಸ್ತವವಾಗಿ ದಂಗುಬಡಿಸುವ ಅಸಹ್ಯವಾಗುವಂತೆ ಸತ್ತಿರುವ ಸ್ಥಿತಿ. ಈ ಅನುಭವವನ್ನು, ಅರ್ಥವಂತಿಕೆಯನ್ನು ಭವಿಸಿ ಅಭಿವ್ಯಕ್ತಿಸಿರುವುದು ಸಮರ್ಥ ಕವಿ ಪ್ರಜ್ಞೆಯ ಕೈವಾಡ. ನಿಜವಾದ ಹೋರಾಟ ನಡೆದಿರುವುದು ಕಣ್ಣಿಗೆ ಹೊಡೆಯುತ್ತದೆ. ಪ್ರತಿಯೊಂದು ಹೋರಾಟದ ಸೋಲು ಗೆಲುವು ಕೂಡಾ ಕಲೆಯ ವಸ್ತುಗಳಾಗುತ್ತವೆ.''[೨೫]

ಅಮರ ಪ್ರೇಮದ ಸಂಕೇತವಾದ ತಾಜ್‌ಮಹಲ್ ನೋಡಲು ಆಗ್ರಾಕ್ಕೆ ಹೋದಾಗಿನ ಅನುಭಗಳು ಕವಿಗೆ ಹೇಸಿಗೆಯನ್ನುಂಟುಮಾಡಿವೆ. ಬಹುಶಃ ಭಾರತದ ಎಲ್ಲಾ ಐತಿಹಾಸಿಕ ಪ್ರೇಕ್ಷಣೀಯ ಸ್ಥಳಗಳೂ ಹೀಗೆಯೇ ಏನು? ಬೃಹತ್ ಗಟಾರಗಳು, ಅವುಗಳ ಕೆಟ್ಟವಾಸನೆ, ಹೇಡಿಲ್‌ನ ಮೋಸ, ವಂಚನೆಯ ಜಾಲಗಳು, ಕಡು ಬೇಸಿಗೆಯಲ್ಲಿ ಶ್ರಮಿಕರು ರಿಕ್ಷಾತುಳಿಯುವುದು ಒಟ್ಟಿನಲ್ಲಿ ಆಗ್ರಾ ಅವ್ಯವಸ್ಥೆಯ ಅಮರ ಸಿಂಹಾಸನ, ಪುನ್ನಾಮ ನರಕದ ವಿವರ ನಾ ಪುರಾಣದಲ್ಲೇ ಓದಿದ್ದ ನೆನಪು ಈಗ ಮರುಕಳಿಸಿದೆ ಎನ್ನುತ್ತಾ ಕವಿಗಳು 'ಆಗ್ರ ಮತ್ತು ತಾಜ್‌ಮಹಲ್' ಕವನದಲ್ಲಿ

ಮಲ್ಲಿಗೆಯ ಮಾರ್ದವತೆಯಲ್ಲೊರಗಿ

ನಯನ ರಸದಲಿ ಅಮೃತ ಪಾಷಾಣಗಳನೊರಸಿ

ಸಾವ ಹೂವನು ಮುಡಿದು.

ಎಂದು ಮುಮತಾಜ್‌ಮಹಲಳ ಶ್ರೇಷ್ಠ ಪ್ರೀತಿಯ ಸುಂದರ ಚಿತ್ರಣವನ್ನು ಕವಿ ನೀಡುತ್ತಾರೆ.

ದೇಶ ಕಟ್ಟಬೇಕು ನಿರ್ಮಾಣ ಮಾಡಬೇಕು. ಅಂದರೆ ಮೊದಲು ನಮ್ಮನ್ನು, ನಮ್ಮ ವ್ಯಕ್ತಿತ್ವವನ್ನು, ನಮ್ಮ ಮನಸ್ಸನ್ನು ಕಟ್ಟಬೇಕು. ನೆರೆ ಹೊರೆಯವರ ಅಭಿಮಾನಕ್ಕೆ ವ್ಯಕ್ತಿತ್ವಕ್ಕೆ ಅಪಮಾನವಾಗದ ಹಾಗೆ ನಡೆದುಕೊಳ್ಳಬೇಕು. ಇದು ನಿಜವಾದ ವಿಕಾಸ ಎಂದು ಕವಿಗಳ ಅಭಿಪ್ರಾಯ. ಅವರು 'ದೇಶ ಮುರುದೈತೋ ಮುಗದೈತೋ' ಎನ್ನುವ ಕವನದಲ್ಲಿ ಮಂದ ಮನಸುಗಳನ್ನು ಒಂದು ಗೂಡಿಸಿ ಒಂದು ಹದಕ್ಕೆ ತರಬೇಕು ಎನ್ನುತ್ತಾರೆ.

ಮುರಿದಿದ್ದನ್ನು ಕಟ್ಟಬೇಕು
ಕಲಂ ಮಾಡಬೇಕು, ಚಿಗರ ಮಾಡಸಬೇಕು.
ನೆಲಾ ಅಗಿಬೇಕು, ನೀರ ಉಣಸಬೇಕು
ಅಗಿ ಹಚ್ಚಬೇಕು ನಗೀ ಮೂಡಬೇಕು
ನಿಮ್ಮ ಮನಸ
ನಿಮ್ಮನ್ನ ಮೆಚ್ಚಬೇಕು ಹಂಗ ದುಡಿಬೇಕು.

ಎಂದು ದೇಶ ನಿರ್ಮಾಣದ ಕಾರ್ಯದಲ್ಲಿ ಮಾನಸಿಕ ಮತ್ತು ದೈಹಿಕ ಪರಿಶುದ್ಧತೆಗಳು ಮುಖ್ಯ ಎಂದು ಹೇಳುತ್ತಾರೆ.

ಈ ಕವನ ಸಂಕಲನದಲ್ಲಿಯ ಬಹುತೇಕ ಕವನಗಳು ಸಮಾಜವನ್ನು ಕುರಿತು ಹೇಳುತ್ತವೆ. ಆದರೂ ಸಿದ್ಧಲಿಂಗ ಪಟ್ಟಣಶೆಟ್ಟರ ಕಾವ್ಯದ ವಸ್ತು ಪ್ರೀತಿಯೇ ಆಗಿರುವುದು ವಿಶೇಷ. ಈ ಸಂಕಲನದಲ್ಲಿ ಸಮಾಜದ ಮೇಲಿನ ಪ್ರೀತಿಯಿಂದಾಗಿ ಸಿಟ್ಟು. ವ್ಯಂಗಗಳು ಮೂಡಿಬಂದಿವೆ. ಪ್ರೀತಿಯಿಲ್ಲದೆ ಕವನಗಳನ್ನು ಬರೆಯುಲು ಸಾಧ್ಯವಿಲ್ಲ ಎನ್ನುವಷ್ಟು ಪ್ರೀತಿ ಗೀತೆಗಳನ್ನು ಬರೆದಿದ್ದಾರೆ. 'ಪ್ರೀತಿ ಪಾಠ' ಎನ್ನುವ ಕವನದಲ್ಲಿ ಈ ಮಾತುಗಳನ್ನು ಹೇಳುತ್ತಾರೆ.

ಪ್ರೀತಿಯಿಲ್ಲದೆ ಬೇರೆ
ಯಾಕೆ ಬರೆಯುವುದಿಲ್ಲ ಈ ಕವಿಗಳು
ಇಡೀ ಬದುಕಿನ ತುಂಬ
ಬೇರೆ ಕಾಣುವುದಿಲ್ಲ
ಏನಾಗಿದೆ
ಈಗ ಇವರಿಗೆ ?

ಪಾಠ ಹೇಳುವಾಗ ಗಲಿಬಿಲಿಗೊಂಡು ಸತ್ತ ಆತ್ಮಗಳಂತೆ ಪೀಠಸ್ಥರಾಗಿದ್ದ ವಿದ್ಯಾರ್ಥಿಗಳನ್ನು ಕಂಡು ಬೇಸರಗೊಳಿಸಿದೆ. ಹುಡುಗಿಯರ ಕಡೆನೋಡಿ ಮತ್ತೆ ಉತ್ಸಾಹದಿಂದ ಪಾಠಮಾಡಿದ್ದು, ಪ್ರೀತಿಯಿಂದಲೇ ಕವಿಗೆ ಪ್ರೀತಿಸುವುದೆಂದರೆ ಉತ್ಸಾಹ. ಕವಿಗಳು ಇದೇ ಕವನದಲ್ಲಿ ಪ್ರೀತಿಯೇ ಶ್ರೇಷ್ಠ ಕಾವ್ಯ ನಿರ್ಮಾಣಕ್ಕೆ ಸ್ಫೂರ್ತಿಶಕ್ತಿ ಪ್ರೀತಿ ಪ್ರೇಮಿಗಳೇ ಆಗಿವೆ ಎಂದು 'ಪ್ರೀತಿ ಪಾಠ' ಕವಿತೆಯಲ್ಲಿ ಅಭಿಪ್ರಾಯ ಪಡುತ್ತಾರೆ.

ಪ್ರೀತಿಯೊಂದೇ ಹೌದು
ಪ್ರಣಯವೊಂದೇ ಕಾವ್ಯ
ವಾಗುವ ಕಾವು
ಪಡೆದಿಹುದು

ಎನ್ನುವ ಕವಿ 'ನೀನಾ' ಕವನಗಳಲ್ಲಿ ಅನುಭವಿಸಿದ ಯಾತನೆಗಳನ್ನು ಅನುಭವಿಸಲು ಮತ್ತೆ ಸಿದ್ಧನಾಗುತ್ತಾನೆ. ಪ್ರೀತಿಯಿಂದಲೇ ನೂರು ತೊಂದರೆಗಳು ಬಂದರೂ ಸ್ವಾಗತಿಸುತ್ತಾನೆ. ಅವುಗಳನ್ನು ಅನುಭವಿಸಲು ಸಿದ್ಧನಾಗಿದ್ದಾನೆ. ಕವಿಗೆ ಪ್ರೀತಿಯನ್ನು ಬಿಟ್ಟು ಬದುಕಲು ಸಾಧ್ಯವಿಲ್ಲ. ಇದನ್ನು 'ಪ್ರೀತಿ ಪಾಠ' ಗೀತೆಯಲ್ಲಿ ಕಾಣಬಹುದಾಗಿದೆ.

ಮತ್ತೆ ಹತ್ತು ವರ್ಷದ ಹಿಂದೆ ನಾನು ಸುತ್ತಾಡಿದ್ದ
ಪ್ರೇಮದವಿಭೇದ್ಯ ದಟ್ಟ ಗೊಂಡಾರಣ್ಯದಲಿ
ಕಳೆದು ಹೋಗುವ ಇಚ್ಛೆ
ಮೈತುಂಬ ಸವರಿಕೊಂಡು ಮುಳ್ಳು
ಚುಚ್ಚಿದರೆ ಚುಚ್ಚಿತಿನ್ನುತ್ತಾ
ಹಾಯಾಗಿ ತೋಳ ಚಾಚಿ ನಡೆದಿದ್ದೇನೆ.

ಹೀಗೆ ಪ್ರೀತಿಯಿಂದ ಬರುವ ಕಷ್ಟಗಳಿಗೆ ಸದಾ ತೆರೆದು ಕೊಂಡಿರುವ ಕವಿಗೆ ಮೊದಲ ಸಂಕಲನವಾದ 'ನೀನಾ'ದಲ್ಲಿಯ 'ನೀ' ಇಲ್ಲಿ ಕಾಲೇಜಿನ ಹುಡುಗಿಯಾಗಿ, ಸರೋಜ ಆಗಿ, ಕಲ್ಪನಾಳಾಗಿ ಬಂದಿದ್ದಾಳೆ. ಆ ಈ ಸುದ್ದಿ ಹೇಳುವ ಕಾಲೇಜಿನ ಹುಡುಗಿ ಅಧ್ಯಾಪಕರ ಕವಿಯೊಂದಿಗೆ 'ವಿಷಯ' ಕವನದಲ್ಲಿ ಹೀಗೆ ಮಾತನಾಡುತ್ತಾಳೆ.

ಆಚೆ ಮನೆ ಹುಡುಗಿ ಗೇಲಿ ಮಾಡುತ್ತಾಳೆ
ನನ್ನ ಹೆಸರಿನ ಕೂಡ ನಿಮ್ಮ.....
ಸರ್
ಊರ ತುಂಬಾ ಸುದ್ದಿ
ಏನೆ ಬೆಣ್ಣೆಗಳ್ಳನ್ನೇ ಕದ್ದಿ
ಎನ್ನುತ್ತಾಳೆ ಸರ್ ಕಮಲೆ....

ಹೀಗೆ ಅಂದುಕೊಳ್ಳುತ್ತಾರೆಂದು ಬಹಳ ಖುಷಿಯಿಂದ ಹುಡುಗಿ ಹೇಳುತ್ತಾಳೆ. 'ಒಂದು ಪತ್ರ' ಕವನದಲ್ಲಿ ಸರೋಜ ಆಗಿಬರುವ 'ನೀ ಳನ್ನು' ನೋಡಬೇಕೆಂದು ಕಾತರ, ಆದರೆ ಮಾತಿನ 'ಮಲ್ಲಿ' ಮಡದಿ, ಮುಗುಳು 'ಜಲ್ಲಿ' ಮಗಳು, ಮನೆತನ ಸಂಸಾರದ ಅನೇಕ ತೊಂದರೆಗಳಿವೆ. ಆದ್ದರಿಂದ ಬರಲು ಆಗುತ್ತಿಲ್ಲ; ಒಂದು ವೇಳೆ ಬಂದರೆ ಇವರ ಶಾಪ ನಿನಗೆ ತಟ್ಟ ಬಹುದಲ್ಲವೆ? ಇರಲಿ ಒಂದು ವೇಳೆ ನಿನ್ನ ಮನೆತನಕ ಮನದ ಹೊಸ್ತಿಲ ತನಕ ಬಂದರೂ ನೀನು ಕ್ಷೇಮವೇ ಪ್ರಯಾಣ ಸುಖವಾಯಿತೇ? ಎಂದು ಕೇಳುವ ಆದರೆ ಮುಂದೇನು? ಎಂಬ ಪ್ರಶ್ನೆಗೆ ಕವಿ ಉತ್ತರ ಕಂಡು ಕೊಳ್ಳುತ್ತಾನೆ. ಇಪ್ಪತ್ತು ಇಪ್ಪತ್ತೈದನೇ ವಯಸ್ಸಿನ ನಮ್ಮನ್ನಪ್ಪಿದ ಮೋಜು ಇದಾಗಿದೆ ಎಂದು ಹೇಳುತ್ತಾನೆ.

ಕಲ್ಪನಾ ಎಂಬ ಗೆಳೆತಿಯ ಒಂದು ಕಲ್ಪನಾ ಚಿತ್ರ ಎಂಬ ಕವಿತೆಯಲ್ಲಿ ಹೆಮ್ಮಿನ ಪ್ರೀತಿಯ ನಿರಾಸೆಗಳ ಹಲವಾರು ಮಗ್ಗಲುಗಳು ತೆರೆದುಕೊಳ್ಳುತ್ತವೆ.

ಕತೆಯಾದ ಕತೆ
ಬರೆದ
ಈ ಹುಡುಗಿ ಮಾತನಾಡಿದರೆ ಮೈತುಂಬ ಹರೆ ತುಳುಕಿ ಬಂದ ಮಳೆ,

ಜೇನು ಹೊಳೆ

ನೆಲದ ಎದೆಯಲ್ಲಿ ಮೊದಲೇ ಕಾದ ಮುಂಗಾರು ಬೆಳೆ

ಮಣ್ಣ ಮುಗುಳು ಗಂಧಗೊಳ್ಳುವ ರೀತಿ.

ಎಂದು, ಒಡಮೂಡುತ್ತಾ ಸಾಗುವ ಕಲ್ಪನೆಗಳ ಪ್ರೀತಿಗಳು, ಮಾತುಗಳು, ನಿರ್ಲಿಪ್ತವಾದದ್ದನ್ನು ಕಂಡು ಹೆದರಿದವರು ಹೆದರಿಸಲು ಬಂದವರು ಎಲ್ಲರೂ ಪ್ರತಿಕ್ರಿಯಿಸಿದ್ದಾರೆ. ಕಲ್ಪನೆಗಳಿಗೆ ಅನ್ಯಾಯವಾಗಿ ಆಕೆ ಮತ್ತೆ ಮೊದಲಿನಂತೆ ಆಗ ಬೇಕಾಗಿದೆ. ಅದಕ್ಕಾಗಿ ಆಕೆ

ಬೆಳೆಸುವುದು ಬಿಟ್ಟು, ಬೆಳೆಯಬೇಕು

ಹದಗೊಂಡ ಹೊಲವಾಗಬೇಕು.

ಎಂದು ಬಯಸುತ್ತಾರೆ. ಕಲ್ಪನಾ ಅನುಭವಗಳಿಂದ ಬೆಳೆದು ಪರಿಪಕ್ವಳಾಗಬೇಕೆಂಬುದು ಕವಿಗಳ ಆಶಯವಾಗಿದೆ.

ಕವಿ ದಿನ ನಿತ್ಯದ ಬದುಕಿನ ಸಂಬಂಧಗಳನ್ನು ಕುರಿತು 'ಸಂಜೆ' ಕವನದಲ್ಲಿ ಅನುಮಾನ ವ್ಯಕ್ತಪಡಿಸಿದ್ದಾರೆ. ಶತ್ರುಗಳಲ್ಲದಿದ್ದರೂ ಮಿತ್ರತ್ವದಲ್ಲಿ ಶಂಕೆಯಿದೆ. ಬೆಳಿಗ್ಗೆಯಿಂದ ಸಂಜೆಯವರೆಗೆ ಮಾಡಿದ ಕೆಲಸಗಳೆಲ್ಲಾ ತೃಪ್ತಿಯನ್ನು ನೀಡಿಲ್ಲ ಬದುಕು ಯಾಂತ್ರಿಕವಾಗಿದೆ. ಸಾರ್ಥಕವಾಗದ ತೃಪ್ತಿ ನೀಡಿದ ಹಗಲು ಕವಿಯ ಸಾಲಿಗೆ ಸತ್ತಹಾಗೆ, ಸತ್ತ ದಿನವನ್ನು ಹೊತ್ತು ಸಂಜೆ ಮನೆ ಸೇರುವ ಕವಿ ಹೆಣವಾಗುತ್ತಾನೆ, ಕುಣಿಯಾಗುತ್ತಾನೆ, ಸ್ಮಶಾನವಾಗುತ್ತಾನೆ. ಜೀವನವೇ ರಣರಣವಾಗಿ ಬಿಡುತ್ತದೆ ಕವಿಗೆ ಬೇಡವಾದ ಸಂಜೆ ಚುಚ್ಚಿ ನೋಯಿಸಲು ಬಾಣ ಹಿಡಿದೇ ಬರುತ್ತದೆ.

ಸಂಜೆ

ನನ್ನ ಬದುಕಿನೀ ಬರಿ ಬಂಜೆ, ಹಡೆಯುವುದಿಲ್ಲ

ನಗೆ ಮುಗುಳು ಮಕ್ಕಳನು, ಪಡೆಯುವುದಿಲ್ಲ

ತೀವ್ರ ನಿರಾಸೆಯ ಆತ್ಮ ಹತ್ಯಗಳನ್ನು

ಇಲ್ಲಿ ಕವಿ ನಿರಾಶವಾದಿಯಾಗುತ್ತಾನೆ. ಕಳೆದ ಹಗಲಿನ ಬಗ್ಗೆ ತೃಪ್ತಿ ಪಡಬಾರದ ಕವಿಗೆ ಬಯಲಿನಲ್ಲಿ ಸ್ವಚ್ಛಂದವಾಗಿ ವಿಹರಿಸುವ ಆಸೆ. ಬಯಲಿನಲ್ಲಿ ಬೆಳದಿಂಗಳಾಗಿ, ಮನಸಿನಂಗಳವಾಗಿ ಹರಡಿ ಮಲಗೋಣ ಎನ್ನುತ್ತಾರೆ. ಕವಿಗೆ ಮುಚ್ಚು ಮರೆಯ ಜೀವನ ಬೇಕಾಗಿಲ್ಲ. ಬಯಲಲ್ಲಿ ಬಯಲಾಗಿ, ನೆಲವಾಗಿ, ಮಣ್ಣಾಗಿ, ಉಸಿರಾಗಿ, ಬಸಿರಾಗಿ ಅಲ್ಲಿಂದಲೇ ಚಿಮ್ಮಿಬಂದು ನೂರು ಶಕ್ತಿಗೆ ತವರಾಗೋಣ, ಇದಕ್ಕಾಗಿ ಬಲಿಯಾದರೂ ಚಿಂತೆಯಿಲ್ಲ; ಬದುಕನ್ನು ಬಚ್ಚಿಟ್ಟುಕೊಂಡು ಆಸ್ವಾದಿಸುವುದಕ್ಕಿಂತ ಬಚ್ಚಿಟ್ಟುಕೊಂಡು ಅನುಭವಿಸುವುದು ಲೇಸೆಂದು ಕವಿಗಳು ಹೇಳುತ್ತಾರೆ.

'ಅಂಗಡಿ' ಕವನದಲ್ಲಿ ಕವಿ ಜೀವನವನ್ನು ಅಂಗಡಿಗೆ ಹೋಲಿಸಿದ್ದಾರೆ. ದಿನಾಲೂ ವ್ಯಾಪಾರ ಮಾಡುವ ಕವಿ ಒಳ್ಳೆಯ ನಿರಾಶೆಗಳಿಗಾಗಿ ಕಾಯುತ್ತಾನೆ. ತರತರದ ಮಂದಿ ಬಂದು ವ್ಯಾಪಾರ ಮಾಡುತ್ತಾರೆ. ಕವಿಗೆ ಈ ಜೀವನ ವ್ಯಾಪಾರಗಳು ತೃಪ್ತಿಯನ್ನು ನೀಡಿಲ್ಲ ವ್ಯಾಪಾರದಲ್ಲಿ ನಷ್ಟವಾಗಿದೆ ಬಳುವಳಿಗಳಾಗಿ ಬಂದಿವೆ.

ಮಧ್ಯಾಹ್ನ ಮರಣವನ್ನುತ್ತೇನೆ

ಸಂಜೆ ಮುಪ್ಪಿನ ತೂಕ ಮಾರುತ್ತೇನೆ

ರಾತ್ರಿ

ಅಂಗಡಿ ಮುಚ್ಚು

ವಾಗ ನೀರು ಕುಡಿದು ಲಾಭ ಎಣಿಸುತ್ತೇನೆ.

ಕವಿಗೆ ದಿನದ ಬದುಕು, ಉಂಡಷ್ಟು ತೃಪ್ತಿಯನ್ನು ನೀಡಿಲ್ಲ ಆದ್ದರಿಂದ ನೀರು ಕುಡಿದು ಲಾಭ ಎಣಿಸುತ್ತಾನೆ.

ಕವಿ ಯೌವನದ ದಿನಗಳಲ್ಲಿ ಅನುಭವಿಸಿದ ಕೊರತೆಯಿಂದ ದೇಶಸೇವಕರ ತಾಳಕ್ಕೆ ಹೆಜ್ಜೆ ಹಾಕಿದ್ದಾನೆ. ಮಾತಿನಲ್ಲಿಯೇ ದೇಶವನ್ನು ಕಟ್ಟಿದ ಈ ಮಹನೀಯರನ್ನು ಅನುಸರಿಸಿ ಸಿಡಿದದ್ದು ತಪ್ಪೆಂದು ಕವಿಗೆ ಈಗ ಭಾಸವಾಗುತ್ತಲಿದೆ. ತನ್ನ ಶಕ್ತಿ ಮತ್ತು ವಯಸ್ಸನ್ನು ವೃಥಾ ಕಳೆದೆನಲ್ಲಾ ಎಂಬ ಕೊರಗಿದೆ. ಅದನ್ನು 'ದೇಶಸೇವಕರು' ಕವನದಲ್ಲಿ ಈ ರೀತಿ ಹೇಳಿದ್ದಾರೆ.

ನನ್ನ ಹಾಸಿಗೆ ಸಿದ್ಧಪಡಿಸುವುದಕ್ಕಾಗಿ

ನಿಮ್ಮನ್ನು ಮೆತ್ತಗೆ, ಬೆಚ್ಚಗೇ

ಮಲಗಿಸುವುದಕ್ಕಾಗಿ,

ನಿಮ್ಮನ್ನೆಲ್ಲಾ ಚೆನ್ನಾಗಿ ಬಲ್ಲೆ

ಯಾಕೆಂದರೆ

ಈಗ ನನ್ನೂನ್ನೂ

ಸರಿಯಾಗಿ ತಿಳಿಯ ತೊಡಗಿದ್ದೇನೆ.

ಈಗ ಕವಿಗೆ ಚೆನ್ನಾಗಿ ಅರ್ಥವಾಗುತ್ತಲಿದೆ ತನ್ನ ತಾನರಿತು, ತನ್ನ ಅಸ್ತಿತ್ವ ಮತ್ತು ಸ್ಥಿತಿಯನ್ನು ಗುರುತಿಸಿ ಕೊಳ್ಳತೊಡಗಿದ್ದಾನೆ. ಕಾರಣ ಬೆಳಕಿನತ್ತ ಅವರಿವರ ದಾಳಕ್ಕೆ ಕಾಯಿಯಾಗಿ, ಆಟದ ವಸ್ತುವಾಗಿದ್ದುದನ್ನು ಕುರಿತು ಹೇಳುತ್ತಾ, ಮಿತ್ರರೇ ರಾಜಕಾರಣದ ತೃಪ್ತಿ ಅಧ್ಯಾಪಕರೇ, ನನ್ನನ್ನು ಬಳಸಬೇಡಿ, ನಾನು ಬಹಳ ದಣಿದಿರುವೆ ನನ್ನದೆನ್ನುವುದನ್ನೆಲ್ಲಾ ತಳ್ಳಿ ನೀವು ಹೇಳಿದಂತೆ ಕುಣಿದಿರುವೆ. ನನ್ನನ್ನು ಕೇಳದೇ ನಿಮ್ಮ ನಿರ್ಣಯಗಳನ್ನು ನನ್ನ ಮೇಲೆ ಹೇರುತ್ತೀರಿ, ಭವಿಷ್ಯವನ್ನು ಬಲಿಕೊಟ್ಟು ನಿಮ್ಮ ನರಕೆ ನನ್ನ ಬದುಕನ್ನು ನೆಡೆಸುವುದು ಕಷ್ಟ, ಈಗ ನಿಮ್ಮಿಂದ ದೂರ ಸರಿದು ನನ್ನ ದಾರಿಯನ್ನು ತುಳಿಯುತ್ತೇನೆ. ನಾನು ಬೆಳಕಿನತ್ತ ಸಾಗಬೇಕಾಗಿದೆ; ಈಗ ಕತ್ತಲೆ ಕಳೆದಿವೆ. ಎಂದು ಕವಿ ಹೊಸ ಜೀವನ ಮಾರ್ಗವನ್ನು ಕಂಡುಕೊಳ್ಳುತ್ತಾನೆ.

ಬದುಕಿನ ವೈರುಧ್ಯವನ್ನು, ಸಾವು ಮತ್ತು ಪ್ರೀತಿಗಳು ಪ್ರಭಾವವನ್ನು ಕುರಿತು ಹೇಳುವ ಮಣ್ಣಿನಿಂದ ಮಣ್ಣಿಗೆ ಒಂದು ಸುಂದರ ವಸ್ತುವನ್ನೊಳಗೊಂಡ ಕವಿತೆಯಾಗಿದೆ. ಆರು ವರ್ಷಗಳ ಕೆಳಗೆ ನಿವೃತ್ತಿಹೊಂದಿದ ಪ್ರಾಂಶುಪಾಲರಾದ ಪರಮೇಶ್ವರಪ್ಪನವರು ಎಲ್ಲರೊಂದಿಗೆ ಸೌಜನ್ಯತೆಯಿಂದ ನೆಡೆದುಕೊಂಡ ಒಳ್ಳೆಯ ಮನುಷ್ಯ ಇಂದು ಸತ್ತಿದ್ದಾನೆ. ಮಣ್ಣಿಗೆ ಹೋಗಿ ಬಂದ ಕವಿಗಳ ಮನದಲ್ಲಿ ಸಾವಿನ ಪ್ರಭಾವ ದಟ್ಟವಾಗಿದೆ. ಕವಿ ಜೀವನವನ್ನು ಕುರಿತು ಪ್ರಶ್ನಿಸುತ್ತಾನೆ. ಈ ಜೀವನದಲ್ಲಿ ಏನಿದೆ? ನನ್ನದು ಅನ್ನುವುದು ಏನಾದರೂ ಉಳಿಯುತ್ತದೆಯೆ? ಏನೂ ಇಲ್ಲ; ಎಲ್ಲ ನಶ್ವರ ಎಂಬ ಆಲೋಚನೆಗಳು ಮೂಡಿದಾಗ ಹುಡುಗಿಗೆ ಬರುತ್ತೇನೆ ಎಂದು ಹೇಳಿದ ಮಾತು ನೆನಪಾಯಿತು. ಅವಳ ಮೋಹಕ

ನಗೆ, ಸೂರೆಗೊಂಬ ಕಣ್ಣನೋಟ, ಸೌಂದರ್ಯ ಸೊಬಗುಗಳು ಸುಳಿದಾಡುತ್ತವೆ. ಇದೇ ಬದುಕಿನ ಅಣಕ. ಹುಟ್ಟು, ಸಾವು, ಸೌಂದರ್ಯ, ಜೀವನ ಎಲ್ಲಾ ಖಾಲಿ ಎಂದು ಬದುಕಿನ ಅಸಹ್ಯ ವರ್ತನೆಯನ್ನು ಕ್ಷಣ ಭಂಗುರತೆಯನ್ನು ಕುರಿತು ಹೇಳುತ್ತಾರೆ.

ಕವಿಗೆ ತಾನು ಹುಟ್ಟಿ ಆಡಿಬೆಳೆದ 'ಯಾದವಾಡ'ವೆಂದರೆ ಬಹಳ ಇಷ್ಟ, ಅಲ್ಲಿನ ಬಾಲ್ಯದ ಲೋಕವೆಲ್ಲಾ ಗಂಧರ್ವ ಲೋಕವಾಗಿತ್ತು. ಕವಿ ಹಳ್ಳಿಗಳಲ್ಲಿರುವ ಸಂಸ್ಕೃತಿ ಮತ್ತು ಸಂಬಂಧಗಳು ಬಹಳ ಮೇಲ್ಮಟ್ಟದಲ್ಲಿರುತ್ತವೆ ಎನ್ನುತ್ತಾರೆ. ಜಾತಿ ಅಂತಸ್ತುಗಳನ್ನು ಮೀರಿನಿಂತ ಮಾನವೀಯ ನೆಲೆಗಳು ಅಲ್ಲಿ ಸ್ಥಾನ ಪಡೆದು ಕೊಂಡಿರುತ್ತವೆ. ಹಳ್ಳಿ ಜನಗಳ ಮಧ್ಯ ಒಂದು ಭಾವನಾತ್ಮಕವಾದ ಕೌಟುಂಬಿಕ ವಾತಾವರಣವಿರುತ್ತದೆ. ಇದೆಲ್ಲಾ ಇರುವುದು, ಇದ್ದದ್ದು ತಾನು ಬಾಲಕನಾಗಿರುವಾಗ ಅಂಥ ಹಳ್ಳಿಯನ್ನು ನೋಡಿ ಆನಂದ ಪಡಬೇಕೆಂದು ಕವಿ ಬಯಕೆ. ಆದರೆ ಈಗ ಅಲ್ಲಿಯ ವಾತಾವರಣ ಸಂಪೂರ್ಣವಾಗಿ ಋಣಾತ್ಮಕ ಬದಲಾವಣೆಯಾಗಿದೆ. ಕುರುಬರ ಎಲ್ಲಿನ ಗುಡಿಸಲಿಗೆ ತಿಂಗಳ ಹಿಂದೆ ಬೆಂಕಿ ಹಚ್ಚಿದ್ದರು. ಫಕ್ಕೀರಪ್ಪನ ಕೊಲೆ ಮಾಡಿದ ಸಂಗ್ಯ ಬಿಡುಗಡೆಯಾಗಿ ಮತ್ತೆ ಬಂದಿದ್ದಾನೆ. ಮದುವೆಯಾಗದೆ ಬಸುರಿಯಾದ ಪಿಂಜಾರ ಮರೆಪ್ಪನ ಮಗಳು ಭಾವಿಯಲ್ಲಿ ಬಿದ್ದು ಸತ್ತಿದ್ದಾಳೆ. ಗುರು ಸಿದ್ದಪ್ಪನ ಸೆರೆ ಅಂಗಡಿ ಜೋರಾಗಿ ನೆಡೆದಿದೆ. ಕವಿಗಳ ಹೊಲದಲ್ಲಿರುವ ಈ ಚಟ ಮರದಿಂದಲೂ ಸಿಂಧೀ ತೆಗೆಯುತ್ತಿದ್ದಾರೆ. ಇಂತಹ ಅನೇಕ ವಿಷಯಗಳನ್ನು ಕೇಳಿ ಕವಿಗೆ ಮಾತೇ ಬರುವುದಿಲ್ಲ. ಕವಿಯ ಬಾಲ್ಯದ ಪ್ರೀತಿಯ ಯಾದವಾಡ ಈಗ ಮೊದಲಿನಂತೆ ಇಲ್ಲ. ಈಗಿನದು ಸ್ವತಂತ್ರ ಭಾರತದ ಪ್ರಜಾಪ್ರಭುತ್ವದಲ್ಲಿ ಸಾಮಾನ್ಯವಾಗಿ ನೆಡೆಯಬಹುದಾದಂತಹ ಘಟನೆಗಳನ್ನು ತನ್ನೊಳಗೆ ಸಂಭವಿಸಿಕೊಂಡಿರುವ ಯಾದವಾಡವಾಗಿದೆ. ಇದನ್ನೆಲ್ಲಾ ಕೇಳಿ ಬೇಸರಗೊಂಡು ಏನೊಂದೂ ಮಾತನಾಡಲಾರದೆ ಸಂಜೆ ಊರ ಹೊರಗಿನ ಕಬ್ಬಿಣ ಗಾಣದಲ್ಲಿ ಹಾಲು ಕುಡಿದು ಸೈಕಲ್ ಹತ್ತಿ ಬಂದು ಬಿಟ್ಟೆ ಎಂದು ಕವಿ ವಿಷಾದದಿಂದ ಹೇಳುತ್ತಾರೆ. ಗಾಂಧೀಜಿಯ ಹೇಳಿಕೆಯಂತೆ ನಿಜವಾದ ಭಾರತ ಹಳ್ಳಿಗಳಲ್ಲಿದೆ. ಆದರೆ ಎಲ್ಲಾ ಹಳ್ಳಿಗಳು ಹೀಗೆಯೆ ಭಾರತವನ್ನು ಪ್ರತಿನಿಧಿಸಿದರೆ ಹೇಗೆ ಎಂಬ ಆತಂಕ ಕವಿಯನ್ನು ಕಾಡುತ್ತದೆ. ಪ್ರೊ.ಸಿ. ನಾಗಣ್ಣನವರು ಹೇಳುವಂತೆ ''ಇದು ಕೇವಲ ಒಂದು ಊರಿನ ಕಥೆಯಲ್ಲಿ ಸ್ವತಂತ್ರ ಭಾರತದ ಅತಂತ್ರ ಕಥೆ ಒಂದರ್ಥದಲ್ಲಿ ಮೂರನೇ ಜಗತ್ತಿನ ಕಥೆ''. [೨೬]

ಕವಿಗೆ ರೋಮ್ಯಾಂಟಿಕ್ ಐಡಿಯಾಗಳಿಗೆ ಕೊರತೆಯಿಲ್ಲ. 'ಪ್ರಶ್ನಾತೀತರು' ಬುದ್ಧಿವಂತಿಕೆ ಉಪಯೋಗಿಸಿ ಬರೆದ ಕವನವಾಗಿದೆ. ಕವಿಗಳು ಹುಡುಗಿಯೊಂದಿಗೆ ಸಂವಾದ ನೆಡೆಸುವ ರೀತಿಯಲ್ಲಿ ಈ ಕವನವಿದೆ. ಕವಿ ನೀನಿಲ್ಲದೆ ಬದುಕುವುದಿಲ್ಲ ಎಂದಾಗ, ಮದುವೆಯಾಗುವ ತನಕ ಹೀಗೆ ಹೇಳುತ್ತಾ ಎಂದಳು. ಹೀಗೇಕೆ ಅವಮಾನ ಮಾಡುತ್ತೀಯ ಎಂದಾಗ ಅವಮಾನದ ಕುಂಚದಿಂದ ಸತ್ಯ ಮೂಡುತ್ತದೆ ಎನ್ನುತ್ತಾಳೆ. ನನ್ನ ಭಾವನೆಗಳ ಬಗ್ಗೆ ನಂಬಿಕೆಯಿಲ್ಲವೇ ಎಂದಾಗ, ಭಾವನೆ ನಂಬಿಕೆಯಾಗುತ್ತದೆ. ನಂಬಿಕೆ ರೂಢಿಯಾಗುತ್ತದೆ. ರೂಢಿ ಸತ್ತು ಹೋಗುತ್ತದೆ ಎನ್ನುತ್ತಾಳೆ. ಹೀಗೆ ಮುಂದುವರಿಯುವ, ಗೀತೆ ಪ್ರಶ್ನೋತ್ತರದ ಪಾಠವಾಗಿ ಕೊನೆಗೆ ಕವಿ ಪ್ರಶ್ನಾತೀತನಾಗುತ್ತಾನೆ. ಸುಮ್ಮನೆ ಕಣ್ಣು ಬಿಟ್ಟು ಮಲಗಿ ಕೊಳ್ಳುತ್ತಾನೆ.

ಬದುಕನ್ನು ಅದು ಇದ್ದಂತೆ ಸ್ವೀಕರಿಸಬೇಕಾದರೂ ಮನಸ್ಸು ಗಟ್ಟಿಯಾಗಿರಬೇಕು. ತಾನಿರುವ ಸ್ಥಿತಿಯನ್ನೂ ಅರಿತು ಸಮತೂಕ ಹಾಕುತ್ತಾ ಮುನ್ನೆಡೆಯಬೇಕು, ಜೀವನದ ನಿರುದ್ವಿಗ್ನ ಸ್ಥಿತಿಯನ್ನು ಕುರಿತು ಬಹಳ ಸುಂದರವಾಗಿ ಹೇಳುವ ಕವನ 'ಹಿಮ' ಈ ಕವನದಲ್ಲಿ ಕವಿ ತಾನು ದೂರ ಸಾಗಿಬಂದ ಊರಿನಲ್ಲಿ ನೆಲವಿಲ್ಲ, ನಭವಿಲ್ಲ, ಇಲ್ಲಿ ಮಾತುಗಳು ಶಬ್ದಗಳು, ಅರ್ಥಗಳು ಇಲ್ಲವೇ ಇಲ್ಲ. ಕವಿ ಇಲ್ಲಿ ಇಲ್ಲಿಗಳ ಸರಮಾಲೆಯನ್ನೇ ಹೇಳುತ್ತಾನೆ. ಈ ಊರು ಹೇಗೆ ನೆಲೆಯೂರಿದೆಯೋ ತಿಳಿದಿಲ್ಲ. ಪುಣ್ಯ, ಪಾಪ, ಮೋಹ, ಗುಲ್ಲು-ಗದ್ದಲುಗಳು ಇಲ್ಲಿಲ್ಲ. ಅರಿವು ಅಜ್ಞಾನಗಳೂ ಇಲ್ಲ, ಇದರ ತಕ್ಕೆಗೆ ಸಿಕ್ಕು ನಾನು ಸಾಯವುದಿಲ್ಲ ಬದುಕುವುದಿಲ್ಲ. ಎಂದು ಹೇಳುವ ಕವಿ ಹೊಯ್ದಾಟದ ಸ್ಥಿತಿಯಲ್ಲಿದ್ದಾನೆ. ಇಂತಹ ಸ್ಥಿತಿಯಲ್ಲಿ ಕವಿ ಹೇಗೆ ನೆಲೆಯೂರಿದ್ದಾನೆಂದರೆ

ಎಲೆಯ ರಸದಂತೆ ಬೀಜ
ಸ್ನೇಹದ ಹಾಗೆ ನೆಲದ ಬೇರಿನ ಹಾಗೆ
ಬೆಳಕ ತೇರಿನ ಹಾಗೆ
ನೆಲವಾಗಿ ಬಾನಾಗಿ ಬನವಾಗಿ ಮನವಾಗಿ
ಕ್ಷಣವಾಗಿ ಕಣವಾಗಿ
ನಿಂದೆ
ಈ ಊರು ಉಸಿರಾಗಿ,

ಹೇಗೋ ವಾಸ್ತವದ ಸ್ಥಿತಿಯನ್ನು ನಿಭಾಯಿಸುತ್ತಾ ಅದರಲ್ಲಿ ಯಶಸ್ವಿಯಾದರೂ ಇನ್ನು ಎಲ್ಲವನ್ನು ಅರಿಯುವುದು ಸಾಧ್ಯವಾಗಿಲ್ಲ ಎನ್ನುವ ಭಾವ ಕವಿಯನ್ನು ಕಾಡುತ್ತಲಿದೆ.

ಹೀಗೆ ಈ ಕವನ ಸಂಕಲನದಲ್ಲಿ ಕವಿ ಸಮಾಜದ ಓರೆ ಕೋರೆಗಳನ್ನು, ರಾಜಕಾರಣಿಗಳ ಸೋಗಲಾಡಿತನಗಳನ್ನು ಮುಗ್ಧಮನಸ್ಸಿನ ಹೊಯ್ದಾಟಗಳನ್ನು ಇವೆಲ್ಲವನ್ನೂ ಮೀರಿ ದಿನನಿತ್ಯದ ಸಾಮಾನ್ಯ ಬದುಕು ಅರ್ಥ ಕಳೆದುಕೊಳ್ಳುತ್ತಿರುವುದನ್ನು, ತನ್ನಿರುವನ್ನೂ ಕುರಿತು ಅವಲೋಕನ ಮಾಡಿಕೊಳ್ಳುವ ಕವಿ 'ಪರದೇಶಿ' ಕವನ ಸಂಕಲನದ ಮೂಲಕ ವೈವಿಧ್ಯಮಯವಾದ ಗೀತೆಗಳನ್ನು ಕಟ್ಟಿಕೊಟ್ಟಿದ್ದಾರೆ.

**೪. ನೂರಾರು ಪದ್ಯಗಳು**

ಡಾ.ಸಿದ್ದಲಿಂಗ ಪಟ್ಟಣಶೆಟ್ಟಿಯವರ ಎಲ್ಲಾ ಕವನ ಸಂಕಲನಗಳಲ್ಲಿ ಶೈಲಿಯ ದೃಷ್ಟಿಯಿಂದ ವಿಶಿಷ್ಟವಾದದು. ಈ "ನೂರಾರು ಪದ್ಯಗಳು" ಎನ್ನುವ ಕವನ ಸಂಕಲನವಾಗಿದೆ. ೧೯೭೭ರಲ್ಲಿ ಅನನ್ಯ ಪ್ರಕಾಶನ ಧಾರವಾಡದಿಂದ ಇದು ಪ್ರಕಟನೆಗೊಂಡಿದೆ. ಕವನ ಸಂಕಲನದ ತಲೆ ಬರಹವೇ ಹೇಳುವಂತೆ ಇಲ್ಲಿ ಒಂದು ನೂರಾ ಆರು ಪದ್ಯಗಳಿವೆ.

ಈ ಸಂಕಲನದಲ್ಲಿನ ಬಹುತೇಕ ಎಲ್ಲಾ ಕವನಗಳು ಗಾತ್ರದಲ್ಲಿ ಸಂಪೂರ್ಣ ಚಟುವಟಿಕೆಗಳೂ ಆಗಿರದೆ, ಭಾವ ಗೀತೆಗಳಂತೆ ಹೆಚ್ಚಿನ ಸಾಲುಗಳನ್ನು ಹೊಂದಿರದೆ ಜಪಾನೀ ಭಾಷೆಯ ಸಾಹಿತ್ಯದಲ್ಲಿರುವ ಹಾಯ್ಕುಗಳನ್ನು ಹೋಲುತ್ತವೆ. ಪರಿಣಾಮದ ದೃಷ್ಟಿಯಿಂದಲೂ ಹಾಯ್ಕುಗಳಿಗೆ ಹತ್ತಿರವಾಗಿವೆ. ಡಾ. ಎಂ.ಪಿ. ಮಂಜಪ್ಪಶೆಟ್ಟಿ, ಅವರು ಹೇಳುವಂತೆ "ಈ ಮುಕ್ತಕಗಳೆಲ್ಲವೂ ಪ್ರೀತಿ, ಪ್ರೇಮ, ಕಾಮ, ಪ್ರೇಮಿಗಳ ಪ್ರೇಮದ ಗಾಢತೆ, ವಿರಹದ ಪರಿಣಾಮ ಮುಂತಾದುವನ್ನು

ಕುರಿತು ವರ್ಣಿಸುತ್ತವೆ. ಕವಿಯಾದವನು ಒಂದು ವಸ್ತುವನ್ನೋ, ಒಬ್ಬ ವ್ಯಕ್ತಿಯನ್ನೋ ಕಂಡಾಗ ಫಳಕ್ಕನೆ ಹೊಳೆದ ಅನುಭವದ ವೀಚಿಗಳು, ಇವಾಗಿವೆ. ಇವು ನಿಜವಾಗಿ ಅನುಭವದ ಬುಗ್ಗೆಗಳು, ಕವಿಯ ಅಭಿವ್ಯಕ್ತಿಯ ಅಪ್ಪಟ ಹರಳುಗಳು, ನಿಜವಾದ ರಸದ ಘಟ್ಟಗಳು ಇಲ್ಲವೆ ಸ್ವತಃ ಕವಿಗಳೇ ಈ ಸಂಕಲನದಲ್ಲಿ ತಮ್ಮ ಕವಿತೆಗಳನ್ನು ಎಂದು ಕರೆದು ಕೊಂಡಿದ್ದಾರೆ. ತಮ್ಮ ಕವಿತೆಗಳನ್ನು ಕುರಿತು, ಕವನಗಳ ಮೂಲಕ ತಾವೇ ವಿಮರ್ಶೆಗಳಿಗೆ ಒಲಪಡಿಸಿಕೊಂಡಿದ್ದಾರೆ. ಈ ಕವಿತೆಗಳು ಚಿಲ್ಲರೆ ಎಂದು ಮಿತ್ರರು, ಕವಿಗಳು, ಅಧ್ಯಾಪಕರು ಹಳಿಯಬಹುದಾದ, ಹೊಗಳಬಹುದಾದ, ನಾಟಕೀಯವಾಗಿ ನಗಬಹುದಾದ ಹಲವು ಚಿಲ್ಲರೆ ಚಿಕ್ಕ ಚೊಕ್ಕ ಪದ್ಯಗಳು ಇವು ಎಂದು ಹೇಳಿಕೊಂಡಿದ್ದಾರೆ.

ಡಾ.ಮಂಜುಳಾ ಹುಲ್ಲಹಳ್ಳಿ ಹೇಳುವಂತೆ ''ನೂರಾರು ಪದ್ಯಗಳು ಪ್ರೀತಿ ಪ್ರೇಮಿಗಳ ಹೂ ಕುಂಡ ಹಚ್ಚಿದಂತೆ ಕಣಕಣವಾಗಿ ಚಿಮ್ಮುತ್ತದೆ.'' ಕವಿಗಳ ಕಾವ್ಯವಸ್ತು ಇಲ್ಲಿಯೂ ತಮಗೆ ಇಷ್ಟವಾದ ಜೀವನಕ್ಕೆ ಬಹು ಹತ್ತಿರವಾದ ವಿಷಯಗಳಿಂದಲೇ ಕೂಡಿದೆ ಎಂದು ಕವನ-ಕರ್ಮ ಮುಕ್ತಕದಲ್ಲಿ ಹೇಳಿದ್ದಾರೆ.

ನನಗೆ ಸಂಬಂಧಿಸಿದ
ಆದರೂ
ನೂರಾರು ಮಿತ್ರ-ಕಥೆಗಳ
ವ್ಯಥಿತ ಮರ್ಮಗಳು
ಈ ಕವನ
ಕರ್ಮಗಳು

ಎಂದು ಸ್ಪಷ್ಟಪಡಿಸುತ್ತಾರೆ. ಮತ್ತೆ ಮತ್ತೆ ಕವಿತೆಯ ವಸ್ತುವಾಗಿ ಹೆಣ್ಣು ಬರಬೇಕೆ ಎಂದು 'ವಸ್ತು' ಕವನದಲ್ಲಿ ಗೊಣಗಿಕೊಳ್ಳುತ್ತಾರೆ.

ಕವಿತೆ ಬರೆಯುವುದಕ್ಕೆ ಈ ಹಾಳು ಹುಡುಗಿಯರು ಬೇಕೆ?
ಇವರ ಗಲ್ಲದ ಬಣ್ಣ ಸೊಂಟದ ತಿರುವು ಕಾಲು-ಕೈ
ಕಣ್ಣನ್ನೆ ಮಾತ್ರ ಕವಿತೆಗೆ ಮೂಳೆ ಮಾಂಸ ಮೈಯೆ?

ಎಂದರೂ, ಹೆಣ್ಣು ವಿರಹ ಪ್ರೀತಿಯ ಹಲವಾರು ಮಗ್ಗಲುಗಳನ್ನು ವಿವಿಧ ರೀತಿಯಲ್ಲಿ ಚಿಕ್ಕದಾದರೂ ಅತೀ ಚೊಕ್ಕವಾಗಿ ಅಭಿವ್ಯಕ್ತಪಡಿಸಿದ್ದಾರೆ. ಹೆಚ್.ಎಸ್. ವೆಂಕಟೇಶಮೂರ್ತಿಯವರು ಹೇಳುವ ಹಾಗೆ ''ಈ ನೂರಾರು ಪದ್ಯಗಳಲ್ಲಿ ಕವಿಗೆ ಲಘುಮಾ ಕೌಶಲ ಚೆನ್ನಾಗಿಯೇ ಸಾಧಿಸಿದೆ ಎನ್ನಬೇಕು. ಕವಿ ತಮ್ಮ ಪ್ರೇಮ ವಸ್ತುವಿನ ಹಲವು ಸಾಧ್ಯತೆಗಳನ್ನು ಇಲ್ಲಿ ಕಿಡಿ-ಕಿಡಿಮಾಡಿ ಹಿಡಿದ ಹಾಗಿದೆ. ವಸ್ತು ಸ್ಥಿತಿಯ ಬಗೆಗಿನ ಅರಿವು ಇದ್ದೂ ಮನಸ್ಸು ಕಹಿ ಆಗುವುದಿಲ್ಲ. ಹಾಯ್ಕು ಮಾದರಿಯ ಈ ತುಣುಕುಗಳು ಚುರುಕಾದ, ಪ್ರಾಮಾಣಿಕವಾದ, ಕಲಾತ್ಮಕವಾದ ಭಾವದ ಮಿನುಕುಗಳು ಎನ್ನಬಹುದು. ಇಲ್ಲಿ ಪಕ್ಷಪಾತವಿಲ್ಲ ಹೆಣ್ಣಿನಂತೆ ಗಂಡಿನಲ್ಲೂ ಇರುವ ದೌರ್ಬಲ್ಯದ ಅರಿವು ಕವಿಗಿದೆ. ಪ್ರೀತಿಯಲ್ಲಿ ಯಾವುದು ಸಾಚ? ಯಾವುದು ಧೋಕ? ತೀವ್ರವಾಗಿ ತೊಡಗಿದ ಪ್ರೀತಿಯ ಕ್ಷಣಗಳು ಆಯಾ ಗಳಿಗೆಯಲ್ಲಿ

ಸತ್ಯವೇ, ಇಂದು ಒಬ್ಬರು ನಾಳೆ ಇನ್ನೊಬ್ಬರು. ಮನುಷ್ಯನ ಅಪೂರ್ಣತೆ ತುಂಬುವ ದ್ವಿತೀಯಾರ್ಧದ ಹುಡುಕಾಟ ನಿರಂತರವಾಗಿ ನಡೆಯತಕ್ಕದ್ದೇ. ದಾಂಪತ್ಯದ ಚೌಕಟ್ಟಿನ ಒಳಗೆ; ಹೊರಗೆ ಇದು ಪ್ರವಾಹದ ರೀತಿ. ಈ ಅರಿವಿನಲ್ಲಿ ಕಾವ್ಯ ಸಾಗುತ್ತದೆ.''[೨೮] ಬದುಕಿನ ಬವಣೆಗಳನ್ನು ನುಂಗಿ ವಾಸ್ತವದಲ್ಲಿ ಒಳ್ಳೆಯ ಮಾರ್ಗದರ್ಶನದಲ್ಲಿ ನಡೆಯುವ ಧರ್ಮಗುರಿಯೇ ಕಾವ್ಯ ಪ್ರೇಮವಾಗುತ್ತದೆ; ಎಂದು ಹೇಳುವ ಕವಿ ಭವಿಷ್ಯ ಭೂತಗಳಿಗಿಂತ ವರ್ತಮಾನದ ಶ್ರೇಯಸ್ಸೇ ಆನಂದದಾಯಕ ಮತ್ತು ಸಾರ್ಥಕ. ಇದು ಕಾವ್ಯದ ಸ್ಥಾಯಿಯಾಗಬೇಕು, ಹಾಗಾದಾಗ ಮಾತ್ರ ಅನುಭಗಳಿಂದ ಮೂಡಿಬಂದ ಕಾವ್ಯ ಜೀವನಕ್ಕೆ ಉಪಯೋಗವಾಗುತ್ತದೆ. ಜೀವನ ಧರ್ಮ ಕಾವ್ಯ ಧರ್ಮವಾಗುತ್ತದೆ. ಇಂತಹ ಕಾವ್ಯ ಅನ್ಯ ಜೀವನಗಳಿಗೆ ಧರ್ಮ ಬೋಧನೆ ಮಾಡಿ ಸನ್ಮಾರ್ಗದಲ್ಲಿ ನಡೆಸುತ್ತದೆ ಎನ್ನುತ್ತಾರೆ ಕವಿಗಳು.

ಕವಿ ಮುಗ್ಧ ಮನಸ್ಸಿನಿಂದ ಎಲ್ಲವನ್ನೂ ಪ್ರೀತಿಸುವುದರಿಂದ ಸುಖವುಂಡಷ್ಟು ದುಃಖವನ್ನು ಅನುಭವಿಸಿದ್ದಾರೆ. ನೋವಿನಲ್ಲಿ ಮುಳುಗಿದ ಕವಿಗೆ ಬದುಕಿನ ಬಗ್ಗೆ ಬಹಳ ತಾತ್ಸಾರ ಭಾವ ಮೂಡುತ್ತದೆ. ಆಸೆಗಳು ಕಮರಿಹೋಗಿ ಭವಿಷ್ಯ ನಿರಾಶಾದಾಯಕವೆನಿಸಿದಾಗ ತನ್ನ ವ್ಯಕ್ತಿತ್ವ ಮತ್ತು ಅಸ್ತಿತ್ವಗಳ ಬಗ್ಗೆ ನಂಬಿಕೆಯಿಲ್ಲದಂತೆ ಆಗುವುದನ್ನು 'ಕೆಸರ ಕಂಬ' ಹನಿಗವನದಲ್ಲಿ ಹೀಗೆ ಹೇಳಿದ್ದಾರೆ.

ಕೆಸರಿನಲ್ಲಿ
ಹುಗಿದ
ಕಂಬ
ನಾ
ಇತ್ತೀಚೆಗೆ
ಬೇರು.
ಊರುವುದು, ಮೂಡುವುದು, ಚಿಗಿಯುವುದು
ಹೇಗೆ?

ಎಂದು ಆತಂಕಪಡುವ ಕವಿ ತನಗೆ ತಾನೇ ಆಗಂತಕನಾಗಿ ಬಿಡುತ್ತಾನೆ. ನಾನು ಯಾರು ನನ್ನಿಂದ ನಿಮಗೆ ಏನಾಗಬಹುದು ಇಷ್ಟು ದಿನಗಳಿಂದ ನಾನು ಉಸಿರಿದ್ದು, ನರಳಿದ್ದು, ನೆಡೆದಿದ್ದು, ನುಡಿದದ್ದು ಬರೆದದ್ದು, ಬರೆಯಬೇಕೆಂದುಕೊಂಡು ಹೊರಟದ್ದು ಯಾವುದೆಂಬ ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಾ ಕೊನೆಗೆ ನಾನು ಬಲೆಯೊಳಗಿನ ಮೀನು ಎಂದು ಸಂಕಟದಿಂದ ಹೇಳಿಕೊಳ್ಳುತ್ತಾರೆ.

ಹೆಣ್ಣಿನಂತೆ ಗಂಡಸರಿಗೂ ಇರುವ ದೌರ್ಬಲ್ಯಗಳನ್ನು ಮುಚ್ಚುಮರೆಯಿಲ್ಲದೆ ಕವಿ ದೇವರು ಹನಿಗವಿತೆಯಲ್ಲಿ ಹೇಳಿದ್ದಾರೆ.

ನಾ ದೇವ
ರಿದ್ದಂತೆ
ನನ್ನ ನಂಬುವುದು

ಸಾಧ್ಯವಿದಷ್ಟು

ಬೇಡ

ಕವಿ ಪಟ್ಟಣಶೆಟ್ಟರು ಮನದಲ್ಲಿ ಮೂಡಿದ ಭಾವನೆಗಳನ್ನು ಚಿಕ್ಕದಾಗಿ ಸುಂದರವಾಗಿ ಚಿತ್ರಿಸಿದ್ದಾರೆ. ಇವರಿಗೆ ಪ್ರೀತಿ ಶೃಂಗಾರಗಳೆಂದರೇ ಬಲು ಇಷ್ಟ. ಕವಿಮನಸ್ಸು ನಿಷ್ಕಳಂಕವಾಗಿರುವುದನ್ನು 'ಸಿದ್ಧ ಚಹ' ಕವಿತೆಯಲ್ಲಿ ಗುರುತಿಸಬಹುದಾಗಿದೆ.

ಶುದ್ಧವಾದ

ಸಿದ್ಧ

ಚಹ ನಾನು

ನನ್ನೊಳಗಿನ

ಚಹ ಹಾಲು ನೀರು ಸಕ್ಕರೆ

ಬೇರ್ಪಡಿಸುವುದು

ಸಾಧ್ಯವಿಲ್ಲ

ನಿನಗೂನು.

ಕವಿಗಳ ಶುದ್ಧ ಅವರ ಪ್ರೀತಿಯೂ ಶುದ್ಧ ಅವರ ಹೃದಯವೂ ಶುದ್ಧವಾಗಿದೆ. ಸಿದ್ಧಗೊಂಡ ಚಹದಲ್ಲಿನ ವಸ್ತುಗಳನ್ನು ಹೇಗೆ ಬೇರ್ಪಡಿಸುವುದು ಸಾಧ್ಯವಿಲ್ಲವೋ ಹಾಗೆಯೇ ಪ್ರೀತಿ ಪ್ರೇಮದ ಬೆರೆತ ಭಾವಗಳನ್ನು ಪ್ರತ್ಯೇಕಿಸಲು ಸಾಧ್ಯವಿಲ್ಲ. ಕವಿ ಪಟ್ಟಣಶೆಟ್ಟರ ಪ್ರಕೃತಿ (ಹೆಣ್ಣು) ಮತ್ತು ನಿಸರ್ಗವನ್ನು ಒಮ್ಮೇಲೆ ಪ್ರೀತಿಸುತ್ತಾರೆ. ಅಲ್ಲಿನ ಸೌಂದರ್ಯವನ್ನು ಕಂಡು ಆಶ್ಚರ್ಯವ್ಯಕ್ತಪಡಿಸುತ್ತಾರೆ. ಪ್ರಕೃತಿ ವಿಪುಲಧಾರಿಣಿ ಎನ್ನುವ ಸತ್ಯವನ್ನು ''ಕೇರಳದ ಹಾದಿಗಳು'' ಕವಿತೆಯಲ್ಲಿ ಕಂಡುಕೊಳ್ಳುತ್ತಾರೆ.

ಮೇದಿನಿ,

ನಿನ್ನ ಒಳಸಿಕ್ಕ ಕಮಲ

ಕಣ್ಣುಗಳಲ್ಲಿ ಕೇರಳದ ಹಾದಿ

ಗಳು ತೆಂಗು ತೋಟಗಳು ನೀರೆ

ಯರ ಬರಿದ ಎದೆಗಳು ಒತ್ತು

ನೀರುಗಳು ಧಾರೆಗಳು ವಿಮಲ

ಆ ಕಳಿಸಿ ಹಾಯಾಗಿ ಮಲಗಿದ್ದು ಕಂಡಾಗ

ಇಷ್ಟುದಿನ

ದಾಯುಷ್ಯ ವ್ಯರ್ಥ ಕಳೆದೆ

ಅನ್ನಿಸಿತು.

ಕವಿಗಳಿಗೆ ತಮ್ಮ ವೃತ್ತಿಯಾದ ಪ್ರೊಫೆಸರಿಕೆಯಲ್ಲಿ ಕವನಗಳನ್ನು ಬರೆಯಲು ಸಾಧ್ಯವಾಗುತ್ತಿಲ್ಲ ಎನ್ನುವ ಕಳವಳವಿದೆ. ಸಿಟ್ಟು, ದುಃಖ, ಪ್ರೀತಿಗಳನ್ನು ಕುರಿತು ಪೂರ್ಣ ಆಳಕ್ಕಿಳಿದು ಕಾವ್ಯ ರಚಿಸಲು ಆಗುತ್ತಿಲ್ಲ. ನನ್ನ ಬಗ್ಗೆ ನನಗೇ ತಿಳಿಯುತ್ತಿಲ್ಲ. ಆಳವನ್ನಳೆಯುವುದೇ ವ್ಯರ್ಥ ಎಂಬ ಭಾವನೆ ಮೂಡಿದೆ. ಹೀಗೆ ಹಲಬುವುದೇ ನನಗುಳಿದ ಸಂಪತ್ತು ಬಹುದೊಡ್ಡ ಕುತ್ತ. ಎಂದು ಹಿಂಜರಿಕೆಗೊಳಪಡುವ ಕವಿ ಇದ್ದಕ್ಕಿದ್ದಂತೆ ಸ್ಫೂರ್ತಿಗೊಂಡು ಕಾವ್ಯ ಸೃಷ್ಟಿಯಲ್ಲಿ ತೊಡಗುತ್ತಾರೆ. ಪ್ರೀತಿಯನ್ನು ಕುರಿತು ಹೇಳುವ ಶೈಲಿಯೂ ಜಾಣತನದಿಂದ ಕೂಡಿರುವುದನ್ನು 'ಕಾಫಿ : ಸಂಜೆ : ಸೀರೆ' ಮತ್ತು 'ಇವಳನಗೆ' ಕವಿತೆಗಳಲ್ಲಿ ಕಾಣಬಹುದಾಗಿದೆ.

ಓ ಎಷ್ಟು ಚೆನ್ನಾಗಿದೇರಿ
ಕಾಫಿ?
ನೀವುಟ್ಟ ಈ ಸಂಜೆ ಸೀರೆಯ ಹಾಗೆ
ಇವಳ
ನಗೆ ರೇಶಿಮೆ
ಯ ಕೆಂಪು ದಾರಕೆ ಕಟ್ಟಿ
ಮನಸ ಪಾತರಗಿತ್ತಿ
ಹಾರಿಸಲೆ

ಪ್ರೀತಿ ಪ್ರೇಮಗಳಂತೆ ಸಮಾಜ ಮತ್ತು ದೇಶವನ್ನು ಕುರಿತು ಕವಿಗಳು ಅನೇಕ ಕಾವ್ಯಗಳನ್ನು ಬರೆದಿದ್ದಾರೆ. ದೇಶ, ಸಮಾಜಗಳನ್ನು ಸುಧಾರಿಸುವುದು ನನ್ನ ಕೈಲಾಗದ ವಿಚಾರವಾದರೂ ನನ್ನನ್ನು ನಾನು ಸುಧಾರಿಸಿಕೊಳ್ಳಬಹುದು ಎನ್ನುವ ಅಭಿಪ್ರಾಯ ಕವಿಗಳದು. 'ನನ್ನನ್ನು ನಾನು ತಿದ್ದಿಕೊಂಡರೆ ಜಗತ್ತಿನಲ್ಲಿ ಒಬ್ಬ ಮೂರ್ಖ ಕಡಿಮೆಯಾದಂತೆ' ಎನ್ನುವ ರಸ್ಕಿನ್ನರ ಹೇಳಿಕೆಯಂತೆ ಪ್ರತಿಯೊಬ್ಬರೂ ತಮ್ಮನ್ನು ತಾವು ತಿದ್ದಿಕೊಂಡರೆ ಜಗತ್ತು ಸಮಾಜಗಳು ತನ್ನಷ್ಟಕ್ಕೆ ತಾನೇ ಸುಧಾರಣೆಯಾಗುತ್ತದೆ. ಮೊದಲು ನಾವುಗಳು ಭ್ರಾಂತಿಗಳಿಂದ ಹೊರಬರುವುದನ್ನು ಕಲಿತಾಗ ಧನಾತ್ಮಕ ಬದಲಾವಣೆ ಸಾಧ್ಯವೆಂದು 'ಸುಧಾರಣೆ' ಕವಿತೆಯಲ್ಲಿ ಹೇಳುತ್ತಾರೆ.

ನಾ
ಒಬ್ಬ
ನಿಂದ
ಸಮಾಜ ದೇಶ
ಸುಧಾರಣೆ
ಆಗುವುದಿಲ್ಲ
ನಾ ಒಬ್ಬ
ಸುಧಾರಿಸಿಕೊಂಡರೆ

ಜೊಳ್ಳು ಮೋಹಗಳಿಂದ

ಸುಳ್ಳು ಭ್ರಮೆ ಆಶ್ವಾಸನೆಗಳಿಂದ

ಚೇತರಿಸಿ ಕೊಂಡರೆ

ಸಾಕು

ಸಾಧ್ಯ

ಕವಿ ತಾವು ಪ್ರೀತಿಸುವ ವಸ್ತುವಿಗೆ ಅದರ ಕಣ್ಣು ಕಿವಿಗಳಿಗೆ ಅಂತರಂಗ ಬಹಿರಂಗಗಳನ್ನು ಅರ್ಪಿಸಿ ನಡೆದಿದ್ದಾರೆ. ಆದರೆ ಅದೇ ಕಣ್ಣು ಇಂದು ನೋಡದಾಗಿದೆ. ಕಿವಿಗೆ ಪ್ರೀತಿಯ ಮೆಲುಮಾತುಗಳು ಕೇಳಿಸದಾಗಿದೆ. ಇದರಿಂದ ಮನಸು ಘಾಸಿಗೊಂಡಿರುವುದನ್ನು 'ಅವಳಗಲ್ಲ' ಹನಿಗವಿತೆಯಲ್ಲಿ ಹೇಳಿಕೊಂಡಿದ್ದಾರೆ.

ಅವಳ ಗಲ್ಲದ ಮೇಲೆ

ನಗೆಯ ಸಿಂಗರಿಸಿಟ್ಟು

ಇಂದು

ಅಳುತ್ತಿದ್ದೇನೆ.

ಪ್ರೀತಿ ಮಾಡಿದ ತಪ್ಪಿಗಾಗಿ ಪ್ರಾಯಶ್ಚಿತ್ತ ಪಡುತ್ತಿದ್ದಾರೆ. ವಿಷಣ್ಣ, ವಿಷಮ, ವಿಷಾದಗಳು ಬಂದು ಕಾಡುತ್ತಲಿವೆ. ಮಿತ್ರರು ಕವಿಗಳನ್ನು ಹದಿನಾಲ್ಕರ ಹುಡುಗ ಎಂದು ತಮಾಷೆಮಾಡಿದ್ದಾರೆ. ಯಾರು ಏನೇ ಅಂದರೂ ಕವಿಗಳಿಗೆ ಲೆಕ್ಕವಿಲ್ಲ. ಆದರೆ ಮತ್ತೆ ಬಂದು ಕಾಡುವ ನೆನಪುಗಳು ನೋವುಂಟುಮಾಡಿವೆ. ನೆನಪಿನ ಅಂತಃಪುರದಲ್ಲಿ ಕವಿ ವಾಸವಾಗಿದ್ದಾನೆ. ಬಂಧಿಯಾಗಿದ್ದಾನೆ. ಸ್ವಯಂ ಕೃತ ಅಪರಾಧಿಯಾಗಿದ್ದಾನೆ. ತನ್ನ ವಿಫಲ ಪ್ರೇಮಕ್ಕೆ ತಾನೇ ಕಾರಣವಾಗಿರುವುದನ್ನು 'ನೆನಪಿನಂತಃಪುರ' ಕವಿತೆಯಲ್ಲಿ ಹೇಳಿಕೊಂಡಿದ್ದಾರೆ. ತನ್ನನ್ನು ತಾನೇ ಹಳಿದುಕೊಳ್ಳುವುದು ಬಿಟ್ಟು ಗತ್ಯಂತರವಿಲ್ಲದಂತಾಗಿದೆ.

ನಾನು ಕ್ರಿಸ್ತನ ಮೂಳೆ ಮೂಳೆಗೂ ಮಳೆ ಜಡಿದವ

ಕೇದಿಗೆಯ ಬನದಲ್ಲಿ

ಮಾಯವಾದವ

ತಾಯ ಮೊಲೆ ಹಾಲನ್ನು ಚಹದಲ್ಲಿ ಹಾಕಿ

ರುಚಿ ನೋಡ ಬಯಸಿದವ

ಹೂ ಪಕಳೆಗಳ ಸುಟ್ಟು

ಮೈ ಕಾಸಿಕೊಂಡವ

ನಿನ್ನ ತಾತ್ಸಾರದುರುಲು ಹಾಕಿಕೊಂಡು ಸಾಯುವೆ

ನಿನ್ನ ನೆನಪಿನಂತಃಪುರದಿ

ಪಟ್ಟಣಶೆಟ್ಟರು ಬದುಕನ್ನು ಕುರಿತು ಮಾರ್ಮಿಕವಾಗಿ ಮಾತನಾಡುತ್ತಾರೆ. ಬದುಕು ತನಗೆ ಬೇಕಾದದ್ದನ್ನು ಹೇರಿ ಮುಂದೆ ಸಾಗಿದೆ. ಇದಕ್ಕಾಗಿ ಯಾರನ್ನು ದೂರಬೇಕು? ನಮ್ಮ ಬದುಕೇ ನಮ್ಮ ಕೂಡ ಮುನಿದರೆ ಯಾರಿಗೆ ಹೇಳಬೇಕು? ಆಗ ಕುರುಡರಾಗಿ, ಮೂಕವಾಗಿ ಮುನ್ನಡೆವುದು ಅನಿವಾರ್ಯ. ಬಂದಂತೆ ಸ್ವೀಕರಿಸುವುದೇ ಬದುಕಾಗಿದೆ ಎಂದು ಕವಿ 'ಛಾಯಾಮಾತ್ರರು' ಗೀತೆಯಲ್ಲಿ ಹೇಳುತ್ತಾರೆ.

ನಮ್ಮ ಬದುಕಿನ ಒಡೆಯರಲ್ಲ
ನಾವು
ಯಾರದೆ ಬದುಕಿನ ನೆರಳು
ಮಾತ್ರ.

ನಮ್ಮ ಈ ದಿನದ ಬದುಕು ಬೇರೆ ಯಾರದೋ ಬದುಕಿನ ನೆರಳಾಗಿದೆ. ಆದ್ದರಿಂದ ನಾವೆಲ್ಲಾ ಛಾಯಾಮಾತ್ರರಾಗಿದ್ದೇವೆ. ಇಲ್ಲಿ ಬದುಕು ಬೆಳಕು-ನೆರಳಿನಾಟವಾಗಿದೆ. ವೈವಿಧ್ಯತೆಗಳಿರುವಂತೆ ವೈರುದ್ಯತೆಗಳಿವೆ. ಕವಿಗೆ ಮರೆಯಬೇಕಾದ ವಿಷಯ, ಘಟನೆ ಮರೆಯಲು ಸಾಧ್ಯವಾಗುತ್ತಿಲ್ಲ. ಪ್ರೀತಿ ತಂದ ನೋವುಗಳು ಹೇರಳವಾಗಿವೆ. ಪ್ರೀತಿಯ ಸೆಳೆತಕ್ಕೆ ಒಳಗಾಗಿ ಹಪಹಪಿಸುತ್ತಾರೆ. ಮದುವೆಯಾದದ್ದಕ್ಕೆ ಅದರಿಂದ ಉಂಟಾದ ವಿಷಾದಕ್ಕೆ ಮದುವೆಯಾದದ್ದಕ್ಕೆ ಕವನದಲ್ಲಿ ಮರುಗುತ್ತಾರೆ.

ಕೆಲವರು ಮರೆಯುತ್ತಾರೆ
ಮದುವೆ ಯಾದ ನಂತರ
ಒಬ್ಬರನ್ನೊಬ್ಬರು
ನಾವು ನೆನಪಿಟ್ಟಿದ್ದೇವೆ
ಮದುವೆ ಯಾದದ್ದಕ್ಕೆ
ಒಬ್ಬರನ್ನೊಬ್ಬರು.

ಸಿರಿತನಕ್ಕೆ ಸಂತೋಷಕ್ಕೆ ಸಂಗಾತಿಗಳು ಸಂಬಂಧಿಗಳು ಸಹಜವಾಗಿ ಹೆಚ್ಚಾಗಿಯೇ ಸ್ಪಂದಿಸುತ್ತಾರೆ. ಆದರೆ ಕವಿ ಬದುಕು ಇದಕ್ಕೆ ವಿರುದ್ಧವಾಗಿದೆ. ಹಸಿದು ಕಕ್ಕಾಬಿಕ್ಕಿಯಾದ ಕನಸುಗಳು ನೀರಿಡಿಸಿ ನಿಬ್ಬೆರಗಾಗಿ ಒರಗಿರುವ ಆಸೆಗಳು, ಸತತವಾಗಿ ಮನವನಾವರಿಸಿದ ಆತಂಕಗಳು, ನಗೆಯ ನೆಲದಲ್ಲಿ ಪುಟದಿರುವ ಅಳುವಿನಲರುಗಳು ಕೈಕಾಲು ಮುರಿದು ಬಿಟ್ಟಿರುವ ಹುಲುಸು ಕವನಗಳು ಇತ್ತೀಚೆಗೆ ನನ್ನ ಸಂಗಾತಿಗಳಾಗಿವೆ. ಎಂದು ಕವಿ ಹೇಳಿಕೊಂಡಿದ್ದಾರೆ. ಇಷ್ಟೆಲ್ಲಾ ವಿರಹ, ವಿಷಾದ, ದುಃಖದ ನಡುವೆ ಆಗೊಮ್ಮೆ-ಈಗೊಮ್ಮೆ ಮೂಡಿಬರುವ ರಸನಿಮಿಷಗಳನ್ನು ಸಂತೋಷದ ಸದಾವಕಾಶಗಳನ್ನು ಕವಿತೆಯಲ್ಲಿ ಸ್ಮರಿಸಿಕೊಂಡು ಅವುಗಳಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತಾರೆ.

ನನ್ನ ಮನಸ್ಸಿನ ಹೊಸ
ಹಸಿಯ ಭಾವಗಳ ಭಿತ್ತಿಗಳ ಮೇಲೆ
ತನ್ನ ದೊಡ್ಡ

ಕಣ್ಣು ಮೂಗು ತುಟಿಗಳ
ಮೆತ್ತ ಕುಂಚಗಳಿಂದ
ಬಯಕೆ ಬಣ್ಣಗಳನ್ನು ಬಳಿದ
ಕೆಲವು ರಸನಿಮಿಷಗಳಿಗೆ ಕೃತಜ್ಞ
ತೆ ಹೇಗೆ ಅರ್ಪಿಸಲಿ?

ಈ ಸಂಕಲನದಲ್ಲಿನ ಬಿಡಿ ಕವಿತೆಗಳು ವಸ್ತು ವೈವಿಧ್ಯತೆಯಿಂದ ಕೂಡಿವೆ, ಡಾ.ಎಂ.ಪಿ.ಮಂಜಪ್ಪಶೆಟ್ಟಿಯವರು ಹೇಳುವಂತೆ ''ಇಲ್ಲಿ ಅನಗತ್ಯ ಪದಬಳಕೆಯಾಗಲಿ, ವಿಸ್ತರಣೆಯಾಗಲಿ ಇಲ್ಲ. ಇಲ್ಲಿ ಕವಿ ತಮಗೆ ಅನಿಸಿದ್ದನ್ನು ಬಲು ಸಂಕ್ಷಿಪ್ತವಾಗಿ, ಭಾವಪೂರ್ಣವಾಗಿ, ರಸಪೂರ್ಣವಾಗಿ, ರೋಚಕವಾಗಿ ಹಾಗೂ ಮೋಹಕವಾಗಿ ಹೇಳಿದ್ದಾರೆ. ಹಾಗಾಗಿ ಇವು ನಿಜವಾದ ಕಾವ್ಯ ಸೌಂದರ್ಯವನ್ನು ತುಂಬಿಕೊಂಡಿರುವ ಕವಿತೆಗಳಾಗಿವೆ.''[೨೯]

**೫. ಪ್ರತೀಕ್ಷೆ**

ಪ್ರತೀಕ್ಷೆ ಸಿದ್ಧಲಿಂಗ ಪಟ್ಟಣ ಶೆಟ್ಟಿಯವರ ಐದನೆಯ ಕವನ ಸಂಕಲನವಾಗಿದೆ. ೧೯೭೬ರಿಂದ ೧೯೭೯ರ ವರೆಗಿನ ನಾಲ್ಕು ವರ್ಷಗಳಲ್ಲಿ ಕವಿಗಳು ರಚಿಸಿದ ಕವನಗಳು ಇಲ್ಲಿವೆ. ಈ ಸಂಕಲನದಲ್ಲಿ ನಲವತ್ತೈದು ಕವನಗಳಿವೆ. ೧೯೭೯ರಲ್ಲಿ ಅನನ್ಯ ಪ್ರಕಾಶನ ಮೈಸೂರಿನಿಂದ ಈ ಸಂಕಲನ ಪ್ರಕಟಣೆಗೊಂಡಿದೆ.

ಪ್ರತೀಕ್ಷ ಕವನ ಸಂಕಲನವು ಕವಿಗಳ ಈ ಮುಂಚಿನ ಕವನ ಸಂಕಲನಗಳಲ್ಲಿನ ಕಾವ್ಯಗಳಿಗಿಂತ ಹೆಚ್ಚಿನ ವಿಷಯ ವ್ಯಾಪ್ತಿಯನ್ನು ಹೊಂದಿವೆ. ಪ್ರತಿಯೊಂದು ವಸ್ತುವನ್ನು ನೋಡುವ ದೃಷ್ಟಿಕೋನವೂ ಭಿನ್ನವಾಗಿದೆ. ಹೆಚ್.ಎಸ್.ವೆಂಕಟೇಶ ಮೂರ್ತಿಯವರು ಹೇಳಿರುವಂತೆ ''ಈ ಕವನ ಸಂಕಲನದಲ್ಲಿ ಗಂಡು ಹೆಣ್ಣಿನ ಸಂಬಂಧದ ಜಟಿಲತೆಯನ್ನು ಅರಿಯುವ ಯತ್ನ ಇನ್ನಷ್ಟು ನೆಡೆವುದಾದರೂ, ಗಂಡಿನ ಹೃದಯದ ನೆಲೆಗೆ ಇಲ್ಲಿ ಹೊಸ ಹೊಸ ಭಾವಲಯಗಳು ಬಂದು ಕೂಡುತ್ತವೆ. ಬಹಳ ಮುಖ್ಯವಾದದ್ದು ವಾತ್ಸಲ್ಯ ಭಾವ, ಸೀಮಾ ಪದ್ಯಗಳು ಕವಿಯ ಈ ಬಗೆಯ ಸಾರ್ಥಕ ಸೃಷ್ಟಿಗಳು ಎನ್ನುದರಲ್ಲಿ ಯಾವುದೇ ಅನುಮಾನವಿಲ್ಲ. ಸ್ನೇಹ ಭಾವದ ವಿಶ್ಲೇಷಣೆಯೂ ನಡೆಯುತ್ತದೆ. ಆದರೆ ಇಂಥ ಸಂದರ್ಭದಲ್ಲಿ ಮಾತ್ರ ಬದುಕಿನ ಅರ್ಥ ವ್ಯಂಗ್ಯದಲ್ಲಿ ಶೋಧಿತವಾಗುವುದು ಗಮನಿಸಬೇಕಾದ ಸಂಗತಿ. ಯಾಕೆಂದರೆ ಗಂಡು ಗಂಡಿಗೆ ಹೆಣ್ಣಿನಂಥ ಅನಿವಾರ್ಯ ಅಗತ್ಯ ಪ್ರಾಯಶಃ ಆಗಿರುವುದಿಲ್ಲ. ಆದಕ್ಕೇ 'ನೀನಾ'ದ ವಿಷಾದ ಇಲ್ಲಿ ವ್ಯಂಗ್ಯವಾಗಿ ಹೊಡೆಯುವುದು. ಸೀಮಾ ಪದ್ಯಗಳಲ್ಲಿ ಆದರೋ ಪ್ರತಿಪಕ್ಷದಿಂದ ಯಾವುದೇ ನಿರೀಕ್ಷಗಳೇ ಇರುವುದಿಲ್ಲ. ಅನಪೇಕ್ಷೆಯ ಈ ಸಂಬಂಧ ನಿಃಸ್ವಾರ್ಥದ ನೆಲೆಯಲ್ಲಿ ಭಾವಗಳನ್ನು ಆಡಿಸುತ್ತದೆ.''[೩೦]

ಪಟ್ಟಣ ಶೆಟ್ಟರು ಹಳ್ಳಿಯ ವಾತಾವರಣದಲ್ಲಿ ಬೆಳೆದಿದ್ದಾರೆ. ಜನಪದರೊಂದಿಗೆ ಸರಾಗವಾಗಿ ಬೆರೆತಿದ್ದಾರೆ. ಜೊತೆಗೆ ಲೌಕಿಕವಾಗಿ ಆಲೋಚನೆ ಮಾಡುವುದರಿಂದ ಇವರ ಕಾವ್ಯಗಳಲ್ಲಿ ಜೀವನ ಪ್ರೀತಿಯನ್ನು, ಸಂಬಂಧಗಳ ತೀವ್ರತೆಯನ್ನು, ಸಾಮಾಜಿಕ ಕಾಳಜಿಯನ್ನು ಕಾಣುತ್ತೇವೆ. ಈ ಹಿಂದಿನ ಕವನ ಸಂಕಲನಗಳಲ್ಲಿನ ಹೆಚ್ಚಿನ ಕಾವ್ಯಗಳು ಹೆಣ್ಣು ಮತ್ತು ಅದಕ್ಕೆ ಸಂಬಂಧಿಸಿದ ಪ್ರೀತಿ-ಪ್ರೇಮ ಇದಕ್ಕೆ ಬಳುವಳಿಯಾಗಿ ಬಯಸದೇ ಬಂದ ವಿರಹ ವಿಷಾದಗಳಿಗೆ ಸಂಬಂಧಿಸಿದಂತೆ

ಇರುತ್ತಿದ್ದವು. ಒಂದು ಹಂತದಲ್ಲಿ ಇದರ ಸಹವಾಸವೇ ಬೇಡವೆಂದು ದೂರ ಸರಿದು ನಿಂತರೂ ಮತ್ತದೇ ಹೆಣ್ಣು ಕಾವ್ಯಕನ್ನಿಕೆಯಾಗಿ ಬರುತ್ತಾಳೆ. ಕವಿಗಳೇ 'ಹೆಣ್ಣು' ಕವನದಲ್ಲಿ ಹೀಗೆ ಹೇಳಿದ್ದಾರೆ.

ಹೆಣ್ಣು

ನನಗೆ ಮೋಹಳ ಮಧುರ ಆಕರ್ಷಣೆ

ಬಣ್ಣಗಳೆ ತುಂಬಿರುವ ಐಂದ್ರಜಾಲಿಕ ಕಣ್ಣು

ಎತ್ತ ಬೇಕಾದತ್ತ ಹೊರಳಿ ಮರಳಿನಲ್ಲೂ

ನಿತ್ಯ ಚಿತ್ತಾರಗಳ ಬರೆವ ದೀರ್ಘವಾಹಿನಿ

-ಸದಾಯೌವನೆ ನದಿ

ಹೀಗೆ ಕವಿ ಮನಸಿಗೆ ಹೆಣ್ಣಿನ ಸಂಬಂಧ ಬಿಡಲಾರದಷ್ಟು ಆಕರ್ಷಕವಾಗಿದೆ. ಇಲ್ಲಿಯವರೆಗೆ ಪ್ರೇಯಸಿಯಾಗಿದ್ದ ಆಕೆ ಈಗ ಹೆಂಡತಿಯಾಗಿ, ಮಗಳಾಗಿ ಬರುತ್ತಾಳೆ. ಕವಿಗೆ ಹೆಂಡತಿ ಸರಿಬಾರದ ಸರಿಯಾಗಲಾರದ ತಪ್ಪಾಗಿದ್ದಾಳೆ. ನುಂಗಲಾರದ ಬಿಸಿ ತುಪ್ಪವಾಗಿದ್ದಾಳೆ. ಮಹಾನ್ ಸಾಧಕರ ಹಿಂದೆ ಒಬ್ಬ ಹೆಣ್ಣು ಪ್ರೇರಣೆಯಾಗಿ ಇರುತ್ತಾಳೆ ಎಂಬ ಮಾತು ಒಂದು ಕಡೆಯಾದರೆ, ಇವರ ಎಲ್ಲಾ ನೋವುಗಳ ಹಿಂದೆ ಹೆಣ್ಣಿದ್ದಾಳೆ. ಆ ಹೆಣ್ಣು ಹೆಂಡತಿಯಾಗಿದ್ದಾಳೆ. ಇಂದಿನ ಆಧುನಿಕ ಸಮಾಜದಲ್ಲಿ ಪವಿತ್ರವಾದ ದಾಂಪತ್ಯದ ಸಂಬಂಧಗಳು ಹರಿದು ಹೋಗುತ್ತಿರುವುದರ ಬಗ್ಗೆ ಕವಿಗೆ ವ್ಯಥೆಯಿದೆ. ಎಷ್ಟೇ ಕಷ್ಟವಾದರೂ ಹೆಂಡತಿ ಬೇಕಾಗುತ್ತದೆ. ಸಂತೃಪ್ತಿಯ ಸಮಾಧಾನಕರ ಜೀವನಕ್ಕಾಗಿ ಹೆಂಡತಿ ಅವಶ್ಯಕತೆಯನ್ನು ವ್ಯಥೆಯನ್ನು 'ಹೆಂಡತಿ' ಕವನದಲ್ಲಿ ಹೀಗೆ ಹೇಳುತ್ತಾರೆ.

ಮರಣ ಮಹಾನವಮಿ ಶರಣರಿಗೆ

ಮದುವೆ ಮಹಾಮರಣ

ನಮ್ಮಂಥ ವ್ಯಥಾ ಕರಣರಿಗೆ

ಹೆಂಡತಿ ನೂರು ನೋವು

ಗಳಲ್ಲಿ ಒಂದು ಅಲ್ಲ, ಮೂರು

ನೋವುಗಳ ಬಿಂದು ಬೆಲ್ಲ

ಗಂಡ ಹೆಂಡತಿಯ ಸಂಬಂಧಗಳ ಸೌಧ

ಎಷ್ಟು ಬೇಗ ಕುಸಿಯುತ್ತದೆ. ಹುಸಿಯಾಗುತ್ತದೆ.

ಈ ಸನಾತನ ಪ್ರಬುದ್ಧ ಮಣ್ಣಿನಲಿ

ಹುಣ್ಣಾಗಿ ಕೊಳುಯುತ್ತವೆ ವಿಧ ವಿಧ

ವಿಧಿಯಾಗಿ ಅಳಿಯುತ್ತವೆ.

ದಿನ ನಿತ್ಯದ ಬದುಕು ಸವಿಯೂಟವಾಗುವ ಬದಲು ಸಮಾರಾಧನೆಯ ಆಹಾರವಾಗಿದೆ. ಇದಕ್ಕೆ ಕಾರಣ ಹೆಂಡತಿ. ಈಕೆ ಕವಿಗೆ ಅಪಶೃತಿಯಾಗಿ ಕಂಡಿದ್ದಾಳೆ. ನೆನಪುಗಳ ನೆಪದಲ್ಲಿ ಹಿಂದಿನ ಘಟನೆಗಳನ್ನು ನನೆದು ಮೆಲುಕು ಹಾಕುತ್ತಾ ಹೆಣ್ಣಿನ ಅಂತರ್ಯವನ್ನು ಬಿಚ್ಚುತ್ತಾ ವ್ಯಂಗ್ಯದಿಂದ ಹೇಳಿದ್ದಾರೆ. ಹೀಗೆ ಹೆಂಡತಿಯೆಂದರೆ ಚುಚ್ಚ ಮಾತನಾಡಿದ ಕವಿ. ಹೆಣ್ಣನ್ನು ಮಗಳಾಗಿ ನೋಡುವ ಪರಿ ವಾತ್ಸಲ್ಯಮಯವಾಗಿದೆ. ಸಿಮಾ-೧,೨,೩,೪, ಮತ್ತು ೫ ಕವನಗಳಲ್ಲಿ ಮಗಳಿಗೆ ಪ್ರೀತಿಯಿಂದ ಬದುಕುವ ಮಾರ್ಗ ಹೇಳುತ್ತಾರೆ, ಧೈರ್ಯಕೊಡುತ್ತಾರೆ, ಎಚ್ಚರಿಕೆ ಮಾತುಗಳನ್ನು ಹೇಳುತ್ತಾರೆ. ಮಗಳು ಅಂಬೆಗಾಲಿಟ್ಟು ಅಂಗಳದಲ್ಲಿ ಆಟವಾಡುವ ಸಂತೋಷದ ಬುಗ್ಗೆಯಾಗಿದ್ದಾಳೆ. ಅವಳ ಮುಗ್ಧ ವರ್ತನೆಗಳೆಲ್ಲಾ ಕಾವ್ಯದ ವಸ್ತುಗಳಾಗಿವೆ. ಆದರೆ 'ಸಿಮಾ-೫' ಕವನದಲ್ಲಿ ಮಗಳಿಗೆ ಬಹಳ ಗಂಭೀರವಾಗಿ ಹಿತೋಪದೇಶ ಮಾಡುತ್ತಾರೆ.

ನಿನಗೆ ಬಡತನ ತಿಳಿದಿರಲಿ ಬರದಿರಲಿ
ನಾನು ಪಟ್ಟಿದ್ದೇನೆ. ಇದ್ದೂ
ಇಲ್ಲತಂತಾಗಿದ್ದೇನೆ. ನಿನಗೆ
ಕೊರತೆಯ ಶಬ್ದ ಗೊತ್ತಾಗದಿರಲಿ

ಡಾ.ಬಿ.ನಂ.ಚಂದ್ರಯ್ಯ ಅವರು ಹೇಳುವಂತೆ ಕವಿಗಳು ''ಈ ಕವನದಲ್ಲಿ ಷೇಕ್ಸ್‌ಪಿಯರ್‌ನಂತೆ ಉಪದೇಶ ಅಥವಾ ಆಶಯ ವ್ಯಕ್ತಪಡಿಸುತ್ತಾರೆ. ಹಣವೇ ಎಲ್ಲ ಬೆಲೆ ಮೌಲ್ಯಗಳನ್ನು ಕಟ್ಟುವ ಕೇಂದ್ರವಾಗಿರುವುದರಿಂದ ಹಣವಿಲ್ಲದವರ ಬಡವರ ಬಡತನದಲ್ಲಿರುವವರ ಕಿಮ್ಮತ್ತು ಈ ಸಮಾಜದಲ್ಲಿ ಎಷ್ಟೆಂಬುದನ್ನು ಬಲ್ಲ ಕವಿ ತನ್ನ ಮಗಳು ಇಂಥ ಬವಣೆಗೆ ಪಕ್ಕಾಗದಿರಲಿ ಎಂದು ಬಡತನವನ್ನು ಸಾರ್ವತ್ರೀಕರಿಸುವ ಆಶಯ ಕವಿತೆಯಲ್ಲಿ ಸೊಗಸಾಗಿ ಮೂಡಿ ಬಂದಿದೆ. ವ್ಯಕ್ತಿಬದುಕಿನ ದುರ್ಬರ ಬವಣೆಗೊಳಗಾದಾಗ ಮಾತ್ರ ಇಂಥ ಅಭಿವ್ಯಕ್ತಿ ಸಹಜ. ಅವರ ಕವಿ ಹೃದಯ ಸಮಾಜದ ಈ ವರ್ತನೆಗೆ ಮರುಗಿರುವುದು. ಅದು ಸಹಜ ಕಾವ್ಯವಾಗಿ ಹರಿದು ಬಂದಿರುವುದು ಅವರ ಕವಿತನಕ್ಕೆ ಕಾವ್ಯತ್ವಗಳ ಸಾಕ್ಷಿಯಾಗಿದೆ.''[೩೧] ನಮ್ಮ ಸಮಾಜದಲ್ಲಿ ಪ್ರತಿಭೆಗೆ ತಕ್ಕ ಪುರಸ್ಕಾರಗಳು ದೊರೆಯುತ್ತಿಲ್ಲ. ಅರ್ಹರನ್ನು ಗುರುತಿಸುವುದಿರಲಿ, ಮುಂದುವರಿಯಲು ಬಿಡುತ್ತಿಲ್ಲ. ಅಡ್ಡಗಾಲು ಹಾಕುವ ಪ್ರವೃತ್ತಿ ಇಂದು ಹೆಚ್ಚಾಗಿದೆ. ಇದು ವ್ಯಾಪಾರೀ ಮನೋಭಾವದ ಲೋಕವಾಗಿದೆ. ಮಗಳ ನಿನಗೆ ಹೆಣ್ಣೆಂಬ ಕೀಳರಿಮೆ ಬೇಡ ಆತ್ಮವಿಶ್ವಾಸದಿಂದ ಧೈರ್ಯವಾಗಿ ಮುನ್ನುಗ್ಗಿ ಕಾರ್ಯಸಾಧನೆ ಮಾಡಬೇಕಾಗಿದೆ. ಅದಕ್ಕಾಗಿ ಯಾರ್‍ಯಾರಿಗೋ ಡೊಗ್ಗಸಲಾಮು ಹೊಡೆಯುವುದು ಬೇಡ ನಿನ್ನಲ್ಲಿ ಪ್ರತಿಭೆಯಿದೆ, ಯೋಗ್ಯತೆಯಿದೆ ಪುಟಿದೇಳು ಎಂದು ಹುರಿದುಂಬಿಸುತ್ತಾರೆ.

ಮೊದಲಿನಿಂದ ಚೆನ್ನಾಗಿ ನಗು ತಿನ್ನು ಓದು ಒದೆ
ಬೆದು ಝಾಡಿಸಿಬಾ ಆಗ
ಇರದಿದ್ದರೂ ಯೋಗ್ಯತೆ ಕಾಣುತ್ತದೀ ಮಕ್ಕಳಿಗೆ
ನಿನ್ನಲ್ಲಿ ಕಣ್ಣ ಬೆಳಕಿನ ರೇಖ ರೇಖೆಯ ಗುಂಟ
ನೂರು ಸಾವಿರದ ಸೂತ್ರಗಳ ಪ್ರತಿಭೆ
ತುಳುಕಿದೆ ತಾಯಿ

ಯೋಗ್ಯರಿಗೆ ಅವಕಾಶಗಳನ್ನು, ಗೌರವಗಳನ್ನು, ಸಮಾಜ ತಾನಾಗಿಯೇ ಕೊಡುವಷ್ಟು ಸಮರ್ಥವಾಗಿಲ್ಲ; ಸಮಾಜದ ದುರ್ವರ್ತನೆಗಳಿಗೆ ಕವಿ ಬೇಸರ ಗೊಂಡಿದ್ದಾರೆ. ಜನರ ಸ್ವಭಾವ ವಕ್ರವಾಗಿದೆ. ಕಾಲಿಗೆ ಬಿದ್ದರೆ ಜುಟ್ಟು ಹಿಡಿಯುವ, ಜುಟ್ಟು ಹಿಡಿದರೆ ಕಾಲಿಗೆ ಬೀಳುವ ಜನರೇ ಹೆಚ್ಚು. ಇದು ಲೋಕಧರ್ಮ ಇಂತಹ ವಾತಾವರಣದಲ್ಲಿ ಮಗಳು ಬಾಳಿ ಬೆಳಗಬೇಕಾಗಿದೆ ಅದಕ್ಕೆ ಅವಳಿಗೆ ಧೈರ್ಯ ತುಂಬುತ್ತಾರೆ.

ಬೃಹತ್ತಾಗಿ ಗಂಭೀರವಾಗಿ ತಲೆಯೆತ್ತಿ ತುಳಿ

ನಿನ್ನ ದಾರಿ ನಿನಗೆ ಬಿಡುತ್ತಾರೆ ಹೇಸಿಗಳು

ಒಡೆಯ, ಧನಿಕ, ಅಧಿಕಾರಿ, ವಂಚಕ, ನೀಚರು ಎಂದು ಸಾಮಾನ್ಯರಲ್ಲಿ ಮಾನ್ಯರಾದದವರ ಸ್ವಭಾವಗಳನ್ನು ತಿಳಿಸಿ ಎಚ್ಚರಿಸುತ್ತಾರೆ.

ಕವಿಗಳದು ಸುಮ್ಮನಿರಲಾರದಂತಹ ವ್ಯಕ್ತಿತ್ವ ಸದಾಕಾಲ ಕ್ರಿಯಾಶೀಲತೆಯಿಂದಲೇ ಕೂಡಿರಬೇಕೆಂದು ಹಂಬಲಿಸುತ್ತಾರೆ. ವೃತ್ತಿಯಿಂದ ಪ್ರಾಧ್ಯಾಪಕರೂ, ಪ್ರವೃತ್ತಿಯಿಂದ ಸಾಹಿತಿಗಳೂ, ಆಗಿರುವುದರಿಂದ ಈ ಎರಡರಲ್ಲಿ ಸದಾಕಾಲ ತಮ್ಮನ್ನು ತೊಡಗಿಸಿಕೊಳ್ಳುತ್ತಾರೆ. ಸುಮ್ಮನೆ ಇರುವುದೆಂದರೆ ಶಕ್ತಿಯ ಅಪವ್ಯಯವಾದಂತೆ. ಕಾಲವನ್ನು ವ್ಯರ್ಥವಾಗಿ ಕಳೆಯುವುದೆಂದರೆ ಕಾಲದ ಬದುಕು ಸೋತಂತೆ ಎಂದು ಭಾವಿಸುತ್ತಾರೆ. ಆದ್ದರಿಂದ ಸೋಲುವುದಿಲ್ಲ ಕವನದಲ್ಲಿ ಸೋಲೇ ಬೇಡ ನಾನು ಸುಮ್ಮನಾಗಿರುವುದಿಲ್ಲ, ಸಾಹಿತ್ಯ ರಚನೆಯ ಬದುಕನ್ನು ಕುರಿತು ಹೇಳಿದ್ದಾರೆ.

ಸತ್ತವನೆಂದು ನನ್ನನ್ನು ಸುಮ್ಮನೆ ಬಿಟ್ಟರೆ

ಬದುಕುವ ಗೀತೆಗಳನ್ನು ಬರೆಯುತ್ತೇನೆ

ನನ್ನಷ್ಟಕ್ಕೆ ಇರಗೊಟ್ಟರೆ

ನಿಜದ ಹಾಡುಗಳನ್ನು ನುಡಿಯುತ್ತೇನೆ

ಹೆಣೆಯುತ್ತೇನೆ ಉಸಿರ ವಸ್ತ್ರಗಳ.

ಬದುಕು ಬದುಕಾಗಿ ಉಳಿಯಲು ಹುಮ್ಮಸ್ಸು ಬೇಕು. ಬದುಕಿನುದ್ದಕ್ಕೂ ಹಿಂಗಲಾಗದ ಬಯಕೆಗಳು, ನುಂಗಲಾರದ ನಿರಾಶೆಗಳು, ಅನಿರುದ್ಧ ಆವಸ್ಥೆಗಳು, ಕುಸಿಯುವ ಕನಸುಗಳು, ಮುಖಕ್ಕೆ ರಾಚುವ ಅತೃಪ್ತಿಗಳು, ಬಂದೆರಗುತ್ತಲೇ ಇರುತ್ತವೆ. ಇವೆಲ್ಲವುಗಳನ್ನು ಮೆಟ್ಟಿನಿಲ್ಲುವ ಛಲಗಾರಿಕೆ ಆತ್ಮವಿಶ್ವಾಸಗಳನ್ನು ವೈಯಕ್ತಿಕವಾಗಿ ಅವರವರೇ ಬೆಳೆಸಿಕೊಳ್ಳಬೇಕಾಗುತ್ತದೆ. ನೋವುಗಳನ್ನು ನುಂಗಿ, ವಿಷಾದಗಳನ್ನು ಮಡಿಲಲ್ಲಿ ಕಟ್ಟಿಕೊಂಡು ದಿನವೂ ಸ್ವಲ್ಪಸ್ವಲ್ಪ ಸಾಯುತ್ತ ಬದುಕಿಗೆ ಮಂಗಳವಾಡುವುದು ಕವಿಗೆ ಬೇಕಿಲ್ಲ. ಬದುಕು ಸೆಟೆದು ನಿಲ್ಲುವುದನ್ನು ಕಲಿಯಬೇಕು ಎಂದು ಕವಿ 'ಪ್ರತೀಕ್ಷೆ' ಕವನದಲ್ಲಿ ಹೇಳುತ್ತಾರೆ. ಎಷ್ಟೇ ಕಷ್ಟವಾದರೂ ಸರಿ ಜೀವನ ಕ್ರಾಂತಿಕಾರಕವಾಗಿರಬೇಕು, ಕ್ರಾಂತಿಗೀತೆಗಳನ್ನು ಬರೆಯಬೇಕು ಎನ್ನುವ ಬಯಕೆ ತೀವ್ರವಾಗಿದೆ. ಇದು ಕವಿಯ ಪ್ರತೀಕ್ಷೆಯೂ ಹೌದು.

ನನ್ನ ನೋವಿನ ಒಣ ಹುಲ್ಲ ಬಣವೆಗೆ

ಅಂತರಂಗದ ಹಣ್ಣಾಗದ ನಲಿವಿನ ಬೆಂಕಿ ಹಚ್ಚಿ

ನಲಿಯಬೇಕು ನುಸಿನುಸಿ ಹುಸಿ ಕೊರಗು

ಹುಚ್ಚೆದ್ದು ಕುಣಿದಾಡಿ ಮಚ್ಚೆಗಳ ತೂರಾಡಿ ನೆಲವಾಗಿ ನೀರಾಗಿ ಹವೆಯಾಗಬೇಕು

ಸಿಟ್ಟು ಮಾತ್ಸರ್ಯಗಳು

ದೈನ್ಯದ ಮುಚ್ಚಳವ ಕಿತ್ತು ಬೀಸಾಡಿ

ಒಡೆದು ಹೊರಹೊಮ್ಮಿ ತೂರಾಡಿ ಬರುವಂಥ

ಗಟ್ಟಿ ಕಲ್ಲಿನ ಕನಸ ರಸವಾಗಬೇಕು

ಮನಸು ಶಿಶುವಾಗಬೇಕು

ಮಸಿಯಾಗಿ ಹಸಿಹಸಿಯಾಗಿ ಮೂಡಬೇಕು.

ಇಷ್ಟೆಲ್ಲಾ ಧೃಡವಾದ ನಿರ್ಧಾರಗಳನ್ನು ತೆಗೆದುಕೊಳ್ಳುವ ಕವಿ ಭವಿಷ್ಯತ್ತಿನಲ್ಲಿ ಭಾರೀ ನಿರೀಕ್ಷೆಗಳನ್ನು ಇಟ್ಟುಕೊಳ್ಳುತ್ತಾರೆ, ಭರವಸೆಗಳನ್ನು ಕಂಡು ಕೊಂಡಿದ್ದಾರೆ.

ಅರ್ಥಕ್ಕೆ ಹಂಬಿಲಿಸಿ

ನನ್ನೆದೆಯ ಕುದಿಯೊಳಗೆ ಕಾದಿರುವ

ಈ ನೆಲದ ದಾರಿದ್ರ್ಯ ರಕ್ಷಿಸಲೇಬೇಕು

ಅಂಥ ಪಾಪಗ್ರಸ್ತ ಕವಿಯೊಬ್ಬಗಾಗಿ

ಶಾಪಗ್ರಸ್ತ ತಾಪಗ್ರಸ್ತ ಕವನವೊಂದಕ್ಕಾಗಿ

ಕಾಯುತ್ತ ನಿಂತಿರುವೆ ಯುಗ ಯುಗಳಿಂದ

ಹೀಗೆ ನಿರೀಕ್ಷೆಯ ಭರವಸೆಗಳಿಂದ ಮುಂದಿನ ಬದುಕಿಗೆ ಸಿದ್ಧನಾದ ಕವಿ ಹೊಸತನಕ್ಕಾಗಿ ಹಾತೊರೆಯುತ್ತಾರೆ. ಡಾ. ಬಿ.ನಂ. ಚಂದ್ರನವರು ಹೇಳಿರುವಂತೆ ''ಈ ಕವಿಗೆ ನೂರು ಜನರಲ್ಲಿ ನೂರೊಂದನೆಯವನಾಗಿ ಬದುಕಲು ಇಷ್ಟವಿಲ್ಲ. ಮನುಷ್ಯನಾಗಿ ಹುಟ್ಟುವುದೇ ತಪ್ಪು, ಹುಟ್ಟಾಯಿತಲ್ಲ ಮನುಷ್ಯ ತನ್ನ ತನವನ್ನು ಕಂಡು ಕೊಳ್ಳಬೇಕು ತಾನುತಾನಾಗಿ ಬದುಕಬೇಕು.''[೨] ಮಾಡುವ ಕಾರ್ಯ, ನಡೆಯುವ ನಡೆ, ನುಡಿವ ಮಾತು, ನೋಡುವ ನೋಟ ಹೊಸದಾಗಿರಬೇಕೆಂದು ಕವಿ ಸ್ಥಳಾಂತರ ಕವನದಲ್ಲಿ ಹೇಳುತ್ತಾರೆ. ಅನ್ಯರ ಪ್ರಭಾವಕ್ಕೆ ಒಳಗಾಗದೆ ತನ್ನ ತನದಲ್ಲಿಯೇ ತಾನು ಸಾಗಬೇಕಾಗಿದೆ. ಈ ಮೊದಲಿದ್ದ ತನಗೆ ಈಗಿನ ತಾನು ಸಂಪೂರ್ಣ ಅಪರಿಚಿತನಾಗಿರಬೇಕು, ಮುಂದಿನದೆಲ್ಲಾ ಹೊಚ್ಚ ಹೊಸದಾಗಿರಬೇಕೆಂದು ಕವಿ ಬಯಸುತ್ತಾರೆ.

ಕೂಡುವುದು ಸುಮ್ಮನಿರುವುದು ಭ್ರಾಂತಿ

ಯನು ಒಲಿಸುವುದು ಮನೆಯವಳ

ರಮಣದಲಿ ಮರೆಯುವುದು

ಬಹುಶಃ

ನನಗೆ ಸಾಧ್ಯವಿಲ್ಲ, ಬೇರೆ ನೆಲೆ ದಾರಿ

ಹುಡುಕ ಬಯಸುತ್ತೇನೆ, ನನ್ನೊಳಗೆ ನನ್ನ

ಸುತ್ತ ನನ್ನಿಂದ ದೂರ ಹೊರವಲಯದೊಳಗೆಲ್ಲೊ

ನನ್ನ ವಿಸ್ಮೃತಿಯಲ್ಲಿ ಕೈಚೆಲ್ಲಿ ಕುಳಿತಿರುವ ಗುರಿ

ಹಿಡಿದು ನಡೆಯುವುದಕ್ಕೆ ನಾನು ಸಂಪೂರ್ಣ ಅಪರಿಚಿತನಾಗ ಬಯಸುತ್ತೇನೆ

ನನಗೂನು.

ಸಾರ್ಥಕವಾದ ನವಜೀವನ ನಡೆಸುವುದು ಕವಿಯ ಧೋರಣೆಯಾಗಿದೆ. ಹಿಂದಿನ ರಾಗಭಾವಗಳನ್ನು, ವ್ಯಕ್ತಿ ವೃತ್ತಿಗಳನ್ನು ಮರೆತು ಹೊಸ ಮನುಷ್ಯನಾಗಲು ಹಂಬಲಿಸುತ್ತಾರೆ. ಕವಿಗಳು ಆಶಾವಾದಿಗಳಾಗಿದ್ದಾರೆ. ಆದರೆ ಇದನ್ನು ಸಾಧಿಸುವುದು ಕವಿಗೆ ಅಷ್ಟೊಂದು ಸುಲಭವಾಗಿಲ್ಲ. ಹುಟ್ಟಿನಿಂದ ಬಂದ ಗುಣಗಳನ್ನು ಅಳವಡಿಸಿಕೊಂಡ ರೂಢಿಗಳನ್ನು, ದಿನನಿತ್ಯ ಮಾಡಲೇಬೇಕಾದ ಅನಿವಾರ್ಯ ಕರ್ಮಗಳನ್ನು ಒಮ್ಮೆಲೆ ಬಿಟ್ಟು ಹೊಸತಮ ಸಾಧಿಸುವುದು ಅಷ್ಟೊಂದು ಸರಳವಾಗಿಲ್ಲವೆಂದು ಕವಿ 'ಗೊಂದಲ' ಕವನದಲ್ಲಿ ಹೇಳಿದ್ದಾರೆ.

ನಾನಾಗಬೇಕು

ಎಂಬ ಒಂದೇ ಒಂದು

ಚೊಕ್ಕ

ಚಿಕ್ಕ ಆಸೆಯ ತೃಷಜಲದ ಬಲದಿಂದ

ನೂರಾರು ಆಮಿಷ ಕೆಲಸಗಳ ಜಾಲದಲಿ ಸಿಲುಕಿ

ಎದುಸಿರು ಬಿಡುತಿರುವೆ.

ದೇಶದ ರಾಜಕೀಯ ವ್ಯವಸ್ಥೆ ಸರಿಯಾಗಿಲ್ಲ. ರಾಷ್ಟ್ರದ ಪ್ರಥಮ ಪ್ರಜೆಯಾದ ರಾಷ್ಟ್ರಪತಿಗಳು ಸಂಸತ್ತು ಮತ್ತು ಸಚಿವ ಸಂಪುಟ ತೆಗೆದುಕೊಳ್ಳುವ ತೀರ್ಮಾನಗಳಿಗೆ ಅಂಕಿನ ಹಾಕಲೇಬೇಕಾಗಿದೆ. ಯಾಂತ್ರಿಕನಾಗಿ ಕಾರ್ಯ ನಿರ್ವಹಿಸುವ ಸ್ವಂತಿಕೆ ಮತ್ತು ಪ್ರಬಲ ಅಧಿಕಾರಗಳಿಲ್ಲದ ವ್ಯಕ್ತಿ ನಮ್ಮ ರಾಷ್ಟ್ರಪತಿ ಎಂದು ರಾಷ್ಟ್ರಪತಿ ಹುದ್ದೆಯ ಅಸಹಾಯಕತೆಯನ್ನು 'ಗಂಡಾಂತರ' ಎಂಬ ಕವಿತೆಯಲ್ಲಿ ವ್ಯಂಗ್ಯವಾಗಿ ಚಿತ್ರಿಸಿದ್ದಾರೆ.

ನಾನು ಹೆಣ್ಣಲ್ಲ, ಗಂಡಂ

ತೂ ಅಲ್ಲವೇ ಅಲ್ಲ, ನಾ

ನೀ ದೇಶದ ಅತ್ಯಂತ ಮಹತ್ವದ

ಪ್ರಧಾನಿ ವ್ಯಕ್ತಿ

ಕನ್ನಡ ಕಾವ್ಯಲೋಕದಲ್ಲಿ ಬೆಳಗನ್ನು ಕುರಿತು ಹಲವಾರು ಕವಿಗಳು ಸುಂದರವಾದ ಅನೇಕ ಕವಿತೆಗಳನ್ನು ರಚಿಸಿದ್ದಾರೆ. ಪಟ್ಟಣಶೆಟ್ಟರ 'ಬಳಗ' ಕವನವು ಅತ್ಯಂತ ಸರಳ ಶಬ್ದಗಳಿಂದ ಕೂಡಿದ ಅತೀ ಕಡಿಮೆ ಸಾಲುಗಳಿರುವ ಸುಂದರ ಗೀತೆಯಾಗಿದೆ.

ಕೆರೆಯ ದಂಡೆಯ ಮೇಲೆ

ಸುತ್ತ

ಚುಚ್ಚಿ ನಿಂತಿವೆ ತಮ್ಮ ಬೆಳ್ಳಿಕಾಲು

ಬೆಳ್ಳಕ್ಕಿ ಸಾಲು

ಹೇಮಜಲ ಹೇಮನೆಲ

ಹವಳ ಮುತ್ತಿನ ಮನಸ ಮತ್ತಿದ್ದ ಕಳವಳ

ಜಳವಳ ಜಳವಳ

ಭಾರತ ಸ್ವಾತಂತ್ರ್ಯಹೋರಾಟದ ಕಥೆ ವೀರತ್ವದಿಂದ ಕೂಡಿದೆ. ಅಪ್ರತಿಮ ದೇಶಭಕ್ತರ ಜೀವನ ಗಾಥಗಳು ನಮ್ಮ ಜನರಲ್ಲಿ ದೇಶಪ್ರೇಮದ ಸ್ಫೂರ್ತಿಯನ್ನು ತುಂಬಿ ಕೆಚ್ಚನ್ನು ಮೂಡಿಸಬೇಕಾಗಿತ್ತು. ಆದರೆ ಅದು ಆಗಿಲ್ಲ ಏಕೆಂದರೆ, ಜನರಿಗೆ ಇತಿಹಾಸದ ಪರಿಜ್ಞಾನವಿಲ್ಲ, ಇತಿಹಾಸ ಗೊತ್ತಿಲ್ಲದವರು ಇತಿಹಾಸವನ್ನು ಸೃಷ್ಟಿಸಲಾರರು. ನಮ್ಮನ್ನು ಆಳುವ ಜನನಾಯಕರುಗಳಿಗೆ ಜನರ ನಾಡಿಮಿಡಿತ ಚೆನ್ನಾಗಿ ಗೊತ್ತಿದೆ. ಅವರು ಹೇಳುವ ಪ್ರತಿಯೊಂದು ಮಾತಿಗೆ ಯೋಚಿಸಲಾರದೆ ಸೈ ಎನ್ನುವ ಹೌದಪ್ಪಗಳಾಗಿದ್ದಾರೆ. ಈ ಜನ ಇಂತಹ ಜನರಿಂದ, ಇಂತಹ ಜನಪ್ರತಿನಿಧಿಗಳಿಂದ ಈ ದೇಶದಲ್ಲಿ ಕ್ರಾಂತಿಯಾಗುವುದಿಲ್ಲ. 'ಪರಿವರ್ತನೆ' ಕವನದಲ್ಲಿ ಜನರ ನಿರ್ಲಿಪ್ತತೆಯನ್ನು ಬಹುವ್ಯಂಗವಾಗಿ ಹೇಳಿದ್ದಾರೆ.

ಈ ದೇಶದಲ್ಲಿ ಕ್ರಾಂತಿ

ಆಗುವುದಿಲ್ಲ ಈ ಜನರಿಗೆ ಅದು

ಬೇಕಾಗಿಲ್ಲ ಇವರು ಅದಕ್ಕಾಗಿ

ಬಂದವರಲ್ಲ.

ಕ್ರಾಂತಿಗೆ ಪಕ್ವವಾಗಿಲ್ಲ ಕಾಲ

ಅನ್ನುವುದು ತಪ್ಪು,

ಇಂಥ ಮಂದೆಯ ನಡುವೆ

ಇಂಥ ನಾಡಿನ ನಡುವೆ

ಕ್ರಾಂತಿ ಏನು ಮಾಡೀತು

ಹೀಗೆ ಮತದಾರ ಪ್ರಭುವಿನ ಅಸಹಾಯಕತೆಯನ್ನು ವ್ಯಕ್ತಪಡಿಸಿದ್ದಾರೆ. ಇಂಥಹ ಮಂದಮತಿಯ ಮಂದಿಯಿಂದ ಕ್ರಾಂತಿ ಸಾಧ್ಯವಿಲ್ಲ. ದೇಶದ ಪರಿವರ್ತನೆ ಕಷ್ಟ ಸಾಧ್ಯ ಎಂದು ಮರುಕ ವ್ಯಕ್ತಪಡಿಸುತ್ತಾರೆ. ಈ ದೇಶದ ಜನರನ್ನು, ಜನರ ಮನಸುಗಳನ್ನು, ಅನ್ನವನ್ನು, ಬದುಕನ್ನು, ಕನಸುಗಳನ್ನು ಕಸಿದುಕೊಂಡು ಬದುಕುತ್ತಿರುವ ಪ್ರಮಾಣಿಕತೆ ದೇಶಸೇವೆ ಮರೆತ ನಾಯಕರುಗಳಿಗೆ, ರಾಜನಾಗಲು ಕಾರಣ ಹುಡುಕುತ್ತಿರುವ ರಾಜಕಾರಣಿಗಳಿಗೆ ಕವಿ ಎಚ್ಚರಿಕೆ ನೀಡುತ್ತಾರೆ. ಅವರ ದುರಾಲೋಚನೆ ದುರಾಡಳಿತಗಳನ್ನು ಖಂಡಿಸುತ್ತಾರೆ. ಈಗ ಕಾಲ ಬದಲಾಗಿದೆ ಜನರೂ ಬದಲಾಗಿದ್ದಾರೆ. ಸತ್ಯಾಸತ್ಯತೆಗಳನ್ನು ನಿರ್ಧರಿಸುವ ಶಕ್ತಿ ಜನತೆಗೆ ಬರುತ್ತಲಿದೆ. ತಾಳ್ಮೆಯಿಂದ ಕಾದು ಸಮಯ ಬಂದಾಗ ತಕ್ಕ ಪಾಠ ಕಲಿಸುತ್ತಾರೆ. ಇನ್ನು ಮುಂದೆ ನಿಮ್ಮ ಪೊಳ್ಳು ಆಶ್ವಾಸನೆಗಳು, ಜೊಳ್ಳು ಭರವಸೆಗಳು, ನಿತ್ಯ ನಾಟಕಗಳು, ನಿಮ್ಮ ಕಚ್ಚಾಟಗಳು, ಹುಚ್ಚಾಟಗಳು ನಡೆಯುವುದಿಲ್ಲವೆಂದು 'ಜಾಗೃತಿ' ಕವನದಲ್ಲಿ ನೇರವಾಗಿ ಹೇಳುತ್ತಾರೆ.

ಇನ್ನೂ ನಡೆಯುವುದಿಲ್ಲ ನಿಮ್ಮ ದುರ್ವ್ಯಾಪಾರ

ತಲೆ ತಲಾಂತರದಿಂದ

ಕೊಬ್ಬಿ ಕುಣಿಯುತ್ತಿರುವ ಕುವಿಚಾರ

ಈ ನೆಲದ ಈ ಜಲದ

ಅಂಕುರ ಧರಗಳು ಮಿಡಿಯ ತೊಡಗಿದೆ ಇಂದು

ತಮ್ಮದೇ ಬೆಮರಿನಲಿ ಕಣ್ಣೀರಿನಲಿ ಮಿಂದು ನಿಮ್ಮ ಅಡ್ಡಗೆರೆಗಳನ್ನು ಎಣಿಸುವುದಕೆಂದು.

ಕನ್ನಡಿಗರಲ್ಲಿ ಸ್ಥಿರಾಭಿಮಾನತನ ಹೆಚ್ಚೆನ್ನುವುದು ಸಹಜವಾದ ಮಾತಾಗಿದೆ. ಆದರೂ ನಾವುಗಳು ಉತ್ಸವ ಪ್ರಿಯರು, ನಾವು ನವೆಂಬರ್ ತಿಂಗಳಲ್ಲಿ ಮಾತ್ರ ಅಪ್ಪಟ ಕನ್ನಡಾಭಿಮಾನಿಗಳಂತೆ ನಡೆದುಕೊಳ್ಳುತ್ತೇವೆ. ಉಳಿದ ಕಾಲದಲ್ಲಿ ನಮ್ಮ ಕನ್ನಡಾಭಿಮಾನಕ್ಕೆ ಗರಹಿಡಿದು ಅದಕ್ಕೆ ಬರಗಾಲ ಬಂದು ಬಿಡುತ್ತದೆ. ಕನ್ನಡಿಗರು ಅಭಿಮಾನ ಶೂನ್ಯರಾಗಿದ್ದಾರೆ. ಸಂಸ್ಕೃತಿ ವಿಮುಖರಾಗಿದ್ದಾರೆ. ನಾವುಗಳು ನಮ್ಮ ಭವ್ಯ ಪರಂಪರೆಯ ಶ್ರೇಷ್ಠ ವಾರಸುದಾರರಾಗಬೇಕಾಗಿದೆ. ಆದರೆ ಆಗುವ ನಂಬಿಕೆ ಹುಟ್ಟುವಂತಹ ವಾತಾವರಣ ಎಲ್ಲೂ ಕಂಡುಬರುವುದಿಲ್ಲ; ಎಂದು ಜನಪದ ಭಾಷೆಯಲ್ಲಿ 'ರಾಜ್ಯೋತ್ಸವ ಮತ್ತು ನಾಮಕರಣ ಸಮಾರಂಭದಂದು ಕವಿ ಸಮ್ಮೇಳನದ ಅಧ್ಯಕ್ಷರ ಪೀಠಿಕಾ ಭಾಷಣ' ಎಂಬ ಕವನದಲ್ಲಿ ಹೇಳುತ್ತಾರೆ. ಕನ್ನಡಿಗರ ಅಭಿಮಾನ ಕವಿಯ ಅಪಹಾಸ್ಯಕ್ಕೆ ಈಡಾಗಿದೆ.

ಇವತ್ತಿನ ದಿವಸಾ

ನಾವು

ಕನಡಾ ಅಂದ್ರೇನೂ ಅನ್ನೊದನ್ನ

ತಿಳಕೊಂಡು,

ಆ ಸಂಸೇಕಾರತೀ ಗುರ್ತಾ ಮಾಡ್ಕೊಂಡು

ನನ್ನಂಗ ದೊಡ್ಡ ಮನಸ್ಯಾರಾಗ್ರೀ ಅಂತ

ನಮ್ಮೆಲ್ಲರ ವತೀಲೆ ನಂಬ್ರ ವಿನಂತಿ ಮಾಡ್ಕೋತೇನ್ರ್ಯಾ.

ಜೈ ನಮ್ಮ ರಾಜ್ಯಾ!

ಜೈ ನಮ್ಮ ಭಾಷಾ!

ಧಾರವಾಡದ ಆಡುನುಡಿಯಲ್ಲಿನ ಈ ಪದ್ಯ ನಮ್ಮ ರಾಜ್ಯೋತ್ಸವ ಭಾಷಣಗಳ ಲೋಪದೋಷಗಳನ್ನು ಗುರುತಿಸುತ್ತದೆ.

ಒಟ್ಟಾರೆಯಾಗಿ ಸಾಧ್ಯವಾದಷ್ಟು ಮೃದುವಾದ ಭಾಷೆಯಲ್ಲಿ, ವೈಯಕ್ತಿಕ ವಿಷಯಗಳನ್ನು ಶ್ರೀ ಸಾಮಾನ್ಯನ ಅಸಹಾಯಕತೆಯನ್ನು, ರಾಜಕೀಯ ಸಾಮಾಜಿಕ ಡಂಬಾಚಾರಗಳನ್ನು ದೇಶದ ಅವ್ಯವಸ್ಥೆಯ ಆಗರಗಳನ್ನು ಕಂಡು ಕಿಡಿಕಾರಿದ್ದಾರೆ. ಸ್ವಂತಿಕೆಯೇ ಶ್ರೇಷ್ಠವಾದುದು ಎಂದಿದ್ದಾರೆ. ಡಾ. ಬಿ.ನಂ. ಚಂದ್ರಯ್ಯನವರು ಹೇಳುವಂತೆ ''ಸಮಾಜಕ್ಕೆ ಜವಾಬ್ದಾರನಾದ ಕವಿ ಕೊಡಬೇಕಾದ ಕೆಲವು ಕೊಡುಗೆಗಳನ್ನು ಸಿದ್ಧಲಿಂಗ ಪಟ್ಟಣಶೆಟ್ಟಿಯವರು 'ಪ್ರತೀಕ್ಷೆ' ಕವನ ಸಂಕಲನದಲ್ಲಿ ನೀಡಿದ್ದಾರೆ. ಕವಿಮನದ ಕೋಮಲ ಭಾವನೆಗಳ ಜೊತೆಗೆ ಕಾವ್ಯಲೋಕದಲ್ಲಿಯೂ ತಮ್ಮವುದನ್ನು ಒತ್ತಿದ್ದಾರೆ.''[೩೩] ಹೀಗೆ ಕವಿಗಳು ಕನ್ನಡ ಕಾವ್ಯಲೋಕದಲ್ಲಿ ತಮ್ಮದೇ ಆದ ಮಾರ್ಗದಲ್ಲಿ ಮುನ್ನಡೆದಿದ್ದಾರೆ.

**೬. ಮತ್ತೆ ಬಂದಿದ್ದಾಳೆ**

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಆರನೆಯ ಕವನ ಸಂಕಲನ 'ಮತ್ತೆ ಬಂದಿದ್ದಾಳೆ' ಆಗಿದೆ. ೧೯೭೬ ರಿಂದ ಹಿಡಿದು ೧೯೮೨ ರವರೆಗಿನ ನಾಲ್ಕು ವರ್ಷಗಳ ಅವಧಿಯಲ್ಲಿ ರಚಿಸಿದ ನಲವತ್ತೆರೆಡು ಕವನಗಳು ಈ ಸಂಕಲನದಲ್ಲಿವೆ. ಸುಂದರ ಪುಸ್ತಕ ಪ್ರಕಾಶನ ಧಾರವಾಡದಿಂದ ಇದು ಪ್ರಕಟಣೆಗೊಂಡಿದೆ.

ಈ ಕವನಸಂಕಲನದಲ್ಲಿ ಕವಿ ಪ್ರೇಮ-ಪ್ರೀತಿ, ನೋವು-ನಲಿವುಗಳ ಹಲವು ಸಾಧ್ಯತೆಗಳನ್ನು ಕೈಬಿಟ್ಟು ರಾಜಕೀಯ ವ್ಯಂಗ್ಯ, ದೇಶಭಕ್ತಿ, ರಾಷ್ಟ್ರೀಯ ಭಾವೈಕ್ಯತೆ ಕೆಲ ಸಾಹಿತಿಗಳ ವ್ಯಕ್ತಿತ್ವಗಳನ್ನು ಕುರಿತು ಮೌಖಿಕವಾದ ಗೀತೆಗಳನ್ನು ರಚಿಸಿದ್ದಾರೆ. ವೈಯಕ್ತಿಕತೆಯನ್ನು ಸಂಪೂರ್ಣವಾಗಿ ದೂರೀಕರಿಸಿ ಸಾಧ್ಯವಾದಷ್ಟು ಮಟ್ಟಿಗೆ ಸಾರ್ವತ್ರಿಕತೆಯನ್ನು ಸಾಧಿಸಿಕೊಂಡಿದ್ದಾರೆ. ವಿರಹದ ವಿಷಾದ, ಅನುರಾಗದ ಹಂಬಲದ ಬದಲಾಗಿ ಪ್ರತಿಭಟನೆ ಮತ್ತು ನಾಡಪ್ರೇಮಗಳು ಕಾವ್ಯಗಳು ವಸ್ತುವಾಗಿ ಬಂದಿವೆ. ಪಟ್ಟಣಶೆಟ್ಟರು ದೇಶಭಕ್ತ ಕವಿಯಾಗಿ ಹೊರಹೊಮ್ಮಿದ್ದಾರೆ. ನಾವೆಲ್ಲಾ ಸ್ವಚ್ಛ ಮತ್ತು ಸಮೃದ್ಧ ಭಾರತದ ನಿರ್ಮಾತೃಗಳಾಗಬೇಕೆಂಬ ಹಂಬಲ ಇಲ್ಲಿ ಹೆಚ್ಚಾಗಿದೆ. ಕವಿ ಈ ವರೆಗೆ ನಡೆದ ದಾರಿಯನ್ನು ಬಿಟ್ಟು ಭಿನ್ನ ಮಾರ್ಗ ಹಿಡಿದಿರುವುದು ಇಲ್ಲಿ ಸ್ಪಷ್ಟವಾಗಿ ಕಂಡು ಬರುತ್ತದೆ. ಕವಿ ಇಲ್ಲಿ ಸಮಾಜ ಮುಖಿಯಾಗಿದ್ದಾನೆ.

'ಮತ್ತೆ ಬಂದಿದ್ದಾಳೆ' ಕವನಸಂಕಲನದ ಶೀರ್ಷಿಕೆಯೂ ಹೌದು. ಪ್ರಸಿದ್ಧ ಕವನವೂ ಹೌದು.

ಪ್ರೊ.ಶಿವರಾಮು ಕಾಡನಕುಪ್ಪೆ ಅವರು ಹೇಳುವಂತೆ ''ದೇಶದಲ್ಲಿ ತುರ್ತು ಪರಸ್ಥಿತಿಯನ್ನು ತಂದು ಸರ್ವಾಧಿಕಾರಿಣಿಯಂತೆ ಮೆರೆದ ಮಾಜಿಪ್ರಧಾನಿ ಶ್ರೀಮತಿ ಇಂದಿರಾಗಾಂಧೀ ಅವರು ೧೯೭೭ರಲ್ಲಿ ಅಧಿಕಾರ ಕಳೆದುಕೊಳ್ಳುತ್ತಾರೆ. ಅವರು ಮತ್ತೆ ೧೯೮೦ರ ಜನವರಿ ತಿಂಗಳಲ್ಲಿ ದೇಶದ ಪ್ರಧಾನಿಯಾಗಿ ಅಧಿಕಾರ ಗ್ರಹಣ

ಮಾಡುತ್ತಾರೆ. ಈ ಸಂದರ್ಭವನ್ನೇ ಕವಿ ಸಿದ್ದಲಿಂಗ ಪಟ್ಟಣಶೆಟ್ಟರು 'ಮತ್ತೆಮಾರಿ ಬಂದಿದ್ದಾಳೆ' ಎಂದು ಹೇಳಹೊರಟಿದ್ದಾರೆ''[೩೪] ಎನ್ನುತ್ತಾರೆ. ಈ ಕವನವನ್ನು ಕುರಿತು ಸ್ವತಃ ಕವಿಗಳೇ ರಾಜಕೀಯ ವ್ಯವಸ್ಥೆಯನ್ನು ಕುರಿತು ವಿವೇಚಿಸುತ್ತದೆಯೆಂದು ಮುನ್ನುಡಿಯಲ್ಲಿ ಸೂಚ್ಯವಾಗಿ ಈ ರೀತಿ ಹೇಳುತ್ತಾರೆ.

''೧೯೫೦ರ ಫೆಬ್ರವರಿಯಲ್ಲಿ ಬೆಳಗಾವಿ ಸಾಹಿತ್ಯ ಸಮ್ಮೇಳನದಲ್ಲಿ ಮೊದಲಸಲ 'ಮತ್ತೆ ಬಂದಿದ್ದಾಳೆ' ಎಂಬ ಕವನವನ್ನು ನಾನು ಓದಿದಾಗ ಅನೇಕ ಸಹೃದಯಗಳು ಬಹಿರಂಗವಾಗಿಯೇ ತಮ್ಮ ಮೆಚ್ಚುಗೆಯನ್ನು ಸೂಚಿಸಿದರು. ಭಾರತದ ರಾಜಕೀಯ ರಂಗದ ಮೇಲೆ 'ಮಾರಿ' ಬಂದು ಆಗ ಒಂದು ತಿಂಗಳಷ್ಟೇ ಕಳೆದಿತ್ತು.''[೨೫]

ಕವಿತೆ ಆಗಿನ ಕಾಲದ ರಾಜಕೀಯ ಸ್ಥಿತ್ಯಂತರಗಳನ್ನು ತೆಗಳುವುದರ ಜೊತೆ ಪ್ರೊ.ಶಿವರಾಮ ಕಾಡನಕುಪ್ಪೆ ಅವರು ಹೇಳುವಂತೆ ಸುಂದರವಾದ ವಿಶ್ಲೇಷಣೆ ಮಾಡುತ್ತದೆ. ''ವ್ಯಕ್ತಿ ಮತ್ತು ಸಮಾಜ ಹಾಗೂ ಸರ್ವಾಧಿಕಾರತ್ವ ಮತ್ತು ಪ್ರಜಾಸತ್ತೆ ಇವುಗಳ ನಡುವಿನ ಸಂಬಂಧಗಳ ಬಗ್ಗೆ ಗಂಭೀರ ಶೋಧ ನಡೆಸುವುದೇ ಕವನದ ಆಶಯ. ಸರ್ವಾಧಿಕಾರತ್ವದ ನಾನಾ ರೂಪಗಳು ತಳೆದ, ತಳೆಯಬಹುದಾದ ವರ್ತಮಾನದ ನಿರೀಕ್ಷೆ ಮತ್ತು ಫಲಗಳನ್ನು ವ್ಯಾಖ್ಯಾನಿಸುವ, ಸಿದ್ಧಾಂತೀಕರಿಸುವ ಯತ್ನ ಕವನದುದ್ದಕ್ಕೂ ಹಿನ್ನೆಲೆಯಲ್ಲಿ ಮಾರಿಯ ಸಂಕೇತವನ್ನು ಬಳಸಿಕೊಂಡು ಸರ್ವಾಧಿಕಾರತ್ವದ ಕರಾಳತೆ ಕ್ರೂರತೆಗಳನ್ನು ಕವನ ಕಟ್ಟಿಕೊಡುತ್ತದೆ.''[೩೬]

ಜಗತ್ತಿನ ಯಾವುದೇ ಸರ್ವಾಧಿಕಾರಿಗೆ ಎಲ್ಲಕ್ಕಿಂತ ಸ್ವಾರ್ಥ ಅಧಿಕಾರಲೋಲುಪತೆಗಳು ಅತಿ ಮುಖ್ಯವಾಗಿರುತ್ತವೆ. ಇಲ್ಲಿ ಸರ್ವಾಧಿಕಾರಣಿ ಮಾರಿಯ ರೂಪ ತಾಳಿದ್ದಾಳೆ. ಇವಳು ಮಾಡುವ ಕುಕೃತ್ಯಗಳು ಲೆಕ್ಕವಿಲ್ಲದಷ್ಟಿವೆ ಅವನ್ನು ಕವಿಗಳು ಈ ರೀತಿ ಹೇಳುತ್ತಾರೆ.

ಪಂಥ ಕಟ್ಟಿದ್ದಾಳೆ ಸತ್ತು ಹುಟ್ಟಿದ್ದಾಳೆ
ಒಟ್ಟಾಗಿ ಹೊಟ್ಟಾಗಿ ಕಣ್ಣು ಕಸರಾಗಿ
ಸಿದಿಗೆಗಳ ಸಿಂಗಾರ ಬಣ್ಣ ಹಸಿರಾಗಿ
ರಕ್ತ ಬೀಜಾಸುರರ ನಿತ್ಯ ಬಸಿರಾಗಿ
ಹೊಟ್ಟೆಗಿಕ್ಕುತ ಕಿಚ್ಚು ನುಚ್ಚು ಹುಸಿ ರಾಗಿ
ಅತ್ತ ಹುಟ್ಟಿದ್ದಾಳೆ ಇತ್ತ ಕುಟ್ಟಿದ್ದಾಳೆ
ಪಂಥ ಕಟ್ಟಿದ್ದಾಳೆ ಸತ್ತು ಹುಟ್ಟಿದ್ದಾಳೆ

ಹೀಗೆ ದುಷ್ಟ ಶಕ್ತಿಯಾದ ಮಾರಿ ಪ್ರಜೆಗಳ ಪುರುಷತ್ವವನ್ನು ನಾಶಗೊಳಿಸಿ ನಿಮಗೆಲ್ಲಾ ನಾನೇ ತಾಯಿ ಎಂದು ಹೇಳಿಕೊಂಡಿದ್ದಾಳೆ. ಇವಳು ಪೂತನಿಯ ನಾಲಿಗೆಯವಳು ಜಯವಿಜಯರೊಡನೆ ವಿಷಗಡಲ ಕಡೆದವಳು ಎಂದು ಕವಿಗಳು ವರ್ಣಿಸುತ್ತಾ, ಆಗಿನ ತುರ್ತು ಪರಿಸ್ಥಿತಿಯ ದುರ್ಘಟನೆಗಳಿಗೆಲ್ಲಾ ಸಾವು ನೋವುಗಳಿಗೆಲ್ಲಾ ಅಂತಃ ಕಲಹಗಳಿಗೆಲ್ಲಾ ಈ ಮಾರಿಯೇ ಕಾರಣಳೆಂದು ಹೇಳಿದ್ದಾರೆ. ದಕ್ಷಿಣೋತ್ತರಗಳಲ್ಲಿ ವ್ಯಾಪಿಸಿರುವ ಈಕೆ ತನ್ನ ರಾಕ್ಷಸೀ ಪ್ರವೃತ್ತಿಯಿಂದ ಸಂವಿಧಾನದತ್ತವಾದ ಅಭಿವ್ಯಕ್ತಿ ಸ್ವಾಂತತ್ರ್ಯವನ್ನು ಹರಣಮಾಡಿದ್ದಾಳೆ. ಸತ್ಯಾಗ್ರಹಿಗಳಿಗೆ ನಿತ್ಯಾ

ಚಿತ್ರಹಿಂಸೆ ನೀಡುತ್ತಾ ಅಧಿಕಾರದಾನಂದ ಮದಿತ ವ್ಯಾಮೋಹದಲಿ ಮೆರೆದಿದ್ದಾಳೆ. ಅಧಿಕಾರಗಳನ್ನು ತನ್ನ ಹುಚ್ಚು ಹಿಂಬಾಲಕರಿಗೆ ನೀಡಿದ್ದಾಳೆ. ಎಚ್ಚರ ಎಚ್ಚರ ಎಂದು ಎಚ್ಚರ ತಪ್ಪಿಸಿದ್ದಾಳೆ ಎಂದು ಕವಿಗಳ ವಿಷಯ ಪರಿಸ್ಥಿತಿಯ ಯಥಾಸ್ಥಿತಿಯನ್ನು ಬಹುವ್ಯಂಗ್ಯವಾಗಿ ಹೇಳಿದ್ದಾರೆ. ಆದರೂ ಮುಂದೆ ಒಳ್ಳೆಯ ಕಾಲ ಬರುವುದೆಂಬ ನಿರೀಕ್ಷೆ ಕಾವ್ಯದಲ್ಲಿ ಧ್ವನಿತವಾಗಿದೆ. ನಾಡಿನ ಮುಗ್ಧ ಜನತೆಗೆ ಧೈರ್ಯದ ಮಾತುಗಳನ್ನು ಈ ರೀತಿಯಾಗಿ ಹೇಳುತ್ತಾರೆ.

ಬೆದರದಿರಿ ಬೆಚ್ಚದಿರಿ ಮಾರಿ ಬಂದಿಹಳೆಂದು
ಹೊಳೆಗೆ ನೆರೆ ಶಿರಕೆ ಹೊರೆ ಬಹುಕಾಲವಿರದು
ಬೆಕ್ಕು ನೆಕ್ಕಿದ ಸೊಕ್ಕು ನಕ್ಕನಳಿಯುವುದು.
ಸಂಚು ಹೂಡಿದ ಕೆಂಚರೆಲ್ಲರನು ತೆರೆದು
ಕಾರ್ಮೋಡ ಕವಿದಾಗ ಮಿಂಚು ಬರದಿರದು
ನಾಗರವ ಮೆಚ್ಚದಿರಿ ಭೂರಿ ಸುಂದರವೆಂದು
ಬೆದರದಿರಿ ಬೆಚ್ಚದಿರಿ ಮಾರಿ ಬಂದಿಹಳೆಂದು.

ಈ ಕವನದಲ್ಲಿ 'ಮತ್ತೆ ಬಂದಿದ್ದಾಳೆ ಮಾರಿ ಬಂದಿದ್ದಾಳೆ' ಎಂಬ ಸ್ಥಾಯಿ ಹೇಳಿಕೆ ಕವನದ ಅನುಪಲ್ಲವಿಯಾಗಿ ಪ್ರತಿ ನುಡಿಗೊಮ್ಮೆ ಬರುತ್ತದೆ. ಜಗತ್ತಿನ ಯಾವುದೇ ಸರ್ವಾಧಿಕಾರತ್ವಕ್ಕೆ ಪ್ರೀತಿಸುವ ಕ್ಷಮಿಸುವ ಗುಣಗಳಿರುವುದಿಲ್ಲ. ಇದಕ್ಕೆ ವಿರುದ್ಧವಾದ ದಮನಕಾರಿ ನೀತಿಯನ್ನು ಅನುಸರಿಸುತ್ತದೆ. ಧ್ವನಿಯನ್ನು ನುಂಗುವ ಮಾನವೀಯತೆಯನ್ನು ಕಬಳಿಸುವ ಗುಣ ಹೊಂದಿರುತ್ತದೆ. ಪ್ರೊ. ಶಿವರಾಮ ಕಾಡನಕುಪ್ಪೆಯವರು ಕವನದ ಮಹತ್ವವನ್ನು ಕುರಿತು ಹೇಳುತ್ತಾ. ''ಇದೊಂದು ಮುಖ್ಯ ಕವನವೆಂದು ಚರ್ಚಿಸಬೇಕಾದ ಕವನವೆಂದು ನಾನು ಭಾವಿಸುತ್ತೇನೆ. ಕಾರಣ ೧. ತನ್ನ ಒಡಲಲ್ಲಿ ಸುಪ್ತವಾಗಿ ಹರಿಸುವ ಮನುಷ್ಯಗಳ. ೨. ರಚನೆಯಲ್ಲಿರುವ ಕಾವ್ಯಗುಣ. ಈ ಎರಡೂ ಅಂಶಗಳು ಕಾವ್ಯದುದ್ದಕ್ಕೂ ಸ್ಥಾಯಿಯಾಗಿ ಕೆಲಸಮಾಡಿವೆ. ವಸ್ತುವಿನ ನಿರ್ವಹಣೆಯಲ್ಲಿ ಸಹಜತೆಯನ್ನು ಕಾಯ್ದುಕೊಂಡಿರುವುದರಿಂದ ಪದ್ಯ ಓದಿಸಿಕೊಳ್ಳುತ್ತದೆ. ಬದುಕಿನ ಬಹುಕ್ರೌರ್ಯದ ಸಂಕೇತವಾದ ಸರ್ವಾಧಿಕಾರವನ್ನು ನಿವಾರಣೆ ಮಾಡಬೇಕೆಂಬ ಆಶಯವನ್ನು ಪದ್ಯ ಅಭಿವ್ಯಕ್ತಿಸುವುದರಿಂದ ಇದು ಮಾನವ ಪರವಾಗಿದೆ.''[೩೭]

ಈ ಸಂಕಲನದಲ್ಲಿ ಕವಿ ರಾಷ್ಟ್ರಪ್ರೇಮಿಯಾಗಿದ್ದಾನೆ. ಭಾರತಾಂಬೆಯನ್ನು ಭಕ್ತಿ ಪೂರ್ವಕವಾಗಿ ನಮಿಸುತ್ತಾನೆ. ತಾಯೆ ಮುಗ್ಧ ಭಾರತೀ, ಇದುವೆ ಶಬ್ದದಾರತಿ ಎಂದು ಹಾಡಿನ ಮೂಲಕ ಅರ್ಪಿಸುತ್ತಾರೆ. ಇಲ್ಲಿನ ಗಿರಿನದಿಗಳು ಸುಂದರವಾದ ಪ್ರಕೃತಿ ನಿನ್ನುಸಿರಧಾರೆಗಳಾಗಿವೆ. ಪುರಾತನ ಕಾಲದಿಂದಲೂ ಅನ್ಯದೇಶದ ಅತೀಕ್ರಮಣಕಾರರ ದಾಳಿ ನಡೆದರೂ ನೀನು ಸ್ವತಂತ್ರೆ ಇದಕ್ಕೆ ನಿನ್ನ ಶಕ್ತಿಯೇ ಕಾರಣ ಎಂದು 'ಶಬ್ದದಾರತಿ' ಎಂಬ ಪದ್ಯದಲ್ಲಿ ಹೇಳುತ್ತಾರೆ.

ಕಾಲ ರಾಜ ವೀರರೆಲ್ಲ
ದಾಳಿಮಾಡಿ ಮಡಿದರು
ನೀನು ಮಾತ್ರ ನಿತ್ಯ ಸತ್ಯ
ವೇದ ಕುಲದ ಸುರ-ತರು

ಎಂದು ಹೆಮ್ಮೆಯಿಂದ ಹಾಡುತ್ತಾರೆ. ಹಾಡಿದ ಮಾತ್ರಕ್ಕೆ ಸ್ವಾತಂತ್ರ್ಯ ಹೋರಾಟಗಾರರು ಬಯಸಿದ ಸಮೃದ್ಧ ನಾಡು ಇದಾಗುವುದಿಲ್ಲ. ಹಿರಿಯರು ಕಂಡ ಕನಸಿನ ಭಾರತವನ್ನು ನಿರ್ಮಾಣ ಮಾಡುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ಅವರು ಕಂಡ ಕನಸುಗಳನ್ನು ಸಾಕಾರಗೊಳಿಸೋಣ. ಭಾರತವನ್ನು ಬರಿಯ ಕನಸುಗಳಲ್ಲಿ ಕಟ್ಟಿದ್ದರೆ ಮಾತ್ರ ಸಾಲದು. ೧೯೪೭ ರಿಂದ ದೇಶ ಕಟ್ಟುವ ಹೊಣೆ ಹೊತ್ತವರೆಲ್ಲರೂ ಇಲ್ಲಿಯವರೆಗೆ ಸರಿಯಾಗಿ ಕಾರ್ಯನಿರ್ವಹಿಸಿಲ್ಲ. ಅಧಿಕಾರಿ ವ್ಯಾಮೋಹಿಗಳಾಗಿ ದೇಶಸೇವೆ ಮರೆತಿದ್ದೀರಿ ಎಂದು ಕವಿಗಳು ''ಇಲ್ಲ ಭಾರತ ಬರಿಯ ಕನಸಲ್ಲ'' ಎಂಬ ಕವನದಲ್ಲಿ ಹೇಳುತ್ತಾರೆ. ನಾಯಕರ ಮೇಲೆ ಕವಿಗಳಿಗೆ ಸಾತ್ವಿಕವಾದ ಕೋಪವಿದೆ. ಸದಾಕಾಲ ವಂಚನೆಯ ಸಂಚಿನಲಿ ಸಿಲುಕಿ ಆಯುಷ್ಯದಂಚಿಗೆ ಬಂದು ನಿಂತು ಸತ್ಯ ಪ್ರಾಮಾಣಿಕತೆಗಳನ್ನು ಬೋಧಿಸುವ ನೀವು ನುಡಿದಂತೆ ನಡೆಯುವುದನ್ನು ಕಲಿಯಿರಿ ಎಂದು ಆಗ್ರಹಿಸುತ್ತಾರೆ. ಅವರ ಅನೀತಿ ಅಕಾರ್ಯಗಳನ್ನು ಕುರಿತು ಪ್ರಶ್ನಿಸುತ್ತಾರೆ.

ಬದುಕು ಕಲಿಸುವ ಪಾಠಗಳನಾಚೆ ತೂರುತ್ತ
ಸುಮ್ಮನೆ ಎಲ್ಲರನು ಎಂದಿಗೂ ದೂರುತ್ತ
ಸಾಗಿರುವ ನಿಮ್ಮನ್ನೆ ಶೋಧಿಸುವಿರಾ?
ಉಪದೇಶ ಉಪವಾಸ ನಾಡ ಕಟ್ಟುವುದಿಲ್ಲ
ಪ್ರೀತಿಯಿಲ್ಲದ ನಡತೆ ಎದೆಯ ತಟ್ಟುವುದಿಲ್ಲ
ನಿಜದ ಮಾತನು ನೀವು ಅರಿತಿಲ್ಲವೇ?
ಕಲ್ಲು ಮುಳ್ಳನು ತುಳಿದ ದುಡಿಮೆ ಪ್ರಗತಿಯ ಅನ್ನ
ಸಹನೆ ಸಂತೋಷಗಳ ಆಗ ಲಭಿಸುವ ಚಿನ್ನ
ಸ್ವಾರ್ಥ ಸಂಕೋಚಗಳ ಮರೆತಿಲ್ಲವೇ?

ಎಂದು ನಾಡನಾಯಕರ ನೈತಿಕ ಅಧಃಪತನ ದುರಾಸೆ ದುರಾಡಳಿತಗಳನ್ನು ಪ್ರಶ್ನೆಸುತ್ತ, ದಿನದ ಸರಳ ಸಾಧಾರಣ ಬದುಕಿನ ಪಾಠಗಳನ್ನು ಕಲಿತು, ಪ್ರೀತಿ ಸಹನೆಗಳಿಂದ ದುಡಿದು ಭವ್ಯ ಭಾರತವನ್ನು ಕಟ್ಟೋಣ ಎಂದು ಆಶಯ ವ್ಯಕ್ತಪಡಿಸುತ್ತಾರೆ. ಕವಿಗಳು ಭಾರತ ಮಾತೆಗೆ ಉಪಕೃತರಾಗಿದ್ದಾರೆ ತಾಯಿ ಸೇವೆಗೆ ಸದಾ ಸಿದ್ಧರಾಗಿದ್ದಾರೆ. ತಾಯಿಯ ಆಶೀರ್ವಾದ ಅವರಿಗೆ ಬೇಕಾಗಿದೆ. ಅವಳು ಮನದುಂಬಿ ಹಾರೈಸಿದರೆ ಸಾಕು ದೇಶಕ್ಕಾಗಿ ಏನೆಲ್ಲ ಮಾಡಲು ಸಿದ್ಧ ಎನ್ನುವ ಕವಿ 'ಬಾರೆ ತಾಯೆ ಹರಸು ಬಾ' ಎನ್ನುವ ಕವನದಲ್ಲಿ ದೇಶಭಕ್ತರಾಗಿ ಹಾಡುತ್ತಾರೆ.

ಬಾರೆ ತಾಯಿ ಹರಸು ಬಾ
ಹಿಮದಗಿರಿಯ ಮುಡಿಗೆ ಇಡುವೆ
ಗಂಗೆಯಾಗಿ ತನುವ ತೊಳೆವೆ

ಕಳೆವೆ ನಿನ್ನ ವ್ಯಥೆಯ ತಾಪ

ತರುವೆ ನಗೆಯ ಬೆಳಕ ಹಾರ

ಹೀಗೆ ಹೇಳುತ್ತ ಕವಿ ನಾವು ಭಾರತೀಯರು ಜಗತ್ತಿನಲ್ಲಿ ಯಾರಿಗೂ ಕಡಿಮೆ ಇಲ್ಲದಂತೆ ಎಲ್ಲಾ ಕ್ಷೇತ್ರಗಳಲ್ಲಿ ಹೆಮ್ಮೆ ಪಟ್ಟುಕೊಳ್ಳುವಂತೆ ಸಾಧನೆ ಮಾಡಿದ್ದೇವೆ. ಬೆಂಕಿ ಬೆಳಕು ಮಾತಿಗರ್ಥ ನೀಡಿದಂತ ಶಕ್ತರು ನಾವಾಗಿದ್ದೇವೆ. ದಾಸ್ಯವನ್ನು ಕಳಚಿ ಮುಕ್ತಿ ತಂದ ಸರ್ವತಂತ್ರರಾಗಿದ್ದೇವೆ. ಜಾಗತಿಕ ಇತಿಹಾಸದಲ್ಲಿ ಮರೆಯಲಾರದಂತ ಮಾನವೀಯತೆಯನ್ನು ಪ್ರತಿಪಾದಿಸುತ್ತಾ ಬಂದಿದ್ದೇವೆ, ಶಾಂತಿಪ್ರೀಯರಾಗಿದ್ದೇವೆ. ನರನಲ್ಲಿ ನಾರಾಯಣನನ್ನು ಕಂಡ ಭಕ್ತಿ ಸಂಪನ್ನರು ನಾವು ಎಂದು 'ನಾವು ಭಾರತೀಯರು' ಕವನದಲ್ಲಿ ಹೇಳುತ್ತಾರೆ.

ನಂಜನುಂಡು ಸುಧೆಯೆ ಸುರಿದು

ಜಗವ ಗುಡಿಯ ಮಾಡುತ

ಜನತೆಯನ್ನು ದೇವರಂತೆ

ಕಂಡ ಭಕ್ತಿ ಶುದ್ಧರು

ನಾವು ಭಾರತೀಯರು

ವಿಮಲ ಭಾವವೀರರು

ಎಂದು ಕವಿಗಳು ನಮ್ಮ ವೀರಗುಣ, ಮಾನವ ಪ್ರೀತಿ, ಶುದ್ಧ ಚಾರಿತ್ರ್ಯಗಳನ್ನು ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ನಮ್ಮ ಮಾನಸಿಕ ದೈಹಿಕ ಬಿಲಗಳಿಗೆ ಈ ನೆಲ ಕಾರಣವಾಗಿದೆ. ಹಿಮಾಲಯ ಪರ್ವತಶ್ರೇಣಿ ಅಭಯಹಸ್ತವನು ನೀಡಿದೆ. ಮೂರು ಸಾಗರಗಳು ತಾಯಿಯ ಚರಣಗಳನ್ನು ತೊಳೆದಿವೆ. ನಾವು ನಿನ್ನಯ ಸ್ವತಂತ್ರರಾಗಿದ್ದೇವೆ. ಸತ್ಯ ಸಂಧರಾಗಿದ್ದೇವೆ ಎನ್ನುವ ಕವಿ 'ಅಭಯ' ಕವನದಲ್ಲಿ ಈ ರೀತಿ ಹೇಳುತ್ತಾರೆ.

ಭಾರತಾಂಬೆಯೆ ನಾವು ನಿನ್ನಯ

ಕನಸ ದೀಪದ ಕುಡಿಗಳು

ಪ್ರಜರು ಪ್ರಭುಗಳು ಸಹಜ ಧೈರ್ಯದ

ದಿಟದ ನಲಿವಿನ ನುಡಿಗಳು

ನಾವುಗಳೆಲ್ಲಾ ಈ ಪುಣ್ಯ ಭೂಮಿಯಲ್ಲಿ ಹುಟ್ಟಿ ಬಂದಿರುವುದೇ ತಾಯಿ ಸೇವೆ ಮಾಡಲು, ಈ ನಾಡಿನ ವೃದ್ಧರು ತರುಣರು, ಶಿಶುಗಳು, ಸ್ತ್ರೀಯರು ಎಲ್ಲರೂ ಪರಿಶುದ್ಧರಾಗಿದ್ದಾರೆ. ಬಸವ, ಬುದ್ಧರು ಬದುಕಿನಲ್ಲಿ ಮುನ್ನಡೆಯುವ ಸನ್ಮಾರ್ಗವನ್ನು ತೋರಿಸಿದ್ದಾರೆ. ನಾವೆಲ್ಲಾ ಉತ್ಸಾಹದ ಚಿರಚಿಲುಮೆಯ ತೊರೆಗಳಾಗಬೇಕು. ನಾವು ಸ್ವಾತಂತ್ರ್ಯದ ನಿಜರಕ್ಷಕ ದೊರೆಗಳಾಗಿದ್ದೇವೆ. ಗೌರವ ಪುಣ್ಯಗಳನ್ನು ಗಳಿಸೋಣ ಎನ್ನುತ್ತಾ 'ಬೆಳಕು ಬರುತಿದೆ' ಕವನದಲ್ಲಿ ತಾಯಿ ಸೇವೆಗೆ ನಿಂತು ದೇಶಕ್ಕೆ ಘನತೆಯನ್ನು ತರೋಣ, ಹೊಸ ಬೆಳಕಿನ ರಥಿಕರಾಗೋಣ ಎಂದು ಕವಿ ದೇಶಾಭಿಮಾನದ ಮಾತನಾಡುತ್ತಾರೆ.

ದೇಶ ನಮಗೆ ನಾವು ಇದಕೆ

ಅದುವೆ ಶ್ರೇಷ್ಠ ಜೀವನ

ಕೊಡುಗೆಯಿಂದ ಅಮರ ಗಳಿಕೆ

ಎಂದೆಂದಿಗೂ ಪಾವನ

ದೇಶಕ್ಕೆ ಕೃತಜ್ಞತಾಭಾವದಿಂದ ನಡೆಯುವ ಪ್ರಜೆ ನಿಜವಾದ ದೇಶಭಕ್ತ, ನಾವೆಲ್ಲರೂ ಜಾತಿ, ಮತ, ಪಂಥ, ಜನಾಂಗ, ಆಹಾರ, ವಿಹಾರ, ಉಡುಗೆ ತೊಡುಗೆಗಳಿಂದ ವೈವಿಧ್ಯತೆಯ ಜೀವನ ನಡೆಸಿದರೂ ನಮ್ಮೆಲ್ಲರ ಏಕತಾಭಾವ ಭಾರತೀಯರೆಂಬುದಾಗಿದೆ. ನಮ್ಮಲ್ಲಿ ಬೇಧಭಾವದ ಬೀಜವನ್ನು ಭಿತ್ತಿ ಒಡಕನ್ನು ಉಂಟುಮಾಡುವವರಿಗೆ 'ಬನ್ನಿರಣ್ಣ ಬನ್ನಿರಿ' ಕವನದಲ್ಲಿ ಎಚ್ಚರಿಕೆ ನೀಡಿದ್ದಾರೆ. ರಾಷ್ಟ್ರೀಯ ಭಾವೈಕ್ಯತೆಯಿಂದಲೇ ಸದೃಢ ದೇಶ ನಿರ್ಮಾಣ ಸಾಧ್ಯವೆನ್ನುತ್ತಾರೆ.

ಮೋಸ ಮಾಡ ಬೇಡಿರಣ್ಣ

ನಮ್ಮ ಎದೆಗಳನ್ನೇ ಸೀಳಿ

ಒಂದು ನೆರೆಗೆ ಬಂದು ನಿಂತು

ಭರತ ಕುಲವ ಮತ್ತೆ ಬೆಳೆಸಿ

ಸರ್ವಬೇಧಗಳನು ಮರೆತು

ಇಂದು ಪ್ರಮುಖ ಘಟ್ಟದಲ್ಲಿ

ಎಲ್ಲರೊಂದೆ ಹೃದಯವಾಗಿ

ಮೊಳಗಬೇಕು ರಾಷ್ಟ್ರದಲ್ಲಿ

ಎಲ್ಲರೂ ಬನ್ನಿ ಭಾರತೀಯರ ಬದುಕಿಗೆ ಹೊಸ ಸೊಗಸನ್ನು ತರೋಣ ಎನ್ನುವ ಕವಿ ಕೆಟ್ಟ ಕಾರ್ಯದಲ್ಲಿ ತೊಡಗಿರುವವರನ್ನು ಅಣ್ಣ ಬಂಧುಗಳೆಂಬ ಆತ್ಮೀಯ ಸಂಬಂಧ ವಾಚಕಗಳಲ್ಲಿ ಮಾತನಾಡಿಸುತ್ತಾರೆ. ಅವರ ಬಗ್ಗೆ ದ್ವೇಷವಿಲ್ಲ ಅವರು ಪರಿವರ್ತನೆಯಾಗಬೇಕೆಂಬುದು ಕವಿಯ ಆಶಯವಾಗಿದೆ.

ಕನ್ನಡದ ವರಕವಿ ಬೇಂದ್ರೆಯವರು ಸ್ವರ್ಗಸ್ಥರಾದಾಗ ಅವರ ಕನ್ನಡ ಕೈಂಕರ್ಯವನ್ನು, ವ್ಯಕ್ತಿತ್ವವನ್ನು, ಸಾಹಿತ್ಯ, ಸಾಧನೆಗಳನ್ನು, ಕವಿಯ ಸಾಮಾನ್ಯ ದೌರ್ಬಲ್ಯಗಳನ್ನು ಬೇಂದ್ರೆ ಎನ್ನುವ ಕವನದಲ್ಲಿ ಸುಂದರ ಶಬ್ದಗಳಲ್ಲಿ ಹಿಡಿದು ಕೊಟ್ಟಿದ್ದಾರೆ.

ಎತ್ತೆತ್ತರ ವಿಶೇಷಣಗಳುತ್ತುಂಗ ಶಿಖರ ಮೀರಿ

ವೈಕುಂಠ ದೆತ್ತರಕೆ ಏರಿ

ನಿಂತ ನಿಲುವಿನ ಧೀರ, ಇದ್ದುದಕ್ಕಿಂತಲೂ

ಇರದ ಹಾರುವ

ಕಾಲಹಕ್ಕಿಯ ಕಾಲು ಹಿಡಿದು

ಕಾವ್ಯಕಿನ್ನರಿ ಮಿಡಿದು, ಕುಡಿದು ಸ್ವರಸುಧೆ

ಅಹಂ ದ್ವೇಷ ಉದ್ರೇಕ ವ್ಯಥೆ

ಪ್ರೀತಿ ಭೂತಗಳಲ್ಲಿ ಒಂದೊಂದು ಕ್ಷಣದಲ್ಲಿ ಘನೀಭೂತ

ಈ ಹೂತ ಬೇಂದ್ರೆ

ಕನ್ನಡವನ್ನು ಕನ್ನಡಸಿ, ನುಡಿಸಿ, ಶಬ್ಧಗಾರುಡಿಗನಾಗಿ ನಾದ ಗಂಟೆಯ ಬಿಡಿದು, ಕಾದ ಕವಿ ಭಾವಗಳ ಪದಗುಂಟ ಒಡಿಸಿದ ಸ್ವರದ ಧಣಿಯಾಗಿದ್ದಾರೆ. ಬದುಕಿನುದ್ದಕ್ಕೂ ಜಗಳ ಮುಚ್ಚು ಮರೆಗಳಿಲ್ಲದೆ ಮಾತುಮತಿ, ಅರ್ಥರತಿ ಇಹದ ಗತಿಯಿಂದ ಎಲ್ಲರೊಡನೆ ಸವಿಯೂಟ ಮಾಡಿದ ಗಾರಾಡಿಗಪಟು ಎಂದು ಕವಿ ಬೇಂದ್ರೆಯವರನ್ನು ಕರೆಯುತ್ತಾರೆ. ಬೇಂದ್ರೆಯವರ ಸಾವು ಕನ್ನಡ ಸಾರಸ್ವತ ಲೋಕಕ್ಕೆ ಹಾನಿಯುಂಟುಮಾಡಿದೆ. ನಾವು ಬೇಂದ್ರೆಯವರನ್ನು ಪಡೆದು ನಮ್ಮ ಘನತೆ ಹೆಚ್ಚಿಸಿಕೊಂಡಿದ್ದೇವೆ ಎನ್ನುತ್ತಾರೆ.

ಬೇಂದ್ರೆಯವರನ್ನು ಕೊಂಡು ಪಡಿದು

ಇಂದು ಸಾವಿನ ಘನತೆ ಹೆಚ್ಚಿರುವುದು

ಈ ಬೇಂದ್ರೆ ಸಾವು ಕನ್ನಡಕೆ

ಪಾರ್ಶ್ವವಾಯು.

ಇದೇ ತೆರನಾದ ಇನ್ನೊಂದು ಕವನ ಪ್ರಗತಿಶೀಲ ಲೇಖಕರಾದ ಬಸವರಾಜ ಕಟ್ಟೀಮನಿಯವರನ್ನು ಕುರಿತು ಬರೆದುದಾಗಿದೆ. ಬಸವರಾಜ ಕಟ್ಟೀಮನಿ 'ವ್ಯಕ್ತಿ' ಎನ್ನುವ ಈ ಕವನದಲ್ಲಿ, ಕಟ್ಟೀಮನಿಯವರ ಬರವಣಿಗೆಯಲ್ಲಿನ ಸಾಮಾಜಿಕ ಅನ್ಯಾಯ ಅಧರ್ಮಗಳ ಪ್ರತಿಭಟನೆಯಿದೆ. ಬಂಡಾಯದ ಕಾವಿದೆ. ಈ ಮಣ್ಣವಾಸನೆಯಲ್ಲಿ ಅಗ್ನಿಲೇಖನಿಯದ್ದಿ ಕಣ್ಣಾಲಿ ಮಿಂಚು ಮನಸು ಹಾಳೆಯ ಮೇಲೆ ಜನರ ನೋವಿನ ಗೋಳನ್ನ ಕಥೆಯನ್ನಾಗಿಸಿದ್ದಾರೆ ಎಂದು ಕವಿ ಹೇಳುತ್ತಾರೆ.

ಯೋಚನೆಯ ಬರೆಯಿಂದ

ಖಚಿತ ನಿರ್ಣಯದ

ನಿಶಿತ ಖಡ್ಗವ ಹಿರಿದು

ಅನ್ಯಾಯಕೆದುರಾಗಿ

ಜಾಲಾಡಿ ಭ್ರಷ್ಟ-ಕಂಟಕ ಪಶುನೆತ್ತರ

ನಕ್ಕವ ಅನಿಸಿದರೆ

ಗಕ್ಕನೇ ನಿಂತೊಮ್ಮೆ ಹೊರಳಿ

ಸಿಂಹ ನೋಟವ ಬೀರಿ ಸರಳ ರೇಖೆಯ ಗುಂಟ ನಡೆಯಂದು ಬದ್ದವ

ಹೀಗೆ ಕಾದಂಬರಿಕಾರರಾದ ಬಸವರಾಜ ಕಟ್ಟೀಮನಿಯವರ ಸಾಹಿತ್ಯ ಧೋರಣೆಯ ವ್ಯಕ್ತಿ ಚಿತ್ರಣ ಈ ಕವನದಲ್ಲಿ ಸೊಗಸಾಗಿ ಮೂಡಿಬಂದಿದೆ.

ಪಟ್ಟಣಶೆಟ್ಟರ ಕಾವ್ಯದಲ್ಲಿ ಮೇಲಿಂದ ಮೇಲೆ ಬರುವ 'ಹೆಣ್ಣು' ಈ ಸಂಕಲನದಲ್ಲಿ ಪ್ರಿಯತಮೆಯಾಗಿದ್ದಳೆ. ಕವಿಗೆ ಹೆಣ್ಣಿನ ಪ್ರೀತಿಬೇಕಾಗಿದೆ. ಆದರೆ ಅದರ ಬಗ್ಗೆ ಭಯವಿದೆ. ಹೆಣ್ಣಿನ ಪ್ರೀತಿ ಬೇಡವೆಂದರೆ ಹೇಡಿಯಾಗಿ ಬಿಡುತ್ತೇನೆ. ಪ್ರೀತಿ ಮಾಡಿದರೆ ಅದರ ಬಂಧನದಲ್ಲಿ ಸಿಲುಕಿ ಬೇಡಿ ತೊಡಿಸಿಕೊಂಡು ಖೈದಿಯಾಗುತ್ತೇನೆ. ಎನ್ನುವ ಅನುಮಾನ ಕವಿಗಿದೆ. ಇದನ್ನು ಲೆಕ್ಕಿಸಲಾರದ ಕವಿ ಪ್ರಗತಿ ಮಾಡುವ ಹೆಣ್ಣು ಪ್ರೀತಿ ಮೂಡುವ ಕಣ್ಣು ಬದುಕಿಗೆ ಸ್ಫೂರ್ತಿಯಾಗಲಿ ಎಂಬ ಆಶಯ 'ಪ್ರೀತಿಮಾಡುವ ಹೆಣ್ಣು' ಕವನದಲ್ಲಿದೆ. ಪ್ರೀತಿ ಭಾವನೆಗಳೆಂದರೆ ಅಲ್ಲಿ ಬಯಕೆ ಬಂಗಾರಗಳು, ಮಧುರ ಮುಂಗಾರುಗಳಿರುವುದು ಸಹಜ. ಆದರೆ ಇದು ನೋವನ್ನು ಮಾತ್ರ ತರದಿರಲಿ ಎನ್ನುವ ಕಳಕಳಿ ಈ ಕವಿತೆಯಲ್ಲಿದೆ.

ಕನಸ ಸೂಸುವ ತನುವು

ಇಂದ್ರ ಚಾಪದ ಧನುವು

ನನಗೆ ಹಾವಾಗದಿರಲಿ

ನನ್ನ ಸಾವಾಗದಿರಲಿ

ಗೊಂದಲದಿ ನೊಂದಿರುವೆ

ಬಂಧನಕೆ ಬಂದಿರುವೆ

ಕೈ ಬೇಡಿಯಾಗದಿರಲಿ

ನಾ ಹೇಡಿಯಾಗದಿರಲಿ

ಈ ಸಂಕಲನದಲ್ಲಿ ಕೆಲವು ಹನಿಗವಿತೆಗಳು ಇವೆ. ನೂರಾರು ಪದ್ಯಗಳಲ್ಲಿ ಕವಿ ಸಾಧಿಸಿದ ಲಘುಮಾ ಕೌಶಲ್ಯ ಇಲ್ಲಿಯೂ ಕಂಡುಬರುತ್ತದೆ. ಪದಗಳ ಜೊತೆ ಆಟವಾಡುತ್ತಾ ಪರಿಣಾಮಕತೆ ಸಾಧಿಸುತ್ತಾರೆ. ಉದಾಹರಣೆಗೆ 'ನಂಜು' ಕವನ ನೋಡಬಹುದು.

ಮನೆಯಲ್ಲಿ ಹೆಂಡತಿ ಮಗಳು ಅವ್ವ

ನಾನೊಬ್ಬ ದೆವ್ವ.

ಸುತ್ತಲೂ ಅರಿವೆ - ಅಂಚಡಿ ಪುಸ್ತಕ

ನೀರಿಬಿದ್ದ ಮಸ್ತಕ

ಓ ಎಲ್ಲ ಇದೆ ಎಲ್ಲ ಇದೆ ಎಲ್ಲ ಇದೆ.

ಎಲ್ಲಿ

ಇದೆ ಎಲ್ಲಿ ಇದೆ ?

ಊಟಕ್ಕೆ ಕುಳಿತಿರುವೆ ತಾಯಿ

ಇಲ್ಲಿ

ಉಪ್ಪಿನಕಾಯಿ.

ಈ ಹಿಂದೆ ಕ್ರಾಂತಿಕಾರಿ ಸಾವನ್ನು ಬಯಸಿದ್ದ ಕವಿ ಹಿಂದಿನ ಜೀವನವನ್ನು ಮರೆತು ಹೊಸ ಮನುಷ್ಯನಾಗಲು ಬಯಸಿದ್ದ. ತನ್ನತನವನ್ನು ಸಾಧಿಸಬೇಕೆಂಬ ಹಂಬಲ ಕವಿಯಲ್ಲಿ ತೀವ್ರವಾಗಿತ್ತು. 'ಸಾವು' ಎನ್ನುವ ಕವನದಲ್ಲಿ ಕವಿ ಧಾರಾಕಾರವಾಗಿ ಸುರಿದ ಮಳೆಯಲ್ಲಿ ನೆನೆದ ಚಂದ್ರನಾಗಿದ್ದಾನೆ. ಮತ್ತದೇ ಹುಚ್ಚು ಪ್ರೀತಿಮಾರ್ದವತೆಗಳ ಮದಗಳ ತೆಕ್ಕೆಗೆ ಸಿಕ್ಕಿ ನರಳುವಂತಾಗಿದ್ದಾನೆ. ಇವೆಲ್ಲವುಗಳಿಂದ ನಾನು ದಿನನಿತ್ಯ ಸಾಯುತ್ತಲಿದ್ದೇನೆ ಎನ್ನುತ್ತಾರೆ. ಬದುಕಿನ ಕಹಿಗಳನ್ನು ಬಂದ ಹಾಗೆ ಸ್ವೀಕರಿಸುವ ಜೀವನ ನೀತಿಯನ್ನು ಕುರಿತು ಹೇಳಿದ್ದಾರೆ.

ವ್ಯಾಧಿ-ಬಂಧನವಾಗಿ ಜ್ವರದ ಹಂದರವಾಗಿ

ನಿಧಾನ ನೋವಾಗಿ

ತಿಮಿಂಗಲಂಗುಲಂಗುವಾಗಿ ನುಂಗುವ ಹಾವಾಗಿ

ಮೂಸೆ ಮುದ್ದೆಯಾಗಿಸುವ ಹೂವಾಗಿ

ನನ್ನನ್ನು ಈ ರಾತ್ರಿ ಈ ಚಂದ್ರ ಈ ನಗೆ

ಈ ಮುತ್ತು ಈ ನತ್ತು ಈ ಗತ್ತು

ಓ..... ಅತ್ತು ಬಿಡುವೆನು ನಾನು

ನನಗರಿಯದೇ ಎಷ್ಟು ಪ್ರೀತಿಸುತಿರುವೆ

ಚಳಿಯಾಗಿ ನನ್ನನ್ನು ಮುತ್ತಿರುವ ಮೃತ್ಯು.

ಒಟ್ಟಾರೆಯಾಗಿ ಈ ಸಂಕಲನದಲ್ಲಿ ಕವಿಯ ಭಾವಾಲಯ ವಿಸ್ತಾರವಾಗಿರುವುದನ್ನು ಖಚಿತವಾಗಿ ಕಾಣಬಹುದಾಗಿದೆ. ಇಲ್ಲಿ ವೈಯಕ್ತಿಕ ಚಿಂತನೆಗಳಿಗಿಂತ ದೇಶ, ಸಮಾಜಮುಖೀ ಚಿಂತನೆಗಳು ಹೆಚ್ಚಾಗಿ ಕಂಡುಬರುತ್ತವೆ. ರಾಜಕೀಯದ ಬಗ್ಗೆ ವಿಡಂಬನೆಯಿದೆ. ದೇಶಭಕ್ತಿಗೆ ಸಂಬಂಧಿಸಿದಂತೆ ಹಲವಾರು ಕವನಗಳಿವೆ. ರಾಷ್ಟ್ರೀಯ ಭಾವೈಕ್ಯತೆ ಸಾರಿ ಹೇಳುವ ಕವಿತೆಗಳೂ ಇಲ್ಲಿವೆ.

### ೭. ಪಟ್ಟಣ ಶೆಟ್ಟರ ಆಯ್ದ ಕವಿತೆಗಳು

ಡಾ. ಎಚ್.ಎಸ್ ವೆಂಕಟೇಶಮೂರ್ತಿಯವರು ಈ ಸಂಕಲನದ ಸಂಪಾದಕರಾಗಿದ್ದಾರೆ. ಕವನ ಸಂಕಲನದ ತಲೆಬರಹವೇ ಹೇಳುವಂತೆ ಸಿದ್ಧಲಿಂಗ ಪಟ್ಟಣಶೆಟ್ಟಿಯವರ ೫ ಕವನ ಸಂಕಲನಗಳಿಂದ ಎಂಭತ್ತು ಕವನಗಳನ್ನು ಆಯ್ದುಕೊಳ್ಳಲಾಗಿದೆ. ಪಟ್ಟಣಶೆಟ್ಟರು ಈ ವರೆಗೆ ರಚಿಸಿರುವ 'ನೀನಾ', 'ಔರಂಗಜೇಬ' ಮತ್ತು ಇತರ ಕವನಗಳು 'ಪರದೇಶಿ ಹಾಡುಗಳು' 'ನೂರಾರು ಪದ್ಯಗಳು' ಮತ್ತು ಪ್ರತೀಕ್ಷೆ ಕವನಸಂಕಲನಗಳಿಂದ ಅಂದರೆ ಆರಂಭದಿಂದ ೧೯೭೭ರವರೆಗೆ ರಚಿಸಿರುವ ಕವನಗಳಿಂದ ಸಂಪಾದಕರ ಮನೋಧರ್ಮಕ್ಕೆ ಅನುಗುಣವಾದ ಕವನಗಳನ್ನು ಆರಿಸಿಕೊಳ್ಳಲಾಗಿದೆ.

ಈ ಕವನ ಸಂಕಲನದ ಮುನ್ನುಡಿಯಲ್ಲಿ ಸಂಪಾದಕರೇ ಸ್ಪಷ್ಟಪಡಿಸಿರುವ ಹಾಗೆ ಇಲ್ಲಿಯ ಕವಿತೆಗಳೇ ಮುಖ್ಯವಸ್ತು ಪ್ರೇಮ, ಕಾಮ, ವಿರಹಗಳ ಜೊತೆಗೆ ಪ್ರಕೃತಿವರ್ಣನೆ, ಸಾಮಾಜಿಕ ಕಳಕಳಿ, ವಿಡಂಬನೆ ವ್ಯಕ್ತಿ ಚಿತ್ರಣಗಳನ್ನೊಳಗೊಂಡ ಕವಿತೆಗಳು ಇಲ್ಲಿವೆ. ೧೧೨ ಪುಟ ಈ ಕೃತಿ ೧೯೮೩ರಲ್ಲಿ ಪ್ರಕಟಗೊಂಡಿದೆ.

ಇಲ್ಲಿರುವ ಅನೇಕ ಕವನಗಳು ಹೆಣ್ಣನ್ನು ಕುರಿತು ಹೇಳುತ್ತವೆ. ಪ್ರೇಮ ಕವನಗಳಲ್ಲಿ ಹೆಣ್ಣಿನ ಅಗಲಿಕೆಯಿಂದ ಉಂಟಾಗುವ ವಿರಹ. ಅಗಲಿಕೆಯಿಂದ ಉಂಟಾಗುವ ಕಹಿ ಅನುಭವಗಳು ಮನಸ್ಸಿಗಾದ ನೋವು, ಹೊಂದಾಣಿಕೆಯ ಕೊರತೆಯಿಂದ ಉಂಟಾಗುವ ಭಿನ್ನಾಭಿಪ್ರಾಯಗಳು ಕಾವ್ಯದ ವಸ್ತುಗಳಾಗಿವೆ. ಜೊತೆಗೆ ಇಷ್ಟೆಲ್ಲಾ ಆಗುವುದಕ್ಕೆ ಮೂಲ ಕಾರಣಗಳಿರಬಹುದು. ಎಂಬ ಜಿಜ್ಞಾಸೆಯೂ ನಡೆಯುತ್ತದೆ.

ಕವಿಗೆ ಹೆಣ್ಣೆಂದರೆ ಮಧುರ ಆಕರ್ಷಣೆ, ಪ್ರಾಂಜಲ ಮನಸ್ಸಿನಿಂದ ಪ್ರೀತಿಸುತ್ತಾರೆ. ಯಾವ ತ್ಯಾಗಕ್ಕೂ ಸಿದ್ಧರಿರುತ್ತಾರೆ. ಹೆಣ್ಣಿನ ಪ್ರೀತಿಗಾಗಿ ಎಂತಹ ಕಷ್ಟಗಳನ್ನೆದುರಿಸಲು ಸಿದ್ಧರಾಗುತ್ತಾರೆ. ಆತ್ಮವಿಮರ್ಶೆ ಮಾಡಿಕೊಳ್ಳುವ 'ಕೊಳ್ಳುವರಾ'? 'ನಾನು' 'ಮಂಜು' 'ಒಂಟಿ' 'ದಾರಿಹೋಕ' ಮುಂತಾದ ಕವನಗಳಿವೆ. ಬಾಲ್ಯದ ಸವಿನೆನವುಗಳನ್ನು ನೆನಪಿಸಿಕೊಳ್ಳುವ 'ನೆನಪಗಂಧರ್ವರು' ಕವನವಿದೆ.

ಸಾಮಾಜಿಕ ವಿಡಂಬನೆಯನ್ನು ಕುರಿತಿರುವ ಔರಂಗಜೇಬ 'ಚೀಲ' 'ಹಿಮ' 'ಆಗ್ರ ಮತ್ತು ತಾಜಮಹಲ್' ಕವನಗಳಿವೆ. ದೇಶದ ದರಿದ್ರ ಸ್ಥಿತಿಗತಿಗಳನ್ನು ಸಮಾಜದ ತಾರತಮ್ಯಗಳನ್ನು ಜನರ ವಿಶ್ವಾಸಘಾತುಕವನ್ನು ಕುರಿತು ಈ ಕವನಗಳು ಹೇಳುತ್ತವೆ.

ಪಟ್ಟಣಶೆಟ್ಟರ 'ನೂರಾರು ಪದ್ಯಗಳು' ಎಂಬ ಮುಕ್ತಕಗಳು ಸಂಕಲನದಿಂದ ೩೦ ಬಿಡಿಗವಿತೆಗಳನ್ನು ಇಲ್ಲಿ ಆರಿಸಿಕೊಳ್ಳಲಾಗಿದೆ. ಪ್ರೀತಿ ಮತ್ತು ಪ್ರೇಮಗಳ ಗಾಢತೆ, ವಿರಹದ ಪರಿಣಾಮಗಳನ್ನು ಕುರಿತು ಕಲಾತ್ಮಕವಾಗಿ ಮತ್ತು ಪರಿಣಾಮಕಾರಿಯಾಗಿರುವುದು ತಿಳಿದುಬರುತ್ತದೆ.

### ೮. ಆಯಸ್ಕಾಂತ

'ಆಯಸ್ಕಾಂತ' ಸಿದ್ಧಲಿಂಗಪಟ್ಟಣಶೆಟ್ಟಿಯವರ ಎಂಟನೆಯ ಕವನ ಸಂಕಲನವಾಗಿದೆ. ೧೯೮೨ ರಿಂದ ೧೯೮೬ ರವರೆಗಿನ ನಾಲ್ಕುವರ್ಷಗಳ ಅವಧಿಯಲ್ಲಿ ರಚಿಸಿದ ಕವನಗಳು ಈ ಸಂಕಲನದಲ್ಲಿವೆ. ಈ ಸಂಕಲನದಲ್ಲಿ ಒಟ್ಟು

ಇಪ್ಪತ್ತೈದು ಕವನನಗಳಿವೆ. ಸ್ವತಂತ್ರ್ಯ ಕವನಗಳ ಜೊತೆಗೆ ಖ್ಯಾತ ರಂಗಕರ್ಮಿಗಳಾದ ಬಿ.ವಿ. ಕಾರಾಂತರು ಬಂಗಾಲಿಯಿಂದ ಅನುವಾದಿಸಿದ ಬಾದಲ್ ಸರ್ಕಾರ್ ಅವರ 'ಏವಮ್ ಇದ್ರಜಿತ್' ನಾಟಕಕ್ಕೆ ಕವಿ ಪಟ್ಟಣಶೆಟ್ಟರು ಅನುವಾದಿಸಿಕೊಟ್ಟ ಹನ್ನೆರಡು ಕವಿತೆಗಳನ್ನು ಸೇರಿಸಲಾಗಿದೆ. ''೧೯೭೩ರಲ್ಲಿ ಅನುವಾದಿಸಿದ ಈ ಕವನಗಳು ದಾಟಿ ಒಲವು ಈ ಸಂಕಲನದ ನನ್ನ ಕವನಗಳಿಗೆ ಹೊಂದುವುದರಿಂದ ಅವನ್ನು ಇಲ್ಲಿ ಸೇರಿಸಿಕೊಂಡಿದ್ದೇನೆ. ಈ ಸಂದರ್ಭದಲ್ಲಿ ನನ್ನ ಅನುವಾದವನ್ನು ಮತ್ತೆ ಪರಿಕ್ಷಿಸಿಕೊಂಡಿದ್ದೇನೆ.''[೩೮] ಎಂದು ಪಟ್ಟಣಶೆಟ್ಟರು ಹೇಳಿಕೊಂಡಿದ್ದಾರೆ.

ಈ ಸಂಕಲನದ ಅನೇಕ ಕವನಗಳು ತಮ್ಮ ಆತ್ಮವಿಶ್ಲೇಣಾತ್ಮಕ ಗುಣಗಳಿಂದ ಅವರ ಮೊದಲ ಕವಿತೆಗಳಿಗಿಂತ ಭಿನ್ನವಾಗಿವೆ. ದೈನಂದಿನ ಬದುಕಿನ ಏಕತಾನತೆ, ಜೀವನಮೌಲ್ಯದ ಕುಸಿತ, ಯಾವ ಕ್ಷಣಕ್ಕೂ ಘಟಿಸಬಹುದಾದ ಸಾವು ಇವುಗಳನ್ನು ಪಡೆಯುವೆ ಎನ್ನುವ ತುಡಿತ ಇಲ್ಲಿನ ರಚನೆಗಳ ಹೂರಣವಾಗಿದೆ. ಪಾರದರ್ಶಕ ಮಾತಿನ ಮೂಲಕ ತನ್ನೊಳಗನ್ನು ತೋರಬಲ್ಲ. ಸಮರ್ಥ ಚರಣಗಳ ಮೂಲಕ ವಿವಿಧ ಅರ್ಥಗಳನ್ನು ಸೂಚಿಸಬಲ್ಲ. ಲಯದ ಮೋಡಿಯಿಂದ ಸಹೃದಯಿಯನ್ನು ಕಟ್ಟಬಲ್ಲ ಪಟ್ಟಣಶೆಟ್ಟಿಯವರ ಒಲವು ಇಲ್ಲಿ ಪಾರಮಾರ್ಥಿಕತೆಯತ್ತ ವಾಲಿರುವುದನ್ನು ಕಾಣಬಹುದಾಗಿದೆ.

ಡಾ.ಸಿದ್ಧಲಿಂಗ ಪಟ್ಟಣಶೆಟ್ಟರು ಆತ್ಮವಿಮರ್ಶೆಯನ್ನು ಮಾಡಿಕೊಳ್ಳುತ್ತಾ ಒಮ್ಮೆ ಅದರ ವಲಯದೊಳಗೆ ಸಿಲುಕಿ ಮಾತನಾಡಿದರೆ ಇನ್ನೊಮ್ಮೆ ಬಹುದೂರ ನಿಂತು. ನೋಡಿಕೊಳ್ಳುವ ರೀತಿ ವಿಶಿಷ್ಟವಾದುದಾಗಿದೆ. ನನಗಾಗಿ ನಾಲ್ವರು ಚತುರರು ಕಾಯುತ್ತಿದ್ದಾರೆ. ನಾನು ಹೋಗಬೇಕಾಗಿದೆ ಬಿಡು ಎಂದು ತಮಗೆ ತಾವೇ ಹೇಳಿಕೊಳ್ಳುತ್ತಾರೆ. ಈ ಚತುರರಿಂದಲೇ ಕವಿ ಜೀವನದಲ್ಲಿ ಅನೇಕ ತೊಂದರೆಗಳನ್ನು ಅನುಭವಿಸಿದ್ದಾನೆ. ಕಣ್ತೆರೆದರೆ ಸಾಕು ನಿತ್ಯಜೀವನದಲ್ಲಿ ಕವಿ ಇವರ ಪ್ರಭಾವಕ್ಕೆ ಒಳಗಾಗುತ್ತಾನೆ. ಈ ಚತುರು ಸಮಾಜದಲ್ಲಿರುವ ಸಂಪರ್ಕದ ವ್ಯಕ್ತಿಗಳೇ ಆಗಿದ್ದಾರೆ. ಈ ಸಾಮಾಜಿಕ ಅಥವಾ ಸಾಂಸ್ಕೃತಿಕ ವ್ಯಕ್ತಿಗಳಿಂದಲೇ ಕವಿ ಬೆಳೆಯುತ್ತೇನೆ, ಉಳಿಯುತ್ತೇನೆ, ಅಳಿಯುತ್ತೇನೆ ಎನ್ನುತ್ತಾರೆ. ನಾದೂರವಾದರೂ ಅವರು ದೂರವಾಗುವುದಿಲ್ಲ ಎಂದು 'ಚತುರರು' ಕವನದಲ್ಲಿ ಹೇಳಿದ್ದಾರೆ.

ಕಾಯುತ್ತಲಿದ್ದಾರೆ ನನಗಾಗಿ ನೋಡಲ್ಲಿ
ಮೂರು ಲೋಕಗಳಲ್ಲಿ ಹಬ್ಬಿ ನಿಂತಿದ್ದಾರೆ
ಹತ್ತು ದಿಕ್ಕುಗಳನ್ನು ತಬ್ಬಿ ನಿಂತಿದ್ದಾರೆ
ಇಡಿಯಾಗಿ ಇಳಿಯಾಗಿ ನಭವಾಗಿ
ಹವೆಯಾಗಿ ಹಸಿಯಾಗಿ ಮೇಲೆ ಸಾಗಿದ್ದಾರೆ
ಕವಿಯಾಗಿ ಇಲ್ಲಿ
ಬದುಕ ಬರೆಯುತ್ತಿರುವ ನನ್ನನ್ನು
ಕರೆಯುತ್ತಲಿದ್ದಾರೆ ಕೈಮಾಡಿ

ಹೀಗೆ ಕವಿಗಳು ಅನಿವಾರ್ಯವಾಗಿ ಅವರ ಸಂಪರ್ಕಕ್ಕೆ ಹೋಗಲೇಬೇಕಾಗಿದೆ. ಹೋಗುವುದು ಧರ್ಮವಾಗಿರುವಂತೆ ಹೋಗಲೇ ಬೇಕಾಗಿರುವುದು ಎನ್ನುವುದು ಕರ್ಮವಾಗಿದೆ. ಕವಿ ಮನಸಿಗೆ ಹೋಗಲೇಬೇಕೆಂಬ ನಿಶ್ಚಿತತೆಯಿದೆ. ಆದರೆ ಆತ್ಮ ಪರೀಕ್ಷೆಯಲ್ಲಿ ಸಾಗುವ ಕವಿಗೆ ವೈಯಕ್ತಿಕವಾಗಿ ಮತ್ತು ಸಾಮಾಜಿಕವಾಗಿ ಇಲ್ಲಿಯವರೆಗೆ ಉದಾತ್ತವಾದ ಆಕಾಂಕ್ಷೆಗಳು ಈಡೇರಿಲ್ಲ. ಕನಸುಗಳು ಕಳೆದುಹೋಗಿವೆ. ನಿತ್ಯದ ಬದುಕು ನಿಸ್ಸಾಯಕವಾಗಿ ಸಾಗುವುದನ್ನು ಕವಿಗಳು ವಿಷಾದದಿಂದ ಹೇಳುತ್ತಾರೆ. ಕನಸಿರದ ಬಾಳು ಬಾಳಲ್ಲ, ಆದರೆ ಕನಸುಗಳು ಸಾಕಾರಗೊಳ್ಳದ ಬಾಳೂ ಬಾಳಲ್ಲ, ಎಂಬುದು ಕವಿಗಳ ಧೋರಣೆ ಅದನ್ನು ಬೆಳಕು ಕವಿತೆಯಲ್ಲಿ ಹೀಗೆ ಹೇಳಿದ್ದಾರೆ.

ಗಗನ ಚುಂಬಿಸುವ ಉ

ತ್ತುರಿಗೆ ಹಂ

ಬಲಗಳು ಕನಸಲ್ಲಿ ಕಂ

ಪೋಸ್ ಆಗುತ್ತವೆ ಮನ

ಸಲ್ಲಿ ಮುದ್ರಣಗೊಳ್ಳುತ್ತವೆ ಬದುಕಲ್ಲಿ

ಬೈಂಡ್ ಆಗಿದೆ ಬಟಾಬಯಲಾಗಿ

ಎಸುರುತ್ತವೆ ಬೂದಿಯಾಗಿ.

ಹೀಗಾದಾಗ ಬೇಸರಗಳ ಭಾರದಲ್ಲಿ ಜೀವನ ಕುಸಿಯುತ್ತದೆ. ನಿರುತ್ಸಾಹವೇ ಮನಸೆಲ್ಲಾ ಆವರಿಸಿಬಿಡುತ್ತದೆ. ನಮ್ಮ ಹಂಬಲಗಳು ಈಡೇರದಿರುವುದಕ್ಕೆ ಸಮಾಜವೇ ಕಾರಣವಾಗಿದೆ. ಒಂದು ಕಾಲದಲ್ಲಿ ಶ್ರೇಷ್ಠವಾಗಿದ್ದ ಮೌಲ್ಯಗಳಿಗೆ ಇಂದು ಬೆಲೆಯಲ್ಲದಂತಾಗಿದೆ. ಥಳಕು ಬಳುಕಿನ ನಡೆನುಡಿಗಳಿಗಿಂತ ಗೌರವಯುತ ಬಾಳ್ವಿಗೆ ಕಡಿಮೆ ಬೆಲೆಯನ್ನುವಂತಾಗಿ ಆದರೆ ಕವಿಗೆ ಇದು ಬೇಕಾಗಿಲ್ಲ. ಸಾಮಾಜಿಕ ಮೌಲ್ಯಗಳು ಸವಕಲಾದರೂ ಅವನ್ನು ಬಿಡದೇ ಜೀವನ ನಡೆಸುವುದರಲ್ಲಿಯೇ ಸಾರ್ಥಕತೆಯಿದೆ, ಗೌರವವಿದೆ ಎಂದು ಬೆಳಕು ಕವನದಲ್ಲಿ ಹೇಳುತ್ತಾರೆ.

ಹಳೆಯ ಮದ್ಯಕ್ಕೆ ಮದ ಕಡಿಮೆ ಬೆಲೆ

ಹೆಚ್ಚು, ಹಳೆಯ ದೇಹಕ್ಕೆ ಹದ ಹೆಚ್ಚು

ಬೆದೆ ಕಡಿಮೆ ಹಳೆಯ ಮೌಲ್ಯಕ್ಕೆ

ಹೊಳವು ನಾಜೂಕು ಕಡಿಮೆ ಆದರೂ ಹೆಚ್ಚು

ಗೌರವ ಆಯುಷ್ಯ ಕಳದಂತೆ ಆಯುಷ್ಯ.

ಕವಿಯ ಜೀವನದಲ್ಲಿ ಮುಂದೆ ಮೇಲೆ ಕಾಡುವ ನೆನಪುಗಳು ಆತನನ್ನು ಭಂಗಗೊಳಿಸುವೆ. ಕವಿಯ ಶಿಷ್ಟ, ಶುದ್ಧ ಜೀವನವನ್ನು ನುಂಗಿ ಹಾಕಿವೆ, ಸ್ಮೃತಿಗಳ ಕೂಟ ಜಾಲಗಳಲ್ಲಿ ಕವಿ ತೊಳಲಾಡಿದ್ದಾನೆ. ಹಗಲ ಚಂದ್ರ ತನ್ನ ಕೋವಿಯಿಂದ ತಿವಿದು ನೋವುಂಟುಮಾಡುತ್ತಲಿದ್ದಾನೆ. ನೆನಪುಗಳೇ ಬಂಧನಗಳಾಗಿವೆ. ಕವಿ ಜೀವನಿತ್ಯ ಬಂಧಿಯಾಗಿದೆ. ಅಂದರೆ ಕವಿ ನಿತ್ಯವೂ ನೋವಿನಿಂದ ನರಳಿ ಸಾಯುತ್ತಲಿದ್ದಾನೆ. ಆದ್ದರಿಂದ ಕವಿಗೆ ಸಾವೆಂದರೆ ಹೆದರಿಕೆಯಲ್ಲಿ ಪ್ರತಿನಿತ್ಯ

ಸಾಯುವುದು ರೂಢಿಯಾಗಿ ಬಿಟ್ಟಿದೆ. ದಿನಾಲೂ ಬರುವ ಸಾವು ಕವಿಗೆ ಪ್ರೀತಿಯ ವಸ್ತುವಾಗಿ ಬಿಟ್ಟಿದೆ. ಎಂದು 'ಕ್ರಮಣ' ಕಾವ್ಯದಲ್ಲಿ ಹೇಳುತ್ತಾರೆ.

ಸಾವಿನ ಚುಂಗು ಹಿಡಿದು ಹೊರಟವನು ನಾ

ಸಾಯುವ ಸಾವಿನ ಕೇಶರಾಶಿಯ ನೆಳೆದು

ಜಗ್ಗಿ ಆಟವಾಡಿ

ನಲುವಾಗಿ ಬದುಕಿನ ಹಂಗು ಹರಿದು ಹೊರಟವನು

ನನ್ನಪಾಲಿಗೆ ಇಂದು ಸಾವು

ಬಲು ಮಧುರ ಮಂದರ ಮದಿರ

ಕವಿ ಜೀವನದಲ್ಲಿ ಇಷ್ಟೆಲ್ಲಾ ನೋವುಗಳನ್ನು ಅನುಭವಿಸಿದರೂ ಜೀವನ ಪ್ರೀತಿಯನ್ನು ಮಾತ್ರ ಕಳೆದುಕೊಳ್ಳುವುದಿಲ್ಲ. ಜೀವನದಲ್ಲಿ ನೆಲೆಯಿಲ್ಲದಂತಾಗಿ ಹಿಂಜರಿಕೆಯ ಸ್ವಭಾವ ಹೆಚ್ಚಾಗಿ ಕವಿ ಪಲಾಯನವಾದಿಯಾದರೂ ಬದುಕಬೇಕೆನ್ನುವ ಆಸೆ ತೀವ್ರವಾಗಿದೆ. ಬದುಕು ಎಲ್ಲರ ಬದುಕಿನಂತಿರದೆ ತನ್ನ ತನವನ್ನು ಮರೆಯುವಂತಿರಬೇಕು. ಅದು ವಿಶಿಷ್ಟವಾಗಿರಬೇಕು ಎಂದು 'ಬದುಕುವುದು ಬೇಕೆನೆಗೆ' ಕವಿತೆಯಲ್ಲಿ ಹೇಳುತ್ತಾರೆ.

ನಾನು ಸಾಯುವುದಕ್ಕೆ ಬದುಕಲಾರೆ

ಬದುಕುವುದು, ಬದುಕುವುದು, ಬದುಕುವುದು ಬೇಕೆನೆಗೇ

ಆದರೂ

ನಿರ್ವಿಣ್ಣ ನಿರ್ಜೀವ ಹಣ್ಣು ತರಗಲೆಯಾಗಿ

ಹಾರಿ ಹೋಗುವ ಇಚ್ಛೆ

ಇಲ್ಲಿ ನನಗೆ.

ಎಂಬ ದೃಢ ನಿರ್ಧಾರದೊಂದಿಗೆ ಬದುಕನ್ನು ಮುಂದುವರಿಸಲು ಇಷ್ಟಪಡುತ್ತಾರೆ. ವಯಸ್ಸಾದಂತೆ ಸಾವು ಹತ್ತಿರವಾಗುತ್ತದೆ. ಆದರೆ ಕವಿಯ ಮನಸ್ಸಿನಲ್ಲಿ ಜೀವನೋತ್ಸಾಹದ ಚಿಮ್ಮಿ ಬರುತ್ತದೆ. ಇನ್ನಷ್ಟು ಚೆನ್ನಾಗಿ ಬದುಕಬೇಕೆಂಬ ಹಂಬಲ ಹೆಚ್ಚಾಗುತ್ತದೆ. ಇನ್ನುಳಿದ ಕಡಿಮೆ ಅವಧಿಯಲ್ಲಿ ಸಹಜವಾಗಿ ಬರುವ ಗುಲ್ಲು ಗದ್ದಲಗಳ ನಡುವೆಯೂ ಬದುಕು ಮಲ್ಲಿಗೆಯ ಬನವಾಗಿ ಚಂದ್ರಜಗವಾಗಿ, ಇಂದ್ರವರ್ಣವಾಗಿ, ಮಧುರವಾಗಿರಬೇಕೆಂದು ಕವಿಮನಸು ಬಯಸುತ್ತದೆ. ಸಾವು ಹತ್ತಿರವಾದರೂ ಬದುಕುವ ಬಯಕೆ ಹೆಚ್ಚಾಗುವುದು. ಜೀವನಮುಖೀ ಪ್ರೀತಿಯ ನಿಲುವಾಗಿದೆ. ಕವಿ 'ಅಯಸ್ಕಾಂತ' ಕವಿತೆಯಲ್ಲಿ ಹೀಗೆ ಹೇಳಿದ್ದಾರೆ.

ವಯಸ್ಸು ಸಾವಿನಯಸ್ಕಾಂತದ ಕಡೆಗೆ ಸರಿಯುತ್ತಿದೆ, ಮನಸ್ಸು ನಿನ್ನೊಳಗೆ ನಿನಷ್ಟೇ ಉತ್ಸಾಹದಿಂದ ನಿನ್ನುದ್ದ ನಿನ್ನಗಲ, ನಿನ್ನಾಳಗಳ, ಒಳಬಳಗೆ ಹೊಕ್ಕು ಯಾಕೆ ಹಂಬಲದ ಹಂದರದೊಳಗೆ ಹೂವಾಗಿ ಹಾಯಾಗಿ ಹಾಡುತ್ತಿದೆ.

ಹಗಲಿನಲ್ಲಿಯೂ ಬಂದು ಕಾಡುತ್ತಿರುವ ಕನಸುಗಳು ಸಾವಿರಾರು ಆದರೆ ಇವೆಲ್ಲಾ ಸಾಕಾರಗೊಳ್ಳುವುದಿಲ್ಲವೆಂಬ ನೋವು ಕವಿಗಿದೆ. ಬರಿ ಕನಸು ಕಾಣುವುದರಿಂದ ಜೀವನಕ್ಕೆ ಅರ್ಥಪ್ರಾಪ್ತಿಯಾಗುವುದಿಲ್ಲ. ಬದುಕು ಸಹಜತೆಯಿಂದ ಕೂಡಿರಬೇಕು; ನಾವೆಲ್ಲಾ ಬಯಸುವ ಬದುಕು ಒಂದು ಮಾಟ. ಆಯುಷ್ಯ ಕಳೆದಂತೆಲ್ಲಾ ಕುಸಿಯುತ್ತಿರುವ ಕನಸುಗಳು ಗಟ್ಟಿ ಮೆಟ್ಟಿಲಗಳಾಗುತ್ತವೆ. ಅವೇ ಸುಖದ ತೊಟ್ಟಿಲಗಳಾಗುತ್ತವೆ. ಆಸೆಗಳು ಸತ್ತು ನೋವುಗಳು ಇಲ್ಲದಂತಾಗಿ ಹಸಿರು ಹಣ್ಣಾದಾಗ ಬದುಕಿನಲ್ಲಿ ಮತ್ತೆ ಹೊಸ ಆಸೆಗಳು ಮೂಡುವುದು ಸಹಜ. ಆದರೂ ಕವಿಯ ಬದುಕು ಸುಖದ ಹೇರಿಗಿಂತ ದುಖಃದ ಭಾರಕ್ಕೆ ಬಳುಕಿರುವುದನ್ನು ಪಟ ಕವಿತೆಯಲ್ಲಿ ನೋಡಬಹುದು.

ಸುಖದ ಬಾಲಾಗಸಿಯ ಬಲದಿಂದ

ಹಾ

ರುತಿಹ ಬವಣೆಗಳ ನಿತ್ಯ

ಪಡುವ ಪಾಡುಗಳ ಪಟ ಮಾತ್ರ

ನಾನು, ಇವಳ ಕೈಯೊಳಗೆನ್ನ ಮನಸು ಕನಸಿನ ಸೂತ್ರ

ನಿತ್ಯ ಜೀವನದಲ್ಲಿ ಬರುವ ನೋವು ಬವಣೆಗಳ ಗೂಡಾಗಿರುವ ಬದುಕು. ಗೊತ್ತು ಗುರಿಯಿಲ್ಲದೆ ಅಂತರಿಕ್ಷದಲ್ಲಿ ಹಾರಾಡುವ ಗಾಳಿಪಟವಾಗಿದೆ. ಬಾನ ಸಂಬಂಧಕ್ಕಾಗಿ ಕೈ ಚಾಚಿದರೂ ಅದು ದೊರಕುತ್ತಿಲ್ಲ. ಏಕೆಂದರೆ ಗಾಳಿಪಟದ ಸೂತ್ರ ಬೇರೆಯವರ ಕೈಯಲ್ಲಿದೆ. ಅವರು ಆಡಿಸಿದಂತೆ ಆಡಿಸಬೇಕಾದ ಅನಿವಾರ್ಯತೆಯುಂಟಾಗಿದೆ. ಅವರ ಸಹವಾಸದಲ್ಲಿ ಓಡಾಟ, ಕಾಡಾಟ ಎಲ್ಲಾ ಪೀಕಲಾಟಗಳ ಮಧ್ಯ ಸಿಲುಕಿ ಕವಿ ಬದುಕು ಅರ್ಥವಾಗಲಾರದ ವರ್ಣರಂಜಿತ ಚಿತ್ರವಾಗಿದೆ ಎಂದು 'ಪಟ' ಕವಿತೆಯಲ್ಲಿ ಹೇಳಿಕೊಂಡಿದ್ದಾರೆ.

ನಾನೊಂದು

ಅತಿನವ್ಯ

ವರ್ಣ ತೈಲ ಚಿತ್ರವಾಗಿದ್ದೇವೆ.

ಕಳಿಸಿರೋ ನನ್ನ

ಖಂಡಖಂಡಾಂತರದಿ

ಪೇಂಟಿಗ್ಸ್ ಪ್ರದರ್ಶನಕೆ.

ಹೀಗೆ ಅನ್ನುವ ಕವಿಗೆ ಜೀವನ ಹೊರೆಯಾಗಿದೆ. ತನ್ನದೆ ಹಾದಿಯಲ್ಲಿ ನಡೆಯಬೇಕಂದರೂ ಅನೇಕರು ಅಡ್ಡಬಂದು ನೋವುಂಟುಮಾಡಿದ್ದಾರೆ. ಇವರೆಲ್ಲಾ ಸಜ್ಜನಿಕೆಯ ವೇಷತೊಟ್ಟವರೆಂದು ಕವಿ ಕವಿತೆಯಲ್ಲಿ ಹೇಳುತ್ತಾರೆ.

ನೋವು

ನನಗೆ ಕೊಟ್ಟವರೆಲ್ಲಾ ಹೂವು

ಸಿಹಿ ನಗೆ ನಕ್ಕವರು.

ಮಿಕ್ಕವರು ಮೌನಭಾವನದ ಗೋಪುರದ ತುದಿಯೇರಿ

ಸುಮ್ಮನೆ ಸರಳ ಬಾಣ ಬಿಟ್ಟವರು

ಇಂತಹ ಜನರಿಂದ ಕೂಡಿರುವ ಪರಿಸರದಲ್ಲಿ ಬದುಕು ಸಾಗಿಸುವುದು ಕವಿಗೆ ಕಷ್ಟವಾಗಿದೆ. ನೆಮ್ಮದಿಯ ತಾಣಕ್ಕಾಗಿ ಹುಡುಕಾಟ ನೆಡೆದಿದೆ. ಆದರೆ ಅದು ಸಿಗುವುದು ಕಷ್ಟಸಾಧ್ಯ. ಇದಕ್ಕಾಗಿ ಕವಿ ದೇವರ ಮೊರೆ ಹೋಗುತ್ತಾರೆ. ನಿನಗಾಗಿ ಕಾದು ಬೇಸರವಿಲ್ಲ ನನಗೆ, ಏಕೆಂದರೆ ನನಗೆ ಸಂತೃಪ್ತಿಯ ಬದುಕು ನೀಡುವವನು. ನೀನೆ ನನ್ನ ಸಮಸ್ಯೆಗಳು ಸಾವಿರಾರು ಅದರಿಂದ ಹೊರಬಂದು ಮುಕ್ತಿ ಪಡೆಯಲು ನಿನ್ನ ಸಹಾಯ ಬೇಕೆನಗೆ, ನಾನು ದೀನನನಾಗಿದ್ದೇನೆ. ನೊಂದಿದ್ದೇನೆ ಅದಕ್ಕಾಗಿ ನಿನ್ನಲ್ಲಿ ದೈನ್ಯದಿಂದ ಬೇಡಿ ವಿಮುಕ್ತನಾಗಬಯಸುತ್ತೇನೆ ಎಂದು 'ವಿನಯ' ಕವಿತೆಯಲ್ಲಿ ಕಳಕಳಿಯಿಂದ ಬೇಡಿಕೊಳ್ಳುತ್ತಾನೆ.

ತಿಳಿದೋ ತಿಳಿಯದೆಯೋ ಎಲ್ಲ ಕಳೆದು

ಇಳೆಗೆ ಕರುಣೆಯ ಕೊನೆಯ ಮಳೆ ಇಳಿದು

ಬರಗಾಲ ಬರಿಕಾಲ ನಂಜ ನುಗುಳಿದ ಹಾಗೆ

ಅಂಜಿ ಭಂಜಿತನಾದ

ವಿವಿಧ ಮೂರ್ತಿಗಳ ಕಡೆದವನದ ನಾನು,

ಎಂದು ತನ್ನ ವಾಸ್ತವದ ಸ್ಥಿತಿಯನ್ನು ದೇವರಲ್ಲಿ ಅರಿಕೆ ಮಾಡಿಕೊಳ್ಳುತ್ತಾ ನಿನ್ನ ಅಡಿಗಳಲ್ಲಿ ಆಶ್ರಯವಾಗಿತ್ತು ಶಾಂತಿ ತೃಪ್ತಿಗಳನು ನೀಡೆಂದು 'ವಿನಯ' ಕವಿತೆಯಲ್ಲಿ ಬೇಡಿದ್ದಾರೆ.

ಬಾನನ್ನ ಹಡೆದವನೆ

ನಿನ್ನ ನಾಡಿಗೆ ನಿನ್ನಪಾಡಿಗೆ ನಿನ್ನ ಅಡಿಗಳ ಅಡಿಗೆ

ಬಯ್ದು ಕಳನನ್ನ ಕ್ರಾಂತಿ

ಕಾದಿರುವೆ ಬೇಕೆಂದು ಬೀಡು

ತಂದೆ ನೀಡು

ನಿನ್ನ ಪ್ರೀತಿಯ ತೃಪ್ತ ಮದರ ಹಿತ

ಅಡಿಗೆ.

ಕವಿಗೆ ಬೆಲೆ ಗೌರವ ಬೇಕೆನಿಸಿ ಸಿಗದೇ ಇದ್ದಾಗ ಬೇಸರವಾಗಿದೆ. ಸಮಾಧಾನ ಇಲ್ಲದೆ ವಿದ್ಯಾರ್ಥಿಗಳ ಸುತ್ತ ಶಿಕ್ಷಕರಾಗಿ ಕರಗಿ ಹೋಗಿದ್ದಾರೆ. ಮೌನಗಳಲ್ಲಿ ಪ್ರತಿಭಟನೆಯನ್ನು ಅಡಗಿಸಿಟ್ಟ. ಏಕಾಂತದ ಏಕತಾನತೆಯನ್ನು ಅನುಭವಿಸಿದ್ದಾರೆ. ತಳಮಳ ಅತೃಪ್ತಿ ಅಸಮಾಧಾನಗಳಿಂದ ಬದುಕು ಬಿರುಗಾಳಿಗೆ ಸಿಕ್ಕ ಬಾಳೆಗಿಡವಾಗಿದೆ. ಜೀವನ ಪ್ರಪಂಚ ಬೇಡವಾಗಿದೆಯೆಂದು 'ಗಾಳಿಬಾಳು' ಕವಿತೆಯಲ್ಲಿ ಹೇಳಿಕೊಂಡಿದ್ದಾರೆ.

ನನ್ನ ನಾಲಿಗೆ ಕತ್ತರಿಸಿಕೊಳ್ಳಿ

ಮಾತು ಸಾಕಾಗಿದೆ

ಮುಚ್ಚಿ ಕಿವಿ ಕೇಳುವುದು

ಮುಗಿದಿದೆ. ಮೂಗು ಹಿಡಿದಿರಿಸಿ

ವಾಸನೆ ಹಿಡಿದಿದೆ

ಹುಗುದ ಹಾಕಿ

ಮುಗಿದು ಬಿಡಬೇಕೆಂಬ ತೀವ್ರತೆ.

ಇಂತಹ ಕಠಿಣ ನಿರ್ಧಾರಕ್ಕೆ ಬರಲು ಹಿಂದಿರುವ ಕಾರಣ ಬೇಸರ. ಕೊನೆಗೆ ಕವಿ ಗುರುವಿನಲ್ಲಿ ಕೈಹಿಡಿದು ರಕ್ಷಿಸು ಕೈಹಿಡಿದು ಮುನ್ನೆಡೆಸು ಎಂದು ಬೇಡಿಕೊಳ್ಳುತ್ತಾನೆ. ಕವಿಗೆ ಜೀವನದಲ್ಲಿ ಅಕ್ಕರೆ ಪ್ರೀತಿ ಆಶ್ರಯಗಳು ಬೇಕಾಗಿವೆ ಅದಕ್ಕಾಗಿ ಅವರು ಹಂಬಲಿಸಿದ್ದಾರೆ. ಎಲ್ಲೆಲ್ಲೋ ಅಲೆದಾಡಿದ್ದಾರೆ. ಆದರೆ ಅದು ಕೊನೆಗೆ ಸಿಕ್ಕಿದ್ದು ಗದುಗಿನ ಶ್ರೀತೋಂಟದಾರ್ಯ ಸ್ವಾಮಿಗಳಲ್ಲಿ 'ಕರುಳ ವಿಳಾಸ' ಕವಿತೆಯಲ್ಲಿ ಕವಿಗಳು ಹೀಗೆ ಹೇಳಿಕೊಂಡಿದ್ದಾರೆ.

ಒಂದೆ ತೋಂಟದ ಮಠಕೆ

ಹೌದು ಇದೆ ಮಣಿಯಿದೆ ಬೆಳಕು

ಚಿಮ್ಮುತಿದೆ ಒಲವು ಹೊಮ್ಮುತಿದೆ ಕರುಳ ವಿಳಾಸ

ಮಣಿದೆ ಗುರುಪಾದಕ್ಕೆ ಎದೆಯ ನಾದಕ್ಕೆ

ಅವರ ಕರುಣೆಯ ನೆಲಕೆ

ಹೀಗೆ ಕವಿ ಸಾಮಾಜಿಕ ಜೀವನದಿಂದ ಬೇಸರಗೊಂಡು ದೂರವಾಗಿ, ಶಾಂತಿಗಾಗಿ, ದೇವರು, ಗುರು ಮುಂತಾದ ಆಧ್ಯಾತ್ಮಿಕದತ್ತ ವಾಲಿ ಅಲ್ಲಿ ನೆಮ್ಮದಿಯನ್ನು ಕಂಡುಕೊಂಡಿದ್ದಾರೆ. ಆಧ್ಯಾತ್ಮ ಜೀವಿಯಾದ ಕವಿಗೆ ಲೌಕಿಕ ಜಂಜಡಗಳೆಲ್ಲಾ ಮಾಯೆಯ ಆಟವಾಗಿ ತೋರಿವೆ. ಈಗ ಸಾವಿನ ಬಗ್ಗೆಯೂ ಕವಿಗೆ ಹೆದರಿಕೆಯಲ್ಲ. ಬೇರೊಬ್ಬರು ಆಡಿಸಿದಂತೆ ಆಡುವ ಆಗಸದ ಗಾಳಿಪಟವಾದ ಬದುಕು ಬಿರುಗಾಳಿಗೆ ಸಿಕ್ಕಿ ತತ್ತರಿಸುತ್ತಿರುವ ಬಾಳೆ ಗಿಡವಾದ ಬಾಳ್ವೆಗೆ ಅಭಯಹಸ್ತ ದೊರೆತಿರುವುದು ಗುರು ಕಾರುಣ್ಯದಿಂದ, ದೇವರ ಕೃಪೆಯಿಂದ ಈಗ ಬದುಕಿನ ಬಂಡಿ ಚಡಪಡಿಕೆಯಿಲ್ಲದೆ ನಡೆದಿದೆ. ಕವಿಗೆ ನೆಮ್ಮದಿ ಶಾಂತಿಗಳು ಪ್ರಾಪ್ತವಾಗಿವೆ.

### ೯. ಇಂದು ರಾತ್ರಿಯ ಹಾಗೆ

ಇಂದು ರಾತ್ರಿಯ ಹಾಗೆ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ೯ನೇ ಕವನ ಸಂಕಲನವಾಗಿದೆ. ೧೯೯೪ರಲ್ಲಿ ಇದು ಪ್ರಕಟವಾಯಿತು. ೧೯೮೬ ರಿಂದ ೧೯೯೪ರ ವರೆಗಿನ ಅಂದರೆ ೧೨ ವರ್ಷಗಳಲ್ಲಿ ಕವಿಗಳು ರಚಿಸಿದ ಕವನಗಳು ಈ ಸಂಕಲದಲ್ಲಿವೆ. ಒಟ್ಟು ೩೬ ಕವನಗಳಿರುವ ಈ ಸಂಕಲನದಲ್ಲಿ ೨೬ ಸ್ವತಂತ್ರ ಕವನಗಳು 'ಗಜಲ್'ಗಳು ಮತ್ತು ಹಿಂದಿಯಿಂದ ಅನುವಾದಗೊಂಡ ಕವನಗಳಿವೆ.

ಈ ಕವನಸಂಕಲದಲ್ಲಿಯ ಕಾವ್ಯಗಳ ವಿಷಯವಸ್ತು ಬಹಳಷ್ಟು ಭಿನ್ನವಾಗಿದ್ದು. ಕಾಲ ಕಾಲದಲ್ಲಿ ನಡೆಯುತ್ತಿರುವ ಬದುಕು, ಮನು, ಅರಿವು ಹಳಹಳಿಕೆಯ ಮನಸ್ಸಿನ ಸ್ಥಿತಿ, ಅಗೋಚರ ಶಕ್ತಿ, ಪ್ರೀತಿ, ವಿರಹ ವಿಷಾದಗಳಿಂದ ಕೂಡಿವೆ. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಉತ್ಕಟವಾದ ಭಾವನೆಗಳೇ ಕಾವ್ಯಗಳಾಗಿ ಮೂಡಿಬಂದಿರುವುದನ್ನು, ನಾವು ಇಲ್ಲಿಯವರೆಗೆ ನೋಡಿದ್ದೇವೆ. ಆದರೆ ಈ ಕವನ ಸಂಕಲನದಲ್ಲಿ ಕಾವ್ಯದ ವಸ್ತುವಿನಿಂದ ದೂರ ನಿಂತು, ನಿರ್ಲಿಪ್ತಸ್ಥಿತಿಯಿಂದ ಗಮನಿಸಿ ಕಾವ್ಯ ರಚನೆಗೈದಿದ್ದಾರೆ. ಇದಕ್ಕೆ ಅವರ ವಯೋಧರ್ಮವೂ ಕಾರಣವಾಗಿರಬಹುದು.

ಆದಿ ಅಂತ್ಯಗಳಿರದ ಕಾಲ ಒಂದು ನಿರಂತರ ಹರಿಯುವ ದೀರ್ಘವಾಹಿನಿ. ಈ ಕಾಲ ಪ್ರವಾಹದಲ್ಲಿ ಅಲ್ಪಾಯುಷಿಯಾದ ಮಾನವನ ಬದುಕು ಸಾರ್ಥಕವಾಗಬೇಕೆಂದು ಕವಿ ಬಯಸುತ್ತಾರೆ. ಕಳೆದ ಕೆಲವು ತಿಂಗಳುಗಳಿಂದ ದಿನನಿತ್ಯ ಮನೆಗೆ ಬರುವ ಹಕ್ಕಿ, ಕಿಟಕಿಯ ಗಾಜಿನಲ್ಲಿ ತನ್ನ ಚಿತ್ರವನ್ನೇ ಕಂಡು ಕುಕ್ಕುತ್ತಲಿದೆ. ಇಲ್ಲಿವೆ ಒಳಗಡೆ ಪ್ರೇಯಸಿ ಮಗಳು, ಮಗ ಇರಬಹುದೆಂಬ ಶಂಕೆಯಿಂದ ಅರಸುತ್ತಿರಬಹುದು. ಮೋಜಿಗಾಗಿ ನಿನ್ನನ್ನು ಎಚ್ಚರಿಸಲೆಂದು ದಿನಾಲು ಬಂದು ಕೂಗುತ್ತಿರಬಹುದೆಂದು ಮಗಳಿಗೆ ಹೇಳಿದಾಗ ಅಲ್ಲಿಯೂ ಅನುಮಾನ ವ್ಯಕ್ತವಾಯಿತು. ಆದರೆ ಕವಿ ಈ ವಿಷಯವನ್ನು ಗಂಭೀರವಾಗಿ ಆಲೋಚಿಸಿದಾಗ ಪ್ರಬುದ್ಧತೆಯನ್ನು ಪ್ರದರ್ಶಿಸುತ್ತಾರೆ. ನನ್ನೊಳಗೆ ಮುಳುಗಿ ಕಾಲಕಳೆಯುತ್ತಿರುವ ನನ್ನನ್ನು ನಾನು ಹುಟ್ಟಿನಿಂದಲೂ ಲೆಕ್ಕ ಇಡಲಾರದೆ ಇರುವ ಸಂಜೆ ಮುಂಜಾವುಗಳನ್ನು ನನ್ನ ಉಸಿರು ತಂಗಳಾಗದ ಹಾಗೆ ಇರುವುದಕ್ಕೊಸ್ಕರ ರಾತ್ರಿಯ ಕನಸುಗಳಲ್ಲಿ, ಹಗಲಿನ ಮನಸುಗಳಲ್ಲಿ ಚಿತ್ರ ಚಿತ್ತಾರಗಳನ್ನು ಚಿತ್ರಿಸಿ ಬದುಕಿಗೆ ಬಣ್ಣಕೊಡಲು ಹಕ್ಕಿ ಇಷ್ಟೆಲ್ಲಾ ಪ್ರಯತ್ನ ಮಾಡುತ್ತಲಿದೆ ಎಂದು ಕವಿಗೆ ಭಾಸವಾಗುತ್ತದೆ. ಈ ಗೀತೆ ಬೇಂದ್ರೆಯವರ ಹಕ್ಕಿ ಹಾರುತಿದೆ ನೋಡಿದಿರಾ ಕವನವನ್ನು ನೆನಪಿಸುವುದಾದರೂ ಇಲ್ಲಿ ತನ್ನತನದೆ, ಅಂತೂ ಹಕ್ಕಿ ಕಾಲಸೂಚಕವಾಗಿಯೇ ಬಂದಿದೆ.

ಆಚೆ ಕಿಟಕಿಯಲಿ ಹಕ್ಕಿ

ಕಾಜು ನೆಲದಲ್ಲೂರಿ ಕಾಲು

ಕಾಜ ನೆಲೆ ಕುಕ್ಕಿ

ಮುಕ್ಕತೊಡಗಿತು ಮತ್ತೆ ಮತ್ತೆ ಮತ್ತೆ

ಕಾಲ ಕಾಳು.

(ಆಮಂತ್ರಣ)

ಈ ಕಾಲದ ಪರಿಧಿಯೊಳಗೆ ನಾವು ಅನುಭವಿಸುವ ಸುಖ ದುಃಖಗಳೆಲ್ಲವೂ ನಮ್ಮ ಕರ್ಮದ ಫಲವಾಗಿರುತ್ತವೆ. ಕಾಲಕ್ಕೆ ಕಾಲು ವಿದಿಸಿ ನಿತ್ಯ ಚಲನಶೀಲತೆಯನ್ನು ಹೊಂದಿದೆ ಆದರೆ ನಮಗೆ ? ಅಂತ್ಯವೆಂಬುದೊಂದು ಇದೆ. ನಾವು ಒಬ್ಬೊಬ್ಬರೂ ಒಂದೊಂದು ನಿತ್ಯ ಚಲಿಸುತ್ತಿರುವ ಗೋರಿಗಳಾಗಿದ್ದೇವೆ. ಆದರೂ ಅದರ ಅರಿವಿಲ್ಲ. ಜೀವನದಲ್ಲಿ ಎಲ್ಲಾ ಮರೆತಂತಿರುವ ಮರೆಗುಳಿಗಳಾಗಿದ್ದೇವೆ. ಕಾಲದೆದುರಿನಲ್ಲಿ ಅದರ ಮಡಿಲಲ್ಲಿ ಲಲ್ಲೆ ಹೊಡೆದರೂ ನಾವು

ಕಾಲದಂತೆ ಚಿಗಿಯುವುದಿಲ್ಲ. ಮುಗಿಯುತ್ತೇವೆ, ಕೈ ಅಗಿಯುತ್ತೇವೆ. ನಮ್ಮ ನಮ್ಮ ಗೋರಿ ಕಾಲ ಅಥವಾ ನಿಸರ್ಗಕ್ಕೆ ಒಂದೇ ಚಿಂತೆ ನೋವನ್ನು ಹೂವಾಗಿಸುವುದು ಬಿಸಿಲನ್ನು ಹಣ್ಣಾಗಿಸುವುದು, ಬಣಬಣಾ ಬಣ ಬಣಾ ಎನ್ನುವಲ್ಲಿ ಹೊಸಚಿಗುರ ಅರಳಿಸಿ ಸುಖನಗು ಹರುಷಿಗಳನ್ನುಕ್ಕಿಸುವುದು ಕಾಲದ ಉದ್ದೇಶವಾಗಿದೆ. ಇಲ್ಲಿ ಅಂದರೆ ಕಾಲವಾಹಿನಿಯಲ್ಲಿ ನಾವುಗಳೆಲ್ಲಾ ಹಳೆಯವರಾಗುವುದೊಂದೆ ದಾರಿಯಾದರೂ ಚಿಗುರುವುದಕ್ಕೆ ಮನಸಮಾಡುವುದು, ಮುಗಿದರೂ ಮುನ್ನೆಡೆವ ಕನಸುಮೂಡುವುದು ಪ್ರಕೃತಿಸ್ಥರನ್ನಾಗಿಸುತ್ತದೆ. ಏರಿಸುತ್ತದೆ ನಿಸರ್ಗದ ಅಪವರ್ಗದ ಅಟ್ಟಕ್ಕೆ ಎಂದು ಕವಿ ಹೇಳಿದರೂ ಇದು ಈ ಲೋಕದ ಮನುಜರೆಲ್ಲರಿಗೂ ದೊರಕಲಿ ಎಲ್ಲರೂ ಸುಖಶಾಂತಿಯಿಂದ ಬದುಕಲಿ ಅವರ ದಿನನಿತ್ಯದ ಪಾಡು ಒಂದು ಸುಂದರ ಹಾಡಾಗಲಿ ಎಂಬುದೇ ಕವಿಗಳ ಆಶಯ ಮತ್ತು ಹಾರೈಕೆಯಾಗಿದೆ.

ಹಾಡೇ ಹಗಲು ಹಾಡಾಗಿ ಕರಗುತ್ತ ಅಡಗುವುದು

ಸತ್ಯ

ವಾದರೂ ಹಾಡಾಗಲು ಹೆಣಗುವುದು

ಹಾಡಿನ ಪಾಡಾಗುವುದು

ಪಾಡು ಅಂಥ ದಿವ್ಯ ಪಾಡು

ಸಿಗಲಿ ನಿಮಗೆ ನನಗೆ

ಸಿಗಲಿ ನಿಮಗೆ ನನಗೆ

ಸಕಲರಿಗೆ

(ಪಾಡು)

ಕನ್ನಡ ಕಾವ್ಯಲೋಕದಲ್ಲಿ ಮಗುವನ್ನು ಕುರಿತು ಬರೆದಿರುವ ಕವನಗಳು ವಿರಳವಾಗಿವೆ. ಕವಿ ಸಿದ್ಧಲಿಂಗ ಪಟ್ಟಣಶೆಟ್ಟರು ಮಗುವನ್ನು ಕುರಿತು ತುಂಬ ಸುಂದರವಾಗಿ ಬರೆದಿದ್ದಾರೆ. ಬಹಳ ಮಕ್ಕಳು ಇರಲಿ ಬಡತನವು ನಮಗಿರಲಿ. ಎನ್ನುವ ಮನೋಭಾವನೆ ನಮ್ಮದು, ಅಂದರೆ ಮಕ್ಕಳು ನಿಜವಾದ ಸಂಪತ್ತಾಗಿದ್ದಾರೆ. ಕವಿಗಳು ಮಗುವನ್ನು ಬಹಳ ಜೋಪಾನದಿಂದ ತಯಾರಿಸಿದ್ದಾರೆ.

ತಂದು ಹುತ್ತದ ಗಟ್ಟಿ ಜಿಗುಟು ಮಣ್ಣು

ಮಿದ್ದಿ ಮಿದ್ದಿ ಬಲು ಮುದ್ದಿನಿಂದ

ಹಂಬಲಿಸಿ ಬಯಸಿ ಕೊಟ್ಟೆ

ಆಕಾರ, ಮುದ್ರಿಸಿದೆ ಮುಖ ಮೈಕಣ್ಣು.

ನಿದ್ರಿಸಿದ ಮೈತುಂಬಾ ಸದಾಚಾರದ ಉಡುಪು

ತಲೆತುಂಬಾ ಯೋಚನೆಯ ಜಿಡುಪು

ಎದೆಯೊಳಗೆ ಸಂವಾದ ದೊಡಪು

ಪ್ರೀತಿ ಕಾರಾಗಾರ.

(ಗೊಂಬೆ)

ಹೀಗೆ ತಯಾರುಗೊಂಡ ಮಗು ಕೆಲದಿನ ಗೊಂಬೆಯಾಗಿ, ಇಸಿರಿನ ಕಿಂಚಿಯಾಗಿ ಮನೆಯಲ್ಲಾ ಸುಳಿದಾಡಿ, ಸಿಡಿಮಿಡಿಗೊಂಡು ಏನೇನೋ ಅವಾಂತರಗಳನ್ನು ಮಾಡಿ ನಾಟಕ ಕಾವ್ಯದಂತೆ ಸಾಹಿತ್ಯವಾಗಿ ಮೋಡದಂಚಿನಲ್ಲಿ ಹೊಳೆಯುವಂತೆ ಮಾಡುವ ಮಗು ಬರೀಮಗುವಲ್ಲ ಅದು ನಗು, ನಗು ಕೇವಲ ನಗು ಎಂದು ಕವಿ ಅಭಿಪ್ರಾಯಪಡುತ್ತಾರೆ.

ಇಂದು ರಾತ್ರಿಯ ಹಾಗೆ ಕವನ ಸಂಕಲನದ ಶೀರ್ಷಿಕೆಯಾಗಿರುವ ಪದ್ಯ. ಪದ್ಯದ ಪ್ರೀತಿನುಡಿಯ ಕೊನೆಗೆ ಭಯವಿರಲಿಲ್ಲ; ಇಂದು ರಾತ್ರಿಯ ಹಾಗೆ ಎಂದು ಭೂತಕಾಲವನ್ನು ನೆನೆಯುತ್ತ. ಈ ದಿನದ ರಾತ್ರಿಯಲ್ಲಿ ನಿರ್ಭಯದಿಂದ ನಿಂತ ವರ್ತಮಾನದ ಸ್ಥಿತಿಗೆ ಹೋಲಿಸಿಕೊಳ್ಳುತ್ತಾರೆ. ಜೀವನದ ಆರಂಭಕಾಲದಲ್ಲಿ ಬಂದು ಸಂತೋಷ ದಿಗಿಲುಗಳು, ಕತ್ತಲು ಕವಿದ ಹಾದಿಗಳಿದ್ದರೂ ಭಯವಿರಲಿಲ್ಲ, ಯೌವನದಲ್ಲಿ ಹೊಸ ಜಗತ್ತನ್ನು ಕಂಡೆ ಅಲ್ಲಿಯೂ ಪಾಪ ಶಂಕೆಗಳ ಭಯ ನನ್ನನ್ನು ಕಾಡಲಿಲ್ಲ. ಅನಂತರದಲ್ಲಿ ಪ್ರತಿಯೊಂದು ತದ್ಭವಕೆ ತತ್ಸಮದ ಶುದ್ಧಿಯಿಂದ ನಿಶ್ಚಿಂತನಾದೆ. ಕಾಲಾಂತರದಲ್ಲಿ ನೋವುಗಳು, ನಾಚಿಕೆಗಳು, ಅಭಿಮಾನ ಬಿಗುಮಾನಗಳ ಸುಳಿಯಲ್ಲಿ ಸಿಲುಕಿದರೂ ಕವಿಗೆ ಭಯವೆಂಬುದಿರಲಿಲ್ಲ. ಕವಿಗೆ ದೀರ್ಘವಾಗಿದ ಬದುಕು ಒಳ್ಳೆಯ ಅನುಭವವನ್ನು ನೀಡಿದೆ. ಜೀವನದಲ್ಲಿ ಹೆದರಿ ಬಾಳುವುದರಲ್ಲಿ ಅರ್ಥವಿಲ್ಲ ಎಂಬ ನಿಲುವು ಮೊದಲಿನಿಂದಲೂ ಪ್ರಕಟಗೊಂಡಿದೆ. ಜೀವನದಲ್ಲಿ ಏನೇ ಬಂದರೂ ಅದನ್ನು ಅನುಭವಿಸಲು ಸದಾ ಸಿದ್ಧನಾಗಿರಬೇಕಾದದು ಮಾನುಷ ಕರ್ತವ್ಯವಾಗಿದೆ. ಈ ಮನೋಧೋರಣೆಯೇ ಕವಿಯನ್ನು ಸ್ಥಿತಪ್ರಜ್ಞನನ್ನಾಗಿ ಮಾಡಿದೆ. ಹೀಗಿದ್ದಾಗ ಮಾತ್ರ ಸುಖ ಸಂತೋಷ ನೋವುಗಳನ್ನು ಸಮಾನವಾಗಿ ಸ್ವೀಕಾರ ಮಾಡಲು ಸಾಧ್ಯ.

ಸಂಪೂರ್ಣ ಬದುಕೆ ಹೃದಯ

ಮನಸೇ ಭಾವಬಂಧುರದ ಚಿಗುರು ಹುಣಸೆ ನಯ

ಇಂದು ರಸಗವಳ ಬೇವಿನ ಹಣ್ಣಿನುಪ್ಪಿನಕಾಯಿ

ಹುಲಿ ಸಿಂಹ ತೋಳ ಕರಡಿಗಳೆಲ್ಲಾ ಸಾಕಿದ ನಾಯಿ,

ಎದುರು ಸುಳಿಯುವ ಎಲ್ಲ ಮುಖ ಮೈ ಕಣ್ಣು

ಕೀವು ತುಂಬಿದ ಹುಣ್ಣು

ಪ್ರೀತಿ ಭುಂಜಿಸುವ ಪ್ರಣಯಪಿಂಡದ ಕಾಗೆ

ಯಾವುದೂ ಇಲ್ಲ ಇಲ್ಲ ಈ ರಾತ್ರಿ ಖಾತ್ರಿ

ಅಂದು ರಾತ್ರಿಯ ಹಾಗೆ ಭಯದ ಛಾಯಾ ಸಾಟ್ಯ

ಅಮಲೇರಿ ಕುಣಿದಿರಲಿಲ್ಲ ಇಂದು ರಾತ್ರಿಯ ಹಾಗೆ

(ಇಂದು ರಾತ್ರಿಯ ಹಾಗೆ)

ಬದುಕಿನಲ್ಲಿ ಉದ್ಭವಿಸಿದ ಎಲ್ಲಾ ಪ್ರಶ್ನೆಗಳಿಗೆ ಉತ್ತರಗಳು ಅಷ್ಟು ಸುಲಭವಾಗಿ ದಕ್ಕುವುದಿಲ್ಲ. ಪ್ರಶ್ನೆಗಳ ತೊಳಲಾಟದಲ್ಲಿ ಸಾಗಿದ ಜೀವನಕ್ಕೆ ಏನಾದರೂ ಅರ್ಥವಿದೆಯೆ? ಈ ಪ್ರಪಂಚದಲ್ಲಿ ಅರ್ಥವಿಲ್ಲದಿರುವಿಕೆಯಲ್ಲಿ ಮಹಾಗೂಢಾರ್ಥವಾಗಬಹುದಾದ ಸಾಧ್ಯತೆಯಿದೆ. ಆದರೆ ಅದರ ಅರ್ಥ ಯಾರಿಗೂ ತಿಳಿಯುವುದಿಲ್ಲ. ಬದುಕಿಗೆ ಅರ್ಥಹೊಳೆಯುತ್ತಿಲ್ಲ, ಆದರೆ ಬದುಕು ಹೊಳೆಯಾಗಿ ಹರಿಯುತ್ತಲಿದೆ. ಬದುಕಿನ ಅರ್ಥ ಅಷ್ಟು ಸುಲಭವಲ್ಲ.

ಬುದ್ಧನಿಗೆ ಹೊಳೆದ ಬುದ್ಧಿಗೂ

ನಿಲುಕದ ನೆಲೆ

ಸಿಗದ ಬೆಲೆ

ಸಿಕ್ಕಿತೆ ನಮಗೆ

ಇಲ್ಲ

(ಇಲ್ಲ,)

ಮಳೆಗಾಲ ಬಾಲ್ಯದ ಸವಿನೆನಪುಗಳನ್ನು ಸ್ಮೃತಿಪಟಲದ ಮೇಲೆ ತಂದು ಆನಂದ ನೀಡುವ ಕಾಲವಾಗಿದೆ. ಆಕಾಶದಿಂದ ಧರೆಗಿಳಿಯುವ ಮೇಘಮಾಲೆಗಳು, ತೊಯ್ದು ಕೆಂಪಾದ ಸೂರ್ಯ, ಮಾತುಗಳು ಜಾರಿ ಮೌನಪ್ರಪಾತದಲ್ಲಿ ಸೇರಿ ಮನಸು ನೆನೆದು ಕನಸು ಹಸಿರೊಡೆಯುವ ಕಾಲವಾಗಿದೆ. ಮಳೆಗಾಲದಲ್ಲಿ ನಾನು ನನ್ನೊಳಗೆ ಮೊಳೆತು, ನೆನೆವುಗಳು ಖಾಲಿಯಾಗಿ ಕೊನೆಗೊಮ್ಮೆ ಕೊನೆಯೊಡೆದು ಕೊನೆಗಳ್ಳುವ ಅಳಿಗಾಲವೂ ಆಗಿದೆ. ಮಳೆಗಾಲ ರೊಜ್ಜುರಾಡಿಗಳಿಂದ ಕೂಡಿರುವ ಕಾಲವಾದರೆ ಕೆಲವರಿಗೆ ಕವಿಗೆ ಮಾತ್ರ ಇದು ಇಷ್ಟವಾದ ಕಾಲವಾಗಿದೆ.

ಇರಬಹುದು ಕೆಲವರಿಗೆ ಕೊಲೆಗಾಲ

ನನ್ನ ಪಾಲಿಗೆ ಮಾತ್ರ

ಕನಸು ಹಸಿರೊಡೆದು ಕೊನರುವ ನೆನಪು

ಮಳೆಗಾಲ

(ಮಳೆಗಾಲ)

ಕವಿಗೆ ಅಗೋಚರ ಶಕ್ತಿಯಲ್ಲಿ ನಂಬಿಕೆಯಿದೆ. ಈ ಬಾಳದೋಣಿ ಯಾವುದೇ ಸೆಳುವು ಸುಳಿಗಳಿಗೆ ಸಿಲುಕದೆ ಆಚೆಯ ದಡ ಸೇರಬೇಕಾಗಿದೆ. ಅದಕ್ಕಾಗಿ ಅಂಬಿಗನನ್ನು ನಂಬಿ ಪ್ರಯಾಣ ಆರಂಭಿಸಿದ್ದಾರೆ. ಆದರೆ ನಾವಿಕ ಅಷ್ಟು

ಸುಲಭವಾಗಿ ದಡ ಸೇರಿಸಲಾರ. ಅವನು ಈ ಜಗದ ಮೋಹ ಮಮತೆಗಳನ್ನು ರಾಗದ್ವೇಷಗಳನ್ನು ಲೋಭ ಕಾಮನೆಗಳನ್ನು ತೋರಿಸುತ್ತಿದ್ದಾನೆ. ಇದಕ್ಕೆ ಪ್ರಯಾಣಿಕನಾದ ಕವಿಗೆ ಆತಂಕವಾಗಿದೆ.

ಹತ್ತು ನಾವೆಯ ಮೊದಲು ಎಂದು ಹತ್ತಿಸಿಕೊಂಡು
ಹತ್ತುಸುತ್ತುಗಳನ್ನು ಮತ್ತೆ ಸುತ್ತಿಸಿಕೊಂಡು
ಅಲ್ಲಿ ತಿರುಗುಣಿ ಎಂದು ಇಲ್ಲಿ ಮರೆಗುಣಿ ಎಂದು
ಮುತ್ತು ರತ್ನಗಳೆಂದು ಮತ್ತು ಹೊನ್ನುಗಳೆಂದು
ಹೊತ್ತು ಕಳೆಯುತ್ತಾನೆ.

(ಮೊರೆ)

ತಲ್ಲಣಕ್ಕೆ ಒಳಗಾದ ಕವಿ ಪ್ರಯಾಣಿಕ ನಾವಿಕ ತೋರಿಸುವ ಆಸೆಗಳಿಗೆ ಬಲಿಯಾಗದೆ. ಭಾವ ಬಂಧನದಲ್ಲಿ ಸಿಲುಕಿ ತೊಳಲಾಡದೆ ಮುಕ್ತಿಯೆಂಬ ದಡಸೇರಬೇಕಾಗಿದೆ. ಅದಕ್ಕಾಗಿ ಆ ದೇವನಲ್ಲಿ ಆರ್ತನಾಗಿ ಮೊರೆಯಿಡುತ್ತಾನೆ.

''ಬಾ ನ್ನ ನಾವಿಕನೆ
ನಿಜವಾಗಿ ಒಂದುದಿನ ಅತ್ತ ಒಯ್ಯುತ್ತೀ
ಬಲ್ಲೆ ಬೇಸರಾಗಿದೆ ಎಂದೆ
ಆ ಒಂದು ದಿನ ಇಂದೆ ಬರುವಂತೆ ಮಾಡುವದು
ಸಾಧ್ಯ ತಂದೇ ನಿನಗೆ ಸಾಧ್ಯ

(ಮೊರೆ)

ಒಂದು ಕಥೆ ಕವನವು ಈ ದೇಶದ ಕಥೆಯನ್ನೇ ಹೇಳುತ್ತದೆ. ಕಥೆ ಎನ್ನುವುದಕ್ಕಿಂತ ವ್ಯಥೆಯನ್ನುವುದೇ ವಾಸಿಯೆಂದು ಕವಿಯ ಅನಿಸಿಕೆಯಾಗಿದೆ. ಬಂದೂಕು ಹಿಡಿದು ನಿಂತಿರುವುದು ರಕ್ಷಣೆಗೋ ನನ್ನಂಥವರ ಭಕ್ಷಣೆಗೂ ಎಂಬ ಅನುಮಾನ.

ಸಂಜೆಯಾದಂತೆ ಕವಿಯುತ್ತದೆ ಮಂಜು
ಇಲ್ಲಿ
ನಿಷ್ಕ್ರಯೋಚನೆಗಳಿಗೆ ಬದ್ಧಯೋಜನೆಗಳಿಗೆ
ನಂಜು
ಭಾಷಣಗಳಲ್ಲಿ ಬಂಗ್ಲೆವಾಸಗಳಲ್ಲಿ ದೀರ್ಘ
ಆಶ್ವಾಸನದಲಿಂಕರಣ ಪೀಠಗಳಲ್ಲಿ ಕಳ್ಳ ಜೇಬುಗಳಲ್ಲಿ
ಹಾರಿಧಾರಿ ಹುಲ್ಲು ಹೂ ಬೀಜ ತುಂಬುತ್ತಿದೆ.

ಹೊಟ್ಟೆಗೆ ನೆತ್ತಿಗೆ ಬಟ್ಟೆಗೆ ಬತ್ತಿಗೆ

ಹೊತ್ತು ಹೊತ್ತಿಗೆ ಕತ್ತು ಕತ್ತಿಗೆ

ಮನೆಮನೆಯ ಕಟ್ಟಿಗೆ ಅಡಿಗೆಮನೆ ತಟ್ಟಗೆ

(ಒಂದು ಕಥೆ)

ಉಸಿರು ಕಟ್ಟುದು ಮಲಿನ ವಾತಾವರಣದಲ್ಲಿ ಮುಗ್ಧರ ಬದುಕು ನಸುಕಾಗುತ್ತಲಿವೆ. ಎಂದು ಈ ದೇಶದ ಹದಗೆಟ್ಟ ಪರಿಸ್ಥಿತಿಯ ಬಗ್ಗೆ ಬಲಿಯಾಗುತ್ತಿರುವ ಬಡಜೀವಿಗಳ ಬಗ್ಗೆ ಕಳವಳ ವ್ಯಕ್ತಪಡಿಸುತ್ತಾರೆ. ಕವಿ ಸಿದ್ದಲಿಂಗ ಪಟ್ಟಣಶೆಟ್ಟರು ಈ ದೇಶದ ಅವ್ಯವಸ್ಥೆಯಲ್ಲಿ ನಲುಗಿಹೋಗಿದ್ದಾರೆ. ದೇಶ ಈ ಶತಮಾನ ಕಳೆದು ಹೊಸ ಶತಮಾನಕ್ಕೆ ಕಾಲಿಡುತ್ತಿರುವ ಸಂಭ್ರಮದಲ್ಲಿದೆ. ಅದಕ್ಕಾಗಿ ಉತ್ಸವ ನಡೆಯಲಿದೆ. ಅದಕ್ಕೆ ಕವಿ ಹಾಡಬೇಕಿದೆ ಆದರೆ ಧ್ವನಿ ಇಲ್ಲದಂತಾಗಿದೆ. ಕವಿ ಇಲ್ಲದ ಗಾಂಧೀಜಿಯೊಂದಿಗೆ ನಡೆಸುವ ಸರಿಯಾದ ವ್ಯಂಗ್ಯದಿಂದ ಕೂಡಿದೆ. ದೇಶವನ್ನಾಳುವ ನಾಯಕರು ಗಾಂಧೀಜಿಯ ತತ್ವಗಳಿಗೆ ತಿಲಾಂಜಲಿ ಇಟ್ಟಿದ್ದಾರೆ. ಗಾಂಧೀಜಿಗೆ ಗಾಂಧೀ ಅನುಯಾಯಿಗಳಿಗೆ ಯಾವುದೇ ಬೆಲೆಯಿಲ್ಲದಂತಾಗಿದೆ. ಗಾಂಧೀಜಿಯ ತತ್ವಗಳು ನಿತ್ಯ ಸುಳಿಯುತ್ತಲಿದ್ದರೇ, ಅವರ ಮನುಯಾಯಿಗಳು ಸ್ಥಿತಿ ಇದಕ್ಕಿಂತ ಭಿನ್ನವಾಗಿಯೇನು ಇಲ್ಲ.

ಬೆದರಾಗಿ ಯಾವ ಮೂಲೆಗೆ ನಿಂತು

ದನಿ-ಲಾಳಿ ವಿಳೆದೆಳೆದು

ರಾಗದಂಬರ ನೆಯ್ದು

ನಿನ್ನ ಗೋಣೆತ್ತಿ ನಿಂತಿ

ರುವ ಎಲುಬುಗಳಲ್ಲಿ

ಇಣಕಿ ಹಾಕುತ್ತಿರುವ ನನ್ನ ಹೆಣ

ದಭಿಮಾನ, ಗೌರವ

ತೆರೆಮರೆಗಿಡಲಿ ಹೆಣ

(ಗಾಂಧೀಜಿ)

ಎಂದು ಪ್ರಶ್ನಿಸುವ ಕವಿಗೆ ಗಾಂಧೀಜಿ ಹುಟ್ಟಿ ಸತ್ಯ ಅಹಿಂಸೆಗಳಂಥ ಈ ಕಾಲದ ಜನಕ್ಕೆ ಸಲ್ಲದ ಪವಿತ್ರ ಮೈಲ್ಯಗಳನ್ನು ಪ್ರಚುರಪಡಿಸಿದ್ದು ಸಾರ್ಥಕವಿಲ್ಲದಂತಾಗಿದೆ. ಕೋಟಿ ಕೋಟಿ ಜನರಂತೆ ನೀನು ಹುಟ್ಟಿ ಸತ್ತು ಹೋಗಿದ್ದರೆ? ಈ ಪರಿಸ್ಥಿತಿಯೇ ಇರುತ್ತಿರಲಿಲ್ಲ. ನಾವು ಏರಲಾಗದ ಎತ್ತರಕ್ಕೇರಿ ಅಳೆಯಲಾಗದ ಸಂಖ್ಯಾಗೋಪುರ ನಿರ್ಮಿಸಿ ಅರಿಯಲಾಗದ ಬದುಕಿನರ್ಥವ ತಿಳಿ ಹೇಳಿ ಇಳಿಯಲಾಗದ ಆಳಕ್ಕಿಳಿದು ಏರಿ ಅಗ್ನಿ ಅಪ್ಪಿದ ಕರ್ಪೂರ ಗಿರಿಯಂತೆ ಬೆಳಗಿ ನಮ್ಮನ್ನೆಲ್ಲಾ ಸಣ್ಣವರನ್ನಾಗಿ ಮತ್ತು ಮೂಕರನ್ನಾಗಿಸಿದೆ ಎಂದು ವ್ಯಂಗ್ಯದಿಂದ ಕೇಳುತ್ತಾರೆ. ನಿನ್ನನ್ನು ಕೊಂದವರು

ನೂರು ಬಾರಿ ಹುಟ್ಟುವ ಕಲೆ ಕರಗತಮಾಡಿಕೊಂಡಿದ್ದಾರೆ. ಆದರೂ ಗಾಂಧೀಜಿ ನಿರ್ಮಲವಾದ ಮನಸುಗಳಲ್ಲಿ ದೇಶಭಕ್ತರ ಹೃದಯಗಳಲ್ಲಿ ಮತ್ತೆ ಹುಟ್ಟುತ್ತಾನೆ. ಸದಾಕಾಲ ಹುಟ್ಟುತ್ತಲೇ ಇರುತ್ತಾನೆ ಎನ್ನುವ ನಂಬಿಕೆ ಕವಿಗಿದೆ.

ಮಿಂಚು, ಸಾವು, ಸಿಡಿಲು ಕಡಲ ಗರ್ಜನೆಯಾಗಿ

ಬೆಳಕ ದಳವಾಗಿ

ನುಡಿ ಕಡೆದ ತಿಳಿವು - ಮಳೆಯಾಗಿ

ಇಳಿಗೆ ಇಳಿದಿರುವ

ಜನ್ಮಾಂತರದ ಶಾಂತವಸಂತ

ನೀ

ನನ್ನೊಳಗೆ ಯಾವುದೋ ಪುಣ್ಯ ಬಲದಿಂದ

ಮುಂಬರುವ ಯುಗದಲ್ಲಿ

ಮೊಳಕೆಯೊಡೆವುದಕಿರುವ ಬೀಜ

(ಗಾಂಧೀಜಿ)

ಕನ್ನಡ ಸಾಹಿತ್ಯದಲ್ಲಿ ಗಜಲ್‌ಗಳನ್ನು ಹೆಚ್ಚು ಪರಿಚಯಿಸಿದವರು ಶಾಂತರಸರು. ಸುಮಾರು ಸಂಖ್ಯೆಯಲ್ಲಿ ಅವರು ಸದಾಭಿರುಚಿಯ ಗಜಲ್‌ಗಳನ್ನು ಕನ್ನಡ ಕಾವ್ಯಲೋಕಕ್ಕೆ ನೀಡಿದ್ದಾರೆ. ಇಲ್ಲಿ ಕವಿ ಸಿದ್ಧಲಿಂಗ ಪಟ್ಟಣಶೆಟ್ಟರು ಅಕ್ಕರೆ ಮತ್ತು 'ಗೋಜಲು', 'ಗಜಲು' ಎಂಬೆರೆಡು ಗಜಲ್‌ಗಳನ್ನು ರಚಿಸಿದ್ದಾರೆ. ಅಕ್ಕರೆ ಶೀರ್ಷಿಕೆಯೋ ಹೇಳುವಂತೆ ಇಲ್ಲಿ ಗೆಳತಿಯನ್ನು ಹೃದಯಾಂತರಾಳಕ್ಕೆ ಕರೆಯುವ ಬಗೆ ಚೆನ್ನಾಗಿ ಮೂಡಿ ಬಂದಿದೆ. ಜೊತೆಗೆ ಭರವಸೆ ಭದ್ರತೆಗಳೂ ಇವೆ.

ತಾರೆಗಳ ಸಭೆಯೊಳಗೆ ಮಧುರನೀಡಿ ಮರೆಸಿಹನು ಕುಣಿಸಿರುವನು

ದೃಷ್ಟಿಕೋಳದೊಳಗೀಸಿ ಕೈ ಹಿಡಿದು ಕರೆದಿಹನು ಮುಳುಗಿಸಿಹನು.

ಬೆಳದಿಂಗಳಂಗಳದಿ ಕಂಗಳಲಿ ಮಂಗಳವ ತುಳುಕಿಸಿಹನು

(ಅಕ್ಕರೆ)

ಈ ಅತಿಯಾದ ಅಕ್ಕರೆ ಕವಿಗೆ ಮತ್ತೆ ಮುಳುವಾಗಿದೆ, ನೋವನ್ನು ತಂದಿದೆ. ಮತ್ತೆ 'ನೀನಾ'ದಲ್ಲಿನ ನಾಯಕಿಯ ಆಗಮನವಾಗಿದೆ. ಕವಿಯ ದುರಂತ ಕಥೆಗೆ ಪ್ರೇಯಸಿಯೂ ಕಾರಣಳಾಗಿದ್ದಾಳೆ, ಪ್ರೀತಿಯ ನಿರಾಕರಣೆ ಅಥವಾ ಅದನ್ನು ಒಪ್ಪಿಕೊಳ್ಳದ ಕಾವ್ಯ ನಾಯಕಿ ಕವಿಯ ಮನೋವೇದನೆಗೆ ಕಾರಣಳಾಗಿದ್ದಾಳೆ. ಕವಿಗೆ ಉಂಟಾದ ನೋವು ತೀವ್ರತೆಯಿಂದ ಕೂಡಿದೆ. ಕವಿ ಪ್ರೇಯಸಿಯನ್ನು ಸಪ್ತಸಾಗರಗಳಲ್ಲಿ ನದಿನದಿಗಳಲ್ಲಿ ಆಕಾಶ, ಭೂಮಿ, ಹವೆ ಎಲ್ಲೆಡೆಗಳಲ್ಲೂ ಕಂಡು ಅದಮ್ಯವಾಗಿ ಪ್ರೀತಿಸುತ್ತಿದ್ದಾನೆ. ತನ್ನ ಜೀವನವನ್ನೇ ಪ್ರೀತಿಗಾಗಿ ಮುಡುಪಾಗಿಟ್ಟಿದ್ದಾನೆ, ಆದರೆ ಅದಕ್ಕೆ ಪ್ರತಿಫಲವಾಗಿ ಸಿಕ್ಕಿದ್ದು ಕೇವಲ ವ್ಯಥೆ ಮಾತ್ರ.

ಕೊಲೆಯಮಾಡಿದಿ ನೀನು ಕಲೆಯ ರಚಿಸಿದೆ ನಾನು

ನಾನೆಸಿಂಗರಿಸಿರುವೆ ನನ್ನ ಸುಡಲಿಹ ಚಿತೆಯ

ಸುತ್ತ ಕಾವಲು ನೀನು ದೂರು ಹೇಳಲೆ ನಾನು

ನನ್ನ ಉಸಿರುಗಳನ್ನೇ ನಿನಗೆ ಮಾರಿದ್ದೇವೆ.

ನನ್ನ ಸಿದಿಗೆಯ ಬಿದಿರ ನಾನೇ ಕಟ್ಟಿದ ಕಥೆಯು

ಎಷ್ಟು ಹೇಳಲಿ ಗೆಳತಿ ನನ್ನ ಸುಡುತಿಹ ಕಥೆಯು

(ಗೋಜಲು ಗಜಲು)

ನನ್ನ ತೋಟದ ಹಣ್ಣನ್ನು ತಿಂದು ಮನೆ ಹಂಚು ಕೆಡವಿದ, ಒಡೆದ ಮರಿಗಳನ್ನು ಬೈಯುವುದರಿಂದ ಯಾವುದೇ ಪ್ರಯೋಜನವಿಲ್ಲ. ಮತ್ತೆ ಮನೆಯ ಮಾಡನ್ನು ಸರಿಪಡಿಸಿಕೊಂಡು ನಾವಿರಬೇಕು, ಮತ್ತೆ ಮರಿಗಳಿಗೆ ಬಡಿಯಲು ಅನುವು ಮಾಡಿಕೊಡಬೇಕು, ಇದೇ ಜೀವನದ ರಹಸ್ಯವಾಗಿದೆ ಎಂದು ಕವಿ ಹೇಳುತ್ತಾರೆ.

ಈ ಕವನ ಸಂಕಲನದಲ್ಲಿ ಉರ್ದುಸಾಹಿತ್ಯದ ಖ್ಯಾತಕವಿಗಳಾದ ಸಾದಾ, ನಫೀಸ್ ಬೆಂಗಳೂರಿ, ಶಹ್‌ರೆಯಾರ್, ಜ್ಞಾನಿಸಾರ್ ಅಖ್ತರ್, ಸಲಾಹ್ ಉದ್ದೀನ್, ಫರವೇಜ್ ತನ್‌ಹಾತಿಮ್ಮಾಪುರಿ ಮುಂತಾದವರ ಎಂಟು ಗಜಲ್‌ಗಳು ಕನ್ನಡಕ್ಕೆ ಕವಿ ಪಟ್ಟಣಶೆಟ್ಟರು ಅನುವಾದಿಸಿದ್ದಾರೆ. ಕನ್ನಡದ ಶೈಲಿ ಧರ್ಮಕ್ಕೆ ಅನುಗುಣವಾಗಿ, ಈ ಗಜಲ್‌ಗಳು ಅನುವಾದಗೊಂಡಿವೆ.

ಕವಿ ಸಿದ್ಧಲಿಂಗ ಪಟ್ಟಣಶೆಟ್ಟಿಯವರೇ ಈ ಕವನ ಸಂಕಲನದ ಮುನ್ನುಡಿಯಲ್ಲಿ ಹೇಳಿರುವ ಹಾಗೆ ಅನುಭವವನ್ನು ನಿರ್ಲಿಪ್ತವಾಗಿ ನಾಟ್ಯಮಯವಾಗಿ ಹೇಳುವ ಪ್ರಯತ್ನಗಳು ನನ್ನ ಮೊದ ಸಂಕಲನದಲ್ಲಿ ನಡೆದಿದ್ದರೂ, ಇಲ್ಲಿ ಅದು ಸಮೃದ್ಧಿಯ ತೆಕ್ಕೆಗೆ ಸಿಲುಕಿದ ಅನುಭವ ಅನೇಕ ಕವನಗಳಲ್ಲಿ ಸಿಗುತ್ತದೆ. ಯೌವನದ ಉತ್ಸಾಹವು ನೀಡುವ ಶಕ್ತಿ ಅಪಾರ, ನಿಸ್ಸೀಮ, ಬೆಳದಿಂಗಳು ಕತ್ತಲೆಯ ಭಯಾನಕ ಭೂತ ನರ್ತನ, ಪ್ರೀತಿ-ಪ್ರಣಯಗಳಿಂದ ತುಂಬಿದ ಎಲ್ಲ ಕಲೆಗಳು, ಮರ-ಗಿಡ ಬಳ್ಳಿ ಹೂಗಳ ಸಾಮಿಪ್ಯ ಎಲ್ಲವೂ ಪ್ರಕೃತಿಯ ಸಮಸ್ತ ಮೃದುತ್ವ, ಆಪ್ತತೆಯೊಂದಿಗೆ ತಾರುಣ್ಯವನ್ನು ಸಿಂಗರಿಸುತ್ತವೆ. ಆದರೆ ಅನುಭವ ಭಾವದ ಕಡೆಗೆ ಒತ್ತುಕೊಟ್ಟಾಗ ಭಯ, ಲಜ್ಜೆ ಸಂಕೋಚಗಳು ರಂಗದ ಮೇಲೆ ಪ್ರವೇಶಿಸುತ್ತವೆ, ಆಗ ಭವ ಭಾವವಾಗುವುದು. ಅನುಭವ ಅನುಭಾವವಾಗುವುದು ಬಹುಶಃ ಸಹಜ ಪ್ರಕ್ರಿಯೆ, ಅಂಥ ಮನಸ್ಥಿಯಲ್ಲಿ ವ್ಯಕ್ತಿ ಭಯದ ತಾಂಡವವನ್ನು ಕ್ರೀಡೆಯಂತೆ ಸ್ವೀಕರಿಸುತ್ತಾನೆ. ನಿರ್ಲಿಪ್ತತೆ, ಲಿಪ್ತತೆಯ ಪಾರಮ್ಯದಂತೆ. ನಿರ್ಭಯತೆ ಭಯದ್ದೇ ಇನ್ನೊಂದು ಮಗ್ಗುಲಾದಂತೆ, ಇಂಥ ಮನಸ್ಥಿತಿಯ ಪದ್ಯಗಳು ಈ ಸಂಕಲನದಲ್ಲಿ ಹೆಚ್ಚು"[೨೯] ಎಂದು ಕವಿಗಳು ಸ್ಪಷ್ಟೀಕರಣ ನೀಡಿದ್ದಾರೆ.

## ೧೦. ಅಂತರಂಗದ ಕವನಗಳು

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರು ತಾವು ರಚಿಸಿರುವ ಎಂಟು ಕವನ ಸಂಕಲನಗಳಿಂದ ೪೦ ಕವನಗಳನ್ನು ಆರಿಸಿಕೊಟ್ಟಿದ್ದಾರೆ. ತಾವೇ ಸಂಪಾದಕರಾಗಿ ಕಾರ್ಯನಿರ್ವಹಿಸಿದ್ದಾರೆ. ಅಂತರಂಗದ ಕವನಗಳು ಶೆಟ್ಟರ ಎರಡನೆಯ ಆಯ್ದ ಕವಿತೆಗಳ ಸಂಗ್ರಹವಾಗಿದೆ. ೧೯೯೪ರಲ್ಲಿ ಅನನ್ಯ ಪ್ರಕಾಶನ ಧಾರವಾಡದಿಂದ ಪ್ರಕಟಗೊಂಡಿದೆ.

ಕರ್ನಾಟಕ ವಿಶ್ವವಿದ್ಯಾಲಯವು ೧೯೯೪ ರಿಂದ ಮುಂದಿನ ಮೂರು ವರ್ಷಗಳ ಅವಧಿಗಾಗಿ ಬಿ.ಎಸ್.ಸಿ ದ್ವಿತೀಯ ವರ್ಷದ ಅವಶ್ಯಕ ಪಠ್ಯಕ್ರಮದಲ್ಲಿ ಈಗ ನಾನು ಆಯ್ದಿರುವ ಕವನಗಳನ್ನು ಪಠ್ಯವಾಗಿಸಿದ್ದರಿಂದ ಈ ಸಂಕಲನ ಪ್ರಕಟಗೊಳ್ಳುವುದು ಸಾಧ್ಯವಾಯಿತು. ಇದಕ್ಕಾಗಿ ವಿಶ್ವವಿದ್ಯಾಲಯದ ಕನ್ನಡ ಅಭ್ಯಾಸ ಮಂಡಳಿಗೆ ಕೃತಜ್ಞತೆಗಳು ಎಂದು ಪಟ್ಟಣಶೆಟ್ಟರು ಮುನ್ನುಡಿಯಲ್ಲಿ ಹೇಳಿದ್ದಾರೆ.

ಈ ಸಂಕಲನದಲ್ಲಿರುವ ಎಲ್ಲಾ ಕವನಗಳ ರಚನೆಯ ಹಿನ್ನೆಲೆಯನ್ನ ಸಂಕ್ಷಿಪ್ತವಾಗಿ ಪುಸ್ತಕದ ಕೊನೆಯಲ್ಲಿ ಕೊಟ್ಟಿರುವುದು ವಿಶೇಷವಾಗಿದೆ. ಹೀಗೆ ಕವಿಯೇ ಟಿಪ್ಪಣಿ ಕೊಡುವುದು, ಕವಿತೆಯ ಅರ್ಥವಿವರಿಸುವುದು, ಕಾವ್ಯಾರ್ಥವನ್ನು ಸೀಮಿತಗೊಳಿಸಿದಂತೆಯೇ ಆಗುತ್ತದೆ ಎಂದು ಮುನ್ನುಡಿಯಲ್ಲಿ ಆತಂಕ ವ್ಯಕ್ತಪಡಿಸಿದ್ದಾರೆ. ಅಧ್ಯಯನ ಮತ್ತು ವಿಶ್ಲೇಷಕ ಶ್ರಮದ ಬಲದಿಂದ ಈ ಕವಿತೆಗಳಿಗೆ ಬೇರೆ ಬೇರೆ ಅರ್ಥಗಳನ್ನು ಓದುಗರು ಕೊಡಬಲ್ಲರು. ಹಾಗೆ ಮಾಡಿದಾಗ ಮಾತ್ರ ಕವಿತೆ ಬೆಳೆಯುವುದಾಗಿದೆ. ಭಾವುಕರು ರಸಭಾವ ತಮ್ಮ ತಮ್ಮ ದೃಷ್ಟಿ ಬಂಧುಗಳಿಂದ ಅವುಗಳಿಗೆ ಅರ್ಥ ಶರೀರಗಳನ್ನು ನೀಡುವಂತಾಗಲಿ ಎಂದು ವಿನಂತಿಸಿದ್ದಾರೆ.

ಪ್ರಣಯದ ಅಭಿವ್ಯಕ್ತಿಯ ಕವಿತೆಗಳು ಇಲ್ಲಿ ಹೆಚ್ಚಾಗಿದ್ದರೂ, ಆತ್ಮನಿವೇದನೆ, ಆತ್ಮವಿಮರ್ಶೆ, ಸಾಮಾಜಿಕ ವಿಡಂಬನೆ, ಕಳಕಳಿ, ಬಾಲ್ಯ, ಜೀವನದ ಸವಿನೆನಪುಗಳನ್ನು ಕುರಿತ ಕವನಗಳು ಇಲ್ಲಿವೆ.

## ೧೧. ಇಷ್ಟು ಹೇಳಿದ ಮೇಲೆ

ಡಾ.ಸಿದ್ಧಲಿಂಗ ಪಟ್ಟಣಶೆಟ್ಟರ ಹನ್ನೊಂದನೆಯ ಕವನಸಂಕಲನ 'ಇಷ್ಟು ಹೇಳಿದ ಮೇಲೆ' ಇದು ೨೦೦೦ರಲ್ಲಿ ಪ್ರಕಟವಾಯಿತು. ೧೯೯೪ರಿಂದ ೨೦೦೦ದ ಆರುವರ್ಷದಲ್ಲಿ ರಚಿಸಿದ ಕವನಗಳು ಇಲ್ಲಿನ ಒಟ್ಟು ೨೬ ಕವನಗಳು ಈ ಸಂಕಲನದಲ್ಲಿದೆ. ಅದರಲ್ಲಿ ೨೧ ಸ್ವತಂತ್ರ ಕವನಗಳಾದರೆ ಇನ್ನುಳಿದ ೫ ಮಲೆಯಾಳಿ ಭಾಷೆಯಿಂದ ಅನುವಾದಗೊಂಡ ಕವನಗಳಿವೆ.

ಇಲ್ಲಿನ ಕವಿತೆಗಳನ್ನು ಕುರಿತು ತಿಪ್ಪೇಸ್ವಾಮಿ, ಜಿ.ಆರ್. ಈ ರೀತಿ ಅಭಿಪ್ರಾಯಪಟ್ಟಿದ್ದಾರೆ. ''ಮನುಷ್ಯ ತನ್ನ ಬದುಕಿನಲ್ಲಿ ಶುದ್ಧತೆಯನ್ನು ಕಳೆದುಕೊಂಡು ಕೇವಲ ಆಶಾಗೋಪುರಗಳನ್ನು ಕಟ್ಟಿ ಕೊಳ್ಳುತ್ತಿರುವ ಈ ದಿನಗಳಲ್ಲಿ ಯಾವುದೇ ಸೃಜನಶೀಲತೆಯ ಹೊಣೆಗಾರಿಕೆ ಬಹಳ ಮುಖ್ಯವಾಗುತ್ತದೆ. ಪರಿಶುದ್ಧತೆಗೆ ಧಕ್ಕೆ ತರುವ ಸಂಗತಿಗಳನ್ನೆಲ್ಲಾ ತಿದ್ದುತ್ತಲೇ, ನೈತಿಕತೆಯತ್ತ ಮುಖಮಾಡುತ್ತಾ, ಜನಪರವಾದ ಮೌಲ್ಯಗಳನ್ನು ಕಾಪಾಡುವತ್ತ ಸೃಜನಶೀಲತೆ ಕೆಲಸಮಾಡಬೇಕಾಗುತ್ತದೆ. ಅಂಥ ಸೃಜನಶೀಲತೆಯಲ್ಲಿ ಒಂದಾದ ಕವಿತೆಯೂ ಜೀವನ ಮುಖಿಯಾಗುತ್ತಲೇ ಸಮಾಜ ಮುಖಿಯೂ ಆಗಬೇಕಾಗುತ್ತದೆ. ಕನ್ನಡದ ಯಾವುದೇ ಕಾಲದ ಯಾವುದೇ ಪಂಥದ ಕಾವ್ಯಕ್ಕೂ ಈ ಮಾತು

ಅನ್ವಯವಾಗಬೇಕಿದೆ. ಅಂದರೆ ಕಾವ್ಯ ಆಧುನಿಕ ಆಶಯಗಳಿಗೆ ಪ್ರತಿಕ್ರಿಯೆಯಾಗುತ್ತಲೇ ಹೊಣೆಗಾರಿಕೆಯ ಬಗೆಗೂ ಕಾಳಜಿವಹಿಸಬೇಕು. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಕಾವ್ಯ ಈ ದಿಕ್ಕಿನಲ್ಲಿ ಸಾಗುವ ಗುಣ ಹೊಂದಿರುವಂಥದ್ದು"೪೦ ಸಿದ್ಧಲಿಂಗ ಪಟ್ಟಣಶೆಟ್ಟರು ಸಾಮಾಜಿಕ ಜವಾಬ್ದಾರಿಯಿಂದ ಕೂಡಿದ ಮನೋಭಾವವುಳ್ಳ ಕವಿಯಾಗಿದ್ದಾರೆ. ತೀರ ವೈಯಕ್ತಿಕವಾದ ವಿಷಯಗಳನ್ನೇ ಕಾವ್ಯದ ವಸ್ತುವನ್ನಾಗಿ ಚಿಂತಿಸುತ್ತಾನೆ. ಜಾಗತೀಕರಣದ ಪ್ರಭಾವಕ್ಕೆ ಸಿಕ್ಕು ತೊಳಲಾಡುತ್ತಿರುವ ಮನುಷ್ಯನ ಬದುಕಿನಲ್ಲಿ ಸುಖಶಾಂತಿ ನೆಮ್ಮದಿಗಳು ಇಲ್ಲದಂತಾಗಿದೆ. ಮನುಷ್ಯ ಮನುಷ್ಯರ ನಡುವಿನ ಸಂಬಂಧ ಹಳಸಿದೆ. ಕನಸು ಮನಸುಗಳನ್ನು ಕಟ್ಟುವ ಕಾರ್ಯ ಅತ್ಯಂತ ಜರೂರಿನಿಂದ, ಕಾಳಜಿಯಿಂದ, ಪ್ರೀತಿಯಿಂದ ಮಾಡಬೇಕಾಗಿದೆ. ಹಳೆಯ ತಲೆಮಾರಿನ ಜನ ಈ ನೆಲದಲ್ಲಿ ನಲಿದಾಡಿ ಸವಿಯುಂಡು ಧನ್ಯತಾ ಭಾವನೆಯಿಂದಲೇ ಜೀವನ ಸಾಗಿಸುತ್ತಿದ್ದರು. ಆದರೆ ನಮ್ಮ ಹೊಸಕಾಲದ ಬದುಕು ನಮ್ಮ ಮೇಲೆ ಹೂಟ ಹೂಡಿದೆ. ನಮ್ಮ ಕಣ್ಣೆದುರೇ ನಮ್ಮ ಬದುಕು ಸಾರ್ಥಕತೆಯಿಲ್ಲದೆ. ನಶಿಸಿ ಹೋಗುತ್ತಲಿದೆ. ಇದನ್ನು ಕವಿ ಹೇಳಿದ ಹಾಗೆ ಸುಮ್ಮನೆ ಸ್ವೀಕರಿಸಿದರೆ ಜೀವನವೆಲ್ಲಾ ಋಣಾತ್ಮಕ ಹಾದಿಯಲ್ಲಿ ಸಾಗುತ್ತದೆ. ಅಂತಹ ವಿಷಮ ಪರಿಸ್ಥಿಯಲ್ಲಿ ಕಲುಷಿತಗೊಂಡ ವ್ಯವಸ್ಥೆಯಲ್ಲಿ ನಾವಿದ್ದೇವೆ. ಬದುಕು ಸಂತೃಪ್ತಗಳ ಬದಲಾಗಿ ಹಪಾಹಪಿತನದಿಂದ ನೆಮ್ಮದಿಯ ಬದಲಾಗಿ ಅಸಹನೆಯಿಂದ ಸಂತೋಷದ ಬದಲಾಗಿ ತಲ್ಲಣಗಳಲ್ಲಿ ಸಾಗುತ್ತಲಿದೆ.

ಕುಂಟ ಕುದುರೆಯನೇರಿ ಹೊರಟವರು ನಾವು
ಕಾಲ್ತೊಡರು ಸಾವಿರದ ಲಕ್ಷಹಾವು
ಎಲ್ಲಿ ಸಮಯವಿದೆ ಕ್ಷಣಕಾಲ ನಗಲು ?

ಈ ಬದುಕು ಬರಿ ದಿಗಿಲು
ಅರಿವು ಹಿಡಿತಕೆ ಸಿಗದ ದೂರಗಳ ಮುಗಿಲು
(ಈ ಬದುಕು ಬರಿದಿಗಿಲು)

ಈ ಬದುಕಿನ ಸವಿಯನ್ನು ಸವಿಯುವ ಸಾಮರ್ಥ್ಯ ನಮಗೆಲ್ಲಾ ಇಲ್ಲದಂತಾಗಿದೆ ಎಂಬುದು ಕವಿಯ ಅನಿಸಿಕೆ. ಯಾಂತ್ರಿಕ ಜೀವನ ನಡೆಸುವ ನಾವುಗಳು ಬದುಕಿನಲ್ಲಿ ತಿರುಳನ್ನು ಬಿಟ್ಟು ಒಣ ಸಿಪ್ಪೆಯನ್ನು ಮೆಲ್ಲುವುದರಲ್ಲೇ ಕಾಲಕಳೆಯುತ್ತಿದ್ದೇವೆಯೇನೋ ಎಂಬ ಅನುಮಾನ. ಪ್ರೀತಿ ವಿಶ್ವಾಸ ನಂಬಿಕೆಗಳು ಬತ್ತಿಹೋದಾಗ ಮನಸು ಮರುಭೂಮಿಯಾಗುತ್ತದೆ. ಕರುಣೆ ಕಾತರಿಸಿ ನಲುಗುತ್ತದೆ. ಹೆಜ್ಜೆ ಹೆಜ್ಜೆಗೂ ನೂರಾರು ನವದಾರಿಗಳಿದ್ದರೂ ಗುರಿಗಳು ಕಳೆದು ಹೋಗಿವೆ, ಒಟ್ಟಾರೆಯಾಗಿ ಬದುಕು ವಿಷಮಯವಾಗಿದೆ.

ಜೀವನದಿ ಬತ್ತಿಹವು ಕಮನೀಯ ಕನಸು
ಕುಡಿವ ಜಲ ಭಾವಿಗಳು ಕದಡಿಹವು ನೋಡು

ಗಗನದಲಿ ಮೋಡಗಳು ಮುಸುಕಿದವು ನೋಡು

ಮಾನಸದಿ ಸುಮನಗಳು ಮುದುಡಿಹವು ನೋಡು

(ತಿರುಳು)

ಕವಿ ತತ್ವಜ್ಞಾನಿಯೂ ಸೌಂದರ್ಯೋಪಾಸಕನೂ ಆಗಿರುತ್ತಾನೆ. ನೆಲವನ್ನು ಪ್ರಕೃತಿಗೆ ನಭೋವನ್ನು ಪುರುಷನಿಗೆ ಪರಿಕಲ್ಪಿಸಿ ಹೇಳುವ ಪದ್ಧತಿ ಮೊದಲಿನಿಂದಲೂ ನಡೆದು ಕೊಂಡುಬಂದಿದೆ. ವಿಷಯ ಒಂದೇ ಆದರೂ ಹೇಳುವ ಧಾಟಿ ಕಷ್ಟ. ಕೊಡುವ ಸೌಂದರ್ಯ ಕಾಣುವ ಕಲ್ಪನೆ ಕವಿಯಿಂದ ಕವಿಗೆ ಭಿನ್ನವೂ ವಿಶಿಷ್ಟವೂ ಆಗಿರುತ್ತದೆ. ಆಕಾಶ ರಸಧಾರೆಯನ್ನು ಸುರಿಸಿ ನೆಲಕ್ಕೆ ಸುಧೆಯನ್ನು ದಾನ ಮಾಡಿದಾಗ ನಡೆಯುವ ಸೃಷ್ಟಿ ಕ್ರಿಯೆ ಬಲು ರಮ್ಯವಾಗಿದೆ. ಕವಿಪ್ರತಿಭೆಯ ಹೊಳಪು ಚೆನ್ನಾಗಿ ಮೂಡಿದೆ.

ನಲಿದ ಗರ್ಭದಲಿ ಸೃಷ್ಟಿ

ಜೀವಸೆಲೆ

ಅನ್ನವಾಗುತ್ತದೆ ಬೀಜ

ಕನಕವಾಗುತ್ತದೆ ಕಲ್ಲು

ನೀರು ಅಮೃತ

ಜಡವು ಚೇತನ

ಜಗಕೆ ಶೋಭನ

ಹೀಗೆ ಜನರ ಸಹಜ ಕ್ರಿಯೆ ನಡೆದು ಸಂಸ್ಕೃತಿಯ ಪ್ರಗತಿ ನೂರ್ಮಡಿ ಹೆಚ್ಚು; ನಿಸರ್ಗದೊಳಗಿನ ಎಲ್ಲ ಚರಾಚರ ವಸ್ತುವೂ ಮಣಿ ಮೋಹಕಗಳಾಗಿ ಹೊಳೆಯುತ್ತವೆ. ಆಗ ಜೀವ ಪರಾತ್ಪರಲ್ಲಿ ಮನಸು ಮರಮರದಲ್ಲಿ ಪ್ರಾಣ ಪಾವನೆ ಪವನದಲ್ಲಿ ಪರಿವರ್ತನೆ ಹೊಂದುತ್ತದೆ. ಈ ಎಲ್ಲಾ ಸೃಷ್ಟಿಗೆ ಕಾರಣ ಆ ಭಗವಂತ; ಭಗವಂತನ ಲೀಲೆಯೇ ಇದಾಗಿದೆ. ಇದಕ್ಕೆ ಕವಿ ಆಶ್ಚರ್ಯ ಚಕಿತನಗಿದ್ದಾನೆ. ಆತನ ಶಕ್ತಿಯ ಸೌಂದರ್ಯ ಪ್ರದರ್ಶನವನ್ನು ಕಂಡು ಕವಿ ತನ್ನನು ತಾನು ಮರೆತು ಸೌಂದರ್ಯವನ್ನು ಸವಿಯುತ್ತಾ ತನ್ಮಯನಾಗಿದ್ದಾನೆ. ಈ ಬ್ರಹ್ಮಾಂಡದಲ್ಲಿ ಪ್ರತಿಯೊಂದು ವಸ್ತುವಿಗೂ ನಾದವಿರುವಂತೆ ನಮ್ಮ ಜೀವನಕ್ಕೂ ಒಂದು ನಾದವಿರಬೇಕು. ಕೇವಲ ಉನ್ಮಾದವೇ ತುಂಬಿ ಕೊಂಡರೆ ಬಹುಬೇಗನೆ ಬದುಕು ಬಳಲುತ್ತದೆ. ಜೀವನಕ್ಕೆ ಆಸರೆಯಾಗಿ, ಶರಣಾದಿ ಪ್ರಮಥರ ನುಡಿಗಳನ್ನೂ ನಾವು ಕೇಳಬೇಕು. ಅವರು ನಡೆದ ಬದುಕು ನಮಗೆ ಆದರ್ಶವಾಗಬೇಕು. ಅವರು ಹಾಕಿಕೊಟ್ಟ ಮಾರ್ಗದಲ್ಲಿ ಸಂಪೂರ್ಣ ನಂಬಿಕೆಯಿಂದ ನಡೆಯಬೇಕು. ಹಾಗೆ ನಡೆದಾಗ ನಮ್ಮೆಲ್ಲರ ಬಾಳು ಅವರಂತೆ ಅವರ ಬದುಕಿನಂತೆ ಪರಿಪೂರ್ಣತೆಯೆಡೆಗೆ ಸಾಗಲು ಸಾಧ್ಯ ಎಂಬ ದೈವ ನಂಬಿಕೆ ಕವಿಯಲ್ಲಿ ಅಚಲವಾಗಿದೆ.

ನನಗಾಗಿ ನೀನಿರಲು

ಶಿವನಾಗಿ ನಾನೆಂಬ

ಭಾವನೆಯ ಕಲ್ಪಿಸುತ ತನುತನ್ನ ಮರೆದಿತ್ತು!

ಅಕ್ಕ ಬಸವರು ಬಂದು

ನಮ್ಮ ಆಶೀರ್ವದಿಸೆ

ಶಿವಲೋಕ ಸೌಧದೊಳು ನಮಗಾಗಿ ಮನೆಯಿತು!

(ನಮ್ಮ ಬಾಳು)

ಆ ದೇವನಲ್ಲಿ ಅತಿನಂಬಿಕೆ ಭಕ್ತಿಯನ್ನಿಟ್ಟು ಕವಿ ಮತ್ತು ಭವ ಬಂಧನದಲ್ಲಿ ಸಿಲುಕಿ ಪೂರ್ಣ ಲೌಕಿಕ ಭಾವ ಜೀವಿಯಾಗಿ ಮತ್ತೆ ತೊಳಲಾಟಗಳು ಆರಂಭವಾಗುತ್ತವೆ. ಸ್ನೇಹ ಪ್ರೀತಿ, ವಿಶ್ವಾಸ ಮುಂತಾದ ಅನು ನಯನದ ಪದಗಳಿಗೆ ವಿರುದ್ಧವಾದ ದ್ವೇಷ, ವಂಚನೆ, ಯುದ್ಧದಂತಹ ಪದಗಳು ಪರ್ಯಾಯವಾಗಿ ಬಾಳಕೋಶದಲ್ಲಿ ಬಂದು ಬಿಟ್ಟಿರುವುದರಿಂದ ಕವಿಗೆ ಬದುಕನ್ನು ಹೊರಳಿ ನೋಡುವ ಮನಸ್ಸಿಲ್ಲ.

ನನ್ನ ಮನೆಯೊಳಗಿರುವ

ಯಾವುದೇ ನಿಘಂಟನೆ ಯಾವ ಪುಟವನ್ನು

ತೆರೆದು ನೋಡುವ ಧೈರ್ಯ

ಇಲ್ಲ. ನನದುಳಿದಿಲ್ಲ

(ಪದಾರ್ಥ)

ಬದುಕಿನಲ್ಲಿ ಬವಣೆಗಳು ಹೆಚ್ಚಾದರೂ ಭೂತಕಾಲದ ಸವಿನೆನಪುಗಳು ಮತ್ತೆ ಬದುಕನ್ನು ಮುನ್ನಡೆಸಲು ಸ್ಫೂರ್ತಿಯನ್ನೀಯುತ್ತವೆ. ಒಮ್ಮೆ ಹೋದ ನೆಲದಲ್ಲಿ ಮಾತ್ರ ಹಸಿರಿನ ಉಗಮವಾಗುತ್ತದೆ. ಸವಿ ನೆನಪುಗಳಿಗೆ ಸೋತ ಜೀವಕ್ಕೆ ಸಾಂತ್ವಾನ ಹೇಳಿ ಕೈಹಿಡಿದು ನಡೆಸುವ ಶಕ್ತಿಯಿದೆ. ಬಾಡಿದ ಮೊಗದಲ್ಲಿ ನಗೆಯಲೆಯ ಉಕ್ಕಿಸುವ ಚೈತನ್ಯವಿದೆ. ಭವಿಷ್ಯದ ಮೇಲೆ ನಂಬಿಕೆಯಿಡುವುದೇ ಜಾಣತನದ ಲಕ್ಷಣವಾಗಿದೆ. ಜೀವನದಲ್ಲಿ ಏನೇ ಬಂದರೂ ಎಲ್ಲರೊಳಗೊಂದಾಗಿ ನಗುನಗುತ ಬಾಳುವ ಕಲೆ ನಮ್ಮದಾಗಬೇಕು ಎಂದು ಕವಿಗಳು ಹೇಳುತ್ತಾರೆ. ಬಾಳಲು ಮನಸು ಬಹುಮುಖ್ಯ ಆದರೆ ಆ ಮನಸು ತಿಳಿ ಜಲವಾಗಿರಬೇಕು.

ಪ್ರಶ್ನೆಗಳು ನೆನಪುಗಳು ಮಾತ್ರ ಬರಿ ಬದುಕು

ತಿಳಿದಾಗ ತಿಳಿಯಾದ ಸೂತ್ರ ಬರಿಬದುಕು

(ನೆನಪುಗಳು)

ಕಾವ್ಯದ ಚೌಕಟ್ಟಿನ ದೃಷ್ಟಿಯಿಂದಲೂ ಕವಿ ಸಿದ್ಧಲಿಂಗ ಪಟ್ಟಣ ಶೆಟ್ಟರು ವಿಶಿಷ್ಟರೆನಿಸುತ್ತಾರೆ. ಜಿ.ಆರ್.ತಿಪ್ಪೇಸ್ವಾಮಿ ಹೇಳಿದ ಹಾಗೆ ''ಕಾವ್ಯದ ಕಟ್ಟಡಕ್ಕೆ ಸಂಬಂಧಿಸಿದ ಶಿಲ್ಪ, ಬಂಧ, ಶೈಲಿ, ಛಂದಸ್ಸುಗಳ ಬಗೆಗಿನ ಆಸಕ್ತಿಗಳೆಲ್ಲಾ ಕಣ್ಮರೆಯಾಗುತ್ತಿರುವ ಈ ದಿನಗಳಲ್ಲಿ ಕಾಟಾಚಾರದ ಕವನ ಸಂಕಲನಗಳ ಸಂಖ್ಯೆ ಬೆಳೆಯುತ್ತಿದೆ. ಕಂಡದ್ದನ್ನು ಕಾವ್ಯ ಮಾಡುವ ಸೃಜನಶೀಲತೆ ಹಲವರಿಂದ ಸಾಧ್ಯವಾಗುತ್ತಿಲ್ಲ. ಆದರೆ ಪಟ್ಟಣಶೆಟ್ಟರ ಕವಿತೆಗಳು ಇದಕ್ಕೆ ಸವಾಲಾಗುತ್ತ ಕಲಾತ್ಮಕತೆಗೆ ಹೆಸರಾಗಿರುವುದನ್ನು ಕಾಣಬಹುದಾಗಿದೆ.''[೪೮]

ವಸ್ತು ಮತ್ತು ವಿಚಾರಗಳನ್ನು ಸಮೀಕರಿಸುತ್ತ ಹೇಳಬೇಕಾದುದನ್ನು ಹೇಳುವ ಕಲೆಗಾರಿಕೆ ಸಿದ್ಧಲಿಂಗ ಪಟ್ಟಣ ಶೆಟ್ಟರಿಗೆ ಸಲ್ಲುತ್ತದೆ. ಅವ್ವನ ಜೊತೆಗೆ ಆಕೆ ನೆಟ್ಟ ತೆಂಗಿನ ಮರವೂ ಅಂತ್ಯ ಕಾಣುತ್ತದೆ. ಈ ನೆಲದ ಋಣದಿಂದ ಅವರು ಬಿಡುಗಡೆ ಹೊಂದುತ್ತಾರೆ. ಎನ್ನುವಲ್ಲಿ ವ್ಯಕ್ತಿಯ ಬದುಕನ್ನು ಮರದೊಂದಿಗೆ ಹೋಲಿಸಿ ಸಾಧನೆಯ ಸಾಫಲ್ಯ ಕಾಣುತ್ತಾರೆ. ಕ್ರಮೇಣ ಕ್ರಿಯೆ ಸಹಜ ಧರ್ಮದ ರೀತಿಯಾಗಿದೆ. ಬದುಕಿನಲ್ಲಿ ಏಳು ಬೀಳುಗಳು ಸಹಜ ಆಟಗಳಾಗಿವೆ. ಆಕ್ರಮಣ, ಅವಿವೇಕಿಗಳ, ಅವಿಚಾರಿಗಳ ಕೂಟವಾದರೆ ಸಂಕ್ರಮಣ ಜೀವನದ ಗತಿಶೀಲ ಶುಭನೀತಿಯಾಗಿದೆ. ಬದುಕಿನ ಭವಿಷ್ಯದ ಬಗ್ಗೆ ಭರವಸೆಯಿಟ್ಟು ಬಾಳುವ ರೀತಿ ಶ್ರೇಷ್ಟವಾದುದು. ಮನುಷ್ಯ ದುಃಖಗಳ ಕಲಾಪದಲ್ಲಿ ಮುಳುಗಿದ್ದರೂ ಆಶಾವಾದಿಯಾಗಿ ಬದುಕುವುದನ್ನು ಕಲಿಯಬೇಕು. ಮುಂದೆ ಬರಲಿರುವ ಸಂಕ್ರಮಣದ ಸರ್ವ ಕಾಲಕ್ಕಾಗಿ ಕುತೂಹಲದಿಂದ ಕಾಯಬೇಕು ಎಂಬುದು ಕವಿಯ ನಿಲುವಾಗಿದೆ. ಏನೋ ಅನಾಹುತ ನಡೆಯಿತೆಂದು ಜೀವನದಲ್ಲಿ ಕೇವಲ ಮಿಶ್ರಫಲಗಳೇ ಬರುವವೆಂದು ತಲೆ ಮೇಲೆ ಕೈಹೊತ್ತು ನಿಸ್ತೇಜನಾಗಿ ಬಿಟ್ಟರೆ ಬದುಕು ಅರ್ಥವನ್ನು ಕಳೆದುಕೊಂಡು ಬಿಡುತ್ತದೆ. ಆಶಾವಾದಿಯಾಗಿ ಬದುಕು ಸಾಗಿಸುವುದು. ಮುಂಬರುವ ಭವಿಷ್ಯದ ಬಗ್ಗೆ ಕುತೂಹಲವಾಗಿರುವುದು ಶುಭ ಸೂಚನೆಯೆಂದು ಕವಿ ಅದಕ್ಕಾಗಿ ಕಾಯುತ್ತಾನೆ.

ಸೂರ್ಯ ಮುಳುಗುವುದಿಲ್ಲ ಬದುಕ ಬೆಳಗುವ ಜ್ಯೋತಿ
ಬೆಳಕು ಮಾಸುವುದಿಲ್ಲ ಕತ್ತಲಿಗೆ ಕಣ್ಣು ಅದು
ಸಂಕ್ರಮಣ ನಿಜ ಚಲನೆ ಅವಿರತದ ನೀರ್ಭೀತಿ
ಮಡಿವಂತ ಸದ್ಗತಿಯು ಕೈಹಿಡಿದು ನಡೆಸುವುದು.

ಒಂದೊಂದು ಜೀವನದಲ್ಲಿ ಪ್ರತಿಯೊಂದು ದೇಹದಲಿ
ಸಂಕ್ರಮಣ ಶ್ರೀಭಾವ ವಾಸಿಸಲಿ ದೇಹದಲಿ

(ಸಂಕ್ರಮಣ)

ಬದುಕನ್ನು ರೂಪಿಸಿಕೊಳ್ಳುವ ಶಕ್ತಿ ಅವರ ಕೈಯಲ್ಲೇ ಇದೆ. ಕಷ್ಟಗಳು ಬಂದಾಗ ಧೃತಿಗೆಡದೆ, ಅಗ್ನಿ ಕಾವ್ಯಗಳು ಬಂದಾಗ ಕೈ ಕಾಲುಗೆಡೆದೆ ಅವುಗಳು ನಿವಾರಿಸಿಕೊಂಡು ಅಥವಾ ಸಂಭಾಳಿಸಿಕೊಂಡು ಮುಂದಡಿಯಿಡುವ ಬುದ್ಧಿವಂತಿಕೆ ನಮ್ಮೆಲ್ಲರಲ್ಲಿರಬೇಕು. ಬದುಕಿನ ಪ್ರತಿಯೊಂದು ಕ್ಷಣವನ್ನು ರಸಮಯವನ್ನಾಗಿ ರೂಪಿಸಿಕೊಳ್ಳುವ ಜಾಣ್ಮೆ ನಮ್ಮದಾಗಬೇಕು. ಬದುಕು ಬರಡಾಗದೆ ನಿತ್ಯ ವಸಂತವಾಗಬೇಕೆಂಬ ಕವಿಯ ಜೀವನ ಪ್ರೀತಿ ಅದಮ್ಯವಾಗಿದೆ. ಆಯುಷ್ಯ ಹರಿದು ಹೋಗುತ್ತಿದ್ದರೂ, ದೇಹಕ್ಕೆ ಮುಪ್ಪು ಆವರಿಸುತ್ತಿದ್ದರೂ, ಮನಸು ತಾರುಣ್ಯ ಸ್ಥಿತಿಯಲ್ಲಿಯೇ ಆನಂದ ಸವಿಯಬೇಕು ಎಂದು ಕವಿ ಹೇಳುತ್ತಾರೆ.

ಮನಸು ನಿತ್ಯ ನವ ಹುಳಿಗಿಲ್ಲ ಮುಪ್ಪು
ನಾನು ಕನಸಿನ ಕೂಸು ಇಲ್ಲಿ ಮೋಹಕೆ ತಪ್ಪು

ನನ್ನ ತಪ್ಪಿಗೆ ಯಾವುದೋ ನೆಪವಿಲ್ಲ ಕ್ಷಮೆಯಿಲ್ಲ

ಅಮರತೆಯ ಭ್ರಮೆಯಿಲ್ಲ

ಇನ್ನು ನಾ

ಕುಕಿಲುವ ವಸಂತ ಬೀಗುವ ಕೋಗಿಲೆ

ಸಾವಿರದ ಅನಿವಾರ ಹೊಸಲೀಲೆ ಆಳ ನೆಲ ಭದ್ರ ನೆಲೆ

(ವಸಂತ ವಿಜಯ)

ನಿತ್ಯ ವಸಂತದಲ್ಲಿ ಕಾಲ ಕಳೆಯುವ ಕವಿಗೆ ಬಾಲ್ಯದ, ತಾರುಣ್ಯದ ಭಾವನೆಗಳು ಭೂತದಲ್ಲಿ ಮನನೋಯಿಸಿದ ಕಹಿನೆನಪುಗಳು ಬಂದು ಕಾಡುತ್ತಲಿವೆ ಇದು ಕವಿಗೆ ಬೇಕಾಗಿಲ್ಲ. ಸಮಸ್ಯೆಗಳ, ನೋವುಗಳ ಕೊಳದ ದಡದಲಿ ನಿಂತು ಮತ್ತೆ ಹಳೆಯ ಕಾಡುವ ಸಂಬಂಧಗಳನ್ನು ಕೆದಕುವುದು ಕವಿಗೆ ಬೇಡವಾಗಿದೆ. ಇವುಗಳು ಏನಾದರೂ ಅವಾಂತರಗಳನ್ನು ಮಾಡಬಹುದೆಂಬ ನಂಬಿಕೆಯಿದೆ.

ಕೊಳದ ದಡದಲಿ ನಿಂತ, ಕಳೆದ ಸಂಬಂಧ ಹೋರೆ

ನೀರಲ್ಲಿ ಹುಗಿದಿಟ್ಟ ಮೇಲೆ ನೆನಪಿನ ಕಲ್ಲು

ಇಡದಿದ್ದರೀ ಸೊಲ್ಲು ಬದುಕಿನುದ್ದಕು ಗಲ್ಲು

ಅರಿತ ಸೋಲು ಗೆಲುವಿನ ಹಾದಿ ಅನುಭವದ ಕರೆ

(ನಂಟು)

ತಮ್ಮ ತಂದೆಯವಾರಿಗೆಯವರಾದ ಜಿ.ಜಿ.ದೊಡ್ಡವಾಡ ಅವರು ತೋರಿದ ವಾತ್ಸಲ್ಯ, ನೀಡಿದ ಮಾರ್ಗದರ್ಶನ ಅವರ ಸಜ್ಜನಿಕೆ ಹಾರೈಕೆಗಳ ಅಭಿಮಾನ ಪೂರ್ವಕವಾಗಿ ಕವಿಗಳು ನೆನೆಯುತ್ತಾರೆ.

ಕವಿ ಸಿದ್ಧಲಿಂಗ ಪಟ್ಟಣಶೆಟ್ಟರು ಕಳೆದುಹೋದ ಬದುಕಿನ ಸಾರ್ಥಕ ಕಣಗಳನ್ನು ಮತ್ತೊಮ್ಮೆ ಹುಡುಕಾಡ ತೊಡಗಿದ್ದಾರೆ. ಯಾದವಾಡದಲ್ಲಿ ಕಳೆದ ತಮ್ಮ ಬಾಲ್ಯದ ಸವಿ ದಿನಗಳು, ಅಲ್ಲಿ ಕವಿಮಾಡುತ್ತಿದ್ದ ನಿತ್ಯ ಕಾಯಕಗಳು, ತಂದೆಯ ಸ್ಥಾನದಲ್ಲಿ ನಿಂತು ಬೆಳೆಸಿದ ಮಾವ ಗುರುಪಾದಪ್ಪನವರೊಂದಿಗಿನ ವಾತ್ಸಲ್ಯ ಪೂರ್ಣ ಸಂಬಂಧ "ಹತ್ತುವರ್ಷಗಳನ್ನು ಕಳೆದ ಒಂದೇ ಚಾದರದಲ್ಲಿ" ಎಂದು ಹೇಳುವ ಅವಿನಾಭಾವ ಸಂಬಂಧ, ಮರಳಿ ಧಾರವಾಡಕೆ ಬಂದು ಶಾಲೆ ಕಲಿತಿದ್ದು, ಪ್ರೀತಿಸಿದ ಮಾಸ್ತರರ ಮನೆಯಲ್ಲಿ ಕೆಲಸಮಾಡಿದ್ದು, ಪ್ರೀತಿ, ತ್ಯಾಗ, ಸಹನೆಯ ಬದುಕನ್ನು ರೂಪಿಸಿದ ಕರುಣಾಮಯಿ ತಾಯಿ, ಸಾಹಿತಿಯಾಗಿ, ಪ್ರಾಧ್ಯಾಪಕರಾಗಿ ಸಾರ್ವಜನಿಕರೊಂದಿಗಿನ ಒಡನಾಟಗಳು ಕವಿ ಜೀವನದಲ್ಲಿ ಎಲ್ಲವನ್ನೂ ಅನುಭವಿಸಿದರೂ, ಕಾಣದೊಂದು ವಸ್ತುವಿಗಾಗಿ, ಆನಂದಕ್ಕಾಗಿ ಮತ್ತೆ ಹುಡುಕಾಟದಲ್ಲಿ ತೊಡಗಿದ್ದಾನೆ. ಅವರಿಗೆ ಬೇಕಾಗಿರುವುದು ಗುರುಕಾರುಣ್ಯ ಗದ್ದುಗೆಯ ತೋಂಟದ ಸಿದ್ಧಲಿಂಗರ ಬಳಿ ಬಂದು ಕೈ ಮುಗಿದು ನಿಂತು ಸ್ವಾಮಿಗಳಲ್ಲಿ ತಾಯಿಯನ್ನು ಕಂಡು ಅಮಿತಾನಂದ ಅನುಭಸಿದಾಗ ಕವಿಗೆ ಧನ್ಯತಾಭಾವ

ಪ್ರಾಪ್ತವಾಗುತ್ತದೆ. ಇಷ್ಟೊಂದು ದಿನ ಹುಡುಕಿದ ಪವಿತ್ರ ಭಾವ ಗುರುಗಳಲ್ಲಿ ದೊರೆಯುತ್ತದೆ. ಕವಿ ಇದರಿಂದ ಕತ್ತಲೆಯಿಂದ ಹೊರಬಂದು ಕರುಳ ಬೆಳಕನ್ನು ಕಂಡು ಪುನೀತನಾಗುತ್ತಾರೆ.

ನನ್ನ ಕತ್ತಲೆ ರಾತ್ರಿಗಳನ್ನು

ತೂರಿ ಹೇಮಾರ್ದ್ರ ಬೆಕ್ಕಿಗಳಲ್ಲಿ

ಬೆಳಕಾದೆ, ಬೆಳ್ಳಗಾದೆ

ಕಳಚಿ ಬಿದ್ದಿತು

ಕಪ್ಪುನಿದ್ದೆ

(ಹುಡುಕಾಟ)

'ಇಷ್ಟು ಹೇಳಿದ ಮೇಲೆ ಎನ್ನುವ ಕವನ' ಕವನಸಂಕಲನದ ಶೀರ್ಷಿಕೆಯಾಗಿದೆ. ಈ ತಲೆಬರಹ ಕವನದಲ್ಲಿ ಬೇರೆ ಬೇರೆ ಅರ್ಥದಲ್ಲಿ ಬಂದಿದೆ. ಏನು ಹೇಳಲಿ ನಿನಗೆ ಇಷ್ಟು ಹೇಳಿದ ಮೇಲೆ ಎನ್ನುವಲ್ಲಿ ಕವಿ ಹೇಳಿದರೆ ಏಳು ಕೇಳಲಿ ನಿನಗೆ ಇಷ್ಟು ಹೇಳಿದ ಮೇಲೆ ಎನ್ನುವಲ್ಲಿ ಕವಿ ಹೇಳುಗನಾಗುತ್ತಾನೆ. ಸಿರಿ ಅಹಂಕಾರಗಳು, ಧಿಮಾಕುಗಳು, ಕೈಕೊಡುವ ಮೋಸಗಳಿಂದ ತುಂಬಿದ ಗದ್ದಲಿದ್ದ ವಾತಾವರಣದಲ್ಲಿ ನನ್ನುಸಿರು ನನಗೆ ಕೇಳಿಸುವುದಿಲ್ಲ. ಇಲ್ಲಿಯವರೆಗೆ ಹೇಳಿದ್ದನ್ನು ಸರಿಯಾಗಿ ಅರ್ಥಮಾಡಿಕೊಳ್ಳಲಿಲ್ಲ ಎನ್ನುವ ವಿಷಾದ ಕವಿಯಲ್ಲಿದೆ. ಕೇಳಿದ್ದು ಸಿಗಲಿಲ್ಲ, ಹೇಳಿದ್ದು ಸಿಗಲಿಲ್ಲ ಎನ್ನುವಂತಾಗಿದೆ.

ಬೇಡಿ ಎದೆ ಕುಗ್ಗಿದೆ. ಹೇಳಿ ದನಿ ತಗ್ಗಿದೆ

ತಳಿವುದಕೆ ಉಳಿದಿಹುವೆ ಇಷ್ಟು ಹೇಳಿದ ಮೇಲೆ

ದೂರಸಾಗಿದೆ. ನದಿಯ ಸಾಗರ ಸಮೀಪಿಸಿದೆ

ಇನ್ನೆಷ್ಟು ಬೇಡುವುದು ಇಷ್ಟು ಹೇಳಿದ ಮೇಲೆ

(ಇಷ್ಟು ಹೇಳಿದ ಮೇಲೆ)

ಈ ಸಂಕಲನದಲ್ಲಿ ಕೆಲವು ಹನಿಗವನಗಳು ಪರಿಣಾಮಕಾರಿಯಾಗಿದ್ದು ಎಲ್ಲೆಡೆಯೂ ಬಂದು ಕಾಡುವ ಪ್ರೇಯಸಿ ಭಯಂಕರ ಭಾಷಣ ಕೇಳಿ ಮನಸು ವಿಧ್ವಸ್ತವಾಗುವುದು. ಸಮಾಜದ ಕಣ್ಣಲ್ಲಿ ತಾವು ವೃತ್ತಿಯನ್ನು ವಿಶ್ಲೇಷಿಸಿದ್ದಾರೆ.

ಗಂಡಸೆರಲ್ಲಾ ಪುಲ್ಲಿಂಗ

ಸ್ತ್ರೀಲಿಂಗ ಹೆಂಗಸರು

ನಾವು ಅಧ್ಯಾಪಕರು

ಶಿಕ್ಷಕರು ನಪುಂಸಕರು

ಈ ಮಣ್ಣಿನಲ್ಲಿ

ಮಂದಿ ಕಣ್ಣಿನಲ್ಲಿ

(ದೃಷ್ಟಿಪಾತ್)

ಶ್ರೀ ಕುಮಾರನ್ ತುಂಬಿ, ಕರೂರ್‌ಶಶಿ, ಪಿ.ನಾರಾಯಣ್ ಕುರುಪ್, ದೇಶಮಂಗಲಂ ರಾಮಕೃಷ್ಣನ್, ಡಿ.ವಿನಯಚಂದ್ರರ ಮೂಲ ಮಲೆಯಾಳಿ ಕವಿತೆಗಳನ್ನು ಅನುವಾದಿಸಿದ್ದಾರೆ. ನಮ್ಮ ನಡುವಿನ ಸಮಸ್ಯೆಗಳನ್ನು ಅವುಗಳ ಮೂಲವನ್ನು ಇಲ್ಲಿನ ಕವಿತೆಗಳು ಹುಡುಕುತ್ತವೆ. ಶಾಲೆಗೆ ಹೋಗುವ ಮಗುವಿನ ಬ್ಯಾಗು ಮಗುವಿಗೆ ಭಾರವಾದರೆ ಶಿಕ್ಷಣವೇ ವ್ಯಾಪಾರಿಕರಣವಾಗಿರುವ ಪ್ರಸ್ತುತ ಸಂದರ್ಭದಲ್ಲಿ ಶಿಕ್ಷಣ ಕೊಡುವುದು ಪಾಲಕರ ಪಾಲಿಗೆ ನಿಜವಾದ ಭಾರವಾಗಿದೆ. ಕೇರಳದ ವೈಕಂ ಪ್ರದೇಶದ ಹಿನ್ನೀರಿನಲ್ಲಿರುವ 'ಪಾದಿಪುರಾಗುಣಪ್ಪುರಂ' ಹೆಸರಿನ ದ್ವೀಪದ ಬಗ್ಗೆ ಜನ ಹೊಂದಿರುವ ಭಾವನೆ ಕುತೂಹಲಗಳು ಕಾವ್ಯದ ವಸ್ತುವಾಗಿ ಮೂಡಿ ಬಂದಿವೆ.

ಒಟ್ಟಾರೆಯಾಗಿ ಕವಿಯ ಇಚ್ಛಾ ಶಕ್ತಿಯೇ ಕವಿತೆಗಳ ಆಂತರ್ಯವಾಗಿದೆ. ಉತ್ಸಾಹವೂ ಅದಮ್ಯವಾಗಿದೆ. ಮಾನವನ ಮನಸ್ಸಿನ ಅಸ್ಥಿರತೆಯನ್ನು, ಚಂಚಲತೆಯನ್ನು, ಏರಿಳಿತಗಳನ್ನು ಸಂಕೇತಿಸುವ ಕವನಗಳು ಇಲ್ಲಿವೆ. ಈ ಸಂಕಲದಲ್ಲಿ ಕವಿ ಬೆಳಗಿದ ಭಾಷೆ ಅಪ್ತವಾಗಿದ್ದು ಮೋಡಿ ಮಾಡುವ ಶಕ್ತಿಯಿಂದ ಕೂಡಿದೆ.

**೧.೨ ಪಟ್ಟಣಶೆಟ್ಟರ ಸಮಗ್ರ ಕಾವ್ಯ**

ಡಾ.ಸಿದ್ಧಲಿಂಗ ಪಟ್ಟಣ ಶೆಟ್ಟಿಯವರ ಒಟ್ಟು ೧೦ ಕವನ ಸಂಕಲನಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ. ಇದರಲ್ಲಿ ೯ ಸ್ವತಂತ್ರ ಕವನ ಸಂಕಲನಗಳು, ಒಂದು ಹಿಂದಿಯಿಂದ ಅನುವಾದಿಸಿದ ಪೂರ್ಣ ಖಂಡಕಾವ್ಯ 'ಕನುಪ್ರಿಯಾ' ಇದೆ. ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ ಡಂಬಳ, ಗದಗ ಇವರಿಂದ ಪ್ರಕಟಣೆಗೊಂಡಿದೆ. ಜೂನ್-೨೦೦೦ದಲ್ಲಿ ಧಾರವಾಡದಲ್ಲಿ ಜರುಗಿದ ಸಿದ್ಧಲಿಂಗ ಪಟ್ಟಣಶೆಟ್ಟರ ಅಭಿನಂದನಾ ಕಾರ್ಯಕ್ರಮದಲ್ಲಿ ಇದನ್ನು ಬಿಡುಗಡೆ ಗೊಳಿಸಲಾಯಿತು.

ಈ ಕವನ ಸಂಕಲನದ ಅನುಬಂಧ ೧ರಲ್ಲಿ ಪಟ್ಟಣಶೆಟ್ಟರ ಮೊದಲ ಕವನ ಸಂಕಲನವಾದ 'ನೀನಾ'ಕ್ಕೆ ಬರೆದ ಕೆ.ಎಸ್.ನರಸಿಂಹಸ್ವಾಮಿಯವರ ಮುನ್ನುಡಿಯನ್ನು ಯಥಾವತ್ತಾಗಿ ಉಳಿಸಿಕೊಳ್ಳಲಾಗಿದೆ. ''ಕವಿತೆ ಕಾಲದಂತೆ ಅನಂತ ಯಾವ ಸೋಲು ಗೆಲುವು ನೋವು ನಲಿವುಗಳೆಲ್ಲವಕ್ಕೂ ಮೀರಿದ ಆಶಾಧ್ವನಿಯೇ ಕವಿತೆಯ ಆತ್ಮವೆನ್ನಬಹುದು. ಅನಾದಿ ಕಾಲದಿಂದಲೂ ಕವಿಕರ್ಮ ವಿಫಲವಾಗಿ ಬೆಳೆದು ಬಂದು ಹಲವಾರು ಶಿಖರಗಳನ್ನು ಮುಟ್ಟಿದ್ದರೂ ಮಾನವ ಜೀವನದ ಇನ್ನೆಷ್ಟೋ ಅನುಭವಗಳು ಬಾಗಿಲು ಮುಚ್ಚಿಯೇ ಕುಳಿತಿವೆ ಅವುಗಳನ್ನು ಹಾಡಿಗೆಳೆದು ತರಬೇಕಾಗಿದೆ. ಆದ್ದರಿಂದ ಕವಿಗಳ ದುಡಿಮೆಗೆ ಬಿಡುವಿಲ್ಲದಂತಾಗಿದೆ. ಕಾಲದ ಕೃಪೆಯಿಂದ ಮಾತ್ರ ಬರುವ ಜೀವನಾನುಭವಗಳನ್ನು ಅನುಭವ ಪರಂಪರೆಗಳನ್ನು ಹೊಕ್ಕುನೋಡಿ ಅಲ್ಲಿ ಕಾಳಾಗಿ ನಿಲ್ಲುವುದಕ್ಕೆ ಬಾಳುವ ಮಾತಿನ ಸ್ವರೂಪಧ್ವನಿ ವಿಲಾಸಗಳನ್ನು ನೀಡುವ ರಸವ್ಯಾಪಾರ ಸುಲಭವಲ್ಲ. ಕವಿ ಹೋರಾಡದೇ ಗೆಲ್ಲುವ ಮಾತೇ ಇಲ್ಲ. ಆದರೆ ಈ ದೇವರಿಗೆ ನೇಮಹೊತ್ತ ಮೇಲೆ ಈ ಕಷ್ಟದ ದಾರಿಗೆ ಒಲಿದು ಕಾಲಿಟ್ಟ ಈ ಹೊಸ ಕವಿಗೆ ನನ್ನ ಶುಭಾಷಯಗಳು''[೨] ಎಂದು ಪ್ರೋತ್ಸಾಹದ ಮಾತುಗಳನ್ನಾಡಿದ್ದಾರೆ.

ಇಲ್ಲಿಯ ಕವನಗಳ ಬಗ್ಗೆ, ಸಂಯಮದ ಶೈಲಿಯ ಬಗ್ಗೆ, ಬಳಸಿರುವ ನುಡಿಗಳ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡಿದ್ದಾರೆ. ಒಂದು ಕಂಬದ ಸುತ್ತ ಸುತ್ತುವ ಹಲವಾರು ಮಕ್ಕಳಂತೆ ಹಲವಾರು ವೇದನೆಗಳು, ಕಹಿಗಳು ಪರಿಭ್ರಮಿಸುವುದನ್ನು ಇಲ್ಲಿ ಕಾಣುತ್ತೇವೆ ಎಂದಿದ್ದಾರೆ. ಇವರ ಕವಿತೆ ಬದುಕಿಗೆ ತಂಪನ್ನು ನೀಡಲಿ ಇರುವ ಕತ್ತಲೆಗೆ ಹಣತೆ ಹಚ್ಚಿ ಬೆಳಕನ್ನು ನೀಡಲಿ ಉಕ್ಕನ್ನು ಭಿತ್ತಿ ಮಲ್ಲಿಗೆಯನ್ನು ಬೆಳೆಯಲಿ ಎಂದು ಆಶೀರ್ವದಿಸಿದ್ದಾರೆ.

ಅನುಬಂಧ ೨ರಲ್ಲಿ ಪಟ್ಟಣಶೆಟ್ಟರ ಎರಡನೆಯ ಸಂಕಲನವಾದ 'ಔರಂಗಜೇಬ ಮತ್ತು ಇತರ ಕವನಗಳು' ಸಂಗ್ರಹಕ್ಕೆ ಡಾ.ಶಾಂತಿನಾಥ ದೇಸಾಯಿ ಅವರು ಬರೆದ ಪ್ರತಿಕ್ರಿಯೆಯಿದೆ. ''ಈ ಮೂರು ವರ್ಷದ ಅವಧಿಯಲ್ಲಿ ಸಿದ್ಧಲಿಂಗರ ಕಾವ್ಯ ಮೈ ಕೈ ತುಂಬಿಕೊಂಡು ತನ್ನದೇ ಆದ ಒಂದು ನಿಶ್ಚಿತ ರೂಪ ತಳೆಯುತ್ತಾ ಪರಿಣತಿಯತ್ತ ಸಾಗಿದೆ ಎಂದು ಹೇಳುವುದರ ಜೊತೆಗೆ ತಾರುಣ್ಯ ಸಹಜವಾದ ಭಾವಗಳಿವೆ. ಕವಿಯ ಪ್ರೇರಕ ಪ್ರಜ್ಞೆಗಳು ಧನಾತ್ಮಕ ಬದಲಾವಣೆಗೊಂಡಿವೆ. ಕಾವ್ಯಶಿಲ್ಪ ಕಾವ್ಯಬಂಧದ ಬಗ್ಗೆ ಜಾಗರೂಕತೆಯಿದೆ. ಅನುಭವ ಮತ್ತು ಅಭಿವ್ಯಕ್ತಿಯೆರಡರಲ್ಲಿಯೂ ಗಟ್ಟಿ ಹಿಡಿತವಿರುವುದು ಕಂಡು ಬರುತ್ತದೆ.''[೪೩] ಎಂದು ಪ್ರತಿಕ್ರಿಯೆ ನೀಡಿದ್ದಾರೆ.

ಅನುಬಂಧ ೩ರಲ್ಲಿ 'ಪಟ್ಟಣಶೆಟ್ಟರ ಆಯ್ದ ಕವಿತೆಗಳು' ಸಂಕಲನವನ್ನು ಸಂಪಾದಿಸಿದೆ. ಡಾ.ಎಚ್.ಎಸ್.ವೆಂಕಟೇಶಮೂರ್ತಿಯವರು ಬರೆದ ಪ್ರಸ್ತಾವನೆಯಿದೆ.

**೧.೩ ಅಪರಂಪಾರ**

ಅಪರಂಪಾರ ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಹದಿಮೂರನೇ ಕವನ ಸಂಕಲನವಾಗಿದೆ. ೨೦೦೫ರಲ್ಲಿ ಅನನ್ಯ ಪ್ರಕಾಶನ ಧಾರವಾಡದಿಂದ ಪ್ರಕಟಗೊಂಡಿದೆ. ಈ ಕವನ ಸಂಕಲನದಲ್ಲಿ ಒಟ್ಟು ಐವತ್ತೆಂಟು ಕವನಗಳಿವೆ.

ಪಟ್ಟಣಶೆಟ್ಟರು ಅತಿ ಹೆಚ್ಚು ಪ್ರೀತಿಯಿಂದ ಬರೆದದ್ದು ಕಾವ್ಯವನ್ನೇ ಆದರೆ ಕಾವ್ಯದ ಅಂತರಾಳದಲ್ಲಿ ಮಾತ್ರ ನೋವೇ ತುಂಬಿಕೊಂಡಿರುವುದು ಇವರ ಕಾವ್ಯದ ವಿಶೇಷ. ಇಲ್ಲಿನ ಅಪರಂಪಾರ ಕವಿತೆಯು ತಾಯಿಯ ವಾತ್ಸಲ್ಯ ಅವಳು ಜತನದಿಂದ ಬೆಳೆಸಿದ ಬಗ್ಗೆ ಈಗಲೂ ನೆನಪಿಸಿಕೊಂಡರೂ ರೋಮಾಂಚನವಾಗುವ ತಾಯಿಯ ನೆನಪುಗಳನ್ನು ಸುಂದರವಾಗಿ ಕಟ್ಟಿಕೊಡುತ್ತದೆ. ಇಹದಲ್ಲಿ, ಪರದಲ್ಲಿ, ಪಾರದಲ್ಲಿ, ಅಪಾರದಲ್ಲಿ, ಅಧಿಪಾರದಲ್ಲಿ ಅವ್ವನ ನೆನಪೇ ಒಂದು ಶಕ್ತಿಯಾಗಿದೆ.

''ಚಿಕ್ಕ ಚಿಕ್ಕ ಚುಕ್ಕೆಗಳ ತುತ್ತೊಮ್ಮೆ
ಎಣಿಸವ್ವ ಹಸಿದಿದ್ದೇನೆ
ತಾಳಲಾರೆನು ಕ್ಷುಧೆಯ
ನಿನ್ನ ಪ್ರೀತಿ ಲೋಕ ಅದ್ಭುತ
ನಿನ್ನ ಕಣ್ಣ ಪರಿಧಿಯಲ್ಲೇ
ಸುತ್ತಿಸುತ್ತಿ ಮಲಗಿ ನಿದ್ದೆ ಹೋಗುವೆ
ನಿನ್ನ ಕೈಯ ತುತ್ತಿಗೆಂದು

ನಿನ್ನ ತುಟಿಯ ಮುತ್ತಿಗೆಂದು

ನಾನು ಸಣ್ಣ ತೊತ್ತು ಅವ್ವ ಸದಾ ನಿನ್ನ ಸುತ್ತು"

(ಅಪರಂಪಾರ)

ತೀವ್ರವಾಗಿರುವ ತಾಯಿಯ ನೆನಪಿನ ಹಂಬಲ ಸ್ಫೂರ್ತಿ ಚೈತನ್ಯಗಳನ್ನ ನೀಡಿದೆ, ಕವಿಯೂ ತಾಯಿಯಾಗಿ ಮಕ್ಕಳನ್ನು ಆಡಿಸುವಂತೆ ಮಾಡಿದೆ.

ನಗರ ವಾಸಿಗಳದು ಯಾಂತ್ರಿಕ ಜೀವನ, ಅಲ್ಲಿನ ನಾಗರೀಕರೆಲ್ಲರೂ ಭೌತಿಕವಾಗಿ ಮಾತ್ರ ಬದುಕು ಸಾಗಿಸುತ್ತಾರೆ. ನಿಸರ್ಗದ ಸೌಂದರ್ಯವನ್ನು ಆಸ್ವಾದಿಸುವುದು ಸಾಧ್ಯವಿಲ್ಲ. ಮುಂಬಯಿಯಲ್ಲಿ ಪ್ರಾಕೃತಿಕವಾಗಿ ನೋಡಲುಸಿಗುವುದು. ಆಕಾಶ ಮತ್ತು ಅರಬ್ಬೀ ಸಮುದ್ರ ಮಾತ್ರ ಉಳಿದುದೆಲ್ಲವೂ ಮಾನವ ನಿರ್ಮಿತವಾದದ್ದು. ಇಲ್ಲಿ ಪ್ರಕೃತಿಗೆ ಮತ್ತು ಪ್ರಕೃತಿ ಸೌಂದರ್ಯಕ್ಕೆ ತೊಂದರೆಯುಂಟಾಗಿದೆ. ಇದನ್ನು ಕವಿಗಳು ವ್ಯಂಗ್ಯವಾಗಿ ಉಪಮೇಯಗಳನ್ನು ಬಳಸಿ ಹೇಳಿದ್ದಾರೆ.

''ಅತ್ತಿತ್ತ ಇಣುಕುತ್ತ ಕಾಲ್ಜಾರಿಬಿದ್ದು

ಎದ್ದು ಓಡುವ ಪುಟ್ಟ ಮಕ್ಕಳು ಹಾಗೆ

ಅಳುತಲುತ ನಗುವ ರಶ್ಮಿ ಪುಂಜಗಳು

ಸಂಖ್ಯಾತೀತ ಸ್ಪರ್ಧೋತ್ಸುಕ ತುಂಗೊತ್ತುಂಗ

ಅಂತಸ್ತು ಭಾವನೆಗಳ ವಿಧ ವಿಧ ಶೃಂಗಗಳು

ಅಲ್ಲಲ್ಲಿ ಸಂದೀಯಲಿ ಉಸಿರು

ಕಟ್ಟಿ ಬೆವರು ಸುರಿಸುವ ಗಾಳಿ

ಕಾಲರಾಯನ ತೊಡೆಯ ಮೇಲೆಯೇ ಕುಳಿತು

ಗುಣಾಕಾರ ಭಾಗಾಕಾರ ಮಂತ್ರ

ಜಪಿಸುತ್ತಿರುವ ನಿಸ್ತೇಜಮುಖಿಗಳು

ಡಾಂಬರು ದಾರಿಯ ಮೇಲೆ

ಕೋರಿ ಹುಳುಗಳಹಾಗೆ ಸಾವರಿಸಿ ಸರಿಯುತ್ತಿರುವ

ವಾಹನಸಾಲು"

(ಮುಂಬಯಿಯ ಆಕಾಶ)

ಹೀಗೆ ನಗರ ಜೀವನದ ಜಂಜಡಗಳು ಅಪಾಯಗಳು ಈ ಕವನದಲ್ಲಿದೆ.

ಇಂದು ನಾಗರೀಕ ಜನಾಂಗ ತಂತ್ರಜ್ಞಾನದ ಬಲದಿಂದ ಏನೆಲ್ಲವನ್ನು ಸಾಧಿಸಿದ್ದೇವೆ. ಐಶ್ವರ್ಯ, ಅಧಿಕಾರ, ಅಂತಸ್ತುಗಳು, ಧಾರಾಳವಾಗಿ ದೊರಕಿವೆ. ಆದರೆ ನೆಮ್ಮದಿ ಶಾಂತಿಗಳು ಕಾಣೆಯಾಗಿವೆ. ಮಾನವನ ಸಾಧನೆ ಸಿದ್ಧಿಗಳು ಮನುಷ್ಯತ್ವವನ್ನು ನಾಶಮಾಡಿವೆ. ಜೇನು ಗೂಡಿಗೆ ಕಲ್ಲು ಹೊಡೆದು ಪರಿತಾಪ ಪಡುವ ಕೈಲಾಗದವನ ಸ್ಥಿತಿಗೆ ಮನುಕುಲ ಬಂದು ನಿಂತಿದೆ. ಇಂತಹ ಅಸಹಾಯಕ ಸ್ಥಿತಿಗೆ ಬಂದು ತಲುಪಲು ನಮ್ಮಲ್ಲಿರುವ ಸ್ವಾರ್ಥಲೋಭಿತನಗಳೇ ಕಾರಣವಾಗಿವೆ. ಆದ್ದರಿಂದ ನಾವಿಂದು ಕಾರ್ಖಾನೆಗಳನ್ನು, ಆಣೆಕಟ್ಟುಗಳನ್ನು, ದೇಶವನ್ನು ಕಟ್ಟುವುದರ ಬದಲಾಗಿ ಮನಸ್ಸುಗಳನ್ನು ಕಟ್ಟಬೇಕಾಗಿದೆ. ವ್ಯಕ್ತಿ ವ್ಯಕ್ತಿಗಳ ಮಧ್ಯದಲ್ಲಿರುವ ಅಪನಂಬಿಕೆ, ಸಂದೇಹ, ಸಂಶಯಗಳನ್ನು ನಿವಾರಿಸಬೇಕಾಗಿದೆ.

''ಬಾಣ ಬಿಡುವುದು ಸರಳ ಕಷ್ಟ ಬಿಡದಿರುವುದು
ಚುಚ್ಚುವುದು, ಕೊಲ್ಲುವುದು ಹೋರುವುದು ಭ್ರಾಂತಿ
ನಿತ್ಯದ ನಿರಂತರದ ಹಸಿವು ಕಾದಾಟ
ಆಯುಧವಾಗದಿರಲಿ ಆಯುಷ್ಯ
ಕಟ್ಟುವುದು ಕಠಿಣ ಸೃಜನ ಕ್ರಿಯೆ
ಸದ್ಧರ್ಮದವತಾರ ನೆಮ್ಮದಿ ಶಾಂತಿ
ದೇಹ ಗೂಡುಗಟ್ಟುವ ಮೊದಲು
ಕಟ್ಟಲಿ ಮನಸು ಮನಸು

(ಮನಸುಗಳ ಕಟ್ಟು)

ಎಂದು ಹೇಳುತ್ತಾರೆ. ಮಾನವೀಯತೆಯೇ ಮೊದಲ ಆದ್ಯತೆಯಾಗಬೇಕೆಂಬುದು ಕವಿಯ ಆಶಯವಾಗಿದೆ.

ಕವಿಗಳು ಭಾರತವನ್ನೆಲ್ಲಾ ಸುತ್ತಿ ದೇಶದ ರಾಜಧಾನಿಯಲ್ಲಿ ಕೆಲಸಮಾಡಿ ಹಲವಾರು ವರ್ಷಗಳನಂತರ ಹಳ್ಳಿಗೆ ಬಂದಾಗ ಹಳ್ಳಿಯೂ ಬದಲಾಗಿದೆ. ಆಗಿನ ಕಾಲದಂತ ಶಿಕ್ಷಕರಿಲ್ಲ. ಗೋಡೆಗಳ ಬಣ್ಣ ಬದಲಾಯಿಸಿಕೊಂಡಿವೆ. ಭಿಕ್ಷೆ ಬೇಡುತ್ತಿದ್ದ ಚೆನ್ನಪ್ಪ, ಹಣ್ಣು ಹಣ್ಣು ಮುದುಕನಾಗಿದ್ದಾನೆ. ಆತನನ್ನು ಸಾವು ನಾಚಿಕೆಯಿಂದ ಕರೆಯುತ್ತಲಿದೆ. ಕವಿಗಳು ಆತನಿಗೆ ಹಣ ನೀಡಲು ಹೋದಾಗ ಅವನು ಸಣ್ಣ ದನಿಯಿಂದ ನೀನು ದೇಶ ಕಂಡವನು ಸಾಧ್ಯವಾದರೆ ಸ್ವಲ್ಪ ಭಾರತ ಕೊಡು ಎಂದು ಕೇಳುತ್ತಾನೆ. ಇದು ಅರಿವು ಮೀರಿದ ಕೊಡಲಾರದ ಭಿಕ್ಷೆಯಾಗಿದೆ.

ಜೀವನದಲ್ಲಿ ಆಪ್ತರಿಂದಲೇ ಹಲವಾರು ಸಲ ಅನಾಹುತಗಳು, ಅಸಂಭವಗಳು ಘಟಿಸುತ್ತವೆ. ಎದುರಿಗೆ ದುತ್ತೆಂದು ಸಮಸ್ಯೆಗಳು ಬಂದುನಿಲ್ಲುತ್ತವೆ. ಧೃತಿಗೆಡದೆ ಬಾಳುವುದನ್ನ ಕಲಿಯಬೇಕೆಂದು ಕವಿ ಹೇಳುತ್ತಾರೆ.

''ಪ್ರೇಮಕ್ಕೆ ಸ್ನೇಹಕ್ಕೆ ಸಹಜ ಸ್ಪಂದನಗಳಿಗೆ ನಿತ್ಯ
ನಾಥನೋ ಒಡೆಯನೋ ಪಕ್ಕಲ್ಲೇ ನಿಂತು

ಆಗಬೇಕಿದ್ದವನೇ ಬಗಲಲ್ಲಿ ಹುಣ್ಣಾದರೆ

ಬಲು ಹಸಿದು ಉಣುವಾಗ ಅನ್ನವೇ ಮಣ್ಣಾದರೆ''

(ಹೆದರಬೇಕಿಲ್ಲ)

ನಾನು ಗಂಭೀರವಾಗಿರುವುದನ್ನು ಕಲಿಯಬೇಕು ಹೆದರಿದರೆ ಇನ್ನಷ್ಟು ತೊಂದರೆಗಳು ಮೈ ಮೇಲೆರುಗುತ್ತವೆ. ಎಂದು ಧೈರ್ಯ ಹೇಳುತ್ತಾರೆ.

ಕನ್ನಡ ಸಂಗಮ ಸಂಗೀತ ಕ್ಷೇತ್ರದಲ್ಲಿ ಜಿ.ವಿ.ಅತ್ರಿಯವರದು ಮರೆಯಲಾರದ ಹೆಸರು. ಇವರು ತುಂಗಾ ನದಿಯಲ್ಲಿ ಹೆಂಡತಿ ಮಕ್ಕಳ ಜೊತೆ ಅಕಾಲಿಕ ಮರಣ ಹೊಂದಿದಾಗ ಇವರನ್ನು ಕುರಿತು ಶೋಕಗೀತೆ ಇಲ್ಲಿದೆ.

ತಂದೆಯೋ ತಮ್ಮನೋ ಮಗನೋ ಹೋದನು ಎಂದು

ಕಳೆದ ಗೆಳೆಯನ ನೆನೆದು ಪರಿತಪಿಸುತಿಹೆ ಎಂದು

ಎಂದು ನೋವು ತೋಡಿಕೊಳ್ಳುತ್ತಾರೆ.

ಪಟ್ಟಣ ಶೆಟ್ಟರ ಕಾವ್ಯ ಹೆಚ್ಚಾಗಿ ಕುರಿತು ಹೇಳುವುದು ಹೆಣ್ಣನ್ನು ಆಕೆಯಿಂದ ಮೂಡಿ ಬರುವ ಫಲಶೃತಿಗಳನ್ನು ಆಕೆ ಸಂತೋಷ ನೀಡಿದರೂ, ಆನಂದ ನೋವು ನೀಡಿದರೂ ಆನಂದ ಆಕೆಯಲ್ಲಿದೆ ಬದುಕುವುದು ಕವಿಗೆ ಸಾಧ್ಯವಿಲ್ಲ. ಆದ್ದರಿಂದ ಕವಿಯ ಬದುಕಿಗೆ ಕವಿಯ ಕಾವ್ಯಕ್ಕೆ ಹೆಣ್ಣು ಬೇಕೇ ಬೇಕು. ತಾಯಿಯಾಗಿ, ಪ್ರೇಯಸಿಯಾಗಿ, ಮಗಳಾಗಿ ಈ ಹೆಣ್ಣು ಕವಿಯೂ ಬಾಳಿನಲ್ಲಿ ಬಾಗಿಯಾಗಲು ಬೇಕಾಗಿದ್ದಾಳೆ.

''ನಾನು ಬದುಕುವುದಕ್ಕೆ ನೀನು ಬೇಕು

ನಾನು ಉಸುರುವುದಕ್ಕೆ ನೀನು ಬೇಕು

ನಾನು ಹೊರ ಹೊಮ್ಮಲಿಕೆ ನೀನು ಬೇಕು

ನಾನು ನನಗೆ ಚಿಮ್ಮಲಿಕೆ ನೀನು ಬೇಕು

ಪ್ರೀತಿ ಮಾರ್ದನಿಗೊಳ್ಳಲು ನೀನು ಬೇಕು

ಮುಂದೆ ಗಂಧದ ಕನಸು ನೀನು ಬೇಕು.

ನಾನು ಚಿತ್ರವಾಗಲಿಕೆ ನೀನು ಬೇಕು

ನಾನು ಛಿದ್ರವಾಗಲಿಕೆ ನೀನು ಬೇಕು

ಎಂದು ಕವಿ ಹೇಳುತ್ತಾರೆ.

ಕವಿ ಪ್ರೀತಿ ವಂಚಿತರಾದಾಗ ವಿರಹ

ಕಾಡಿದಾಗೆ, ನೆನವು ಮತ್ತೆ ನೋವು

ತಂದಾಗ ನಿರಾಶೆಗೊಂಡಿದ್ದಾರೆ.

ಹಾಡು ಕಳೆದಿದೆಯೆಂದು ಹಾಡು ಬರೆದಿದ್ದಾರೆ

ನೆಲವು ತೃಷೆಯಲಿ ಬಳಲಿ ನರಳಿದೆ
ಎಲ್ಲಿಸಿಗುವುದು ನೆಮ್ಮದಿ
ಮೊದ ಮೊದಲಿನ ಒಲಿವೆ ಬತ್ತಿದೆ
ಬಹುದೆ ಸುರನದಿ ಈ ಬದಿ
ನನ್ನ ಪ್ರೀತಿಯ ಹಾಡು ಕಳೆದಿದೆ
ಯಾವ ಕಾಡಲಿ ಹುಡುಕಲಿ
ಯಾವು ನಾಡಲಿ ಅಲೆಯಲಿ
ನನ್ನ ಹಾಡಿನ ಪ್ರೀತಿ ಕಳೆದಿದೆ
ನನ್ನ ಭಾವದ ರಾಗ ಕಳೆದಿದೆ
ನನ್ನ ನೇಹದ ತಂತು ಕಳಚಿದೆ

(ಹಾಡು ಕಳೆದಿದೆ)

**೩.೧.೨. ಕಥಾ ಸಂಕಲನ**

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಮೂಲತಃ ಕವಿಗಳು ಆದರೂ ಸೃಜನಶೀಲ ಬರಹಗಾರನೊಬ್ಬ ತನ್ನ ಬರವಣಿಗೆಗೆ ಯಾವುದೇ ಪ್ರಕಾರವನ್ನು ಆಶ್ರಯಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ಪಟ್ಟಶೆಟ್ಟರ ಎರೆಡು ಕಥಾಸಂಕಲನಗಳು. ಕನ್ನಡ ಕಥಾ ಸಾಹಿತ್ಯಕ್ಕೆ ಮಹತ್ವದ ಕೊಡುಗೆಗಳಾಗಿವೆ. ನವ್ಯ ಪರಂಪರೆಯ ಅಭಿವ್ಯಕ್ತಿಯ ತಂತ್ರಗಳಾದ ಪ್ರತಿಮೆ, ಸಂಕೇತ ಮುಂತಾದವುಗಳನ್ನು ಕಳಚಿಕೊಂಡು ಸರಳ ನಿರೂಪಣೆಯ ಶೈಲಿಯಲ್ಲಿ ಕೌಟುಂಬಿಕ ಮತ್ತು ಸಾಮಾಜಿಕ ಆಯಮಗಳನ್ನು ಪರಿಣಾಮಕಾರಿಯಾಗಿ ಚಿತ್ರಿಸಿರುವುದು ಇವರ ಕಥೆಗಳಿಗಿರುವ ವಿಶೇಷತೆಯೆನಿಸಿದೆ. ಇವರ 'ಮಾವ' ಮತ್ತು ಇತರ ಕಥೆಗಳು ಮತ್ತು 'ಹಕ್ಕಿಗಳು' ಎಂಬ ಎರೆಡು ಕಥಾ ಸಂಕಲನಗಳು ಅಧ್ಯಯನಕ್ಕೆ ಯೋಗ್ಯವಾಗಿವೆ.

**೧. ಮಾವ ಮತ್ತು ಇತರ ಕಥೆಗಳು**

ಮಾವ ಮತ್ತು ಇತರ ಕಥೆಗಳು ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಮೊದಲ ಕಥಾ ಸಂಕಲನವಾಗಿದೆ. ೧೯೬೭ ರಲ್ಲಿ ಮೊದಲ ಮುದ್ರಣವನ್ನು ಕಂಡು ಇದು ೧೯೮೧ ರಲ್ಲಿ ಎರಡನೆಯ ಮುದ್ರಣ ಕಂಡಿದೆ. ಅನನ್ಯ ಪ್ರಕಾಶನ ಧಾರವಾಡದಿಂದ ಪ್ರಕಟಣೆಗೊಂಡಿದೆ. ಈ ಕಥಾ ಸಂಕಲನದಲ್ಲಿ ಒಟ್ಟು ಆರು ಕಥೆಗಳಿವೆ. ಹಳ್ಳಿಯ ಸಹಜ ಸುಂದರ ಚಿತ್ರಣ, ಅನೈತಿಕ ಸಂಬಂಧಗಳು, ಜೀವನದಲ್ಲಿ ಕಾಮದ ಸ್ಥಾನ, ಸಾವು, ಬದುಕನ್ನು ಅನುಭವಿಸುವ ರೀತಿ ಮುಂತಾದ ವಿಷಯ ವಸ್ತುಗಳಿಂದ ಕೂಡಿದ ಕಥೆಗಳು ಇಲ್ಲಿವೆ. ತಂತ್ರದ ದೃಷ್ಟಿಯಿಂದ ಕಥೆಗಾರರೇ ನಿರೂಪಕರಾಗಿ ಕಥೆಗಳನ್ನು

ಹೇಳುತ್ತಾ ಹೋಗುತ್ತಾರೆ. ಕಥೆಗಾರರ ವೈಯುಕ್ತಿಕ ಸ್ತರದ ಅನುಭವಗಳೇ ಕಥೆಯ ರೂಪವನ್ನು ತಾಳಿದಂತೆ ಭಾಸವಾಗುತ್ತದೆ. ನವ್ಯರ ಅಸ್ತಿತ್ವವಾದದ ಅಂಶ ಇಲ್ಲಿನ ಕಥೆಗಳಲ್ಲಿ ಕಂಡು ಬರುತ್ತದೆ.

ಮಾಮ ಕಥೆಯು ಈ ಸಂಕಲನದ ಶೀರ್ಷಿಕೆಯುಳ್ಳದ್ದಾಗಿದೆ. ಮಾವ, ಅಳಿಯ, ಮತ್ತು ಕೆಳಜಾತಿಯ ಸೇರಿದ ಸಾವಂತ್ರಿ ಈ ಕಥೆಯ ಮುಖ್ಯ ಪಾತ್ರಗಳಾಗಿ ಸುಂದರ ಪ್ರಾಕೃತಿಕ ಚಿತ್ರಣ ಮೂಡಿ ಬಂದಿದೆ. ಬಹಳಷ್ಟು ವಿದ್ಯೆಕಲಿತರೂ ಅಳಿಯ ಮತ್ತೆ ಹಳ್ಳಿಗೆ ಬಂದು ಜೀವನ ನೆಡೆಸ ತೊಡಗುತ್ತಾನೆ. ಅಂಗಡಿಗೆ ಬರುವ ಕೆಳಜಾತಿಯ ಹೆಣ್ಣು ಮಗಳಾದ ಸಾವಂತ್ರಿಯೊಂದಿಗೆ ಅನೈತಿಕ ಸಂಬಂಧವನ್ನು ಹೊಂದಿರುತ್ತಾನೆ. ಸಾವಂತ್ರಿಯ ತಂದೆಗೆ ಕಷ್ಟಕಾಲದಲ್ಲಿ ಧನ ಸಹಾಯ ಮಾಡುತ್ತಾನೆ. ಆದರೆ ಅದರ ಹಿಂದಿರುವ ಉದ್ದೇಶ ಸಾವಂತ್ರಿಯನ್ನು ತನ್ನ ಕಾಮ ತೃಪ್ತಿಗಾಗಿ ಬಳಸಿಕೊಳ್ಳುವುದೇ ಆಗಿರುತ್ತದೆ. ಅಂಗಡಿಗೆ ಬಂದ ಸಾವಂತ್ರಿಗೆ ಎಣ್ಣೆ ಹಾಕಬೇಕಾದರೆ ಮಡಿವಂತಿಕೆಯನ್ನು ಪ್ರದರ್ಶಿಸುವ ಮಾವ, ಕತ್ತಲಾದೊಡನೆ ಅವಳ ಮನೆಗೆ ಹೋಗಿ ಆಕೆಯ ಸೆರಗಿನಲ್ಲಿ ಮಲಗಿಕೊಳ್ಳುತ್ತಾನೆ. ಹೀಗೆ ಕಥೆಯು ದುರ್ಬಲ ವರ್ಗದವರನ್ನು ಶೋಷಣೆ ಮಾಡುವ ರೀತಿಯನ್ನು, ಆಗಿನ ಕಾಲದಲ್ಲಿದ್ದ ಅಸ್ಪೃಶ್ಯತೆಯನ್ನು, ಗ್ರಾಮಾಂತರ ವಾತಾವರಣವನ್ನು, ಕಣ್ಣೆದುರಿಗೇ ನೆಡೆವ ಮೋಸಗಳನ್ನು ಅನೈತಿಕವಾದರೂ ಸಹಜವಾಗಿರುವ ಸಂಬಂಧಗಳನ್ನು ಕುರಿತು ಹೇಳುತ್ತದೆ. ಮಾವನಂತೆ ಅಳಿಯ ಸೀನು ಒಳ್ಳೆಯವನಾಗಿರಲಿಲ್ಲ. ಇವನು ವಿದ್ಯಾವಂತನಾಗಿದ್ದರೂ ನೀತಿವಂತನಾಗಿರಲಿಲ್ಲ. ಅವನಿಗೂ ಸಾವಂತ್ರಿಯ ಮೇಲೆ ಮನಸಾಗುತ್ತದೆ. ರಾತ್ರಿಯ ಹೊತ್ತಿನಲ್ಲಿ ಅವಳ ಮನೆಗೆ ಹೋಗುವ ಧೈರ್ಯ ಮಾಡುತ್ತಾನೆ. ಒಂದುದಿನ ಅವಳ ಮನೆಗೆ ಹೋದಾಗ ಅಲ್ಲಿ ಅಳಿಯ ಮಾವ ಮುಖಾಮುಖಿಯಾಗುತ್ತಾರೆ. ಇಬ್ಬರೂ ಮಾತನಾಡದೆ ಗಾಬರಿಯಿಂದ ತಮ್ಮ ಸಣ್ಣತನಗಳ ಕಾರ್ಯದಿಂದ ಅವಮಾನ ಪಟ್ಟುಕೊಂಡು ಹಾಗೆಯೇ ನಿಲ್ಲುತ್ತಾರೆ. ಬಿಡತನವೆಂಬುದು ಕೆಲವೊಂದು ಸಲ ಕೆಳವರ್ಗದ ಮಹಿಳೆಯರನ್ನು ಬಲಿಪಶುವಮಾಡುತ್ತದೆ. ಮೇಲ್ವರ್ಗದ ಶ್ರೀಮಂತರಿಗೆ ತಮ್ಮ ಕಾಮನೆಗಳನ್ನು ಈಡೇರಿಸಿಕೊಳ್ಳಲು ದಾರಿಮಾಡಿಕೊಡುತ್ತದೆ; ಎಂಬ ಸಾರಾಂಶವನ್ನು ಈ ಕತೆಯು ಒಳಗೊಂಡಿದೆ.

'ಮದುವೆ ಮರಣ' ಎಂಬ ಎರಡನೆಯ ಕಥೆಯು ಬದುಕಿನಲ್ಲಿ ಬಹುಮುಖ್ಯವಾದ ಎರೆಡು ಘಟನೆಗಳಾದ ಮದುವೆ ಮತ್ತು ಮರಣಗಳನ್ನು ಕುರಿತು ಹೇಳುತ್ತದೆ. ನಿರೂಪಕ ಕಥೆಗಾರ ಪರಿಚಯಸ್ಥರ ಮದುವೆಗೆ ಹೋದಾಗ ಅಲ್ಲಿ ತನ್ನ ಅಜ್ಜನ ಮರಣ ಸಂಭವಿಸುತ್ತದೆ. ಒಮ್ಮೆಲೆ ಜರುಗಿದ ಮದುವೆ ಮತ್ತು ಮರಣಗಳ ತೌಲನಿಕತೆಯನ್ನು ಕಥೆಗಾರ ಚರ್ಚಿಸುತ್ತಾನೆ. ಮರಣದ ಹಾಗೆ ಮದುವೆ ಜೀವನಕ್ಕೆ ಖಡ್ಡಾಯವಾಗಿ ಅನಿವಾರ್ಯವೇನೂ ಬೇಕಾಗಿಲ್ಲ. ಆದರೆ ಮರಣ ಮಾತ್ರ ಒಂದಲ್ಲ ಒಂದು ದಿನ ನಿಶ್ಚಿತವಾಗಿ ಬಂದೇ ಬರುತ್ತದೆ. ಕಥೆಗಾರರ ಅಜ್ಜ ಇಲ್ಲಿ ಮದುವೆಯೇ ಆಗಿಲ್ಲ ಆದರೂ ರಸಿಕನಾಗಿದ್ದಾನೆ. ಕಥೆಗಾರರಿಗೆ ದೊಡ್ಡ ಜೀವನಾನುಭವಗಳನ್ನು ನೀಡಿದ್ದಾನೆ. ಕುತೂಹಲಕಾರಿ ವ್ಯಕ್ತಿಯಾಗಿದ್ದಾನೆ. ಕಥೆಗಾರರ ಬಗ್ಗೆಯ ಕನಸುಗಳಿಗೆ ಅಜ್ಜ ಪ್ರೇರಣೆಯಾಗಿದ್ದಾನೆ. ಅಜ್ಜನಿಗೆ ಮದುವೆಯಾಗಿಲ್ಲ ಆದರೆ ಇಬ್ಬರು ಹೆಣ್ಣುಮಕ್ಕಳನ್ನು ಇಟ್ಟಕೊಂಡಿದ್ದಾನೆ. ಅವರೊಂದಿಗೆ ಬಹಳ ನಿಷ್ಠೆಯಿಂದ ಸಂಸಾರ ನಡೆಸಿದ್ದಾನೆ. ತಾಳಿಕಟ್ಟಿದ ಲೋಕದ ಗಂಡಂದಿರಿಗಿಂತ ಉತ್ತಮವಾಗಿ ತಾನಿರುವ ತನಕ ಸಾರ್ಥಕ ಬಾಳ್ವೆ ನಡೆಸಿದ್ದಾನೆ. ಹೀಗೆ ಅಜ್ಜನ ವ್ಯಕ್ತಿತ್ವ ಬಹಳ ವಿಶಿಷ್ಟವಾಗಿದೆ. ಮದುವೆಯಾಗಲಾರದ ಚೆನ್ನಾಗಿ ತನ್ನಮೇಲೆ ನಂಬಿಕೆಯಿಟ್ಟು, ಅಜ್ಜ

ಹೆಣ್ಮಗಳೊಂದಿಗೆ ನಿಷ್ಠೆಯ ಪತಿತ್ವವನ್ನು ಪಾಲಿಸಿದವ, ಕಥೆಗಾರರು ಮದುವೆಗೆ ಹೋದಾಗ ಅಜ್ಜ ಮರಣ ಹೊಂದುವುದು ಕೇವಲ ಆಕಸ್ಮಿಕ. ಮದುವೆ ಸಂತೋಷ ಸಂಭ್ರಮಗಳ ಕಾರ್ಯವಾದರೆ ಮರಣ ನೋವಿನ ಅನಿವಾರ್ಯವಾದ ಸಂಗತಿಯಾಗಿದೆ. ಇವೆರಡರ ನಡುವಿನ ಅಂತರ ಮಾಡಬಹುದಾದ ಪರಿಣಾಮಗಳನ್ನು ಕಥೆಗಾರರು ಇಲ್ಲಿ ನಿರೂಪಿಸಿದ್ದಾರೆ.

ನನ್ನ ಗಂಡನಿಗೆ ವಿಷ ಹಾಕಿದ ಕಥೆಯು ಸ್ವಗತ ಮಾದರಿಯಲ್ಲಿದೆ. ಒಬ್ಬ ಹೆಂಗಸು ತನ್ನ ಅಂತರಂಗವನ್ನು ಬಿಚ್ಚಿ ಹೇಳುಕೊಳ್ಳುತ್ತಾ ಸಾಗುವ ಕಥೆ ಇದಾಗಿದೆ. ಮೈ ಮತ್ತು ಮನಸ್ಸುಗಳ ನಡುವಿನ ಅಂತರವನ್ನು ಕಾಮದ ಮೂಲಕ ಕಥೆಗಾರರು ಅರ್ಥೈಸಿದ್ದಾರೆ. ಕಥಾನಾಯಕಿ ಯೌವನ ತುಂಬಿದ ಸುರದ್ರೂಪಿ ಹೆಣ್ಣು, ಆದರೆ ದುರಾದೃಷ್ಟವೆಂಬಂತೆ ಟಿ.ಬಿ. ರೋಗದಿಂದ ಬಳಲುತ್ತಿರುವ ವ್ಯಕ್ತಿಯೊಡನೆ ಮದುವೆಯಾಗುತ್ತದೆ. ಆಕೆ ತನ್ನ ಗಂಡನಿಂದ ಯಾವುದೇ ರೀತಿಯ ದೈಹಿಕ ತೃಪ್ತಿಯನ್ನು ಪಡೆಯಲು ಸಾಧ್ಯವಾಗುವುದಿಲ್ಲ. ತಾರುಣ್ಯದ ಸಹಜ ಆಭಾವನೆಗಳಿಗೆ ಒಳಗಾಗುವ ಆಕೆ ಧೈರ್ಯದಿಂದ ತೃಪ್ತಿಯನ್ನು ಪಡೆಯಲು ಮುಂದಾಗುತ್ತಾಳೆ. ಅನ್ಯದಾರಿಯನ್ನು ತುಳಿಯುತ್ತಾಳೆ. ಗಂಡಸುತನದ ಮೂಲಕ ತನ್ನನ್ನು ಆಕರ್ಷಿಸಿದ ಗಂಡನ ಸಹೋದರನೊಂದಿಗೆ ಅನೈತಿಕ ಸಂಬಂಧವನ್ನು ಹೊಂದುತ್ತಾಳೆ. ಇಲ್ಲಿ ಅನೈತಿಕತೆ ಎಂಬುದು ಸಮಾಜದ ದೃಷ್ಠಿಯಲ್ಲಿ ತಪ್ಪಾದರೂ ಆಕೆಯ ದೃಷ್ಠಿಯಲ್ಲಿ ತಪ್ಪಲ್ಲ. ಅದಕ್ಕೆ ಆಕೆ ಕೊಡುವ ಕಾರಣ ಸರಿಯಾಗಿಯೇ ಇದೆ. ನಾವು ನಮಗಾಗಿ ಬದುಕಬೇಕೇ ಹೊರತು ಇನ್ನೊಬ್ಬರಿಗಾಗಿ ಅಲ್ಲ ಎನ್ನುವ ವಾಸ್ತವವಾದ ಅವಳ ನಿಲುವಿನಲ್ಲಿದೆ. ಟಿ.ಬಿ. ರೋಗದಿಂದ ಬಳಲುತ್ತಿರುವ ಗಂಡನನ್ನು ಈತ, ನನ್ನ ಗಂಡ ಎಂದು ಯಾವ ಕಾಲಕ್ಕೂ ಒಪ್ಪಿಕೊಂಡಿಲ್ಲ. ನನ್ನ ಮನಸ್ಸಿನಲ್ಲಿ ಮೊದಲಿನಿಂದಲೂ ಸುಳಿಯುತ್ತಿದ್ದ ಮನೋಹರನೇ ನನ್ನ ಗಂಡ ಎಂದು ಕೊಳ್ಳುತ್ತಾಳೆ. ಮನಸ್ಸಿನಲ್ಲಿ ಮದುವೆ ಮಾಡಿಕೊಂಡ ಗಂಡನೇ ನಿಜವಾದ ಗಂಡ. ಎಂದು ಮನೋಹರನ ಬಗ್ಗೆ ಅಭಿಮಾನ ಪಡುತ್ತಾಳೆ. ಮನೋಹರನ ಹೆಂಡತಿಗೆ ತೃಪ್ತಿಯನ್ನು ಹೊಂದಿ ಸರ್ವಸ್ವವನ್ನು ಅವನಿಂದಲೇ ಬಯಸುತ್ತಾಳೆ. ಮನೋಹನ ಹೆಂಡತಿ ಮಕ್ಕಳಾಗದೇ ಇದ್ದದ್ದು ಅವನು ಆಕೆಯ ಬಗ್ಗೆ ನಿರಾಸೆ ಹೊಂದಿದ್ದು, ಸಹಾಯಕ ಅಂಶಗಳಾಗಿ ಕೆಲಸಮಾಡುತ್ತವೆ. ನನ್ನ ಬಯಕೆಗೆ, ನನ್ನ ಚಿಂತೆಗೆ, ನನ್ನ ನೋವಿಗೆ, ನನ್ನ ಪ್ರಾಮಾಣಿಕತೆಯೇ ನನ್ನ ನಗೆಗೆ ಜೀವಂತಿಕೆಯ ಅರ್ಥವನ್ನು ತಂದವನೇ ಅವನು, ಅದನ್ನು ನಾನು ಕಸಿದುಕೊಂಡಿರಬಹುದೆಂದು ಅನ್ನಿಸಿದರೂ ನನಗೆ ಲಭಿಸಿದೆ ಎನ್ನುವ ತೃಪ್ತಿಯಿದೆ ಎನ್ನುವ ನಿರ್ಧಾರಕ್ಕೆ ಬರುತ್ತಾಳೆ. ದಿನಾಲೂ ರೋಗದಿಂದ ನರಳಿನರಳಿ ಹಿಂಸೆಯನ್ನು ಅನುಭವಿಸುತ್ತಿರುವ ಗಂಡನಿಗೆ ಮುಕ್ತಿ ದೊರೆಕಿಸಿಕೊಡುವ ತೀರ್ಮಾನಕ್ಕೆ ಬರುತ್ತಾಳೆ. ಇಂದು ಗಂಡ ಇದ್ದರೂ ಸರಿ, ಇಲ್ಲದಿದ್ದರೂ ಸರಿ ನನಗೆ ಬೇಕಾದದ್ದು ಮನೋಹರನಿಂದ ಸಿಕ್ಕಿದೆ ಎಂದು ಕೊಳ್ಳುತ್ತಾಳೆ. ಗಂಡನಿಗೆ ಆಹಾರದಲ್ಲಿ ವಿಷ ಹಾಕಿ ಕೊಟ್ಟಾಗ ಅದನ್ನು ಮನೋಹರ ಕುಡಿದು ಸಾಯುತ್ತಾನೆ, ಕಥಾನಾಯಕಿಯ ಮೈ ಮತ್ತು ಮನಸುಗಳಲ್ಲಿ ತುಂಬಿಕೊಂಡ ಮನೋಹರನ ಸಾವು ಆಕೆಗೆ ನಿಜವಾದ ವೈಧವ್ಯತೆಯನ್ನು ತಂದಿದೆ. ಮನದ ಗಂಡನ ಮರಣದಿಂದ ಆಕೆ ಜರ್ಝರಿತಳಾಗುತ್ತಾಳೆ. ಅಸ್ತಿತ್ವವಾದ ಮತ್ತು ಮನಶ್ಯಾಸ್ತ್ರದ ಅಂಶಗಳು ಈ ಕಥೆಯಲ್ಲಿ ಬಂದಿವೆ.

'ಇಕ್ಕಳ' ಕಥೆಯು ಗಂಡ ಹೆಂಡತಿ ಇಬ್ಬರೂ ನೌಕರಿಮಾಡಿ ಜೀವನ ನಡೆಸಬೇಕೆಂಬ ಮಧ್ಯಮ ವರ್ಗದ ಜನರ ಆಲೋಚನೆಗಳಿಗೆ ಇದರಿಂದ ಆಗಬಹುದಾದ ಅನಾಹುತಗಳನ್ನು ಕುರಿತು ಹೇಳುತ್ತದೆ. ಈ ಕಥೆಯಲ್ಲಿ ಬರುವ

'ಉಜ್ವಲ್' ಉಪನ್ಯಾಸಕಿಯಾಗಿ ಕೆಲಸಮಾಡುತ್ತಿರುತ್ತಾಳೆ. ಈಕೆಯ ಗಂಡನದು ದೂರದ ಊರಿನಲ್ಲಿ ಉದ್ಯೋಗ ಇವರಿಬ್ಬರ ನಡುವಿನ ಭಾವನಾತ್ಮಕ ಸಂಬಂಧ ಗಟ್ಟಿಯಾಗಿರುವುದಿಲ್ಲ. ಜೀವನಕ್ಕೆ ಅವಶ್ಯಕವಾಗಿ ಬೇಕಾದ ಸಹಕಾರ ಹೊಂದಾಣಿಕೆ ಗುಣಗಳು ಇವರಲ್ಲಿ ಕಂಡು ಬರುವುದಿಲ್ಲ. ಗಂಡನ ಸಣ್ಣತನಗಳು ಒಂದೊಂದಾಗಿ ತಿಳಿದರೂ ಉಜ್ವಲಾ ಸಹಿಸಿಕೊಳ್ಳುತ್ತಾಳೆ. ಯಾಂತ್ರಿಕ ಜೀವನ ನಡೆಸುತ್ತಾಳೆ. ಕಥೆಗಾರನಿಗೆ ಸಮಸ್ಯೆಗಳಲ್ಲಿ ಬದುಕುತ್ತಿರುವ ಉಜ್ವಲಾಳಿಗೆ ಕನಿಕರ ಬರುತ್ತದೆ. ಸಹಾಯ ಮಾಡಲು ಸಿದ್ದನಾಗುತ್ತಾನೆ. ಇದನ್ನೆಲ್ಲಾ ಗುಮಾನಿಯಿಂದ ನೋಡಿದ ಆಕೆಯ ಗಂಡನಿಗೆ ಅನುಮಾನ ಬಂದು ವಿವಾಹ ವಿಚ್ಛೇದನ ನೀಡುತ್ತಾನೆ. ಆಗ ಆಕೆಯ ಬದುಕು ಇನ್ನಷ್ಟು ಕಷ್ಟಮಯವಾಗುತ್ತದೆ. ಇಂತಹ ಸಂದರ್ಭದಲ್ಲಿ ನೈತಿಕ ಬೆಂಬಲ ನೀಡಬೇಕಾದದು ಕಥೆಗಾರನ ಜವಾಬ್ದಾರಿ. ಆದರೆ ಹೆಂಡತಿಯ ಸಂಶಯ, ಸಮಾಜದ ಮಾತಿಗೆ ಹೆದರಿ ಹಿಂಜರಿಕೆ, ತೊಳಲಾಟವನ್ನೂ ಅನುವಾದಿಸುತ್ತಾನೆ. ಒಟ್ಟಿನಲ್ಲಿ ಕಥೆಗಾರ, ಉಜ್ವಲಾ, ಆಕೆಯ ಗಂಡ ಕಥೆಗಾರನ ಹೆಂಡತಿ, ಎಲ್ಲರೂ ಅನುಮಾನದ ಇಕ್ಕಳದಲ್ಲಿ ಸಿಕ್ಕು ಮಾನಸಿಕ ತೊಳಲಾಟವನ್ನು ಅನುಭವಿಸುತ್ತದೆ.

'ಹೆಣಗಳು ಸಾಯುವುದಿಲ್ಲ' ಎನ್ನುವ ಕಥೆಯಲ್ಲಿ ಸುಮಾರು ಸಂಖ್ಯೆ ಹೆಣಗಳ ಬಗ್ಗೆ ಕಥೆಗಾರರು ಹೇಳುತ್ತಾರೆ. ಹೆಣಗಳು ಅಂದರೆ ಸಾಯಲು ಪ್ರಮುಖವಾದ ಕಾರಣಗಳನ್ನು ಕಥೆಗಾರರು ಇಲ್ಲಿ ನೀಡುತ್ತಾರೆ. ಈ ಕಥೆಯಲ್ಲಿ ಸೂತ್ರ ಬದ್ದತೆಯಾಗಲೀ, ಕ್ರಮಬದ್ಧತೆಯಾಗಲೀ ಕಂಡು ಬರುವುದಿಲ್ಲ. ಆದರೆ ಶ್ರೇಷ್ಠ ಚಿಂತನೆಯ ಮಾತುಗಳನ್ನು ಕಥೆಗಾರರು ಹೇಳುತ್ತಾರೆ. ಸಾವನ್ನು ಸ್ವೀಕರಿಸಲು ಒಪ್ಪದ ದಿನವೇ ಅವರ ಸಾವು ಇನ್ನೂ ತೀವ್ರತರವಾಗಿ ಸಾಗುವ ಕ್ರಿಯೆಯಾಗುತ್ತಾರೆ ಎನ್ನುತ್ತಾರೆ. ಸೊಲ್ಲಾಪುರದ ಕೆರೆಯಲ್ಲಿ ಸಿಕ್ಕ ಗೋವಿಂದನ ಹೆಣದ ಹಿಂದೆ ಅವನ ಹೆಂಡತಿ ಮತ್ತು ಹಾಲಗೇರಿ ನಿರಂಜನ ಸ್ವಾಮಿಗಳ ಸಂಬಂಧವಿದೆ. ಪ್ರಭಾವತಿಯ ಅಣ್ಣ ಹೆಸರಾಂತ ವೈದ್ಯ ಮತ್ತು ಮನೆ ಕೆಲಸದಾಕಿಯ ಹೆಣಗಳ ಹಿಂದೆ ಅನೈತಿಕ ಸಂಬಂಧವಿದೆ. ಮನೆತನದ ಗೌರವದ ಪ್ರಶ್ನೆಯಿದೆಂದು ಹೇಳುವ ಕಥೆಗಾರರು ಅದಕ್ಕೆ ಕಾರಣಗಳನ್ನು ನೀಡುತ್ತಾರೆ. ಗಣಪತಿಯ ಕೈ ಮುರಿದ ಅಪಶಕುನವೇ ಸಾವಿಗೆ ಕಾರಣವೆಂದು ತಾಯಿ ಮುಗ್ಧವಾಗಿ ನಂಬಿರುತ್ತಾಳೆ. ಆದರೆ ಕಥೆಗಾರನ ಚಿಕ್ಕಮ್ಮ ಆಹಾರದೊಡನೆ ವಿಷಹಾಕಿದ ಕಾರಣ ಅಪ್ಪ ಸತ್ತಿರುತ್ತಾನೆ. ಅಜ್ಜ ಇಟ್ಟು ಕೊಂಡಿದ್ದ ಗದಿಗೆಮ್ಮನ ಹೆಣ, ಆಕೆಯ ತಂಗಿ ಗಂಗವ್ವನ ಹೆಣ, ಕುಡಿದು ಸತ್ತ ಮಾವನ ಹೆಣ, ಎಲ್ಲರಿಂದಲೂ ಸೇವೆ ಮಾಡಿಸಿಕೊಂಡು ಸತ್ತ ಚೆನ್ನಮಲ್ಲಜ್ಜನ ಹೆಣ, ಹೆಂಡತಿಯನ್ನು ಬಡಿದು ಬೇರೆ ಕೋಣೆಯೊಳಗೆ ಮಲಗಿ ಕೊಂಡಿದ್ದ ವರ್ಣಂಕರ್ ಹೆಣ, ಹೀಗೆ ನಾನಾ ರೀತಿಯ ಹೆಣಗಳು ಬಗ್ಗೆ ಹೇಳುತ್ತಾ ಹೋಗುತ್ತಾರೆ. ಕೊನೆಗೆ ಇವೆಲ್ಲಕ್ಕಿಂತ ಇಂಟ್ರೆಸ್ಟಿಂಗ್ ಹೆಣ ನನ್ನದೇ ಅಂದ್ರೆ ನೀವು ಆಶ್ಚರ್ಯ ಪಡಬಾರದು ಎಂದು ಹೇಳುತ್ತಾರೆ. ನಮ್ಮ ಬದುಕು ಸುಖ ಸಂತೋಷಗಳನ್ನು ಅನುಭವಿಸದೇ ದೊರಕಲಾರದ್ದಕ್ಕೆ ಬೆನ್ನು ಹತ್ತಿ, ತೃಪ್ತಿ ಹೊಂದದ ಮನೋಭಾವನೆಗಳನ್ನು ಬೆಳೆಸಿಕೊಂಡು ಚಡಪಟಿಕೆಗಳಲ್ಲಿಯೇ ಕಾಲ ನೂಕುತ್ತಿರುವ ನಾವುಗಳು ದಿನಾಲೂ ಸಾಯುವುದರಿಂದ ನಾವು ಜೀವಂತ ಹೆಣಗಳಾ ಎಂಬಿದು ಪಟ್ಟಣಶೆಟ್ಟರ ಅಭಿಪ್ರಾಯವಾಗಿದೆ. ಡಾ. ಬಸವರಾಜ ಸಾದರ ಅವರು ಅಭಿಪ್ರಾಯ ಪಡುವ ಹಾಗೆ, ''ಹೆಣದ ಹೆರಿನ್ಯಾಗ ಬದುಕಿನ ರಹಸ್ಯ ಭೇದಿಸುತ್ತಾ ಅದರೊಳಗೆ ಸ್ಥಿತಿ-ಲಯ ಎರೆಡೂ ಕ್ರಿಯೆಗಳ ಸ್ವರೂಪ ರೆಂಗಿರುತೈತಿ ಅಂತನ್ನೂದನ್ನ ಸೂರೋ ಈ ಕತಿ ಒಂದು ಅಪ್ಪಟ ನವ್ಯ ಮಾದರಿ ಕತೀ ಅಂತ ಹೇಳಬೋದು.''[೪೪]

ಈ ಸಂಕಲನದ ಆರನೆಯ ಕಥೆ ನೀನು ಕತೆ ಬರಿಬೇಕಂತ ನಾನಾ ಕೂದಲಾಕತ್ತರಿಸೇನಿ ಈ ಕಥೆಯು ಹಾಸ್ಯ ಪ್ರಧಾನವಾಗಿದ್ದು, ಲವಲಿವಿಕೆಯಿಂದ ಓದಿಸಿಕೊಂಡು ಹೋಗುತ್ತದೆ. ಈ ಕಥೆಯಲ್ಲಿ ಹುಡುಗಿಯೊಬ್ಬಳು ಕಥಾ ನಾಯಕನಿಗೆ ಕಥೆ ಬರೆಯಲು ಸವಾಲು ಹಾಕುತ್ತಾಳೆ. ಆದರೆ ಕಥೆಗಾರ ನಾನು ಕವಿತೆ ಬರೆಯುವವ, ಕಥೆ ಬರೆಯುವುದಿಲ್ಲ ಎಂದು ನಿರಾಕರಿಸುತ್ತಾನೆ. ಕಥೆಗಾರನಾಗಲು ಒಪ್ಪದೇ ತಾನೂ ಒಂದು ಕಡೆಯಲ್ಲಿ ಸಿಕ್ಕು ಬೀಳುತ್ತಾನೆ. ಕಥೆಯೊಳಗೆ ಹಲವಾರು ಕಥೆಗಳನ್ನು ಹೇಳುತ್ತಾನೆ. ಹಾಸ್ಯ ಮಿಶ್ರಿತ ವಿಡಂಬನೆಯೊಂದಿಗೆ ಸಾಮಾಜಿಕ, ರಾಜಕೀಯ, ವಿಮರ್ಶೆ ಮಾಡುತ್ತಾನೆ. ತನ್ನ ಮತ್ತು ಕಾಲೇಜಿನ ಪ್ರಿನ್ಸಿಪಾಲರ ಸಂಬಂಧದ ಕಥೆಯನ್ನು ಹೇಳುತ್ತಾನೆ. ಇತ್ತಿತ್ತಲಾಗಿ ಕೂದಲು ಉದರಾಕ ಹತ್ಯವು ತುದೀಗ ಜಡಿ ತಿಳ್ಳಿಗ ಆಗಾಕ ಹತ್ತಿತು ಅದಕ್ಕೆ ಕತ್ತರಿಸಿದೆ. ಅಂತ ಸತ್ಯ ಹೇಳುವ ಹುಡುಗಿ ಕಥೆಗಾರನನ್ನು ಹುಚ್ಚನನ್ನಾಗಿ ಮಾಡುತ್ತಾಳೆ. ವಿನೋದ ಭರಿತೆ ವಿಮರ್ಶೆಯೇ ಈ ಕಥೆಯ ಮೂಲ ಬಂಡವಾಳವಾಗಿದೆ. ಕಥೆಗಾರ ಪ್ರಹ್ಲಾದ ಅಗಸನ ಕಟ್ಟಿಯವರು ಇಲ್ಲಿನ ಕಥೆಗಳನ್ನು ಕುರಿತು ಹೀಗೆ ಹೇಳಿದ್ದಾರೆ. ಒಟ್ಟು ''ಆರು ಕಥೆಗಳಲ್ಲಿ ಪಟ್ಟಣಶೆಟ್ಟರು ಬಹಳ ನಿರಾಯಾಸವಾಸಿ, ಯಾವ ಕಸರತ್ತೂ ಇಲ್ಲದೆ ಓದುವವನಿಗೆ ಸಂವಹನದ ಯಾವ ತೊಡುಕೂ ಬಾರದಂತೆ ಕಥೆಗಳನ್ನು ಹೆಣೆದಿದ್ದಾರೆ. ಧಾರವಾಡದ ಪ್ರಾದೇಶಿಕ ಭಾಷೆ ಅಪರೂಪದ ಶಬ್ಧಗಳು, ನುಡಿಗಟ್ಟುಗಳು, ನಾಣ್ಣುಡಿಗಳು ಇಲ್ಲಿ ಗಮನ ಸೆಳೆಯುತ್ತವೆ. ''[೪೭]

ಒಟ್ಟಾರೆಯಾಗಿ ಇಲ್ಲಿನ ಕಥೆಗಳು ಸಮಾಜದ ಅನೈತಿಕ ಸಂಬಂಧ, ಕಾಮ ಮನುಷ್ಯ ಬದುಕಿನ ಹೆಣವಾಗುವುದು ಸಾವುಗಳ ಬಗ್ಗೆ ವಿಷಯವಸ್ತುಗಳನ್ನು ಒಳಗೊಂಡಿದ್ದು ಕಥೆಯನ್ನು ಹೇಳುವ ಶೈಲಿಯಿಂದಾಗಿ ಕುತೂಹಲಕಾರಿಯಾಗಿ ಓದಿಸಿಕೊಂಡು ಹೋಗುವಲ್ಲಿ ಯಶಸ್ವಿಯಾಗುತ್ತವೆ.

**೨. ಹಕ್ಕಿಗಳು**

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಎರಡನೆಯ ಕಥಾ ಸಂಕಲನವೇ ಈ ಹಕ್ಕಿಗಳು' ೨೦೦೧ ರಲ್ಲಿ ಅನನ್ಯ ಪ್ರಕಾಶನ ಧಾರವಾಡದಿಂದ ಪ್ರಕಟವಾಯಿತು. ಈ ಕೃತಿಯಲ್ಲಿ ಒಟ್ಟು ಏಳು ಕಥೆಗಳಿವೆ. ಕಥೆಗಳನ್ನು ಬರೆದ ಸಂದರ್ಭಗಳನ್ನು ಮತ್ತು ಅದರ ಉದ್ದೇಶಗಳನ್ನು ಕಥೆಗಾರರು ಮುನ್ನುಡಿಯಲ್ಲಿ ಹೇಳಿದ್ದಾರೆ. ಕಥೆಗಳು ವಸ್ತು ಮತ್ತು ಉದ್ದೇಶಗಳ ದೃಷ್ಟಿಯಿಂದ ಒಂದಕ್ಕಿಂತ ಒಂದು ಭಿನ್ನವಾಗಿವೆ. ಈ ಕೃತಿಯನ್ನು ಅವರ ಆತ್ಮೀಯ ಗೆಳೆಯರಾಗಿದ್ದ ಶ್ರೀಕೃಷ್ಣ ಆಲನಹಳ್ಳಿಯವರಿಗೆ ಅರ್ಪಿಸಲಾಗಿದೆ.

ಕಳೆದು ಹೋದ ಕಥೆ ಈ ಕೃತಿಯಲ್ಲಿನ ಮೊದಲ ಕಥೆಯಾಗಿದೆ. ೦೨.೦೭.೧೯೯೩ ರಲ್ಲಿ ಮಗ 'ಸಮುದ್ರ'ನಿಗೆ ಹೇಳಿದ ಕಥೆ ಇಲ್ಲಿ ಅಕ್ಷರ ರೂಪವನ್ನು ಪಡೆದು ಕೊಂಡಿದೆ. ಇದು ಮಕ್ಕಳ ಕಥೆಯಂತಿದ್ದರೂ ನಮ್ಮ ಸಾಹಿತ್ಯಕ ವ್ಯಕ್ತಿತ್ವವನ್ನು ಬಿಂಬಿಸುತ್ತದೆ. ಮಕ್ಕಳಿಗೆ ಹೇಳುವ ಕಥೆಗಳಲ್ಲಿ ಮನರಂಜನೆಯ ಜೊತೆಗೆ ವಿಚಾರ ಪ್ರಚೋದನೆಯೂ ಸಹಜವಾಗಿ ಸೇರಿರಬೇಕೆಂಬುದು ಲೇಖಕರ ಅಭಿಪ್ರಾಯವಾಗಿದೆ. ಮಗ 'ಸಮುದ್ರ'ನಿಗೆ ಈ ಕಥೆ ಹೇಳಿದರೂ, ಕಥೆಯಲ್ಲಿ ಮಗಳೊಂದಿಗೆ ಸಂವಾದ ನೆಡೆಸಿದ್ದಾರೆ. ತಾವು ನಿರೂಪಕರಾಗಿ ಒಂದು ಪಾತ್ರವಾಗಿ ಇಲ್ಲಿ ಕಾಣಿಸಿಕೊಂಡಿದ್ದಾರೆ. ನನ್ನ ಕತಿ ಕಳೇದು ಹೋಗೇತಿ ಎಂದು ಮಗಳೊಂದಿಗೆ ಆರಂಭವಾಗುತ್ತದೆ. ಕಥೆಯ ಹುಡುಕಾಟದ ಜೊತೆಗೆ ಜೀವನದ

ಹುಡುಕಾಟವು ನಡೆಯುತ್ತದೆ. ಕಥೆ ಬೇಡುವ ಮಗಳಿಗೆ ಕಥೆಯನ್ನು ಹಿತ್ತಲಲ್ಲಿ ಹುಡುಕು, ಪುಸ್ತಕಗಳಲ್ಲಿ ಹುಡುಕು ಖಾತ್ರಿಯಾಗಿ ಅದು ಸಿಕ್ಕೇ ಸಿಗುತ್ತದೆ. ಅದು ಎಲ್ಲಿಯೂ ಹೋಗಲು ಸಾಧ್ಯವಿಲ್ಲ ಎನ್ನುವ ಸಾಂತ್ವಾನದ ಮಾತುಗಳು ಆಕೆಯಲ್ಲಿ ಭರವಸೆಯನ್ನು ಹುಟ್ಟಿಸುತ್ತವೆ. ಕನಸಿನಲ್ಲಿ ಹುಡುಕು ಸಿಗಬಹುದು ಎಂದು ಹೇಳುವ ಲೇಖಕರು ಜೀವನದಲ್ಲಿ ಅಮೂಲ್ಯವಾದುದನ್ನು ಕಳೆದು ಕೊಂಡರೂ ಮತ್ತೆ ಅದನ್ನು ಹುಡುಕಿ ದಕ್ಕಿಸಿಕೊಳ್ಳುವ ಪ್ರಕ್ರಿಯೆ ನಿರಂತರವಾಗಿ ನೆಡೆಯಬೇಕು ಎಂದುಹೇಳುತ್ತಾರೆ. ಆಶಾವಾದಿತನವೇ ಜೀವಂತ ಬದುಕಿನ ಲಕ್ಷಣವಾಗಿದೆ. ಕತಿ ಕಳೇದು ಕೊಂಡು ಮಗಳು ಹುಡುಕುವಲ್ಲಿ ಪ್ರತಿಸಲ ಸೋತಾಗಲೂ ಅವಳಿಗೆ ಸಿಗುತ್ತದೆಯೆಂಬ ನಂಬಿಕೆ ಹುಟ್ಟಿಸಿ ಹುಡುಕಲು ತೊಡಗಿಸುತ್ತಾರೆ. ಬದುಕಿನ ಬಗ್ಗೆ ಛಲ ಮತ್ತು ನಂಬಿಕೆಗಳು ಅವಶ್ಯವಾಗಿ ಬೇಕು ಎನ್ನುತ್ತಾರೆ. ಮಗಳಿಗೆ ಪಾಠ ಹೇಳಿ ಕೊಡುವ ಶಿಕ್ಷರನ್ನು ಕುರಿತು ಹೇಳುತ್ತಾ ಕಣ್ಣು ತುಂಬಾ ರಾತ್ರಿ ತಪ್ಪಿಸಿಕೊಂಡ ನಿದ್ದೆಗಳು, ತಲೆಯಮೇಲೆ ಕನಸಿನ ಮೂಟೆಗಳು ಬಗಲಾಗ, ಎದಿಮ್ಯಾಲೆ ಮತ್ತಗೆ ಒರಗಿದ ವರ್ತಮಾನಗಳು, ಟೀಚರ್ ಜೀವಂತ ಕಲೆ ಹಂಗ ಕಂಡರು ನನಗೆ ಎನ್ನುತ್ತಾರೆ. ಈ ಜಗದೊಳಗೆ ಒಬ್ಬೊಬ್ಬರ ಜೀವನವೂ ಒಂದೊಂದು ವಿಚಿತ್ರ ಕಥೆಯಾಗಿದೆಯೆಂದು ಲೇಖಕರು ಭಾವಿಸಿದ್ದಾರೆ. ಕತೀ ತೋರಿಸುತ್ತೇನೆಂದು ಟೀಚರ್ ಕರೆದುಕೊಂಡು ಹೋಗಿ ಕತ್ತೆಯನ್ನು ತೋರಿಸುತ್ತಾರೆ. ಈ ದೇಶದೊಳಗೆ ಕತೆಯಾಗದೇ ತುತ್ತೂ ಎಲ್ಲೂ ಸಿಗದು. ಬದುಕು ಭಾರ ಅನ್ನಿಸಿದರೂ ಅದನ್ನು ಹೋರುವುದನ್ನು ರೂಢಿಸಿಕೊಳ್ಳಬೇಕು. ಅನುಭವ ಪ್ರಪಂಚವನ್ನು ವಿಶಾಲವಾಗಿಸಿಕೊಳ್ಳಬೇಕು. ಹೇಗಾದರೂ ಸರಿ ಬದುಕವುದನ್ನು ಕಲಿಯಬೇಕೆಂದು ಅಭಿಪ್ರಾಯ ಪಡುತ್ತಾರೆ. ಬದುಕಲು ಒಳ್ಳೇಯ ತನದ ಜೊತೆಗೆ ಭಂಡತನವೂ ಬೇಕು, ಏಕೆಂದರೆ ಸಮಾಜ ವ್ಯಾಧಿಗ್ರಸ್ಥವಾಗಿದೆ ಎನ್ನುತ್ತಾರೆ. ಕಥೆ ಹುಡುಕಲು ಬಂದು ಕತ್ತೆಯನ್ನು ಕಂಡು ಅದಕ್ಕೂ ನಮಗೂ ಇರುವ ಸಾಮ್ಯಗಳನ್ನು ಹೇಳುತ್ತಾರೆ.

ಈ ಕಥಾ ಸಂಕಲನದ ತಲೆಬರಹವಾಗಿರುವ 'ಹಕ್ಕಿಗಳು' ಕಥೆಯ ಲೇಖಕರು ತಮ್ಮ ಬಾಲ್ಯದಲ್ಲಿ ಜರುಗಿದ ಘಟನೆಗಳನ್ನು ಕುರಿತು ಹೇಳುವಂತಿದೆ. ಕೆಳಗೇರಿಯ ಉಳಮ್ಮ ಗಂಡ ಸತ್ತರೂ ಚಿಂತೆಯಿಲ್ಲದೆ ಬದುಕುವುದು. ಮಕ್ಕಳಿಲ್ಲದ ಕಾರಣ ಗುರುಪಾದಪ್ಪನನ್ನು ದತ್ತಕ ತೆಗೆದು ಕೊಳ್ಳುತ್ತಾಳೆ. ಅಂಗಡಿ ಜಮೀನಿನ ಜವಾಬ್ದಾರಿಗಳನ್ನು ಅವನ ಮೇಲೆ ಹಾಕುತ್ತಾಳೆ. ಅಂಗಡಿಯ ಕಳೆ ಹೆಚ್ಚಿದಂತೆ, ಉಳಮ್ಮನ ಮನಸ್ಸಿನಲ್ಲಿ ರಸಿಕ ಶಾಂತಿ ಹೆಚ್ಚುತ್ತದೆ. ಏನೇ ಆದರೂ ಮನಸ್ಸು ರಸಮಯವಾಗಿದ್ದರೆ ತಾನೇ ಬದುಕಿಗೊಂದು ಅರ್ಥ, ಗುರುಪಾದಪ್ಪ ಮಾವನೊಂದಿಗೆ ಊರಿಗೆ ಹೋಗಿ ಬರುವರೆಗಿನ ನಿಸರ್ಗ ಸೌಂದರ್ಯ ಸುಂದರವಾಗಿ ಚಿತ್ರಿತವಾಗಿದೆ. ದಾರಿಯಲ್ಲಿರುವ ಹನುಮಂತದೇವರ ಪಾದುಕೆಗಳು ಚರ್ಮದಿಂದ ಮಾಡಿದ್ದು, ದೇವರು ಅವುಗಳನ್ನು ಹಾಕಿಕೊಂಡು ತಿರುಗಾಡಿದಾಗ ಅವು ಸವೆಯುತ್ತವೆ. ಎಂಬ ವಿಚಿತ್ರ ಸಂಗತಿ ತಳಿಯುತ್ತದೆ. ಉಪಾಸಿ ನಾಗಪ್ಪನ ಮಗಳು 'ಬಾಲಿಕ' ನಿರೂಪಕರಿಗೆ ಯಾರೂ ಇಲ್ಲದ ಸಮಯದಲ್ಲಿ ಮುತ್ತಿಡುವುದು. ಅವಳ ಸ್ಪರ್ಶ ಸುಖ ಹಿತವೆನ್ನಿಸುವುದು ಸುಪ್ತವಾಗಿರುವ ಸಹಜ ಕಾಮನೆಯನ್ನು ಹೇಳುತ್ತದೆ. ಕೊನೆಗೆ ಅವಳು ಬಸರಿಯಾಗಿ ಸಾಯುತ್ತಾಳೆ. ಉಪಾಸಿ ನಾಗಪ್ಪನೂ ಸತ್ತಾಗ ಉಳಮ್ಮ ಹಣೆಯ ಮೇಲಿನ ಕುಂಕುಮ ಅಳಿಸುತ್ತಾಳೆ. ಬದುಕಿನಲ್ಲಿಯ ಅನೈತಿಕ ಸಂಬಂಧಗಳನ್ನು ಬಯಲಿಗೆ ಹಾಕುವುದರೊಂದಿಗೆ ಕಥೆ ಮುಗಿಯುತ್ತದೆ.

‘ಉಲ್ಕಾಪಾತ’ ಕಥೆಯು ಲೇಖಕರು ಸುಮಾರು ಮೂವತ್ತು ವರ್ಷಗಳ ಹಿಂದೆ ಬರೆದ ಕಥೆಯಾಗಿದೆ. ಲೇಖಕರಿಗೆ ಆಪ್ತವಾದ ಬೆಚ್ಚನೆಯ ಹಸಿಹಸಿ ಭಾವನೆಗಳು ಕಥೆಯ ರೂಪ ತಾಳಿವೆ. ಶಶಿ ಮತ್ತು ಶಾಂತ ಕಥೆಯ ನಾಯಕ ನಾಯಕಿಯರು ಮದುವೆಗೆ ಮೊದಲು ಪರಸ್ಪರ ಪ್ರೇಮಿಗಳು, ಬೇರೆಯವರೊಂದಿಗೆ, ಶಾಂತಾಳ ಮದುವೆಯಾಗುತ್ತದೆ. ಆದರೆ ಮೊದಲ ಪ್ರೇಮ ಹಾಗೆಯೇ ಮುಂದುವರಿಯುತ್ತದೆ. ಮದುವೆಯಾದ ಕೆಲದಿನಗಳಲ್ಲಿ ಶಾಂತ ತನ್ನ ಹಳೆಯ ಪ್ರಿಯಕರನೊಂದಿಗೆ ಹನಿಮೂನ್ ಎನ್ನಬಹುದಾದಂತ ಪ್ರವಾಸ ಕೈಗೊಳ್ಳುತ್ತಾಳೆ. ಶಾಂತಾಳ ಮಾತು ಬಹಳ ಚುರುಕು ಒಮ್ಮೆ ಮುಗ್ಧಳಂತೆ ಕಂಡು ಬಂದರೆ ಇನ್ನೊಮ್ಮೆ ತತ್ವಜ್ಞಾನಿಯಂತೆ ಮಾತನಾಡುತ್ತಾಳೆ. ಕೆಲವು ಸಂದರ್ಭಗಳಲ್ಲಿ ಬದುಕನ್ನು ಬಂದಹಾಗೇ ಸ್ವೀಕರಿಸುವ ವಾಸ್ತವಾದಿಯಂತೆ ಕಂಡು ಬರುತ್ತಾಳೆ. ಅವಳಲ್ಲಿ ಧೈರ್ಯ ಜಾಸ್ತಿ, ಉದಕಮಂಡಲದ ಹತ್ತಿರದ ಒಂದು ಲಾಡ್ಜ್‌ನಲ್ಲಿ ಪ್ರಿಯಕರನೊಂದಿಗೆ ತಂಗಿದ್ದಾಗ ಆಕಸ್ಮಿಕವಾಗಿ ಗಂಡನ ಭೇಟಿಯಾಗುತ್ತದೆ. ಗಂಡನಿಗೆ ಸುಳ್ಳು ಹೇಳುತ್ತಾಳೆ. ಕೊನೆಗೆ ನಿಗೂಢ ರೀತಿಯಲ್ಲಿ ಕೊಲೆಯಾಗುತ್ತಾಳೆ. ಶಾಂತಾಳ ಜೀವನದಲ್ಲಿ ಶಾಂತಿ ದೊರೆಯಲಿಲ್ಲ. ಮದುವೆಯಾದರೂ ಪ್ರಿಯಕರನೊಂದಿಗೆ ಪ್ರವಾಸ ಮಾಡುವ ಹುಚ್ಚುತನ, ಅರ್ಥವಾಗಲಾರದ ಅರ್ಥಪೂರ್ಣ ಮಾತುಗಳು, ಅವಳ ವಿಚಿತ್ರವಾದ ಲವಲವಿಕೆಯ ವರ್ತನೆಗಳು, ಕಥೆಯನ್ನು ಓದಿಸಿಕೊಂಡು ಹೋಗುತ್ತವೆ. ಪ್ರೀತಿ ಪ್ರೇಮಗಳು ಕಡ್ಡಿಯ ಹಂದರವಾಗಿವೆ. ಶಾಂತಾಳ ದುರಂತ ಸಾವಿನೊಂದಿಗೆ ಕಥೆ ಮುಗಿಯುತ್ತದೆ.

‘ಜ್ವರಗ್ರಸ್ತ’ ಕಥೆಯು ನಮ್ಮ ವಿಚಾರಗಳು ಸಾಮಾಜಿಕ ವ್ಯವಸ್ಥೆ ರೋಗದಿಂದ ಬಳಲುತ್ತಿರುವ ರೀತಿಯನ್ನು ಕುರಿತು ಹೇಳುತ್ತದೆ. ಪ್ರಿನ್ಸಿಪಾಲರಾದ ಸದಾಶಿವಯ್ಯ ಸಂದರ್ಭ, ಸನ್ನಿವೇಶಗಳಿಗೆ ಸಿಕ್ಕಾಗ ತನ್ನ ಬಿಂದೊಂದೇ ಆದರ್ಶಗಳನ್ನು ಬಿಟ್ಟುಬಿಡುತ್ತಾನೆ. ಇದಕ್ಕೆ ಕಾರಣ ವ್ಯವಸ್ಥೆಯೇ ಆಗಿರುತ್ತದೆ. ಕಾಲೇಜಿನಲ್ಲಿ ಲಿಂಗಾಯತ, ಬ್ರಾಹ್ಮಣ ಉಪನ್ಯಾಸಕರ ನಡುವೆ ಜಗಳ ನಡೆಯುತ್ತದೆ. ಉತ್ಸಾಹಿ ಯುವಕ ಡಾ.ಶಿವಾನಂದ ಬುದ್ದಿವಂತ ಉಪನ್ಯಾಸಕ ಸಮಾಜವಾದಿ ಹಿನ್ನೆಲೆಯಿಂದ ಬಂದವನಾಗಿದ್ದ, ತನ್ನ ಕರ್ತವ್ಯದಿಂದ ಪರಿಸರದಲ್ಲಿ ಹೆಸರುವಾಸಿಯಾಗಿದ್ದ ತನ್ನ ಕೈಗೈ ಬಂದ ಮಗಳನ್ನು ಕೊಟ್ಟು ಅವನನ್ನು ಅಳಿಯನನ್ನಾಗಿ ಮಾಡಿಕೊಳ್ಳಬೇಕೆಂಬ ಆಸೆ ಪ್ರಾಂಶುಪಾಲ ಸದಾಶಿವಯ್ಯನವರದಾಗಿತ್ತು. ಆದರೆ ಶಿವಾನಂದ ಬೇರೊಬ್ಬ ಹುಡುಗಿಯೊಡನೆ ಮಾತನಾಡುವುದನ್ನು ಕಂಡು ಕರಗುತ್ತಾನೆ. ಸಮಾಜ ಸುಧಾರಣೆ, ಆರ್ಥಿಕ ಸಮಾನತೆಯ ಹಂಬಲದ ಡಾ. ಶಿವಾನಂದ ಕೇವಲ ಕಾಲೇಜಿನಲ್ಲಿ ಮಾತ್ರ ಉಪನ್ಯಾಸ ನೀಡದೆ ಸಮಾಜದ ನಡುವೆ ಸಕ್ರೀಯವಾಗಿ ಪಾಲ್ಗೊಳ್ಳುತ್ತಾನೆ. ಜ್ವರ ಬಂದು ಹಾಸಿಗೆಯ ಮೇಲಿದ್ದ ಸದಾಶಿವಯ್ಯ ಶಿವಾನಂದ ಅಳಿಯನಾಗಿ ದಕ್ಕಲಿಲ್ಲ. ಎಂಬ ಮಾನಸಿಕ ನೋವನ್ನು ಅನುಭವಿಸುತ್ತಾನೆ. ಅಳಿಯನಾಗದಿದ್ದರೂ ಚಿಂತೆಯಿಲ್ಲ, ಮಗನಾಗಿದ್ದರೂ ಅಭಿಮಾನದಿಂದ ಹೇಳಿಕೊಳ್ಳಬಹುದಾಗಿತ್ತು ಎಂದು ಹಲಬುತ್ತಾನೆ. ಆದರ್ಶ ಮತ್ತು ವಾಸ್ತವಗಳು ಸಂಪೂರ್ಣ ಭಿನ್ನವಾಗಿರುತ್ತವೆ. ಆದರ್ಶದಿಂದ ಬದುಕಲಾರದ ವ್ಯವಸ್ಥೆ ಯಾವಾಗಲೂ ಜ್ವರದಿಂದ ಬಳಲಿ ಸಾಯುತ್ತದೆ. ಎಂದು ಲೇಖಕರು ಈ ಕಥೆಯಲ್ಲಿ ಸೂಚ್ಯವಾಗಿ ಹೇಳಿದ್ದಾರೆ.

‘ನಾಯಕಿ’ ಕಥೆಯು ಹಲವು ರೀತಿಯ ಹೆಣ್ಣುಗಳ ವ್ಯಕ್ತಿತ್ವಗಳನ್ನು ಜೊತೆಗೆ ಗಂಡಿನ ಕುತೂಹಲ, ಆಸೆ, ಅನಿಸಿಕೆ, ನೋಡುವರೀತಿ, ಅನುಭವಿಸುವ ಪಾಡುಗಳನ್ನು ಕುರಿತು ಹೇಳುತ್ತದೆ. ತಾರುಣ್ಯದ ದಿನಗಳಲ್ಲಿ ನಾನು ಧಾರವಾಡದಲ್ಲಿ

ಬೆರಗುಗಣ್ಣುಗಳಿಂದ ಕಂಡಿದ್ದ ಸುಂದರಿಯರು ಕತೆಗಾರ್ತಿಯಲ್ಲಿ ಹಾಡುಗಾರ್ತಿಯರು, ನರ್ತಕಿಯರು, ನಟಿಯರು, ಏನೇನು ರೂಪಾಕಾರಗಳನ್ನು ಧರಿಸಿ ಏಕಾಕಾರ ಗೊಂಡು 'ನಾಯಿಕಿ' ಯಾಗಿದ್ದಾರೆಂದು ಲೇಖಕರು ಮುನ್ನುಡಿಯಲ್ಲಿ ಹೇಳಿದ್ದಾರೆ.

'ನಾಯಕಿ' ಯದು ಅರ್ಥವಾಗಲಾರದ ವಿಶಿಷ್ಟ ವ್ಯಕ್ತಿತ್ವ, ಹೆಣ್ಣನ್ನು ಸಮಾಜ ನೋಡುವ ದೃಷ್ಟಿಕೋನದಲ್ಲಿ ಮೇಲ್ನೋಟಕ್ಕೆ ಸತ್ಯ ಸೌಂದರ್ಯಗಳಂತೆ ಕಂಡರೂ, ಒಳಗಡೆ ಕಾಮದ ವಾಸನೆಯಿರುತ್ತದೆ. ಕಥೆಗಾರರು ರೂಪಲಾವಣ್ಯಗಳನ್ನು ಹೇಳುತ್ತಾ ಅವಳು ಇತ್ತೀಚೆಗೆ ಡಲ್ ಆಗಿದ್ದಾಳೆ.

ಆಕೆಯ ಮಗ ಅಪಘಾತದಲ್ಲಿ ತೀರಿದ್ದರಿಂದ ಎಂದು ವಿಚಾರಿಸಿದರೆ, ನಿಮ್ಮ ಆಸಕ್ತಿ ಬಹಳ ತೆಳುವಾಗಿದೆ ಎನ್ನುತ್ತಾರೆ. ಹೆಣ್ಣಿನ ಸೌಂದರ್ಯ, ಒಳ್ಳೆಯತನ, ದುಡುಕಿನ ಸ್ವಭಾವ, ನಾಟಕೀಯತೆ, ಕೆಟ್ಟತನ ಮುಂತಾದವುಗಳು ಜೀವನದಲ್ಲಿ ತಂದೊಡ್ಡಬಹುದಾದ ಪರಿಣಾಮಗಳು ಕಠೋರವಾಗಿರುತ್ತವೆ. ಕಥೆಗಾರರಿಗೆ ಆಕೆಯ ಬಗ್ಗೆ ಆಕ್ರೋಶವಿಲ್ಲ, ಆರೋಪವಿಲ್ಲ, ಆಕ್ಷೇಪವೂ ಇಲ್ಲ, ಆಕೆ ಎಲ್ಲವನ್ನೂ ಮೀರಿ ನಿಂತ ನಿಸ್ಸೀಮ ನಿಪುಣೆ ಎಂದು ಹೇಳುತ್ತಾರೆ.

ಅಗಮ್ಯ ಕಥೆಯು ೧೯೬೨ ರ ಪ್ರಜಾವಾಣಿ ದೀಪಾವಳಿ ವಿಶೇಷ ಸಂಚಿಕೆಗಾಗಿ ಬರೆದದ್ದು ಪಟ್ಟಣಶೆಟ್ಟರು ತಮ್ಮ ತಾಯಿಯ ಊರಾದ ಯಾದವಾಡದಲ್ಲಿ ಕೇಳಿದ ವಿಷಯವೇ ಕಥೆಯಾಗಿದೆ. ಕಥೆಯ ನಾಯಕ ಮಲ್ಲೇಶಿಗೌಡರ ಮನೆಯಲ್ಲಿ ಜೀತದಾಳು, ಎಲ್ಲಾ ಕೆಲಸಗಳನ್ನು ಜವಾಬ್ದಾರಿಯಿಂದ ಮಾಡುತ್ತಿದ್ದ ಇವನ ನಿಯತ್ತನ್ನು ಕಂಡು ಎಲ್ಲರಿಗೂ ಸಂತೋಷ, ಗೌಡರ ಮಗಳು ಕಮಲಳಿಗೆ ಇವನ ಮೇಲೆ ಆಸೆಯಾಗಿ ಗರ್ಭ ಧರಿಸುತ್ತಾಳೆ. ಮಲ್ಲೇಶಿ ಗಡಿಪಾರಾಗುತ್ತಾನೆ. ನಂತರ ಎಲ್ಲಿಯೋ ಅಭ್ಯಾಸಮಾಡಿ ಮಿಲ್ಟ್ರಿ ಸೇರುತ್ತಾನೆ. ಹದಿನೈದು ವರ್ಷಗಳ ನಂತರ ಊರಿಗೆ ಬಂದು ಜರುಗಿದ ಒಂದೊಂದೇ ಘಟನೆಗಳನ್ನು ತಿಳಿದುಕೊಳ್ಳುತ್ತಾನೆ. ಗೌಡರು ಮಗಳಿಗೆ ಮದುವೆ ಮಾಡುವುದು, ಮದುವೆಯಾದ ನಾಲ್ಕು ತಿಂಗಳಿಗೆ ಹೆಣ್ಣು ಮಗುವಿಗೆ ಜನ್ಮ ನೀಡುವುದು, ಬೀಗರು ಗೌಡರ ಮಗಳನ್ನು ಬಿಡುವುದು, ಗೌಡರ ಮಾನ ಹರಾಜಾಗುವುದು. ಕಮಲಿ ಮನೆಯವರಿಂದಲೂ ತಿರಸ್ಕೃತಗೊಂಡು ಕೂಲಿ ನಾಲಿ ಮಾಡಿಕೊಂಡು ಬದುಕುವುದೂ ತಿಳಿಯುತ್ತದೆ. ಊರಮುಂದಿನ ಹಳ್ಳಿಯಲ್ಲಿ ತನ್ನನ್ನು ಕಂಡು ನಕ್ಕ ಹುಡುಗಿ ತನ್ನ ಸಂತಾನದ ಫಲವೆಂದು ತಿಳಿದು ದುಃಖಿತನಾಗುತ್ತಾನೆ. ಇದರೊಂದಿಗೆ ಕಥೆ ಮುಗಿಯುತ್ತದೆ.

'ಕತ್ತಲೆ' ಪಟ್ಟಣಶೆಟ್ಟಿಯವರ ಅಪೂರ್ಣ ಕಾದಂಬರಿಯ ಒಂದು ಭಾಗ. ಸದ್ಯದ ಈ ಭಾಗದಲ್ಲಿ ಶಾಂತಿ ಕಥಾನಾಯಕಿ ತನ್ನ ಜೀವನದಲ್ಲಿ ಬಂದು ಹೋದ ಶೇಖರನೊಂದಿಗೆ ಮಾನಸಿಕ ಸಂವಾದ ಮಾಡುತ್ತಾಳೆ. ಗಂಡಸಿನ ಚಾಂಚಲ್ಯ ಪ್ರೇಮ ಇಲ್ಲಿ ವ್ಯಕ್ತವಾಗಿದೆ. ಅವನು ಕೆಟ್ಟವನೆಂದು ಗೊತ್ತಿದ್ದರೂ ಅವನೊಂದಿಗೆ ಕಳೆದ ಕಾಲದ ಸಂಬಂಧದಿಂದಾಗಿ ಅವನು ಮತ್ತೆ ಮತ್ತೆ ನೆನಪಿಗೆ ಬರುತ್ತಾನೆ. ಈಗ ಅವನ ಬಗ್ಗೆ ದ್ವೇಷವಿದೆ. ಅಂದು ಅವನಾಡಿದ ಪ್ರೇಮ ನಾಟಕದ ಮೋಸದ ಅರಿವು ಇಂದು ಗೊತ್ತಾಗಿದೆ. ನಂಬಿಸಿ ಕೈಕೊಡುವ ಪುರುಷರ ಬಗ್ಗೆ ಅಸಹನೆ ಇಲ್ಲಿದೆ. ಇದರಿಂದ ಹೆಣ್ಣು ಮಾನಸಿಕ ತುಮುಲಗಳಿಗೆ ಒಳಗಾಗಿ ನೋವು ಪಡುವ ವಿಷಯ ಇಲ್ಲಿದೆ. ಇದು ಅಪೂರ್ಣ ಕಾದಂಬರಿಯ ಭಾಗವಾದ ಕಾರಣ ಮುಂದಿನ ಕಥೆ ತಿಳಿಯುವುದಿಲ್ಲ.

ಒಟ್ಟಾರೆಯಾಗಿ ಈ ಕೃತಿಗಳಲ್ಲಿನ ಕಥಗಳ ಕಥಾವಸ್ತು ಕಥೆಗಾರರು ತಮ್ಮ ಜೀವನದಲ್ಲಿ ಕಂಡ, ಕೇಳಿದ, ವಿಷಯಗಳಾಗಿವೆ. ಲವಲವಿಕೆಯಿಂದ ಓದಿಸಿಕೊಂಡು ಹೋಗುವಲ್ಲಿ ಯಶಸ್ವಿಯಾಗುತ್ತವೆ.

**೩.೧.೩. ವಿಮರ್ಶಾ ಸಂಕಲನಗಳು**

ಸಾಹಿತ್ಯ ದೃಷ್ಟಿಯಂತೆ ಅದರ ವಿಮರ್ಶೆಯೂ ಕೂಡ ಸೃಜನಶೀಲ ಗುಣವನ್ನು ಬಯಸುತ್ತದೆ. ಅಂದರೆ ಒಂದು ಕೃತಿಯ ಅಂತರಂಗದ ವ್ಯವಸ್ಥೆಯನ್ನು ಗ್ರಹಿಸುವ ಕ್ರಮಗಳು ಮತ್ತು ಆ ಕೃತಿಯ ಪರಿಸರ ನಿಷ್ಠ ಅಧ್ಯಯನ ಸನ್ನಿವೇಷ, ಪಾತ್ರ ಚಿತ್ರಣ ಇವೆಲ್ಲವುಗಳಿಗೆ ಮಿಗಿಲಾಗಿ ಅದು ಬದುಕನ್ನು ಪ್ರತಿನಿಧಿಸುವ ಅಂಶವನ್ನು ವಿಮರ್ಶೆ ಎತ್ತಿ ಹೇಳಬೇಕು. ಪ್ರಾಯಶಃ ಇದನ್ನೇ ವಸ್ತುನಿಷ್ಠೆ ವಿಮರ್ಶೆ ಎಂದು ಹೇಳುವುದು. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಐದು ವಿಮರ್ಶಾ ಸಂಕಲನಗಳನ್ನು ಗಮನಿಸಿದಾಗ ಈ ಅಂಶಗಳು ಕಂಡು ಬರುತ್ತವೆ. ಒಟ್ಟಿನಲ್ಲಿ ಸಾಹಿತ್ಯವನ್ನೂ ಕುರಿತ ವಿಮರ್ಶೆ, ಸಾಹಿತ್ಯವನ್ನು ಆಧರಿಸಿದ ಸಾಂಸ್ಕೃತಿಕ ವಿಮರ್ಶಾ ಸಂಕಲದ ಹೂರಣವಾಗಿದೆ. ಪ್ರಸ್ತುತ ಐದು ವಿಮರ್ಶಾ ಸಂಕಲನಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ.

**೧. ಆಧುನಿಕ ಕನ್ನಡ ಹಿಂದಿಕಾವ್ಯ**

ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಮೊದಲನೆಯ ವಿಮರ್ಶಾ ಸಂಕಲನ ಆಧುನಿಕ ಕನ್ನಡ ಹಿಂದೀ ಕಾವ್ಯ ಆಗಿದೆ. ಧಾರವಾಡದಲ್ಲಿರುವ ಕರ್ನಾಟಕ ವಿಶ್ವವಿದ್ಯಾಲಯದ ಉಪನ್ಯಾಸ ಗ್ರಂಥಮಾಲೆಯ ಅಡಿಯಲ್ಲಿ ಪ್ರಸಾರಾಂಗದಿಂದ ಪ್ರಕಟಣೆ ಗೊಂಡಿದೆ. ಸಂಕಲನದ ಶೀರ್ಷಿಕೆಯೇ ಹೇಳುವಂತೆ ಆಧುನಿಕ ಕನ್ನಡ ಮತ್ತು ಹಿಂದೀ ಕಾವ್ಯಗಳ ತೌಲನಿಕ ವಿಮರ್ಶೆಯನ್ನು ಇಲ್ಲಿ ಮಾಡಲಾಗಿದೆ. ಎಪ್ಪತ್ತೆರೆಡು ಪುಟಗಳಿರುವ ಈ ಕೃತಿಯಲ್ಲಿ ನಾಲ್ಕು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಪೀಠಿಕೆ, ಮಹಾಕಾವ್ಯ, ಖಂಡಕಾವ್ಯ, ಭಾವಗೀತೆ, ನವ್ಯಕಾವ್ಯ ಎಂಬ ಭಾಗಗಳಿವೆ. ಕನ್ನಡ ಕಾವ್ಯಗಳೊಂದಿಗೆ ಹಿಂದೀ ಕಾವ್ಯಗಳನ್ನು ಹೋಲಿಕೆ ಮಾಡುವುದರ ಜೊತೆಗೆ ಎರಡೂ ಕಾವ್ಯಗಳಲ್ಲಿರುವ ಸಾಮ್ಯತೆಗಳನ್ನು ಗುಣಾವಗುಣಗಳನ್ನು ಭಿನ್ನತೆಗಳನ್ನು ವಿಶೇಷತೆಗಳನ್ನು ಕುರಿತು ಚರ್ಚಿಸಲಾಗಿದೆ. ''ಕನ್ನಡ ಮತ್ತು ಹಿಂದೀ ಭಾಷೆಗಳ ಆಧುನಿಕ ಸಾಹಿತ್ಯದ ಕೆಲವು ಸ್ಥೂಲ ಪರಿಚಯಾತ್ಮಕ ಮಾತುಗಳನ್ನು ನಾನು ಇಲ್ಲಿ ಹೇಳುತ್ತಿರುವೆನು. ವಿಮರ್ಶೆ ಅಥವಾ ಸ್ವಂತದ ಕಠಿಣ ನಿರ್ಣಯಗಳನ್ನು ಕೊಟ್ಟು ಗೊಂದಲ ಏರ್ಪಡಿಸುವುದು ನನ್ನ ಉದ್ದೇಶವಲ್ಲ.''[೬೬] ಎಂದು ಪಟ್ಟಣಶೆಟ್ಟರು ಬರಹದ ಉದ್ದೇಶ ಮತ್ತು ಇತಿಮಿತಗಳನ್ನು ಹೇಳಿದ್ದಾರೆ. ಈ ಪೀಠಿಕಾ ಭಾಗದಲ್ಲಿ ಹಿಂದೀ ಕಾವ್ಯದ ಸಂಕ್ಷಿಪ್ತ ಇತಿಹಾಸವನ್ನು ಹಿಡಿದಿಡುವ ಪ್ರಯತ್ನ ಇಲ್ಲಿದೆ. ಕನ್ನಡ ಸಾಹಿತ್ಯವನ್ನು ಅಧ್ಯಯನದ ದೃಷ್ಠಿಯಿಂದ ವಿಭಾಗಿಸಿ ಕೊಂಡಿರುವ ಹಾಗೆ, ಹಿಂದಿಯಲ್ಲೂ ವಿಭಾಗಿಸಿಕೊಳ್ಳಲಾಗಿದೆ. ಆದಿಕಾಲ ಅಥವಾ ವೀರಗಾಥಾಕಾಲ ಮಧ್ಯಕಾಲ ಅಥವಾ ಭಕ್ತಿಕಾಲ, ಶೃಂಗಾರ ಕಾಲ, ಅಥವಾ ರೀತಿಕಾಲ, ಮತ್ತು ಆಧುನಿಕ ಕಾಲವೆಂದು ಹಿಂದಿಯ ವಿದ್ವಾಂಸರು ವಿಭಜನೆ ಮಾಡಿಕೊಂಡಿರುವುದನ್ನು ಇಲ್ಲಿ ಹೇಳಲಾಗಿದೆ.

ಎರಡನೆಯ ಭಾಗವಾದ ಮಹಾಕಾವ್ಯ ಮತ್ತು ಖಂಡ ಕಾವ್ಯದಲ್ಲಿ ಹಳೆಗನ್ನಡ ಮತ್ತು ನಡುಗನ್ನಡದ ಕವಿಗಳಾದ ಪಂಪ, ರನ್ನ, ಜನ್ನ ಪೊನ್ನ, ಹರಿಹರ, ರಾಘುವಾಂಕ, ಕುಮಾರವ್ಯಾಸ, ರತ್ನಾಕರವರ್ಣಿ, ಚಾಮರಸ, ಮದ್ದಣ್ಣ

ಮೊದಲಾದ ಕವಿಗಳನ್ನು ಅವರ ಕಾವ್ಯಂಶಗಳನ್ನು ತಿಳಿಸಲಾಗಿದೆ. ಅವರೊಂದಿಗೆ ಹಿಂದಿಯ ಕವಿಗಳಾದ ಚಂದವರದಾಯಿ, ಜಗನಿಕ್, ಮಂಝುನ್, ಮಲ್ಲಿಕ್ ಮಹಮದ್ ಜಾಯಿಸಿ, ಉಸ್ಮಾನ್, ಗೋಸ್ವಾಮಿ, ತುಳಿಸಿದಾಸ್, ನಂದದಾಸ್, ಕೇಶವದಾಸ್, ಮೊದಲಾದ ಕವಿಗಳನ್ನು ಕಾವ್ಯಂಶಗಳನ್ನು ಪ್ರಸ್ತಾಪಿಸಲಾಗಿದೆ. ಪ್ರಾಚೀನ ಕಾವ್ಯಗಳಲ್ಲಿ ಕನ್ನಡ ಸಾಹಿತ್ಯ ಶ್ರೇಷ್ಠ ಮಟ್ಟದ್ದಾಗಿದೆ. ವಸ್ತು, ಶೈಲಿಗಳ ದೃಷ್ಠಿಯಿಂದ ಸತ್ವಯುತವಾಗಿದೆ, ಸಂಖ್ಯೆಯ ದೃಷ್ಟಿಯಿಂದ ವಿಫುಲವಾಗಿದೆ. ವೈವಿಧ್ಯತೆಯಿಂದ ಕೂಡಿದೆಯೆಂದು ವಿಮರ್ಶಕರು ತಿಳಿಸಿದ್ದಾರೆ. ಕನ್ನಡ ಸರ್ವೋದಯದ ಖ್ಯಾತ ಕವಿಗಳಾದ ಕುವೆಂಪು ಬೇಂದ್ರೆ ಅವರನ್ನು ಹಿಂದಿಯ ಮೈಥಲೀಶರಣ ಗುಪ್ತಾ ಮತ್ತು ಅಯೋಧ್ಯಾಸಿಂಹ ಉಪಾಧ್ಯಾಯ ಅವರೊಂದಿಗೆ ಹೋಲಿಕೆ ಮಾಡಿ ನೋಡಲಾಗಿದೆ.

ಮೂರನೆಯ ಭಾಗವಾದ 'ಭಾವಗೀತೆ' ದಲ್ಲಿ ಪಟ್ಟಣಶೆಟ್ಟರು ಹೇಳುವ ಹಾಗೆ ''ಕನ್ನಡ ಹಾಗೂ ಹಿಂದಿಯ ಆಧುನಿಕ ಭಾವಗೀತೆಯ ಮೂಲದಲ್ಲಿ ಅನುವಾದಗಳ ಪ್ರಭಾವ ಪ್ರಧಾನವಾಗಿದೆ. ಸಂಸ್ಕೃತ, ಬಂಗಾಲಿ ಇಂಗ್ಲೀಷ್ ಸಾಹಿತ್ಯದಲ್ಲಿರುವ ಅನೇಕ ಭಾವಗೀತೆಗಳು ಹಿಂದಿಗೆ ಅನುವಾದಗೊಂಡಿವೆ. ಕನ್ನಡದಲ್ಲಿ ಉತ್ತಮವಾದ ಭಾವಗೀತೆಗಳ ರಚನೆಯಾಗಿದೆ. ಭಾವಗೀತೆಗಳ ಚರಿತ್ರೆಯೂ ದೊಡ್ಡದಿದೆ. ಪಂಜೆಮಂಗೇಶರಾಯರು, ಚಂದ್ರಶೇಖರ ಕಂಬಾರ, ಚೆನ್ನವೀರ ಕಣವಿ, ದ.ರಾ.ಬೇಂದ್ರೆ ಜಿ.ಎಸ್. ಶಿವರುದ್ರಪ್ಪ ಮೊದಲಾದ ಕವಿಗಳು ಭಾರತೀಯ ಹರಿಶ್ಚಂದ್ರ, ಪ್ರತಾಪ್‌ನಾರಾಯಣ್, ಮಹಾವೀರ ಪ್ರಸಾದ್, ದ್ವಿವೇರಿ, ಶ್ರೀಧರ ಪಾಠಕ್, ಮೈಥಲೀಶರಣ ಗುಪ್ತ, ಮಹಾದೇವಿ ವರ್ಮಾ, ದಿನಕರ್, ಮಿಲಿಂದ್ ತ್ರಿಪಾಠಿ ಮುಂತಾದವರು ಉತ್ತಮ ಭಾವಗೀತಾ ರಚನಾಕರಾಗಿದ್ದಾರೆ. ಇವರ ಭಾವಗೀತೆಗಳ ಗುಣಲಕ್ಷಣಗಳನ್ನು, ವೈಶಿಷ್ಟತೆಗಳನ್ನು ಚರ್ಚಿಸಿ ಹಿಂದೀ ಕೋಮಲ ಭಾಷೆಯಾದ ಕಾರಣ ಪ್ರೀತಿ, ಸೌಂದರ್ಯ, ನೋವುಗಳ ಅಭಿವ್ಯಕ್ತಿಗೆ ಹೇಳಿಮಾಡಿಸಿದಂತೆ ರಚನೆಗೊಂಡಿವೆ. ಸಂಖ್ಯೆಯಿಂದ ನೋಡಿದರೂ ಕನ್ನಡಕ್ಕಿಂತ ಹೆಚ್ಚು ಭಾವಗೀತೆಗಳು ಹಿಂದಿಯಲ್ಲಿ ರಚನೆಯಾಗಿವೆ ಎಂದು ಹೇಳಿದ್ದಾರೆ.

ನಾಲ್ಕನೆಯ ಅಧ್ಯಾಯ 'ನವ್ಯಕಾವ್ಯ' ವಾಗಿದ್ದು ಹೆಚ್ಚು ವಿಮರ್ಶಾತ್ಮಕ ವಿವರಣೆಯಿಂದ ಕೂಡಿದೆ. ಸಿದ್ಧಲಿಂಗ ಪಟ್ಟಣಶೆಟ್ಟರು ಸ್ವತಃ ನವ್ಯ ಕವಿಗಳಾದ ಕಾರಣ ಪುಸ್ತಕದಲ್ಲಿ ಈ ಅಧ್ಯಾಯಕ್ಕೆ ಹೆಚ್ಚಿನ ಸ್ಥಾನ ಲಭಿಸಿದೆ. ಕನ್ನಡ ಮತ್ತು ಹಿಂದಿಯಲ್ಲಿ ಮೊದಲ ನವ್ಯಕಾವ್ಯ ಆರಂಭವಾಗಿದ್ದ ಕಾಲ ಸನ್ನಿವೇಷಗಳನ್ನು ಹೇಳಿದ್ದಾರೆ. ಕನ್ನಡಕ್ಕಿಂತ ಮೊದಲು ಹಿಂದಿಯಲ್ಲಿ ನವ್ಯಕಾವ್ಯ ಆರಂಭವಾಗಿದೆ. ೧೯೪೦ ರ ಸುಮಾರಿಗೆ ಹಿಂದೀ ಸಾಹಿತ್ಯದಲ್ಲಿ ಅಲ್ಲಲ್ಲಿ ಹೊಸಬಗೆಯ ರಚನೆಗಳು ಪ್ರಕಟವಾಗಿರುವುದನ್ನು ಗುರುತಿಸಬಹುದಾಗಿದೆ. ೧೯೪೩ ರಲ್ಲಿ ಅಜ್ಞೇಯ ಅವರು ಸಂಪಾದಿಸಿದ ಏಳುಜನ ಕವಿಗಳ 'ತಾರಾಸ್ತಕ್' ನಿಜಕ್ಕೂ ಹಿಂದಿಯಲ್ಲಿ ನವಗೀತೆಗಳ ಉಗಮಕ್ಕೆ ಕಾರಣವಾಗಿದೆ. ಕನ್ನಡದಲ್ಲಿ ೧೯೫೦ ರ ಸುಮಾರಿಗೆ ವಿನಾಯಕಕೃಷ್ಣ ಗೋಕಾಕರಿಂದ ನವ್ಯಕಾವ್ಯ ಆರಂಭವಾಯಿತು. ಮುಂದೆ ಗೋಪಾಲಕೃಷ್ಣ ಅಡಿಗರಿಂದ ಮಹತ್ವತವನ್ನು ಪಡೆದು ಕೊಂಡಿತು. ಅಡಿಗರು ನವ್ಯಕಾವ್ಯದ ಪ್ರಮುಖ ಕವಿಗಳಾಗಿ ಬೆಳೆದರು. ಐತಿಹಾಸಿಕವಾಗಿ ಕನ್ನಡದಲ್ಲಿ ಉಗಮವಾದ ನವ್ಯಕಾವ್ಯದ ಹಿನ್ನೆಲೆಗಳು ಅದಕ್ಕಿದ್ದ ಸಾಹಿತ್ಯಿಕ ಸಾಂಸ್ಕೃತಿಕ ಒತ್ತಡಗಳನ್ನು ಕುರಿತು ಹೇಳಲಾಗಿದೆ. ಅಡಿಗರಿಂದ ಹಿಡಿದು ಅನೇಕ ನವ್ಯಕವಿಗಳವರೆಗೆ ನವ್ಯಕಾವ್ಯ ಬೆಳೆದು ಬಂದ ಬಗೆಯನ್ನು ಅದು ಬೀರಿದ ಪ್ರಭಾವ ಪರಿಣಾಮಗಳನ್ನು, ನವ್ಯ ಕಾವ್ಯಕ್ಕೆ ಬಂದ ಪ್ರತಿಕ್ರಿಯೆಗಳನ್ನು ತಮ್ಮದೇ ಆದ

ಸರಳ ಶೈಲಿಯಲ್ಲಿ ಹೇಳಿದ್ದಾರೆ. ಹಿಂದೀ ನವ್ಯಕಾವ್ಯವು ಕನ್ನಡಕ್ಕಿಂತ ಮೊದಲೇ ಸೃಷ್ಟಿಗೊಂಡರೂ, ಕನ್ನಡ ನವ್ಯಕಾವ್ಯವು ಉತ್ಕೃಷ್ಟವಾಗಿದೆ. ಅಪಾರ ಜನಪ್ರಿಯತೆಯನ್ನು ಪಡೆದಿದೆ. ಅನೇಕ ಸಂಚಲನಗಳನ್ನುಂಟುಮಾಡಿದೆ. ವಿಚಾರ ವೈವಿಧ್ಯತೆಗಳಿಂದ ಕೂಡಿದೆ. ಕನ್ನಡ ಸಾಹಿತ್ಯಕ್ಕೆ ಹೊಸತನವನ್ನು ತಂದು ಕೊಟ್ಟಿದೆ. ಕಾರಣ ಹಿಂದಿ ನವ್ಯ ಕಾವ್ಯಕ್ಕಿಂತ ಕನ್ನಡ ನವ್ಯಕಾವ್ಯ ಎಲ್ಲಾ ಮಗ್ಗಲುಗಳಿಂದ ನೋಡಿದರೂ ಮಹತ್ವದ್ದೂ, ಉತ್ಕೃಷ್ಟವೂ ಆಗಿರುವುದೆಯೆಂದು ಪಟ್ಟಣ ಶೆಟ್ಟರು ಅಭಿಪ್ರಾಯ ಪಟ್ಟಿದ್ದಾರೆ. ಆಧುನಿಕ ಹಿಂದೀ ನವ್ಯಕಾವ್ಯದಲ್ಲಿ ಸಪ್ಪಳ ಜಾಸ್ತಿಯಾಗಿದೆ. ಸತ್ವ, ವೇದಗಳು ಕಡಿಮೆಯಾಗಿವೆ. ಕನ್ನಡ ನವ್ಯ ಕವಿಗಳಲ್ಲಿ ಗುಂಪುಗಾರಿಕೆ ಬಹಳ ಕಡಿಮೆ, ಆದರೆ ಹಿಂದಿಯಲ್ಲಿ ಈ ಗುಂಪುಗಾರಿಕೆ ಹೆಚ್ಚಾಗಿವೆಯೆಂದು ತಿಳಿಸಿದ್ದಾರೆ.

**೨. ಅನುಶೀಲನ**

ಅನುಶೀಲನ ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಎರಡನೆಯ ವಿಮರ್ಶಾ ಕೃತಿಯಾಗಿದೆ. ೧೯೮೨ ಲ್ಲಿ ಅನನ್ಯ ಪ್ರಕಾಶನ ನಜರಾಬಾದ್ ಮೈಸೂರಿನಿಂದ ಪ್ರಕಟಣೆಗೊಂಡಿದೆ. ಈ ಕೃತಿಯಲ್ಲಿ ಮುಖ್ಯವಾಗಿ ನಾಲ್ಕು ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಎರಡು ಲೇಖನಗಳು, ಎರಡು ಅನುವಾದಗಳಿವೆ. ಎರಡೆಯ ಭಾಗದಲ್ಲಿ ಪಟ್ಟಣಶೆಟ್ಟರು ಬೇರೆ ಕವಿಗಳ ಕವನ ಸಂಕಲನಗಳಿಗೆ ಬರೆದ ಮುನ್ನುಡಿಗಳಿವೆ. ಮೂರನೆಯ ಭಾಗದಲ್ಲಿ ಸಂಕ್ರಮಣ ಮತ್ತು ಸುಧಾ ಪತ್ರಿಕೆಗಳಿಗೆ ಬರೆದ ರಿವ್ಯೂಗಳಿವೆ. ನಾಲ್ಕನೆಯ ಭಾಗದಲ್ಲಿ ಬೇರೆ ಬೇರೆ ಕೃತಿಗಳ ಬಗ್ಗೆ ಶೆಟ್ಟರು ಮಾಡಿಕೊಂಡ ಟಿಪ್ಪಣೆಗಳಿವೆ.

ಲೇಖಕರು ಯಾವುದೇ ಗುಂಪು, ಒತ್ತಾಸೆಗಳಿಗೆ ಒಳಗಾಗದೇ ತಮಗೆ ಅನಿಸಿದ್ದನ್ನು ಸ್ಪಷ್ಟ ಮಾತುಗಳಲ್ಲಿ ಹೇಳಿದ್ದಾರೆ. ಅವರೇ ಮುನ್ನುಡಿಯಲ್ಲಿ ಹೇಳಿರುವಂತೆ. "ಯಾವುದೇ ಗುಂಪು, ಪಂಗಡ, ಸಾಹಿತ್ಯ, ರಾಜಕೀಯ ಇತ್ಯಾದಿಗೆ ನಾನು ಸೇರಿದವನಲ್ಲ, ಹಾಗೇ ಕೂಗಿ ಬೀದಿ ರಂಪಾಟ ಬೊಬ್ಬಾಟ ಮಾಡಿದವನೂ ಅಲ್ಲ, ಪ್ರಾಮಾಣಿಕವಾಗಿ ನನಗನಿಸಿದ್ದನ್ನೂ ಹೇಳುತ್ತಾ ಬಂದಿದ್ದೇನೆ."[೮] ಎಂದು ತಾವು ಹೇಳಿದ ಹಾಗೆಯೇ ವಿಮರ್ಶಿಸಿದ್ದಾರೆ. ಇವರ ವಿಮರ್ಶಾ ಲೇಖನಗಳನ್ನು ಕುರಿತು ಕಥೆಗಾರರಾದ ಪ್ರಹ್ಲಾದ ಅಗಸನ ಕಟ್ಟಿಯವರು ಈ ರೀತಿ ಹೇಳಿದ್ದಾರೆ. "ಪಟ್ಟಣಶೆಟ್ಟಿಯವರ ಬರವಣಿಗೆಯಲ್ಲಿ ನವ್ಯಪರವಾದ ಒಲವು. ಅದರ ಧಾಟಿ, ಧೋರಣೆ ಕೃತಿ ಪರೀಕ್ಷೆ, ಅರ್ಥವಿವೇಚನೆ, ಮೌಲ್ಯ ನಿಷ್ಕರ್ಷೆಯಲ್ಲಿ ಸಾಕಷ್ಟು ಪ್ರಭಾವ ಪೂರ್ಣವಾಗಿ ಕೆಲಸಮಾಡಿದೆ. ಆದರೆ ನವ್ಯ ವಿಮರ್ಶಕರಲ್ಲಿ ಸಾಮಾನ್ಯವಾಗಿ ಕಾಣಬರುವ ಉದ್ದೇಶ ಪೂರ್ವಕ ದೋಷಗಳಾದ ಕ್ಲಿಷ್ಟತೆ, ಸಂಕೀರ್ಣತೆ, ಅನಾವಶ್ಯಕ ಪರಿಭಾಷೆಗಳ ಬಳಕೆ, ಪುಂಖಾನು ಪುಂಖವಾಗಿ ತಮ್ಮವಾದ ಸಮರ್ಥನೆಗೆ ಇಂಗ್ಲೀಷ್ ವಿಮರ್ಶಕರ ಸಾಲುಗಳನ್ನು ಕೋಟ್ ಮಾಡುವ ಚಟ ಮುಂತಾದ ದೋಷಗಳಿಂದ ಪಟ್ಟಣಶೆಟ್ಟಿಯವರ ವಿಮರ್ಶೆ ಮುಕ್ತ ಗೊಂಡಿದೆ. ಇವರ ವಿಮರ್ಶಾ ಬರವಣಿಗೆಯ ಶೈಲಿ ಬಹಳ ನೇರ ಸರಳ, ಸಹೃದಯ ಹಾಗೂ ಮುಕ್ತವಾದುದಾಗಿದೆ."[೯]

ಕಣವಿಯವರ ಏಳು ಬಲ ಪದ್ಯಗಳು ಈ ಕೃತಿಯ ಮೊದಲ ಲೇಖನವಾಗಿದೆ. ಕಣವಿಯವರ 'ಎರೆಡುದಡ' ಕವನ ಸಂಕಲನದ ಏಳು ಪದ್ಯಗಳ ವಿಮರ್ಶೆಯನ್ನು ಇಲ್ಲಿ ಮಾಡಲಾಗಿದೆ. ಇಲ್ಲಿ ಮೂರು ವ್ಯಕ್ತಿತ್ವ ರೂಪಕಗಳು, ಎರಡು ಹಾಡುಗಳು, ಎರಡು ಗೀತರೂಪಕಗಳಿವೆ. ಕಣವಿಯವರ ವಿಶ್ವ ಭಾರತಿಗೆ ಕನ್ನಡದಾರತಿ ಪದ್ಯವು ಸುಂದರವಾಗಿ

ಹಾಡಿಸಿಕೊಳ್ಳುತ್ತದೆ. ಆದರೆ ಕವಿಯ ಭಾವನೆಗಳನ್ನು ತುಳುಕಿಸುವುದಿಲ್ಲ. ಕವನ ಹಾಡುವುದರ ಸಲುವಾಗಿಯೇ ಪ್ರಾಸಗಳನ್ನು ಬರೆದಿರುವುದು ಗೊತ್ತಾಗುತ್ತದೆ. 'ಭದ್ರಮಾಸ' ಒಳ್ಳೆಯ ಕವನವಾಗಿದೆ. ಲೀಲಾಜಾಲವಾಗಿ ಬಂದಿರುವ ಅನುಪ್ರಾಸ ಭಾವಗಳನ್ನು ತಿಳಿಯಾಗಿ ಮೂಡಿಸುವಲ್ಲಿ ಯಶಸ್ವಿಯಾಗಿವೆ. ನೀಲಾಂಬಿಕೆ, ಬಸವಣ್ಣ ಮತ್ತು ಅಕ್ಕಮಹಾದೇವಿ ಕವನಗಳು ವ್ಯಕ್ತಿತ್ವ ಕುರಿತು ಹೇಳುವ ಗೀತೆಗಳಾಗಿವೆ. ತುಂಬಾ ತೂಕದಿಂದ ಈ ಶರಣ ಶರಣೆಯರ ಬದುಕನ್ನು ನಿಖರವಾಗಿ ಕಾವ್ಯದ ಪಡಿಯಚ್ಚಿನಿಂದ ಸ್ಪಷ್ಟವಾಗಿ ಮೂಡಿಸಿದ್ದಾರೆ. ಈ ಗೀತೆಗಳು ಧರ್ಮರಸವನ್ನು ಸೂಸುತ್ತವೆ. ಇನ್ನುಳಿದ ಗೀತ ರೂಪಕಗಳಾದ 'ಸಂಕ್ರಮಣ' ಮತ್ತು 'ನೆಲದ ಮಕ್ಕಳಿಗೆ ನಲ್ವಾಡಾ' ರೇಡಿಯೋ ಮಾಧ್ಯಮಕ್ಕಾಗಿ ರಚಿಸಿದವುಗಳಾಗಿವೆ. ಬೆಳವಲನಾಡಿನ ಗ್ರಾಮೀಣ ಪರಿಸರದ ಚಿತ್ರಣಗಳು ಸುಂದರವಾಗಿ ಇಲ್ಲಿ ಮೂಡಿವೆ. ಎಂದು ಹೇಳಿದ್ದಾರೆ.

'ನಾನು ಮತ್ತು ನವ್ಯಕಾವ್ಯ' ಎನ್ನುವ ಲೇಖನದಲ್ಲಿ ಪಟ್ಟಣಶೆಟ್ಟರು ತಾವು ಪ್ರೌಢಶಾಲೆಯಲ್ಲಿದ್ದಾಗ ಓದಿದ ನವ್ಯಕಾವ್ಯಗಳು ಕಾಲೇಜಿನಲ್ಲಿ ಗೋಕಾಕರು ಪ್ರಾಂಶುಪಾಲರಾಗಿದ್ದಾಗ ಅವರ ಮನೆಯಲ್ಲಿ ಕಾವ್ಯವಾಚನ ಮಾಡುತ್ತಿದ್ದ ಸಂದರ್ಭಗಳು, ಪ್ರತಿಕ್ರಿಯೆಗಳು ಆಗ ಶೆಟ್ಟರು ಅನೇಕ ಪದ್ಯಗಳನ್ನು ಬರೆಯುವುದು ಅಳಿಸಿಹಾಕುವುದು. ಮತ್ತೆ ಬರೆಯುವುದು. ಗೋಕಾಕರು ವರ್ಗಾವಣೆಯಾದ ನಂತರ ಚಂಪಾ, ಗಿರಡ್ಡಿ ಗೋವಿಂದರಾಜ ಮುಂತಾದವರೊಂದಿಗೆ ಕವನ ಸಂಕಲನ ಹೊರಬರಲು ತಿದ್ದಿತೀಡಿ ಸಹಕರಿಸಿದ ಶಿವಶಂಕರ ಹಿರೇಮಠ ಮುಂತಾದ ವ್ಯಕ್ತಿ ಹಾಗೂ ಸಂದರ್ಭಗಳನ್ನು ಮೆಲುಕು ಹಾಕಿದ್ದಾರೆ. ಕನ್ನಡದಲ್ಲಿ ನವ್ಯ ಕಾವ್ಯದ ಬೆಳವಣಿಗೆಯನ್ನು ಗುರುತಿಸುತ್ತಾ "ನನ್ನ ಸಮಕಾಲೀನರಲ್ಲಿ ಚಂಪಾ, ಲಂಕೇಶ, ಕಂಬಾರ, ನಿಸಾರ್‌ಅಹಮದ್ ಮುಂತಾದವರು ಒಳ್ಳೆಯ ಕವನಗಳನ್ನು ಬರೆಯುತ್ತಿದ್ದಾರೆ. ಆದರೆ ಇತ್ತೀಚೆಗೆ ಬರುತ್ತಿರುವ ಕವನಗಳು ಬಹಳ ದುರ್ಬಲವಾಗಿವೆ. ಆದ್ದರಿಂದ ಸುಮ್ಮನೆ ಬರೆಯಬೇಕೆಂದು, ಬರೆಯುವುದಕ್ಕಿಂತ ಬರೆಯದಿದ್ದರೇ ನಡೆಯುವುದೇ ಇಲ್ಲ ಎಂದು ಅನಿಸಿದಾಗ ಮಾತ್ರ ಬರೆದರೆ ಸಾಕೆಂದು"[೨೦] ಹೇಳಿದ್ದಾರೆ.

ಆಯ್.ಎಂ. ರಿಚರ್ಡ್ಸ್‌ನ 'ಕಾವ್ಯಸಿದ್ಧಾಂತ'ಗಳು ಎನ್ನುವ ಲೇಖನ ಹಿಂದಿಯ ಡಾ. ಗಣಪತಿ ಚಂದ್ರಗುಪ್ತ ಅವರ ಲೇಖನದ ಕನ್ನಡ ಅನುವಾದವಾಗಿದೆ. ರಿಚರ್ಡ್ಸ್ ಇಂಗ್ಲೀಷ್ ಸಾಹಿತ್ಯದ ಅತಿ ದೊಡ್ಡ ವಿಮರ್ಶಕ, ಆತನ ವಿಚಾರಧಾರೆಗಳು ಮನೋವಿಜ್ಞಾನದ ಮತ್ತು ತರ್ಕದ ಆಧಾರದ ಮೇಲೆ ನಿಂತಿವೆ. ಅರ್ಥ ಭಾವಗಳ ಸಂಬಂಧ, ಕಾವ್ಯಾಸ್ವಾದನೆಯ ಪ್ರಕ್ರಿಯೆ, ಭಾಷೆ-ಭಾವ ಸಂವಹನ ಕಾವ್ಯಸಂವಹನ ಸಿದ್ಧಾಂತಗಳ ವಿಚಾರವಾಗಿ ರಿಚರ್ಡ್ಸ್‌ನ ನಿಲುವುಗಳನ್ನು ಇಲ್ಲಿ ಚರ್ಚಿಸಲಾಗಿದೆ. ಅನುವಾದಕ ಹೆಚ್ಚಿನ ಸ್ವಾತಂತ್ರವನ್ನು ಇಲ್ಲಿ ಪಡೆದಿರುವುದರಿಂದ ವಿಚಾರ ಸ್ಪಷ್ಟತೆಯಿದೆ.

'ರಸ್ವರೂಪ' ಡಾ.ನರೇಂದ್ರ ಅವರ ಹಿಂದೀ ಲೇಖನದ ಕನ್ನಡಾನುವಾದವಾಗಿದೆ. ಪಾರಿಭಾಷಿಕ ಪದಗಳಿಂದ ಕೂಡಿದ್ದರೂ ಅತ್ಯಂತ ಸರಳವಾಗಿ ಅರ್ಥವಾಗುವಂತೆ ಅನುವಾದಗೊಂಡಿದೆ. ಪಾಶ್ಚಾತ್ಯ ಮತ್ತು ದೇಶೀಯ ಕಾವ್ಯ ಮೀಮಾಂಸಕರ ಅಭಿಪ್ರಾಯಗಳು ಈ ಲೇಖನದಲ್ಲಿ ಚರ್ಚಿಸಲ್ಪಟ್ಟಿವೆ.

ಎರಡನೆಯ ಭಾಗವಾದ 'ಮುನ್ನುಡಿಗಳಲ್ಲಿ' ಬೇರೆ ಬೇರೆ ಕವಿಗಳ ಕವನ ಸಂಕಲನಗಳಿಗೆ ಪಟ್ಟಣಶೆಟ್ಟರು ಬರೆದಿರುವ ಎಂಟು ಮುನ್ನುಡಿಗಳಿವೆ. ಇಲ್ಲಿ ಕವಿಗಳ ಬಗ್ಗೆ ಪ್ರೋತ್ಸಾಹದಾಯಕ ಮಾತುಗಳನ್ನು ಆಡಿದ್ದಾರೆ. ಕವಿಗಳು ಬೆಳೆಯಲಿ ಎಂದು ಹಾರೈಸಿದ್ದಾರೆ. ಸಣ್ಣ ಪುಟ್ಟ ದೋಷಗಳು ಸಹಜವೆಂದಿದ್ದಾರೆ. ಕವಿಗಳಿಗೆ ಕೆಲವೊಂದು ಮೌಲಿಕವಾದ ಸಲಹೆಗಳನ್ನು ನೀಡಿದ್ದಾರೆ. ವಿಮರ್ಶೆಯ ಹೆಸರಿನಲ್ಲಿ ಕೊಂಕುತನ ತೋರಿಸುವ ಹುಳುಕು ಹುಟ್ಟಿಸುವ ಕೆಲಸ ನಾನು ಮಾಡುವುದಿಲ್ಲ ಎಂದು ಲೇಖಕರೇ ಹೇಳಿಕೊಂಡಿರುವ ಹಾಗೆ ಇಲ್ಲಿನ ಮುನ್ನುಡಿಗಳಿವೆ. ಶೆಟ್ಟರು ಮುನ್ನುಡಿ ಬರೆದ ಕೃತಿಗಳು ಕ್ರಮವಾಗಿ ಈ ಕೆಳಗಿನಂತಿವೆ.

೧. ಮಣ್ಣಿನ ಹಾಡು-ಶ್ರೀಕೃಷ್ಣ ಆಲನಹಳ್ಳಿ-೧೯೬೬

೨. ಕಲ್ಲರಳಿ ಹೂವಾಗಿ-ಜಗದೀಶ ಮಂಗಳೂರು ಮಠ-೧೯೭೬

೩. ಉದ್ಘಾಟನೆ-ಸುಮತೀಂದ್ರ ನಾಡಿಗ-೧೯೭೮

೪. ಕಮಿಟೆಡ್ ಕವಿತೆಗಳು-ಬಿ.ಎಂ. ರಮೇಶ್-೧೯೭೮

೫. ಇನ್ನಾದರೂ ಅರ್ಥವಾಗೋಣ-ಶಿವಾನಂದ ಬೇಕಲ್-೧೯೮೦

೬. ಇಡಲಿರುವ-ಹೆಜ್ಜೆ ಮಾರುತಿ ಆರ್.ಬೋಸಲೆ-೧೯೮೧

೭. ಶೋಕಸಭೆ-ಬಸವರಾಜ ವಕ್ಕುಂದ-೧೯೮೨

೮. ಬಂಡೆದ್ದ ದಲಿತರ ಬೀದಿ ಹಾಡುಗಳು-ಚೆನ್ನಣ್ಣವಾಲೀಕಾರ-೧೯೮೨

ಈ ಕೃತಿಯಲ್ಲಿನ ಮೂರನೇ ಭಾಗ ರಿವ್ಯೂಗಳಾ 'ಸಂಕ್ರಮಣ' ಮತ್ತು 'ಸುಧಾಪತ್ರಿಕೆ'ಗಳಿಗಾಗಿ ಬರೆದಂತಹ ವಿಮರ್ಶೆಗಳಾಗಿವೆ. ಸ್ಥಳ ಕಡಿಮೆಯಿರುವ ಕಾರಣ ಇರುವ ಸ್ವಲ್ಪ ಸ್ಥಳದಲ್ಲಿಯೇ ವಿಮರ್ಶೆ ಮಾಡಬೇಕಾದ ಸಂದರ್ಭ ಇಲ್ಲಿರುತ್ತದೆ. ಸ್ಥಳದ ಮಿತಿಯಿದ್ದರೂ ಹೇಳಬೇಕಾದದ್ದನ್ನು ಹೇಳಿದ್ದಾರೆ. ನೇರವಾಗಿ ಸಲಹೆ ನೀಡಿದ್ದಾರೆ. ಕಾವ್ಯದ ವಿಮರ್ಶೆಯನ್ನು ಸ್ವತಃ ಕವಿ ಮಾಡಿಕೊಳ್ಳಲಾರದೆ, ಓದುಗನಿಗೆ ಬಿಡುವುದು ಒಳ್ಳೆಯದು ಎನ್ನುವ ಸಲಹೆ ನೀಡಿದ್ದಾರೆ. ವಿಮರ್ಶೆ ಮಾಡುವಾಗ ವ್ಯಕ್ತಿಗಳ ಮುಖ ನೋಡದೆ ಕೃತಿಯ ಅಂತಸತ್ವವನ್ನು ಕುರಿತು ವಿವೇಚಿಸಿದ್ದಾರೆ. ಈ ಕೃತಿಯಲ್ಲಿ ಪಟ್ಟಣಶೆಟ್ಟರು ಪತ್ರಿಕೆಗಳಲ್ಲಿ ವಿಮರ್ಶಿಸಿದ ಹನ್ನೆರೆಡು ವಿಮರ್ಶಾ ಲೇಖನಗಳಿವೆ.

ಅವು ಯಾವುವೆಂದರೆ,

೧. ಚಂದ್ರಕಾಂತ ಕುಸನೂರರ 'ನಂದಿ ಕೋಲು' (ಸಂಕ್ರಮಣ-೨೩-೧೯೬೮)

೨. ಎಚ್.ಸಿ. ವಿಷ್ಣು ಮೂರ್ತಿಯವರ 'ಕಾರವಾನ' (ಸಂಕ್ರಮಣ-೨೩-೧೯೬೮)

೩. ಶಾಂತರಸರ 'ಮಾನಸಗಳ್ಳಿ' (ಸಂಕ್ರಮಣ-೨೩-೧೯೬೮)

೪. ದೊಡ್ಡರಂಗೇಗೌಡರ 'ಕಣ್ಣು ನಾಲಿಗೆ ಕಡಲು' (ಸುಧಾ-೧೭ನೇ ಜೂನ್ ೧೯೭೩)

೫. ಬರಗೂರು ರಾಮಚಂದ್ರಪ್ಪನವರ 'ಮರಕುಟಿಗ' (ಸುಧಾ-೧೭ನೇ ಜೂನ್ ೧೯೭೩)

೬. ಚಂದ್ರಶೇಖರ ಕಂಬಾರರ 'ಮಾತಾಡು ಲಿಂಗವೆ' (ಸುಧಾ-೧೭ನೇ ಜೂನ್ ೧೯೭೩)

೭. ಚಂದ್ರಶೇಖರ ಕಂಬಾರ ಮತ್ತು ಮುದೇನೂರು ಸಂಗಣ್ಣನವರ 'ಲಕ್ಷ್ಮೀಪತಿ ರಾಜನ ಕಥೆ'

(ಸುಧಾ ೨೬ನೇ ಜೂನ್ ಆಗಸ್ಟ್ ೧೯೭೩)

೮. ಲೀಲಾವತಿ ತೋರಣ ಗಟ್ಟಿಯವರ 'ನಾಕಹೆಜ್ಜೆ' (ಸುಧಾ ೧೩ನೇ ಫೆಬ್ರವರಿ ೧೯೭೭)

೯. ಸಿ.ಪಿ.ಕೆ.ಯವರ 'ಜೊಗಸ' (ಸುಧಾ ೧೩ನೇ ಫೆಬ್ರವರಿ ೧೯೭೭)

೧೦. ಗೋಪಾಲ ಕೃಷ್ಣ ಅಡಿಗರ 'ಇದನ್ನು ಬಯಸಿರಲಿಲ್ಲ' (ಸುಧಾ ೧ನೇಮೇ, ೧೯೭೭)

೧೧. ಅರವಿಂದ ನಾಡಕರ್ಣಿಯವರ 'ನಾ ಭಾರತೀಕುಮಾರು' (ಸುಧಾ ೧೨ನೇ ಸೆಪ್ಟಂಬರ್ ೧೯೭೮)

೧೧. ಚನ್ನಣ್ಣ ವಾಲಿಕಾರರ 'ಹಾಡು ಹಕ್ಕಿ ಹಾಗೂ ಇತರ ಪದಗಳು' (ಸುಧಾ ೨೯ನೇ ಅಕ್ಟೋಬರ್ ೧೯೭೮)

ನಾಲ್ಕನೆಯ ಭಾಗವಾದ ಟಿಪ್ಪಣಿಗಳಲ್ಲಿ ಪಟ್ಟಣಶೆಟ್ಟರು ತಮ್ಮಷ್ಟಕ್ಕೆ ತಾವೇ ಓದಿದ ಕೃತಿಗಳ ಬಗ್ಗೆ ಮಾಡಿಕೊಂಡ ಟಿಪ್ಪಣೆಗಳಿವೆ. ಈಟಿಪ್ಪಣೆಗಳನ್ನು ತಾವೇ ಮಾಡಿಟ್ಟುಕೊಂಡರೂ ರಿವ್ಯೂನಲ್ಲಿ ಕಂಡು ಬರುವ ವಿಮರ್ಶಾ ಗುಣಗಳು ಇಲ್ಲಿರುವುದನ್ನು ಕಾಣಬಹುದಾಗಿದೆ.

ಆರು ಟಿಪ್ಪಣಿಗಳು ಇಲ್ಲಿದ್ದು ಕ್ರಮವಾಗಿ ಕೃತಿಗಳು ಈ ರೀತಿಯಾಗಿವೆ.

೧. ನಗರಾಯಣ (ಅರವಿಂದ ನಾಡಕರ್ಣಿ)

೨. ಆತ್ಮ ಭಾರತ (ಅರವಿಂದ ನಾಡಕರ್ಣಿ)

೩. ಉಂಬರ (ಎಸ್.ವಿ. ಪರಮೇಶ್ವರ ಭಟ್ಟ)

೪. ಕ್ರಿಯಾಪರ್ವ (ಎಚ್.ಎಸ್. ವೆಂಕಟೇಶ್ ಮೂರ್ತಿ)

೫. ಖನನೋದ್ಯಮ (ಆನಂದ ಝುಂಜರವಾಡ)

೬. ಎಂಜಿನಿಯರ್ ಗೀತೆಗಳು (ಕೆ.ಚಿದಾನಂದ)

**೨. ರಂಗಾಯಣ**

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಮೂರನೆಯ ವಿಮರ್ಶಾ ಕೃತಿ 'ರಂಗಾಯಣ' ೧೯೯೫ ರಲ್ಲಿ ಅನನ್ಯ ಪ್ರಕಾಶನ ಧಾರವಾಡದಿಂದ ಪ್ರಕಟಣೆಗೊಂಡಿದೆ. ರಂಗಭೂಮಿಗೆ ಸಂಬಂಧ ಪಟ್ಟ ಲೇಖನಗಳೇ ಇಲ್ಲಿರುವುದರಿಂದ ರಂಗಾಯಣ ಎಂಬ ಹೆಸರು ಇಟ್ಟು ಕೊಂಡಿರುವುದಾಗಿ ಲೇಖಕರು ಹೇಳಿಕೊಂಡು, ಕಳೆದ ಮೂರು ದಶಕಗಳ ಅವಧಿಯಲ್ಲಿ ವಿವಿಧ ಸಂದರ್ಭಗಳಲ್ಲಿ ಕನ್ನಡ ರಂಗಭೂಮಿ, ನಾಟಕ, ವೃತ್ತಿ ರಂಗಭೂಮಿ, ಹವ್ಯಾಸಿ ರಂಗಭೂಮಿ, ಅನುವಾದ, ನಾಟಕಕಾರರು, ರಂಗಭೂಮಿಯ ಸಮಸ್ಯೆಗಳು ಮುಂತಾದ ವಿಷಯಗಳನ್ನು ಕುರಿತು ಬರೆದ ಇಪ್ಪತ್ತೂರು ಲೇಖನಗಳು ಈ ಕೃತಿಯಲ್ಲಿವೆ. ಈ ಪುಸ್ತಕದಲ್ಲಿ ಮೂರು ಭಾಗಗಳಿದ್ದು, ಮೊದಲನೆಯ ಭಾಗದಲ್ಲಿ ರಂಗಭೂಮಿಗೆ ಸಂಬಂಧಪಟ್ಟ ಲೇಖನಗಳಿವೆ. ಎರಡನೆಯ ಭಾಗದಲ್ಲಿ ನಾಲ್ಕು ಮುನ್ನುಡಿಗಳಿವೆ. ಮೂರನೆಯ ಭಾಗದಲ್ಲಿ ಹದಿಮೂರು ಪತ್ರಿಕಾ ವಿಮರ್ಶೆಗಳಾಗಿವೆ.

ರಾಷ್ಟ್ರೀಯ ರಂಗಭೂಮಿಗೆ ಕನ್ನಡದ ಕೊಡುಗೆ ಮತ್ತು ನಾಡಿನ ರಂಗಸಂಪದ ಎನ್ನುವ ಎರಡು ಲೇಖನಗಳು ಕನ್ನಡ ನಾಟಕ ನಿರ್ದೇಶಕರ ಸಾಧನೆಗಳನ್ನು ಕುರಿತು ಹೇಳುತ್ತವೆ. ಕನ್ನಡಿಗರು ರಾಷ್ಟ್ರಮಟ್ಟದ ರಂಗಭೂಮಿಗೆ ಅನನ್ಯ ಸೇವೆ ಸಲ್ಲಿಸಿದ್ದಾರೆ. ಅನ್ಯ ಭಾಷೆಯವರಿಗಿಂತಲೂ ಕನ್ನಡಿಗರ ಸಂಖ್ಯೆ ಜಾಸ್ತಿ, ಬಿ.ವಿ. ಕಾರಾಂತ, ಕೆ.ವಿ. ಅಕ್ಷರ, ಜಯಶ್ರೀ, ಪ್ರಸನ್ನ, ಅಶೋಕ ಬಾದರದಿನ್ನಿ, ಸಿ. ಬಸವಲಿಂಗಯ್ಯ, ಪ್ರೇಮಾ ಕಾರಾಂತ, ಮುಂತಾದವರ ಸಾಧನೆ ಮೆಚ್ಚುವಂತಹದು. ಸಮಗ್ರ ದೇಶದ ಒಟ್ಟಾರೆ ನಾಟಕ ಚಳುವಳಿಗಳ ಮುಕ್ಕಾಲು ಪಾಲು ಕರ್ನಾಟಕದಲ್ಲಿಯೇ ಉಳಿಯುವಂಥ ವಿಷಯ ಶ್ರೀರಂಗ, ಲಂಕೇಶ, ಕಂಬಾರರು, ಗಿರೀಶ್ ಕಾರ್ನಾಡರು, ದೇಶ ಹೆಮ್ಮೆಪಡುವಂತ ನಾಟಕಕಾರರಾಗಿದ್ದಾರೆ ಎಂದು ಹೇಳಿದ್ದಾರೆ.

ಉತ್ತರ ಕರ್ನಾಟಕದ ರಂಗಭೂಮಿ 'ಅಂದು-ಇಂದು' ಎನ್ನುವ ಲೇಖನದಲ್ಲಿ ಹಿಂದೆ ಉತ್ತರ ಕರ್ನಾಟಕದಲ್ಲಿ ಸೂತ್ರದ ಗೊಂಬೆಯಾಟ, ಕಿಳ್ಳ್ಯಾಕ್ಯಾತರ ಆಟ, ಸಣ್ಣಾಟ, ದೊಡ್ಡಾಟಗಳು ರಂಗಭೂಮಿಗೆ ವೈವಿಧ್ಯತೆಯನ್ನು ತಂದು ಕೊಟ್ಟಿದ್ದವು, ನಂತರ ಜನಪದ ರಂಗಭೂಮಿಯ ಪ್ರದರ್ಶನ ಕಡಿಮೆಯಾಗಿದ್ದವು. ನಂತರ ಹವ್ಯಾಸಿ ರಂಗಕಲಾ ತಂಡಗಳು ಕಾಣಿಸಿಕೊಂಡವು, ನಡು ನಡುವೆ ಅಸಂಗತನಾಟಕಗಳು ಬಂದವು. ಅನೇಕ ಪ್ರತಿಭಾವಂತ ಕಲಾವಿದರು ಉತ್ತರ ಕರ್ನಾಟಕದಲ್ಲಿ ಇದ್ದಾರೆ. ಇವರೆಲ್ಲಾ ಒಳ್ಳೆಯ ಹಂಬಲ ಆದರ್ಶಗಳನ್ನು ಇಟ್ಟುಕೊಂಡು ಮುನ್ನಡೆದರೆ ರಂಗಭೂಮಿಗೆ ಉಜ್ವಲವಾದ ಭವಿಷ್ಯವಿದೆ ಎಂದು ಹೇಳುತ್ತಾರೆ. 'ಧಾರವಾಡ ಜಿಲ್ಲೆಯ ರಂಗಭೂಮಿ' 'ನಮ್ಮ ಹವ್ಯಾಸಿ ರಂಗಭೂಮಿ' ಮುಂತಾದ ಲೇಖನಗಳು ಅನೇಕ ಉಪಯುಕ್ತ ಮಾಹಿತಿಗಳನ್ನು ನೀಡುತ್ತವೆ. 'ವೃತ್ತಿರಂಗಭೂಮಿ ಅಂದು-ಇಂದು' ಎನ್ನುವ ಲೇಖನ ಡಾ.ಗುಬ್ಬೀವೀರಣ್ಣ ವಿಚಾರಸಂಕಿರಣದಲ್ಲಿ ಮಾಡಿದ ಭಾಷಣವಾಗಿದೆ. ನಾಟಕ ಮತ್ತು ಪ್ರದರ್ಶನ ಕಲೆಗಳು, ಲೇಖನವು ಮೈಸೂರಿನಲ್ಲಿ ನಡೆದ ರಾಜ್ಯಮಟ್ಟದ ಸಮೂಹಮಾಧ್ಯಮ ಸಾಹಿತ್ಯ ಸಮಾವೇಶದ ಗೋಷ್ಠಿಯಲ್ಲಿ ಮಾಡಿದ ಆಶಯ ಭಾಷಣವಾಗಿದೆ. ಆಧುನಿಕ ಮಾಧ್ಯಮಗಳ ದಟ್ಟ ಪ್ರಭಾವದಿಂದಾದ ಜೀವಂತ ಅಭಿನಯದ ರಂಗಭೂಮಿ ಬಡವಾಗುತ್ತಿರುವ ರೀತಿಯನ್ನು ಮತ್ತು ಒಂದೇ ನಾಟಕವು ನಿರ್ದೇಶಕನ ಧೋರಣೆಗಳೊಂದಿಗೆ ರಂಗ ಮಂಟಪದಲ್ಲಿ ಪಡೆದುಕೊಳ್ಳುವ ಬೇರೆ ಬೇರೆ ಆಯಾಮಗಳನ್ನು ಕುರಿತು ವಿವೇಚಿಸಿದ್ದಾರೆ. ನಾಟಕ ಸಾಹಿತ್ಯವು ಓದುವುದಕ್ಕೆ ಮಾತ್ರ ಸೀಮಿತವಾಗಿದ್ದರೆ, ನಿರ್ದೇಶಕ ಮತ್ತು ಪಾತ್ರಧಾರಿಗಳು ಕೌಶಲ್ಯಗಳು ರಂಗಪ್ರಯೋಗಗಳನ್ನು ಯಶಸ್ವೀಗೊಳಿಸುವಲ್ಲಿ ಮುಖ್ಯವಾಗುತ್ತಾರೆಂದು ಅಭಿಪ್ರಾಯಪಡುತ್ತಾರೆ.

ಕನ್ನಡ ನಾಟಕಗಳಲ್ಲಿ ಪೌರಾಣಿಕ ವಸ್ತುವಿನ್ಯಾಸ ತಂತ್ರ ಮತ್ತು ಪ್ರಯೋಗ ಎನ್ನುವ ಲೇಖನವು ಪೌರಾಣಿಕ ವಸ್ತುಗಳನ್ನು ಆಯ್ದುಕೊಂಡು ನಾಟಕ ರಚಿಸಿರುವ ಕುವೆಂಪು, ಪು.ತಿ.ನರಸಿಂಹಾಚಾರ್ಯರು, ಗಿರೀಶ್ ಕಾರ್ನಾಡರು, ಶ್ರೀರಂಗ. ಸಂಸ, ಚಂದ್ರಶೇಖರ ಕಂಬಾರ ಮುಂತಾದವರ ನಾಟಕಗಳ ಬಗ್ಗೆ ಹೇಳುತ್ತದೆ. ತಾವು ಆಯ್ದುಕೊಂಡ ಪೌರಾಣಿಕ ವಸ್ತುಗಳನ್ನು ನಿರ್ವಹಿಸಿದ ಸುಮಾರು ನಾಲ್ಕು ನೂರರಷ್ಟು ಪೌರಾಣಿಕ ನಾಟಕಗಳು ಬಂದಿವೆಯೆಂದು ಹೇಳಿದ್ದಾರೆ.

ರೇಡಿಯೋ ನಾಟಕಗಳು ಲೇಖನದಲ್ಲಿ ರೇಡಿಯೋ ನಾಟಕವೆಂದರೆ ಕುರುಡರ ನಾಟಕದಂತೆ ಇಲ್ಲಿ ಅಭಿನಯ ವೇಷಭೂಷಣ ಯಾವುದೂ ಇರದೇ ಕೇವಲ ಮಾತಿನ ಲಹರಿಯಿಂದ ಸಂಗೀತವನ್ನು ಬಳಸಿಕೊಂಡು ಪರಿಣಾಮ

ಸಾಧಿಸಬೇಕಾಗುತ್ತದೆ. ಇದು ಒನ್‌ವೇ ಟ್ರಾಫಿಕ್ ಇದ್ದಹಾಗೆ. ಪ್ರೇಕ್ಷಕರು ಇದ್ದಾರೆ ಎಂದು ಕಲ್ಪಿಸಿಕೊಂಡು ನಾಟಕ ನಡೆಯುತ್ತದೆ. ಎಂದು ರೇಡಿಯೋ ನಾಟಕಗಳಲ್ಲಿ ಹೆಸರು ಮಾಡಿದ ಎನ್ಕೆ.ಎನ್.ಶಿವಸ್ವಾಮಿ, ಎಚ್.ಕೆ.ರಂಗನಾಥ, ಪರ್ವತವಾಣಿ, ಕವಲಿ, ಕಾರಾಂತರ ನಾಟಕಗಳನ್ನು ಕುರಿತು ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದ್ದಾರೆ.

ನಾಟಕ ಅನುವಾದ ಸಮಸ್ಯೆ ಹಾಗೂ ಕನ್ನಡ ನಾಟಕಗಳು, ಅನುವಾದ ಮತ್ತು ರೂಪಾಂತರ ಎನ್ನುವ ಎರೆಡು ಲೇಖನಗಳು ಬಹಳ ಅಧ್ಯಯ ಶೀಲತೆಯಿಂದ ಕೂಡಿವೆ. ಕನ್ನಡ ನಾಟಕದ ಇತಿಹಾಸ ಇಲ್ಲಿ ದೊರೆಯುತ್ತದೆ. ಸ್ವತಃ ಪಟ್ಟಣ ಶೆಟ್ಟರೇ ಉತ್ತಮ ನಾಟಕಗಳನ್ನು ಕನ್ನಡಕ್ಕೆ ಅನುವಾದ ಮಾಡಿರುವುದರಿಂದ ಅನುವಾದಕನಿಗೆ ಸವಾಲಾಗುವ ಸಮಸ್ಯೆಗಳು ಅನುವಾದ ಅಥವಾ ರೂಪಾಂತರದ ಇತಿ ಮಿತಿಗಳನ್ನು ಕುರಿತು ಚರ್ಚಿಸಿದ್ದಾರೆ.

ಧೀಮಂತ ರಂಗಕರ್ಮಿ ಬಸಪ್ಪಶಾಸ್ತ್ರೀಗಳು ಎನ್ನುವ ಲೇಖನವು ಶಾಸ್ತ್ರೀಗಳ 'ಬದುಕು ಬರಹ' ಅವರ ಸಾಹಿತ್ಯ ಸೃಷ್ಟಿ ಅವರು ಸಂಸ್ಕೃತದಿಂದ ಕನ್ನಡಕ್ಕೆ ಅನುವಾದಿಸಿದ ಶಾಕುಂತಲ ನಾಟಕದ ಅನುವಾದದ ರೀತಿಯನ್ನು ವಿವರವಾಗಿ ವಿಶ್ಲೇಷಿಸಿದ್ದಾರೆ.

ವಿ.ಕೃ.ಗೋಕಾಕರ ನಾಟಕಗಳು ಎನ್ನುವ ಲೇಖನವು ಅವರ ತುಳಸಿ. ಜನನಾಯಕ, ಯುಗಾಂತರ, ವಿಮರ್ಶಕ ವೈದ್ಯ ನಾಟಕಗಳು, ವಸ್ತುಗಳನ್ನು ಕುರಿತು ಹೇಳುತ್ತಾರೆ. ಕನ್ನಡ ನಾಟಕಗಳ ರಚನೆಗಳು ಕಡಿಮೆಯಿದ್ದ ಕಾಲದಲ್ಲಿ ಗೋಕಾರರು ನಾಟಕಗಳನ್ನು ರಚಿಸಿದರು. ಆದರೂ ಅವರು ನಾಟಕಕಾರರಾಗಿ ಹೆಸರು ಗಳಿಸಲಿಲ್ಲ ಎಂಬುದು ಲೇಖಕರ ಅಭಿಪ್ರಾಯವಾಗಿದೆ. ರಾಕೇಶ, ತೆಂಡುಲ್ಕರ್, ಸರಕಾರ್, ಶ್ರೀರಂಗ ಎನ್ನುವ ಲೇಖನ ತೌಲನಿಕ ವಿಮರ್ಶೆಯಿಂದ ಕೂಡಿದೆ. ಭಾರತೀಯ ರಂಗಭೂಮಿಯಲ್ಲಿ ಪ್ರಸಿದ್ಧಪಡೆದ ಈ ನಾಲ್ಕು ಜನ ನಾಟಕಕಾರರ ಸಾಮ್ಯತೆಗಳನ್ನು, ಭಿನ್ನತೆಗಳನ್ನು, ವಿಶೇಷತೆಗಳನ್ನು ತೋರಿಸುವ ಪ್ರಯತ್ನ ಲೇಖಕರದ್ದಾಗಿದೆ.

ಈ ಕೃತಿಯಲ್ಲಿ ಪಟ್ಟಣಶೆಟ್ಟರು ನಾಲ್ಕು ಕನ್ನಡ ನಾಟಕಗಳಿಗೆ ಬರೆದ ಮುನ್ನುಡಿಗಳಿವೆ. ಇವರ ಮುನ್ನುಡಿ ಬರೆದು ನಾಟಕಗಳು ಯಾವುವೆಂದರೆ

೧. ಜ್ವಾಲೆ ಮತ್ತು ಮಧ್ಯಂತರ : ಪಾಂಡುರಂಗ ಪಾಟೀಲ

೨. ಹಾವು ಹರಿದಾಡುತಾವ : ಹೂಲಿಶೇಖರ

೩. ಮತ್ತೊಬ್ಬ ಏಕಲವ್ಯ : ಸತ್ಯಾನಂದ ಪಾತ್ರೋಟ

೪. ಯಶೋಧರ: ವಿರುಪಾಕ್ಷ ಬಡಿಗೇರ

ಈ ಮುನ್ನುಡಿಗಳಲ್ಲಿ ಪಟ್ಟಣ ಶೆಟ್ಟರು ನಾಟಕ ರಚನಾಕಾರರ ಬಗ್ಗೆ ಮೆಚ್ಚುಗೆಯನ್ನು ಸೂಚಿಸುತ್ತಾ ಕೆಲವೊಂದು ಉತ್ತಮ ಸಲಹೆಗಳನ್ನು ನೀಡಿದ್ದಾರೆ. ಒಬ್ಬ ಲೇಖಕ ಕೇವಲ ಹೆಸರಿಗಾಗಿ ನಾಟಕ ರಚನೆಯಲ್ಲಿ ತೊಡಗಬಾರದು. ಇದರಿಂದ ಸಾಹಿತ್ಯ ಮತ್ತು ರಂಗಭೂಮಿಗೆ ಕೊಡುಗೆ ನೀಡಿದಂತೆ ಆಗುವುದಿಲ್ಲ. ಗುಣಮಟ್ಟ ಕಾಯ್ದುಕೊಳ್ಳಬೇಕೆಂಬುದೇ ಪಟ್ಟಣ ಶೆಟ್ಟರ ಆಶಯವಾಗಿದೆ.

ಪುಸ್ತಕದ ಕೊನೆಯ ಭಾಗದಲ್ಲಿ ಹದಿಮೂರು ನಾಟಕಗಳನ್ನು ಕುರಿತು ಮಾಡಿದ ವಿಮರ್ಶಾಲೇಖನಗಳಿವೆ. ಈವಿಮರ್ಶೆಗಳಲ್ಲಿ ಪಟ್ಟಣಶೆಟ್ಟರ ಗುಣಗ್ರಾಹಕತೆ ಹಾಗೂ ನಿಷ್ಪಕ್ಷಪಾತ ಧೋರಣೆ ಪ್ರಾಮಾಣಿಕತೆಗಳು ಕಂಡುಬರುತ್ತವೆ. ಇವರ ವಿಮರ್ಶೆಗಳು ವಾರಪತ್ರಿಕೆ ಸುಧಾದಲ್ಲಿ ಪ್ರಕಟಣೆಗೊಂಡಿವೆ.

ಇವರು ವಿಮರ್ಶಿಸಿದ ನಾಟಕಗಳು ಯಾವುವೆಂದರೆ

೧. ಎಚ್.ಎಂ.ಚೆನ್ನಯ್ಯನವರ 'ಎಲ್ಲರಂಥವನಲ್ಲ ನನಗಂಡ'

೨. ಚದುರಂಗರ 'ಇಲಿಬೋನು'

೩. ಬಿ.ಎಸ್.ಸ್ವಾಮಿಯವರ 'ಮೂರು ನಾಟಕಗಳು'

೪. ರಾಮದಾಸರ 'ಹೇಡಿಗಳು'

೫. ಬಿ.ವಿ.ಕಾರಾಂತರು ಅನುವಾದಿಸಿರುವ 'ಬಾದಲ್ ಸರ್ಕಾರ್ಅವರ ಏವಂ ಇಂದ್ರಜಿತ್'

೬. ಅನಾಮಿಕ ಅವರ 'ಚಕ್ರವ್ಯೂಹ

೭. ಕೌಶಲ್ಯ ಧರಣೇಂದ್ರ ಅವರ 'ರಾಜಮತಿ ವಿವಾಹ ಮತ್ತು ಇತರ ನಾಟಕಗಳು'

೮. ಚಿ.ಶ್ರೀನಿವಾಸರಾಜು ಅವರ 'ಐದು ನಾಟಕಗಳು'

೯. ಎನ್.ಎಸ್.ಲಕ್ಷ್ಮಿನಾರಾಯಣಭಟ್ಟರ 'ಮೃಚ್ಛಕಟಿಕ'

೧೦. ಪ್ರಸನ್ನ ಅವರ 'ಒಂದು ಲೋಕ ಕತೆ'

೧೧. ಚೆನ್ನಣ ವಾಲಿಕಾರರ 'ಟೊಂಕ ಕೆಳಗಿನ ಜನ'

೧೨. ಆರ್ಯ ಅವರ 'ಬಯಲು ಆಲಯದೊಳಗೋ'

೧೩. ಕೆ.ವಿ.ಆಚಾರ್ ಅವರ 'ಕರ್ನಾಟಕ ರಂಗಭೂಮಿ'

ಈ ಮೇಲಿನ ಎಲ್ಲಾ ನಾಟಕಗಳ ರಚನಾಕಾರರು ಕನ್ನಡ ಸಾರಸ್ವತ ಲೋಕದಲ್ಲಿ ಹೆಸರುಗಳಿಸಿದ್ದಾರೆ. ಆದರೂ ಪಟ್ಟಣಶೆಟ್ಟರು ನಿರ್ಮಲ ಮನಸ್ಸಿನಿಂದ ವಿಮರ್ಶಿಸಿರುವುದು ಕಂಡು ಬರುತ್ತದೆ. ಒಟ್ಟಾರೆಯಾಗಿ ಈ ಕೃತಿಯು ರಂಗಭೂಮಿಯ ವಿವಿಧ ಆಯಾಮಗಳನ್ನು ಕುರಿತು ಹೇಳುವುದರಿಂದ ಇಲ್ಲಿನ ವಿಮರ್ಶೆಗಳು ಕನ್ನಡ ರಂಗಭೂಮಿಯ ವಿಮರ್ಶೆಯಾಗಿದೆ.

**೪. ಪರಿಭಾವನ**

ಪರಿಭಾವನ ಡಾ.ಸಿದ್ಧಲಿಂಗಪಟ್ಟಣಶೆಟ್ಟಿಯವರ ನಾಲ್ಕನೆಯ ವಿಮರ್ಶಾಕೃತಿಯಾಗಿದೆ. ಈ ಕೃತಿಯಲ್ಲಿನ ವಿಮರ್ಶೆಗಳು ಗಂಭೀರ ಚಿಂತನೆಗಳಿಂದ ಕೂಡಿವೆ. ವಿಷಯ ವಸ್ತುವಿನ ದೃಷ್ಟಿಯಿಂದಲೂ ವೈವಿಧ್ಯತೆಯಿಂದ ಕೂಡಿವೆ. ಸಾಹಿತಿ ಪ್ರಹ್ಲಾದ ಅಗಸನ ಕಟ್ಟಿಯವರು ಈ ಕೃತಿಯನ್ನು ಕುರಿತು ಹೇಳುವಹಾಗೆ ''ತಾವು ಎತ್ತಿಕೊಂಡ ಪುಸ್ತಕಗಳು ಏನು ಹೇಳುತ್ತವೋ ಅದನ್ನು ಆಪ್ತವಾಗಿ ಆಲಿಸಿ, ಧ್ಯಾನಿಸಿ, ಅವು ನೀಡಿದ ಅರ್ಥಗಳಿಗಾಗಿ ವಿಸ್ತರಿಸಿದ, ಅರಿವಿಗಾಗಿ

ಶೆಟ್ಟರು ಅವುಗಳಿಗೆ ಮರಳಿ ಧನ್ಯತೆಯನ್ನು ವ್ಯಕ್ತಪಡಿಸಿದ ರೂಪದಲ್ಲಿವೆ ಇಲ್ಲಿನ ಲೇಖನಗಳು. ಹೀಗಾಗಿ ಇಲ್ಲಿ ವಿನಯ, ಸಜ್ಜನಿಕ, ಸಹೃದಯತೆ ಪ್ರಮಾಣಿಕತೆ, ಕೃತಿನಿಷ್ಟತೆ, ಎಲ್ಲಕ್ಕಿತ ಹೆಚ್ಚಾಗಿ ಸಾಹಿತ್ಯವನ್ನು ಶುದ್ಧ ಮನಸ್ಸಿನಿಂದ ಕಾಣುವ ಪ್ರಾಂಜಲ ಅಂತಃಕರಣ ಎದ್ದು ಕಾಣುತ್ತದೆ.''[೨೨] ಈ ಕೃತಿಯಲ್ಲಿ ಹದಿನೈದು ವಿಮರ್ಶಾ ಲೇಖನಗಳಿವೆ. ೨೦೦೦ದಲ್ಲಿ ಧಾರವಾಡದ ಅನನ್ಯ ಪ್ರಕಾಶನದಿಂದ ಈ ಕೃತಿ ಬಿಡುಗಡೆಗೊಂಡಿದೆ. ಕ್ಯಾತನಹಳ್ಳಿ ರಾಮಣ್ಣನವರು ಹೇಳುವ ಹಾಗೆ ''ಪರಿಭಾವನೆಯಲ್ಲಿ ನಾವು ಕಾಣುವ ಇನ್ನೊಂದು ವೈಶಿಷ್ಟ್ಯವೆಂದರೆ ಪರಿಶುದ್ಧ ಮನಸ್ಸು ಪಕ್ಷಾತೀತ ನಿಲುವು, ಓದುಗರ ಮನಸ್ಸನ್ನು ಕೂಡಾ ಹಾಗೆ ಪರಿವರ್ತಿಸಿ ಬಿಡುವ ಶಕ್ತಿ ಇಲ್ಲಿದೆ.''[೫೩] ಇಲ್ಲಿನ ಬರವಣಿಗೆಯ ಶೈಲಿ ಬಹಳ ಆತ್ಮೀಯವಾಗಿದೆ. ಕಟುವಾದ ಟೀಕೆ, ವಿಡಂಬನೆಗಳಿರದೆ ಕೃತಿಗಳ ಗುಣದೋಷಗಳನ್ನು ಎತ್ತಿ ತೋರಿಸುವಲ್ಲಿ ಪಟ್ಟಣಶೆಟ್ಟರು ಯಶಸ್ವಿಯಾಗಿದ್ದಾರೆ.

'ಇಂದಿನ ಕನ್ನಡ ಕಾವ್ಯ' ಎನ್ನುವ ಲೇಖನವು ಇಂದಿನ ಕನ್ನಡ ಕವಿ-ಕವನ ಸಂಕಲನಗಳು ನಿರಾಶೆಯಿಂದ ಕೂಡಿವೆ. ಕಾವ್ಯ ಕೃಷಿ ಹಲುಸಾಗಿ ಬರುತ್ತಿದ್ದರೂ ಸತ್ವದ ದೃಷ್ಠಿಯಿಂದ ಜಾಳು ಜಾಳಾಗಿವೆ. ''ಕಾವ್ಯಕ್ಕೆ ಬೇಕಾಗುವ ಅನುಭವ ಹಾಗೂ ಭಾಷಾಭಿವ್ಯಕ್ತಿಯ ದೃಷ್ಠಿಯಿಂದ ಅಗತ್ಯವಿರುವ ಸಿದ್ಧತೆಯನ್ನು ಮಾಡಿಕೊಂಡಿರುವವರು ಮಾತ್ರ ಇಲ್ಲವೆನ್ನುವಷ್ಟು ವಿರಳವಾಗಿದ್ದಾರೆ.''[೫೪] ಸದ್ಯದ ಕಾವ್ಯಕೃಷಿಯ ಮೂಲ ದೌರ್ಬಲ್ಯವನ್ನು ಹೇಳುತ್ತಾರೆ.

ಹೊಸಗನ್ನಡ ಕಾವ್ಯದ ರಮ್ಯ ಸಂಪ್ರದಾಯ ತನ್ನ ಗೇಯ ಗುಣದಿಂದ ಪ್ರೇಮದ ಸ್ವಭಾವದಿಂದ ಓದುಗರ ಮನಸನ್ನು ಗೆಲ್ಲುವಲ್ಲಿ ಯಶಸ್ವಿಯಾಯಿತು. ಆದರೆ ಪ್ರಗತಿಶೀಲರ ಕಾವ್ಯ ವಿಚಾರ ಭಾರದಿಂದ ನಲುಗಿ ಹೋಯಿತು. ಅವರ ದೃಷ್ಠಿಕೋನ, ಕಾವ್ಯ ರಚನೆಗೆ ಹೊಂದಾಣಿಕೆಯಾಗಲಿಲ್ಲ. ನವ್ಯಕಾವ್ಯವಂತೂ ಎಲ್ಲಾ ಬಗೆಯ ಕಾವ್ಯಾಲೋಚನೆಗಳಿಂದ ವಸ್ತು ಪರಿವರ್ತನೆಗಳಿಂದ ಹೊಸ ರೀತಿಯಲ್ಲಿ ಅಭಿವ್ಯಕ್ತಿಗೊಂಡಿತು ಎಂದು ಹೇಳುತ್ತಾರೆ.

ದಲಿತ ಬಂಡಾಯ ಕಾವ್ಯಗಳನ್ನು ಕುರಿತು ಹೇಳುತ್ತಾ ಬಂಡಾಯಕಾವ್ಯ ಜೀವನಾನುಭವಗಳನ್ನು ಕಂಡು ಕೊಳ್ಳಲಾರದೇ ಹೇಳಿಕೆಯ ವಾಹಕಗಳಾಗಿಯೇ ಉಳಿದವು. ಈ ಕಾವ್ಯಗಳಲ್ಲಿ ಸ್ಪಷ್ಟತೆ ನಿಖರತೆಗಳಿಲ್ಲ. ದಲಿತ ಅನ್ನುವ ಪದದ ಅರ್ಥವನ್ನು ಸರಿಯಾಗಿ ಕಂಡುಕೊಂಡಿಲ್ಲ. ಸಾಮಾಜಿಕವಾಗಿ ಹಿಂದುಳಿದ ಎಲ್ಲಾ ಜಾತಿಗಳಲ್ಲಿ ದಲಿತರು ಅಂದರೆ ಶೋಷಣೆಗೆ ಒಳಗಾದವರು ಇದ್ದಾರೆ, ಎಂದು ದಲಿತ ಪದದ ಅರ್ಥ ನೀಡಿದ್ದಾರೆ. ಇಂದಿನ ಕಾವ್ಯ ಪ್ರಪಂಚದಲ್ಲಿ ಭಾವಪೋಷಣೆಗಿಂತ ಆಕ್ರೋಶ, ಘೋಷಣೆ ಹೆಚ್ಚಾಗಿದೆ. ಅನುಭವದ ಹೆಸರಿನಲ್ಲಿ ಕಾವ್ಯ ಬರೆಯುವರು ಭಾವವನ್ನು ಬಿಟ್ಟು ಅವಸರದಿಂದ ಕಾವ್ಯವನ್ನು ಪ್ರಯತ್ನ ಪೂರ್ವಕವಾಗಿ ಕಟ್ಟುವುದರಿಂದ ಅಲ್ಲಿ ಪ್ರತಿಮ ಪ್ರತೀಕಗಳಲ್ಲಿ ಅಲಂಕಾರಗಳಲ್ಲಿ ಇವರಿಗೆ ಕಾವ್ಯ ರಚಿಸುವುದರಲ್ಲಿಯೇ ತೃಪ್ತಿ. ಆದರೆ ಅದು ತೃಪ್ತಿ ಕೊಡುವ ಕಾವ್ಯವಾಗಲಾರದು ಎಂಬುದು ವಿಮರ್ಶಕರ ನಿಲುವಾಗಿದೆ.

ಉಜ್ವಲವಾದ ಪರಂಪರೆಯಿರುವ ಕನ್ನಡದ ಕಾವ್ಯಕ್ಕೆ ದಕ್ಷವಾರಸುದಾರರು ಬೇಕು. ಗೊಂದಲದ ವಾತಾವರಣವಿದ್ದರೂ, ಕನ್ನಡ ಅದನ್ನು ಎದುರಿಸಬೇಕು ಒಂದು ಸ್ವಸ್ಥ ಸಮರ್ಥ ಕಾವ್ಯ ಪರಂಪರೆ ಮೂಡಿ ಬರಬೇಕು ಎಂಬ ಆಶಯವನ್ನು ಶೆಟ್ಟರು ವ್ಯಕ್ತಪಡಿಸಿದ್ದಾರೆ.

'ಬೇಂದ್ರೆಯವರ ಕಾವ್ಯದಲ್ಲಿ ಒಲವು' ಕುರಿತು ಮಾತನಾಡುವುದೆಂದರೆ ಬೇಂದ್ರೆಯವರು ರಚಿಸಿದ ಸಂಪೂರ್ಣಕಾವ್ಯದ ಸಾರಸ್ವವನ್ನೇ ವಿಶ್ಲೇಷಣೆ ಮಾಡಿದಂತೆ ಎಂದು ಪಟ್ಟಣ ಶೆಟ್ಟರು ಹೇಳಿದ್ದಾರೆ. ಬೇಂದ್ರೆಯವರ ಮೊದಲಿನ ಕೃತಿಗಳಾದ 'ಕೃಷ್ಣಕುಮಾರಿ' 'ಗರಿ' ಕವನ ಸಂಕಲನಗಳಿಂದ ಹಿಡಿದು ಅವರ ಕೊನೆಯ ಸಂಕಲನದವರೆಗೂ ಅವರ ಕವಿತೆಗಳಲ್ಲಿ ಒಲವು ಮೂಡಿಬಂದ ರೀತಿಗಳನ್ನು ಅದರ ವಿಧಗಳನ್ನು ಹುಡುಕಾಟಗಳನ್ನು ಒಲವು ಮುಕ್ತಿಗೆ ಹೇಗೆ ಮಾರ್ಗವಾಗುತ್ತದೆ ಎಂಬುದನ್ನು ವಿವರಿಸಿ ಹೇಳಿದ್ದಾರೆ. ಕವಿ ಬೇಂದ್ರೆಯವರ ಕಾವ್ಯದ ಮೂಲಭೂತ ಶಕ್ತಿಯೇ ಒಲವು. ಅದರಿಂದಲೇ ಕವಿ ಹೊರಗನ್ನು ನೋಡುತ್ತಾನೆ. ಕವಿಯ ದೃಷ್ಟಿಯಲ್ಲಿ ಪ್ರಣಯವೆಂದರೆ ಪ್ರಣಯವೇ, ಕಾಮವೂ ಧರ್ಮವೇ. ಈ ಕಾಮವು ಪ್ರಾಣಕ್ಕೆ ಅಡಿಪಾಯ, ಅಧರ್ಮವು ಕಾಮಸಂಹಾರಿ, ಧರ್ಮಕಾಮವು ಆತ್ಮವಿಹಾರಿ, ಆತ್ಮವಿಹಾರಕ ಕಾಮವು ಭಕ್ತಿ-ಬೀಜ ಕಾಮಶುದ್ಧಿಯಿಂದ ಭಕ್ತಿ. ಅಭಿವ್ಯಕ್ತ ಭಕ್ತಿಯಿಂದ ಸಮ್ಯಕ್ ಜ್ಞಾನ-ಅ ಜ್ಞಾನದಿಂದ ಭಕ್ತಿ-ಕರ್ಮ ಮುಕ್ತಿ-ಕ್ರಿಯೆ ಇದು ಜೀವನ ಯೋಗ ಈ ದರ್ಶನವೇ ಕಾವ್ಯ. ಮಾನವ ಸಹಜ ಬಯಕೆಗಳಲ್ಲಿ ಒಂದಾದ ಕಾಮದ ಶ್ರೇಷ್ಠತೆಯನ್ನು ಕವಿಗಳು ಅದಕ್ಕೆ ಕೊಟ್ಟಿರುವ ಗೌರವವನ್ನು ಪಟ್ಟಣ ಶೆಟ್ಟರು ಈ ಲೇಖನದಲ್ಲಿ ವಿಶದವಾಗಿ ಹೇಳಿದ್ದಾರೆ. ಬೇಂದ್ರೆಯವರ ಒಲವಿನ ಹಾಡುಗಳಲ್ಲಿ ಅಪ್ರತಿಮ ಪರಕಾಯ ಪ್ರವೇಶಗಳಿವೆ. ಹೆಣ್ಣಾಗಿ, ಯುವತಿಯಾಗಿ, ಸುಂದರಿಯಾಗಿ, ವಿರಹಿಯಾಗಿ ರೂಪಗೊಂಡ ಬಗೆಯನ್ನು ಗುರುತಿಸಿದ್ದಾರೆ. ಯಾವುದೇ ಹಂಗಿಲ್ಲದ ಹಮ್ಮು ಬಿಮ್ಮುಗಳಿಲ್ಲದ ಒಲವಿನ ಕಾವ್ಯವೇ ಶ್ರೇಷ್ಠ. ಒಲವಿನ ಸುಂದರ ಮಂದಿರ ನಿರ್ಮಿಸಿದ ಕವಿ ಬೇಂದ್ರೆ ಎಂಬುದು ಲೇಖಕರ ಅಭಿಪ್ರಾಯವಾಗಿದೆ.

'ಸ್ವಾತಂತ್ರ್ಯೋತ್ತರ ವಿಡಂಬನ ಕಾವ್ಯ' ಲೇಖನದಲ್ಲಿ ಐವತ್ತೆಂಟು ಕವಿಗಳ ಕವನಗಳ ಸಾಲುಗಳನ್ನು ಉದ್ಧರಿಸಲಾಗಿದೆ. ಡಿ.ವಿ.ಜಿ., ಕೈಲಾಸಂ, ಕುವೆಂಪು, ಬೇಂದ್ರೆಯವರಿಂದ ಹಿಡಿದು ಇತ್ತೀಚಿನ ಕವಿಗಳವರೆಗೂ ಕಾವ್ಯ ಲೋಕದಲ್ಲಿ ಮೂಡಿಬಂದ ವಿಡಂಬನೆಯನ್ನು ಗುರುತಿಸಿದ್ದಾರೆ. ರೋಗಗ್ರಸ್ಥ ಸಮಾಜಕ್ಕೆ ವಿಡಂಬನಾ ಸಾಹಿತ್ಯ ಶಸ್ತ್ರಕ್ರಿಯೆ ಮಾಡುತ್ತದೆ ಎಂಬ ಅನಿಸಿಕೆ ಸರಿಯಿದ್ದರೂ ನಮ್ಮಲ್ಲಿ ವಿಡಂಬನಾ ಸಾಹಿತ್ಯ ಒಂದು ಪ್ರಕಾರವಾಗಿ ಬೆಳೆದು ಬಂದಿಲ್ಲ. ನವ್ಯ ಕಾವ್ಯದ ಪ್ರಧಾನ ಗುಣವೇ ವಿಡಂಬನೆಯೆಂದು ಹೇಳುವ ಲೇಖಕರು ಉದಾಹರಣೆಗಾಗಿ ಗೋಕಾಕ್, ಅಡಿಗ ನಾಡಿಗರ ಕವನಗಳ ಸಾಲುಗಳನ್ನು ಉದ್ಧರಿಸಿದ್ದಾರೆ. ನವೋದಯ, ನವ್ಯ, ರಮ್ಯ ಸಂಪ್ರದಾಯದ ಎಲ್ಲಾ ಕವಿಗಳಲ್ಲಿಯೂ ವಿಡಂಬನಾ ಕಾವ್ಯಗಳಿರುವುದರಿಂದ ಬಂಡಾಯದ ಮನೋಭಾವ ಅವರಲ್ಲಿತ್ತು. ಆದಕಾರಣ ಅಧರ್ಮದ, ಅಸಹಜವಾದ, ಅಸತ್ಯದ ಕಾರ್ಯಗಳಿಗೆ ಪ್ರತಿಭಟನೆಯಾಗಿ, ವಿಡಂಬನಾ ಕಾವ್ಯಗಳು ಹುಟ್ಟಿದ ಕಾರಣ ಒಂದರ್ಥದಲ್ಲಿ ಎಲ್ಲಾ ಕವಿಗಳು ಬಂಡಾಯಗಾರರೇ ಎಂಬುದು ಲೇಖಕರ ಅಭಿಪ್ರಾಯ. ಸ್ವಾತಂತ್ರ್ಯೋತ್ತರ ಕಾಲದ ಅವಧಿಯಲ್ಲಿ ಕನ್ನಡ ವಿಡಂಬನ ಕಾವ್ಯಗಳನ್ನು, ಕವಿಗಳನ್ನು ಕಾಲದಿಂದ ಕಾಲಕ್ಕೆ ಬದಲಾದ ವಿಡಂಬನಾ ಧಾಟಿಗಳನ್ನು ವಿಷಯ ವಸ್ತುಗಳನ್ನು ಲೇಖಕರು ಸುಂದರವಾಗಿ ಕಟ್ಟಿಕೊಟ್ಟಿದ್ದಾರೆ.

ಕನ್ನಡ ಕಾವ್ಯಕ್ಕೆ ಹೈದರಾಬಾದ್ ಕರ್ನಾಟಕದ ಕೊಡುಗೆ ಎನ್ನುವ ಲೇಖನದಲ್ಲಿ ಪಟ್ಟಣಶೆಟ್ಟರು ಹನ್ನೆರಡನೇ ಶತಮಾನದಿಂದ ಹಿಡಿದು ಇಲ್ಲಿಯವರೆಗಿನ ಕವಿಗಳನ್ನು ಆರಿಸಿಕೊಂಡಿದ್ದಾರೆ. ವಚನಕಾರರೂ, ದಾಸರೂ, ರಗಳೆ

ಷಟ್ಪದಿ ಕವಿಗಳು, ವಿರುಪಾಕ್ಷಪಂಡಿತ, ದ್ಯಾಂಪುರದ ಚೆನ್ನಕವಿಗಳು, ಜೋಳದರಾಸಿ ದೊಡ್ಡನಗೌಡರು, ಬಳ್ಳಾರಿ ರಾಘವ, ಪಂಚಾಕ್ಷರಗವಾಯಿ, ಕಾವ್ಯಾನಂದರು ಮುಂತಾದವರನ್ನು ಅಭಿಮಾನದಿಂದ ನೆನೆಸುತ್ತಾರೆ. ಪಂಚಾಕ್ಷರಿ ಹಿರೇಮಠರು, ಇಟಗಿ ರಾಘವೇಂದ್ರ, ಕೋ.ಚೆನ್ನಬಸಪ್ಪ, ಚಂದ್ರಕಾಂತ ಕುಸನೂರು, ಶಾಂತರಸ, ಮುದೆನೂರು ಸಂಗಣ್ಣ, ಚೆನ್ನಣ್ಣ ವಾಲೀಕಾರ ಮುಂತಾದವರ ಕಾವ್ಯ ಕೃಷಿಯನ್ನು ಕಾವ್ಯದ ಗುಣ ದೋಷಗಳನ್ನು ಕುರಿತು ವಿವೇಚಿಸುತ್ತಾರೆ.

ಕಾವ್ಯಕ್ಕೆ ಹೊರತಾಗಿಯೂ ಈ ಭಾಗದ ಗದ್ಯ ಸಾಹಿತ್ಯವನ್ನು ಕುರಿತು ವಿವರವಾದ ಮಾಹಿತಿ ನೀಡುತ್ತಾರೆ. ಅಮರೇಶ ನುಗಡೋಣಿ, ಕುಂ.ವೀರಭದ್ರಪ್ಪ ಮುಂತಾದವರ ಗದ್ಯ-ಪದ್ಯ ಸಾಹಿತ್ಯವನ್ನು ಕುರಿತು ಹೇಳುತ್ತಾರೆ.

ನವೋದಯ ಕವಿಗಳ ಪ್ರಭಾವಕ್ಕೆ ಒಳಗಾಗಿ ಉತ್ತಮ ಕಾವ್ಯಗಳನ್ನು ಕನ್ನಡ ಸಾರಸ್ವತ ಲೋಕಕ್ಕೆ ನೀಡಿದ ಇಬ್ಬರು ಪ್ರಮುಖ ಕವಿಗಳಾದ ಚೆನ್ನವೀರ ಕಣವಿ ಮತ್ತು ಜಿ.ಎಸ್.ಶಿವರುದ್ರಪ್ಪನವರ ಕಾವ್ಯ ಮತ್ತು ಪರಂಪರೆಯನ್ನು ಕುರಿತು ಚರ್ಚಿಸಿದ್ದಾರೆ. ಆಗಿನ ಅವಧಿಯಲ್ಲಿ ಅಂದರೆ ಈ ಇಬ್ಬರು ಕವಿಗಳು ತಮ್ಮ ಮೊದಲಿನ ಕವನ ಸಂಕಲಗಳನ್ನು ಪ್ರಕಟಿಸಿದ ಸಂದರ್ಭದಲ್ಲಿ ಕನ್ನಡ ಕಾವ್ಯಕಾಶದಲ್ಲಿ ಬೆಳಗುತ್ತಿದ್ದವರು; ಯಾರೆಂದರೆ ಒಂದು ಕಡೆ ಬೇಂದ್ರೆ ಮತ್ತವರ ಸಂಗಡಿಗರು. ಇನ್ನೊಂದು ಕಡೆ ಕುವೆಂಪು ಮತ್ತವರ ಅನುಯಾಯಿಗಳು. ಇವರ ಪ್ರಭಾವದಿಂದ ಆಗಿನ ಕಾಲದ ಕವಿಗಳಿಗೆ ಹೊರಬರಲು ಸಾಧ್ಯವಾಗಲಿಲ್ಲ. ಕಣವಿಯವರನ್ನು, ಬೇಂದ್ರೆಯವರ ನೆರಳು ಬಾಧಿಸಿದರೆ, ಶಿವರುದ್ರಪ್ಪನವರನ್ನು ಕುವೆಂಪು ಅವರ 'ಭೂತ' ಪೀಡಿಸಿದೆ ಎಂದು ಹೇಳಿದ್ದಾರೆ. ಆದರೂ ಇಬ್ಬರು ಕವಿಗಳು ತಮ್ಮ ಸ್ವಂತಿಕೆಯನ್ನು ತೋರಿಸಲು ಬಹಳ ಪ್ರಯತ್ನಪಟ್ಟರು. ಅದರಲ್ಲಿ ತಕ್ಕಮಟ್ಟಿಗೆ ಯಶಸ್ವೀಯೂ ಆಗಿದ್ದಾರೆ. ಇವರಿಬ್ಬರ ಸೃಜನಶೀಲತೆ ಶುದ್ಧ ಪ್ರಾಮಾಣಿಕ ಸಹಜ ನಿರರ್ಗಳವಾಗಿದೆ. ಒಂದು ನಿಶ್ಚಿತ ಕಾವ್ಯ ಪರಂಪರೆಗೆ ಹೊಂದುವ ಮನಸ್ಸಿದ್ದರೂ ಕಾಲ ಧರ್ಮದ ಪರಿಣಾಮವಾಗಿ ಹೊಂದದೇ ಉಳಿದಿರುವ ಕಣವಿ, ಹಾಗೇ ಹೊಂದುವ ಮನಸ್ಸನ್ನೇ ಹೊಂದಿದೇ ವಿಶಿಷ್ಟವಾಗಿ ಉಳಿದಿರುವ ಶಿವರುದ್ರಪ್ಪನವರು ನಾಡಿನ ಶ್ರೇಷ್ಠ ಕವಿಗಳಾಗಿದ್ದಾರೆ ಎಂದು ಲೇಖಕರು ಅಭಿಪ್ರಾಯ ಪಟ್ಟಿದ್ದಾರೆ.

'ಅಡಿಗ ಮತ್ತು ಅಜ್ಞೇಯ್ ಅವರ ಕಾವ್ಯ' ಲೇಖನವು ನವ್ಯ ಕಾವ್ಯದ ಶ್ರೇಷ್ಠಕವಿ ಮೋಗೇರಿ ಗೋಪಾಲಕೃಷ್ಣ ಅಡಿಗರು ಮತ್ತು ಹಿಂದಿಯ ಸಚ್ಚಿದಾನಂದ್, ಹೀರಾನಂದ್, ವಾತ್ಸಾಯನ್, ಅಜ್ಞೇಯ್ ಅವರ ಕಾವ್ಯದ ತಿರುಳನ್ನು ಸಾಮ್ಯಗಳನ್ನು ಕಾವ್ಯ ವಿಕಾಸದ ಮೆಟ್ಟಿಲುಗಳನ್ನು ಗುರುತಿಸಿದ್ದಾರೆ. ಅಡಿಗರ ಹನ್ನೊಂದು ಕವನ ಸಂಕಲನಗಳು ಮತ್ತು ಅಜ್ಞೇಯ್ ಅವರ ಹದಿನೇಳು ಕವನ ಸಂಕಲನಗಳು, ಅವುಗಳು ಪ್ರಕಟವಾದ ವರ್ಷಗಳನ್ನು ಇಲ್ಲಿ ಪಟ್ಟಿಮಾಡಲಾಗಿದೆ. ಅಡಿಗರ ಕಾವ್ಯದ ಕೆಚ್ಚು ಅಜ್ಞೇಯ್ ಅವರ ಕಾವ್ಯಗಳಲ್ಲಿ ಇಲ್ಲ. ಆದರೆ ಆ ಧೋರಣೆಮಾತ್ರ ಇದೆ. ಹಿಂದಿಯ ಕೋಮಲತೆಯೇ ಇದಕ್ಕೆ ಪ್ರಮುಖವಾದ ಕಾರಣವೆಂದು ಪಟ್ಟಣ ಶೆಟ್ಟರು ಹೇಳುತ್ತಾರೆ. ಈ ಇಬ್ಬರು ತಮ್ಮ ಕಾಲದಲ್ಲಿ ತಮ್ಮ ವಿಚಾರ ಪ್ರಚೋದಕ ಸಾಹಿತ್ಯದಿಂದಾಗಿ ಸಾಕಷ್ಟು ಚರ್ಚೆಗೆ ಒಳಗಾಗಿದ್ದಾರೆ. ಗೌರವಕ್ಕೂ ಭಾಜನರಾಗಿದ್ದಾರೆ. ತಮ್ಮ ಭಾಷೆಯ ಸಾಹಿತ್ಯದಲ್ಲಿ ಹೊಸತನದ ಗಾಳಿ ಬೀಸುವಲ್ಲಿ ಪ್ರಮುಖ ಪಾತ್ರವಹಿಸಿದ್ದಾರೆ. ಒಂದು ಪಂಥದ ನಿರ್ಮಾಪಕರೂ ಆದರೆಂಬುದು ಪಟ್ಟಣಶೆಟ್ಟಿಯವರ ಅಭಿಪ್ರಾಯ.

'ಕನ್ನಡ ಸಾಹಿತ್ಯದ ಮೇಲೆ ಹಿಂದೀ ಸಾಹಿತ್ಯದ ಪ್ರಭಾವ' ಎನ್ನುವ ಲೇಖನವು ಹಿಂದಿಯಿಂದ ಕನ್ನಡಕ್ಕೆ ಅನುವಾದಗೊಂಡ ಸಾಹಿತ್ಯ ಕೃತಿಗಳನ್ನು ಕುರಿತು ಹೇಳುತ್ತದೆ. ಭಾರತದ ಅನ್ಯ ಭಾಷೆಗಳ ಸಾಹಿತ್ಯಗಳೆಲ್ಲವೂ ನೇರವಾಗಿ ಕನ್ನಡಕ್ಕೆ ಅನುವಾದ ಗೊಂಡದ್ದು ಕಡಿಮೆ, ಮೊದಲು ಹಿಂದಿಗೆ ಅನುವಾದಗೊಂಡು ನಂತರ ಕನ್ನಡಕ್ಕೆ ಅನುವಾದ ಗೊಂಡಿದೆ. ಉದಾಹರಣೆಗೆ ಬಂಗಾಳಿಯ ಶರತ್‌ಚಂದ್ರ, ಬಂಕಿಮಚಂದ್ರ, ರವೀಂದ್ರನಾಥ ಠಾಕೂರ್ ಮುಂತಾದವರ ಕೃತಿಗಳು, ಮಹಾತ್ಮ ಗಾಂಧೀಜಿಯವರ ಎಲ್ಲಾ ಕೃತಿಗಳು ಹಿಂದಿಗೆ ರೂಪಾಂತರಗೊಂಡು ಕನ್ನಡಕ್ಕೆ ಅನುವಾದಗೊಂಡಿವೆ. ಹೀಗೆ ಅನುವಾದಗೊಳ್ಳುವಾಗ ಸಹಜವಾಗಿ ಆ ಭಾಷೆಯ ಸಾಹಿತ್ಯದ ಪ್ರಭಾವ ಆಗಿರುತ್ತದೆಯೆಂದು ಹೇಳುದ್ದಾರೆ. ನಮ್ಮ ಯಕ್ಷಗಾನದ ಮೇಲೆ ಬೇಂದ್ರಯವರ 'ಸಾಯೋಆಟ' ಕಮಲೆ, ಭಾರತೇಂದು ಅವರ 'ಅಂಧರ್ ನಗರೀ' ಪ್ರಭಾವವಿದೆ. ಹೀಗೆ ಕನ್ನಡದ ಮೇಲೆ ಹಿಂದಿಯ ಪ್ರಭಾವವನ್ನು ನೇರವಾಗಿ ಖಚಿತವಾಗಿ ಹೇಳಲಾಗದಿದ್ದರೂ, ಅದು ಬೀರಿರುವ ಪ್ರಭಾವವನ್ನು ಅಲ್ಲಗೆಳೆಯಲಾಗದು. ಪ್ರಭಾವ ಸ್ವೀಕರಣ ಸಹಜವಾದದು ಅದು ಪ್ರೇರಕ ಶಕ್ತಿಯಾಗಿ ಕೆಲಸಮಾಡಲಿ ಎಂದು ಶೆಟ್ಟರು ಆಶಯ ವ್ಯಕ್ತ ಪಡಿಸಿದ್ದಾರೆ.

'ಸಮಕಾಲೀನ ಹಿಂದೀ ಸಾಹಿತ್ಯದ ಒಲವುಗಳು' ಎನ್ನುವ ಲೇಖನವು ಹಿಂದೀ ಸಾಹಿತ್ಯದ ಕಥೆ, ಕಾದಂಬರಿ, ತೌಲನಿಕ ಅಧ್ಯಯನ, ನಾಟಕ, ಕಾವ್ಯಮೀಮಾಂಸೆಗಳನ್ನು ಕುರಿತು ಹೇಳುತ್ತದೆ. ಕೋಮಲತೆ ಮತ್ತು ಲಯ ಪ್ರಾಧಾನ್ಯತೆಯನ್ನು ಹೊಂದಿದ ಹಿಂದೀ ಭಾಷೆ ಸ್ವೀಕರಣ ಪದಗಳಿಂದಾಗಿ ಕಠಿಣ ವಿಷಯ ಜ್ಞಾನಗಳನ್ನು ನಿರಾಯಾಸವಾಗಿ ಚರ್ಚಿಸುವಂತಹ ಸಾಮರ್ಥ್ಯವನ್ನು ಪಡೆದುಕೊಂಡಿದೆ. ಭಾರತೀಯ ಕಾವ್ಯಮೀಮಾಂಸೆಯ ಬಗ್ಗೆ ಹಿಂದಿಯಲ್ಲಿ ಸಾಕಷ್ಟು ವಿವೇಚನಾತ್ಮಕ ಕೃತಿಗಳು ಬಂದಿವೆ. ಆಧುನಿಕ ಹಿಂದಿ ಸಾಹಿತ್ಯದಲ್ಲಿ ಡಾ.ನಾಗೇಂದ್ರರ, 'ರಸ್‌ಸಿದ್ಧಾಂತ್' ಉತ್ತಮ ಕೃತಿಯಾಗಿದೆ. ರಾಹುಲ ಸಾಂಕೃತ್ಯಾಯನರು ದೇಶವಿದೇಶಗಳನ್ನು ಸುತ್ತಿದ್ದಾರೆ. ಇವರು ಗ್ರಂಥ ಸಂಪಾದನೆ, ಹಸ್ತಪ್ರತಿ, ಪ್ರವಾಸಾನುಭವಗಳನ್ನು ಹಿಂದಿಯಲ್ಲಿ ದಾಖಲಿಸಿದರು. ಅಲ್ಲಿನ ಜನಪದ ಸಾಹಿತ್ಯವೂ ವೈವಿಧ್ಯಮಯವಾಗಿದೆ. ಕಥನ ಸಾಹಿತ್ಯವೂ ವಿಪುಲವಾಗಿವೆ. ಹಿಂದೀ ಸಾಹಿತ್ಯದ ವೈವಿಧ್ಯತೆಗಳು ವಿವಿಧ ಪ್ರಕಾರಗಳಲ್ಲಿನ ಸಾಧಕರ ಸಾಧನೆಗಳನ್ನು ಇಲ್ಲಿ ದಾಖಲಿಸಲಾಗಿದೆ.

ಪ್ರೇಮಚಂದರ ಕಥೆಗಳು ಲೇಖನವು ಪ್ರೇಮಚಂದರ ಕಥನ ಸಾಹಿತ್ಯವನ್ನು ಕುರಿತು ಹೇಳುತ್ತದೆ. ಇವರು ರಚಿಸಿದ ಎಲ್ಲಾ ಕಥೆಗಳು ಉತ್ಕೃಷ್ಟವಾಗಿರದಿದ್ದರೂ ಹೆಚ್ಚಿನ ಕಥೆಗಳು ವಿಶ್ವ ಸಾಹಿತ್ಯದ ಉತ್ತಮ ಕಥೆಗಳ ಸಾಲಿನಲ್ಲಿ ನಿಲ್ಲ ಬಲ್ಲವು, ಕಲೆ, ತಂತ್ರ, ಶೈಲಿ ಹಾಗೂ ವಿಷಯ ವಸ್ತುವಿನ ದೃಷ್ಟಿಯಿಂದ ಕಥೆಗಳು ತಮ್ಮ ಹೆಚ್ಚಳವನ್ನು ಕಾಯ್ದುಕೊಂಡಿವೆ. ಜೀವನದ ಯಾವುದಾದರೊಂದು ಅಂಶದ ಮೇಲೆ ಬೆಳಕು ಚೆಲ್ಲಿದ ಸಾಮಾಜಿಕ ರೂಢಿಗಳನ್ನು ಕಟುವಿಮರ್ಶೆಗೆ ಒಳಪಡಿಸದ ಮನುಷ್ಯರಲ್ಲಿರುವ ಸದ್ಭಾವನೆಗಳನ್ನು ದೃಢಗೊಳಿಸಿದ ಅಥವಾ ಮನುಷ್ಯನಲ್ಲಿ ಕುತೂಹಲದ ಭಾವನೆಗಳನ್ನು ಜಾಗೃತಗೊಳಿಸದ ಕಥೆ ಕಥೆಯೇ ಅಲ್ಲ ಎಂಬುದು ಪ್ರೇಮಚಂದ್ರರ ಅಭಿಪ್ರಾಯವಾಗಿತ್ತು. ಕಥೆಯ ಬಾಹ್ಯ ಶರೀರವನ್ನು ಯುರೋಪಿನಿಂದ ಪಡೆದಿದ್ದರೂ ಅದರ ಆತ್ಮ ಭಾರತೀಯವಾಗಿದೆ. ಬಡವರ ಬಗ್ಗೆ ಸಹಾನುಭೂತಿ ಮತ್ತು ಭಾರತೀಯ ಸಂಸ್ಕೃತಿಯ ಅಭಿಮಾನ ಇವೆರಡೂ ವೈಶಿಷ್ಟ್ಯಗಳು ಪ್ರೇಮಚಂದ್ರರ ಕಥೆಗಳಲ್ಲಿವೆ ಎಂದು ಲೇಖಕರು ಹೇಳಿದ್ದಾರೆ.

'ಮಹಾದೇವಿ ವರ್ಮಾ' ಹಿಂದೀ ಆಧುನಿಕ ಸಾಹಿತ್ಯದಲ್ಲಿ 'ಆಧುನಿಕ ಮೀರಾ' ಎಂದೇ ಪ್ರಸಿದ್ಧಿ ಉತ್ತಮ ಪ್ರದೇಶದ ಶ್ರೀಮಂತ ಕುಟುಂಬದಲ್ಲಿ ಜನಿಸಿ ಉತ್ತಮ ಶಿಕ್ಷಣ ಪಡೆದು ಸಾಹಿತ್ಯ, ಸಂಗೀತ, ದೇಶಪ್ರೇಮ, ಸಮಾಜಸೇವೆ, ಮಹಿಳಾ ಉದ್ಧಾರ, ಆಧ್ಯಾತ್ಮಸಾಧನೆಗಳಲ್ಲಿ ಸಾಕಷ್ಟು ಕೆಲಸಮಾಡಿದ್ದಾಳೇ. ಪ್ರಕೃತಿಯ ಪ್ರತಿಯೊಂದು ಅಂಗದಲ್ಲಿ, ಕಣ ಕಣದಲ್ಲಿ ಆರಾಧನೆಯ ಅಂತಿಮ ಹಂತದಲ್ಲಿ ಬದುಕಿನ ರಹಸ್ಯಾತ್ಮಕತೆಯ ವಿಶ್ವಾತ್ಮನೊಬ್ಬನ ಸೌಂದರ್ಯವನ್ನು ತೆರೆದಿಡುತ್ತದೆ ಎಂಬ ಸ್ಥೂಲ ಚೌಕಟ್ಟನ್ನು ಮಹಾದೇವಿಯವರ ಎಲ್ಲಾ ಗೀತೆಗಳಲ್ಲಿ ಕಾಣಬಹುದು. ಕಾವ್ಯದಲ್ಲಿ ಸಂಪೂರ್ಣವಾಗಿ ಅಂತರ್ಮುಖಿಯಾಗಿರುವ ಮಹಾದೇವಿಯವರ ವ್ಯಕ್ತಿತ್ವ ಅವರ ಗದ್ಯ ಸಾಹಿತ್ಯದಲ್ಲಿ ಸಮಾಜ ಮುಖಿಯಾಗಿದೆ. ಬಡತನ, ದಾರಿದ್ರ್ಯ, ಶೋಷಣೆಗಳು ಗದ್ಯ ಸಾಹಿತ್ಯದ ವಸ್ತುಗಳಾಗಿವೆ. ಮಹಾದೇವಿವರ್ಮ ಆಧ್ಯಾತ್ಮ ಸಾಧಕಿ, ಸಾಹಿತಿ, ಸಮಾಜ ಸೇವಕಿ ಆಗಿದ್ದಾಳೆಂದು ಪಟ್ಟಣ ಶೆಟ್ಟರು ಹೇಳಿದ್ದಾರೆ.

'ಕನ್ನಡ ಸಾಹಿತ್ಯದ ಮೇಲೆ ಶರತ್‌ಚಂದ್ರರ ಪ್ರಭಾವ' ಎನ್ನುವ ಲೇಖನದಲ್ಲಿ ಬಂಗಾಲಿಯ ಇತರ ಸಾಹಿತಿಗಳಿಗಿಂತ ಹೆಚ್ಚಾಗಿ ಶರತ್‌ಚಂದ್ರರ ಪ್ರಭಾವ ಹೆಚ್ಚಾಗಿರುವುದನ್ನು ಗುರುತಿಸಲಾಗಿದೆ. ಶರತ್‌ಚಂದ್ರರು ತಮ್ಮ ಅನೇಕ ಕೃತಿಗಳಲ್ಲಿ ಮಧ್ಯಮ ವರ್ಗದ ಸ್ತ್ರೀಯರ ಸಮಸ್ಯೆಗಳನ್ನು ಕುರಿತು ಹೇಳಿದ್ದಾರೆ. ಇವರನ್ನು ಕನ್ನಡಕ್ಕೆ ಮೊದಲು ಪರಿಚಯಿಸಿದವರು ಆರ್.ವ್ಯಾಸರಾವ್ ಇವರು ಶರತ್‌ಚಂದ್ರರ ಕೃತಿಗಳನ್ನು ೧೯೩೧ರಲ್ಲಿ 'ಪತಿ' ಮತ್ತು 'ಬಿಡಗಡೆ', ೧೯೩೭ರಲ್ಲಿ 'ಬ್ರಾಹ್ಮಣರ ಹುಡುಗಿ' ಕನ್ನಡಕ್ಕೆ ಅನುವಾದಿಸಿದರು. ಅದೇ ಸಮಯದಲ್ಲಿ ಗುರುನಾಥ ಜೋಶಿಯವರು ಪರಿಣಿತ, ಚಂದ್ರನಾಥ ಕಾದಂಬರಿಗಳನ್ನು ನೇರವಾಗಿ ಬಂಗಾಲಿಯಿಂದ ಅನುವಾದಿಸಿದರು. ವ್ಯಾಸರಾಯ ಬಲ್ಲಾಳ ವಿ.ಎಂ.ಇನಾಂದಾರ, ತ.ರಾ.ಸು, ಬಸವರಾಜ ಕಟ್ಟೀಮನಿ, ಚದುರಂಗ, ಮಿರ್ಜಿಅಣ್ಣರಾಯ, ತ್ರಿವೇಣಿ, ನಿರಂಜನ, ಭೈರಪ್ಪ, ಅನಂತಮೂರ್ತಿಯವರ ಕಾದಂಬರಿಗಳ ಮೇಲೂ ಶರತ್‌ಚಂದ್ರರ ಪ್ರಭಾವವಾಗಿರುವುದನ್ನು ಪಟ್ಟಣ ಶೆಟ್ಟರು ಉದಾಹರಣೆ ನೀಡುವುದರ ಮೂಲಕ ಸೂಚ್ಯವಾಗಿ ಹೇಳಿದ್ದಾರೆ.

'ನಮ್ಮ ಭಾಷಾ ಅಧ್ಯಾಪಕರಿಗೆ ಏನಾಗಿದೆ' ಎನ್ನುವ ಲೇಖನವು ಅಧ್ಯಯನ ಶೀಲರಾಗದ ನಮ್ಮ ಉಪನ್ಯಾಸಕರನ್ನು ಅವರ ಸೋಮಾರಿತನವನ್ನು ಸಾಹಿತ್ಯದ ಒಲವು ಬೆಳೆಸಿಕೊಳ್ಳಲಾರದೇ ತರಗತಿಗಳಲ್ಲಿ ಕುತೂಹಲ ಕಾಯ್ದುಕೊಳ್ಳಲಾರದೇ ವಿಫಲರಾಗುವುದನ್ನು ಹೇಳುತ್ತದೆ.

ಅದೇ ರೀತಿ ಪ್ರಜಾವಾಣಿಯ ಸಾಪ್ತಾಹಿಕ ಪುರವಣಿಗಾಗಿ ಚಹಾದ ಜೋಡಿ ಚೂಡ್ಸದಾಂಗ ಅಂಕಣ ಬರೆಯುವಾಗ ಲೇಖಕರಿಗಾದ ಕಹಿ ಅನುಭವಗಳನ್ನು ಮುಜುಗರದ ಸನ್ನಿವೇಷಗಳನ್ನು ಕುರಿತು ಹೇಳಿದ್ದಾರೆ. ನನ್ನ ಬರವಣಿಗೆಯ ಪ್ರೇರಣೆಗಳು ತಾವು ಸಾಹಿತಿಯಾದ ಬಗೆ ಸಂದರ್ಭಗಳನ್ನು ಹೇಳುತ್ತದೆ. ಒಟ್ಟಾರೆಯಾಗಿ ಈ ಸಂಕಲನದಲ್ಲಿನ ಎಲ್ಲಾ ಲೇಖನಗಳನ್ನು ಕುರಿತು ಕ್ಯಾತನಹಳ್ಳಿ ರಾಮಣ್ಣನವರು ಹೀಗೆ ಹೇಳಿದ್ದಾರೆ. ''ಈ ಸಂಕಲನದ ಯಾವ ಲೇಖನವನ್ನು ಹೊಕ್ಕರೂ ಅಲ್ಲಿ ನಮಗೆ ಕಾಣಸಿಗುವ ಒಂದು ಸಾಮಾನ್ಯ ಅಂಶವೆಂದರೆ ಪಟ್ಟಣಶೆಟ್ಟರ ಪರಿಪೂರ್ಣವೂ, ಆತ್ಮೀಯವೂ, ವಿಶಾಲವೂ ಆದ ದೃಷ್ಟಿ. ಇದು ಎಂಥದೆಂದರೆ ಭೂಮಿಯಿಂದ ಬಹಳ ಎತ್ತರದಲ್ಲಿ ಹಾರುವ ಗರುಡನಂತೆ ತೀಕ್ಷ್ಣ.''[೫೫] ಹೀಗೆ ಈ ಕೃತಿಯು ಕನ್ನಡದ ಶ್ರೇಷ್ಠ ವಿಮರ್ಶಾಕೃತಿಗಳಲ್ಲಿ ಒಂದಾಗಿದೆ.

೫. ಅನುಸ್ವಾದನ

ಡಾ.ಸಿದ್ಧಲಿಂಗ ಪಟ್ಟಣಶೆಟ್ಟರವರ ಐದನೇ ವಿಮರ್ಶಾಕೃತಿ ಈ ಅನುಸ್ವಾದನವಾಗಿದೆ. ೨೦೦೨ರಲ್ಲಿ ಅನನ್ಯ ಪ್ರಕಾಶನ ಧಾರವಾಡದಿಂದ ಪ್ರಕಟಣೆಗೊಂಡಿದೆ. ಲೇಖಕರು ಮೂರು ಭಾಗಗಳಲ್ಲಿ ಇಲ್ಲಿನ ಲೇಖನಗಳನ್ನು ವಿಂಗಡಿಸಿದ್ದಾರೆ. ಮೊದಲನೆಯ ಭಾಗದಲ್ಲಿ ವರದರಾಜ ಹುಯಿಲಗೋಳ, ಶಿವರಾಮ ಕಾರಾಂತ, ಶಾಂತಿನಾಥ ದೇಸಾಯಿ, ಗ.ಹು.ಹೊನ್ನಾಪುರಮಠ, ಎಂ.ಎಂ.ಕಲ್ಬುರ್ಗಿ ಮತ್ತು ಪಂಚಾಕ್ಷರಿ ಹಿರೇಮಠ ಅವರುಗಳ ಕೃತಿ ವಿಮರ್ಶೆಗಳಿವೆ. ಎರಡನೆಯ ಭಾಗದಲ್ಲಿ ಕಬೀರ್‌ದಾಸ ಮತ್ತು ಆಯ್ದಕ್ಕಿ ಲಕ್ಕಮ್ಮನವರ ಸಾಹಿತ್ಯದ ವಿಚಾರವಿದೆ. ಮೂರನೆಯ ಭಾಗದಲ್ಲಿ ಕುವೆಂಪು, ವಿ.ಕೃ.ಗೋಕಾಕ, ಸಿದ್ಧಯ್ಯ ಪುರಾಣಿಕ, ಜಿ.ಎಸ್.ಶಿವರುದ್ರಪ್ಪನವರ ಕಾವ್ಯಗಳಲ್ಲಿ ಮಳೆಗಾಲ ಎನ್ನುವ ಲೇಖನಗಳಿವೆ.

ಗ.ಹು.ಹೊನ್ನಾಪುರುಮಠ ಅವರು ೧೮೬೮ರಲ್ಲಿ ಬರೆದು ಪ್ರಕಟಿಸಿದ ನೀತಿಮಂಜರಿ ಎನ್ನುವ ಕೃತಿ ಕನ್ನಡದಲ್ಲಿ ರಚಿತವಾದ ಮೊದಲ ನೀತಿ ಗ್ರಂಥವಾಗಿದೆ. ಪ್ರಬಂಧ ಸಂಕಲನವಾಗಿರುವ ಇದು ಹನ್ನೊಂದಕ್ಕಿಂತ ಹೆಚ್ಚು ಮುದ್ರಣ ಕಂಡಿರುವುದು ಇದರ ಜನಪ್ರಿಯತೆಗೆ ಸಾಕ್ಷಿಯಾಗಿದೆ. ಗದಿಗಯ್ಯನವರು ನೀತಿ ಮಂಜರಿಯಲ್ಲಿ ಮೂವತ್ನಾಲ್ಕು ಪ್ರಬಂಧಗಳನ್ನು ಬರೆದಿದ್ದಾರೆ. ಇವುಗಳನ್ನು ನೈತಿಕ, ವ್ಯಾವಹಾರಿಕ, ಉಪದೇಶಿಕ, ಐತಿಹಾಸಿಕ ಚರಿತ್ರೆ, ಪೌರಾಣಿಕ ಚರಿತ್ರೆ, ಧಾರ್ಮಿಕ ಚರಿತ್ರೆ, ಜನಾಂಗ ಪರಿಚಯ ಎಂದು ವಿಂಗಡಿಸಬಹುದಾಗಿದೆ. ಇಲ್ಲಿನ ಬಹುತೇಕ ಬರವಣಿಗೆಗಳು ಸದ್ವರ್ತನೆ, ಪರೋಪಕಾರ, ಸ್ವಶಿಕ್ಷಣ, ಅಭಿಮಾನ, ಜೀವನದ ಉಪಯೋಗ, ಲೌಕಿಕ ಜ್ಞಾನ, ಕೀರ್ತಿಯ ಮಹತ್ವ ಕುರಿತು ಹೇಳುತ್ತಾರೆ. ಜಗತ್ತಿನೊಳಗೆ ನೀತಿ ಧರ್ಮಗಳಿಗಿಂತ ಉನ್ನತ ವಸ್ತುಗಳು ಇನ್ನಾವವು ಇಲ್ಲ. ಸತ್ಯ, ನಿಷ್ಕಾಪಟ್ಯ, ಪರೋಪಕಾರ, ಕಷ್ಟ ಸೈರಣೆ, ಔದಾರ್ಯ ಮುಂತಾದ ಗುಣಗಳನ್ನು ಮನುಷ್ಯ ಸಹಜವಾಗಿ ಅಳವಡಿಸಿಕೊಳ್ಳಬೇಕು. ನೇರಮಾರ್ಗದಲ್ಲಿ ನಡೆಯುವವನಿಗೆ ಕೀರ್ತಿ ತಾನಾಗಿಯೇ ಲಭಿಸುವುದೇ ಮನಸಂತೋಷ ಪ್ರಾಪ್ತವಾಗುವುದು ಎಂಬ ಅಂಶಗಳು ಈ ಕೃತಿಯಲ್ಲಿವೆ ಎಂದು ಶೆಟ್ಟರು ಹೇಳಿದ್ದಾರೆ.

ಮನುಷ್ಯ ಜನ್ಮ, ಮರಣ, ನಗೆ, ತಾರುಣ್ಯ, ವೃಧ್ಯಾಪ್ಯ, ಆಶೆ, ಶಾಂತಿ, ಸೌಖ್ಯಗಳು, ಈಶ್ವರ ಭಕ್ತಿ ಮತ್ತು ಬ್ರಹ್ಮಚರ್ಯಗಳು ಇಲ್ಲಿನ ವಿವೇಚನಾತ್ಮಕ ಬರಹಗಳಾಗಿವೆ. ಯಕ್ಷ, ಯುದಿಷ್ಠರರ ಸಂವಾದ, ಭಾಮಾ ಕೃಷ್ಣರ ಸಂವಾದಗಳನ್ನು ಕುರಿತು ವಿವೇಚಿಸಲಾಗಿದೆ. ಧಾರ್ಮಿಕ ವ್ಯಕ್ತಿಗಳಾದ ಶ್ರೀರಾಮಕೃಷ್ಣ ಪರಮಹಂಸ, ಶ್ರೀ ಸ್ವಾಮಿವಿವೇಕಾನಂದ, ಶ್ರೀ ಸಾಮಿರಾಮತೀರ್ಥರು ಮುಂತಾದವರ ಬಗ್ಗೆ ಉತ್ತಮ ಮಾಹಿತಿಯಿದೆ. ನೀತಿಮಂಜರಿಯ ಕೊನೆಯಲ್ಲಿ ವಿದ್ಯಾರ್ಥಿಗಳಿಗೆ ಹೆಚ್ಚು ಉಪಯೋಗವಾಗಲೆಂದು ನಿಜಲಿಂಗ ಶತಕ, ಸೋಮೇಶ್ವರ ಶತಕ, ಸರ್ವಜ್ಞನ ನೀತಿ ಪ್ರಧಾನ ತ್ರಿಪದಿಗಳನ್ನು ಕೊಡಲಾಗಿದೆ. ವಿದೇಶಿ ಚಿಂತಕರಾದ ಸಾಕ್ರೆಟೀಸ್, ಸೆನೆಕಾ, ಸಿಸಿರೋ, ಲಾರ್ಡ್‌ಮೆಕಾಲೆ, ಬೆಂಜಮಿನ್ ಪ್ರಾಂಕ್ಲಿನ್, ಶೇಕ್ಸ್‌ಪಿಯರ್ ಮಿಲ್ಟನ್, ಗಿಬ್ಬನ್ ಮುಂತಾದವರ ಉಕ್ತಿಗಳನ್ನು ಸಂದರ್ಭೋಚಿತವಾಗಿ ಬಳಸಿಕೊಂಡಿದ್ದಾರೆ. ಇದರಿಂದ ಕೃತಿಯ ತೂಕ ಹೆಚ್ಚಾಗಿದೆಯೆಂದು ಪಟ್ಟಣಶೆಟ್ಟರು ಹೇಳಿದ್ದಾರೆ. ಲೇಖಕರು ನೀತಿಮಜರಿಯ ಕೆಲವು ಉಕ್ತಿಗಳನ್ನು ಉದಾಹರಣೆಯಾಗಿ ನೀಡುತ್ತಾರೆ. ವಿವೇಕಿಗಳು ಮುಂಚೆ ವಿಚಾರಮಾಡಿ ಹಿಂದುಗಡೆ ಮಾತನಾಡುತ್ತಾರೆ. ವಿವೇಕ ಶೂನ್ಯರು ಮುಂಚೆ ಮಾತನಾಡಿ ಹಿಂದುಗಡೆ ವಿಚಾರ ಮಾಡುತ್ತಾರೆ. ಸಿಟ್ಟು

ಮತ್ತು ಹುಚ್ಚು ಇವೆರಡೂ ಒಂದೇ ಸರದೊಳಗಿನ ಮಣಿಗಳು ವಿದ್ಯೆಯು ಭೂಮಿಗೂ ಆಕಾಶಕ್ಕೂ ಹಚ್ಚಿದ ನಿಚ್ಚಣಿಕೆಯಂತಿರುವುದು, ಹೇಡಿಗಳು ತಮ್ಮನ್ನು ಮರಣವು ಕರೆಯುವ ಮುಂಚೆ ಸಾಯುವರು. ವೀರರು ತಾವಾಗಿ ಮರಣವನ್ನು ಕರೆದು ಆನಂದದಿಂದ ಮಡಿಯುವರು.

ಇಲ್ಲಿನ ಎರಡನೆಯ ವರದರಾಜು ಹುಯಿಲಗೋಳರ 'ದಯಾಸಾಗರ' ಈ ಕಥಾ ಸಂಕಲನದಲ್ಲಿ ಆರು ಕಥೆಗಳನ್ನು ಶೆಟ್ಟರು ವಿಮರ್ಶಿಸಿದ್ದಾರೆ. ಗುರುಕೃಪೆ ಹಾಗೂ ದೈವ ಕೃಪೆಯಿಂದ ವಿವೇಕ ಹಾಗೂ ಆನಂದ ಪಡೆದು ವಿವೇಕಾನಂದನಾಗಿ ಪರಿವರ್ತಿತನಾದ ನರೇಂದ್ರನ ಬದುಕಿನ ಮಹತ್ವದ ಘಟನೆಗಳನ್ನು ಕುರಿತು ಮಾಹಿತಿ ನೀಡುವ ಕಥೆಯೇ ದಯಾಸಾಗರ. ನರೇಂದ್ರನಿಗೆ ಎಲ್ಲಾ ಯುವಕರಿಗೆ ಕಾಡುವ ಆರ್ಥಿಕ ಅಡಚಣೆ, ನಿರುದ್ಯೋಗ ನಡುವೆ ತಂದೆ ವಿಶ್ವನಾಥದತ್ತರ ಸಾವು, ಸಹೋದರಿಯ ಜವಾಬ್ದಾರಿ ಇತ್ಯಾದಿ, ಸಂಕಟಗಳ ಸರಮಾಲೆಯಲ್ಲಿ ನರೇಂದ್ರ ಸಿಲುಕಿದಾಗ ಅವನಿಗೆ ದೇವರ ದಯೆಯ ಬಗ್ಗೆ ಅನುಮಾನ ಮೂಡುತ್ತದೆ. ಕೊನೆಗೆ ದೇವರ ಸಾಕ್ಷಾತ್ಕಾರದಿಂದಾಗಿ ಎಲ್ಲವೂ ಸುಖಾಂತವಾಗುತ್ತದೆ. ನರೇಂದ್ರರ ಘನ ವ್ಯಕ್ತಿತ್ವವನ್ನು ಈ ಕಥೆಯಲ್ಲಿ ಹಿಡಿದಿಡುವಲ್ಲಿ ವರದರಾಜರು ಯಶಸ್ವಿಯಾಗಿದ್ದಾರೆ ಎಂದು ಪಟ್ಟಣಶೆಟ್ಟರು ಅಭಿಪ್ರಾಯ ಪಟ್ಟಿದ್ದಾರೆ.

ಕಾಲಚಕ್ರ ಕಥೆಯು ಗ್ರಾಮ ಜೀವನವು ಯಂತ್ರ ಯುಗ, ಅರ್ಥದಾಸ್ಯ, ಚಾರಿತ್ರ್ಯ ರಾಹಿತ್ಯ ಮುಂತಾದವುಗಳಿಂದಾಗಿ ನಮ್ಮ ಸಂಸ್ಕೃತಿ ಯಾವ ರೀತಿಯಲ್ಲಿ ಅವನತಿಯ ಹಾದಿ ಹಿಡಿಯುತ್ತದೆ. ಇವೆಲ್ಲದರ ನಡುವೆ ವೈಯಕ್ತಿಕ ಬದುಕು ತಲ್ಲಣಗೊಂಡು ಒದ್ದಾಡುವದನ್ನು ಕುರಿತು ಕಥೆ, ಸಾದರ ಪಡಿಸುವುದು ಎಂಬುದು ಲೇಖಕರ ಅಭಿಪ್ರಾಯವಾಗಿದೆ.

'ಕಾಣುವುದಿಲ್ಲವೇ' ಕಥೆ ಕಥಾನಾಯಕಿ ಮದುವೆ-ಸಂತಾನ ವಿಫಲತೆಯನ್ನು ಮಾನಸಿಕ ಮತ್ತು ಸಾಮಾಜಿಕ ಹಿನ್ನೆಲೆಗಳಲ್ಲಿ ವಿವೇಚಿಸಲಾಗಿದೆ.

'ನೆಳಲು ಬೆಳಕು' ಕಥೆಯು ಸರಳ ಜೀವಿಗಳ ಪ್ರೀತಿ ಒಲವುಗಳನ್ನು 'ನಮ್ಮ ಸರಸ್ವತಿ' ಕಥೆಯ ಜಾತಿ ಸಮಸ್ಯೆಯನ್ನು ಕುರಿತು ಹೇಳುತ್ತವೆ. ಹೀಗೆ ವರದರಾಜರು ಗ್ರಾಮ ಜೀವನ ಸಂಸ್ಕೃತಿಯ ಅವನತಿ ಬದುಕಿನ ಕ್ಷಣಿಕತೆ ಚಾಂಚಲ್ಯ, ಮನಶಾಸ್ತ್ರೀಯ ಸಮಸ್ಯೆಗಳು, ಹಾಸ್ಯ ಪರಿಹಾಸ್ಯಗಳಿಗೆ ಒಳಗಾಗುವ ಕುಟುಂಬ ಜೀವನ, ಸಮಾಜವನ್ನು ಕಾಡುವ ಜಾತಿ ಭೂತ ಮುಂತಾದವುಗಳನ್ನು ಕುರಿತು ಹೇಳುವಲ್ಲಿ ಯಶಸ್ವಿಯಾಗಿದ್ದಾರೆಂದು ಪಟ್ಟಣಶೆಟ್ಟರು ಅಭಿಪ್ರಾಯಪಟ್ಟಿದ್ದಾರೆ.

ಈ ಸಂಕಲನದ ಮೂರು ಮತ್ತು ನಾಲ್ಕನೆಯ ಲೇಖನಗಳು ಶಿವರಾಮ ಕಾರಂತರ 'ಅಳಿದಮೇಲೆ' ಮತ್ತು 'ಬಾಳ್ವೆಯೇ ಬೆಳಕು' ಕೃತಿಗಳನ್ನು ಕುರಿತು ಹೇಳುತ್ತವೆ. ಇಲ್ಲಿ ಪಟ್ಟಣಶೆಟ್ಟರು ನಿಖರವಾಗಿ ತಮ್ಮ ಅಭಿಪ್ರಾಯವನ್ನು ಹೇಳಿದ್ದಾರೆ. ''ಶಿವರಾಮ ಕಾರಂತರ ಎಲ್ಲಾ ಕಾದಂಬರಿಗಳಲ್ಲಿ ಅವರ 'ಅಳಿದ ಮೇಲೆ' ಸರ್ವ ಶ್ರೇಷ್ಠವಾದದ್ದೆಂದೇ ನನ್ನ ಭಾವನೆ. ಬದುಕಿನ ಶಾಶ್ವತ ಮೌಲ್ಯಗಳನ್ನು ಅತ್ಯಂತ ಆಪ್ತವಾಗಿ ತನ್ನ ಮತ್ತು ತನ್ನ ಬಂಧುಮಿತ್ರರ ಕಥೆಯನ್ನು ಹೇಳುವಷ್ಟು ಸಲೀಸಾಗಿ ಎಲ್ಲಾರೀತಿಯ ಓದುಗರಿಗೂ ಹಿಡಿಸುವಂತಹ ಚಿತ್ರಪಹಾರಿ ಶೈಲಿಯಲ್ಲಿ, ಹೇಳುವಲ್ಲಿ, ನಿರೂಪಿಸುವಲ್ಲಿ ಕಾರಂತರಿಗೆ ಈ ಕೃತಿಯಲ್ಲಿ ಅಪಾರ ಯಶಸ್ಸು ಸಿಕ್ಕಿದೆ.''[೨೫] 'ಅಳಿದ ಮೇಲೆ' ಕಾದಬರಿಯು ಕೇವಲ

ಕನ್ನಡ ಕಾದಂಬರಿ ಕ್ಷೇತ್ರದಲ್ಲಿ ಮಾತ್ರ ವಿಶಿಷ್ಟತೆಯನ್ನು ಪಡೆಯದೇ ಭಾರತೀಯ ಕಾದಂಬರಿಗಳಲ್ಲಿ ಅಗ್ರ ಪಂಕ್ತಿಯದ್ದಾಗಿದೆ. ‘‘ಬದುಕಿನ ಯಾವ ಗಳಿಗೆಯಲ್ಲಿಯೂ, ಯಾವ ವಯಸ್ಸಿನಲ್ಲಿಯೂ ಮನುಷ್ಯನ ಚಿತ್ರ ಮಂದಿರವನ್ನು ಪರಿಶುದ್ಧವಾಗಿ ಕಟ್ಟುವಲ್ಲಿ ನಿರ್ಮಿಸುವಲ್ಲಿ ಯಶಸ್ವಿಯಾಗುವ ಇಂಥ ಸಂಯಮಿತ ಕೃತಿ ಕನ್ನಡದಲ್ಲಿ ಅಷ್ಟೆ ಅಲ್ಲ ಭಾರತದ ಯಾವುದೇ ಭಾಷೆಯಲ್ಲಿ ಬಂದಹಾಗೇ ಕಾಣೆ ಅಳಿದಮೇಲೆಯೂ ಉಳಿಯುವ ಅನನ್ಯ ಕೃತಿ ಇದು’’[೫೭] ಎಂದು ಪಟ್ಟಣಶೆಟ್ಟರು ಹೇಳುತ್ತಾರೆ.

ಶಿವರಾಮ ಕಾರಂತರ ಚಿಂತನ ಬರಹಗಳಲ್ಲಿ ಪಟ್ಟಣಶೆಟ್ಟರಿಗೆ ಅತಿ ಮುಖ್ಯವಾಗಿ ಕಂಡದ್ದು ಬಾಳ್ವೆಯೇ ಬೆಳಕು ಕಾರಂತರ ವ್ಯಕ್ತಿತ್ವವನ್ನು ಸಂಕ್ಷಿಪ್ತವಾಗಿ ಹೇಳುತ್ತಾ ಅವರ ಚಿಂತನಾ ಕೃತಿಗಳನ್ನು ಹೆಸರಿಸುತ್ತಾ ಬಾಳ್ವೆಯ ಬೆಳಕಿನ ಸಂಕ್ಷಿಪ್ತ ಸಾರಾಂಶವನ್ನು ಸಂಗ್ರಹಿಸಿ ಕೊಟ್ಟಿದ್ದಾರೆ. ‘‘ಪ್ರತಿಯೊದು ಜೀವಿಯೂ ತನ್ನ ಬದುಕನ್ನು ಇದಿರಿಸುತ್ತದೆ. ಹುಟ್ಟಿದೊಡನೆ ಮಗುವಿಗೆ ಬಾಳ್ವೆ ಇದಿರಾಗುತ್ತದೆ. ನಂತರ ಅದು ಮಣ್ಣುಗೂಡುವ ತನಕ ಬದುಕಿನೊಡನೆ ಹೋರಾಡಬೇಕಾಗುತ್ತದೆ. ಪ್ರಪಂಚ ಬದುಕು ಬಾಳ್ವೆಗಳು ಮನುಷ್ಯ ಜೀವಿಯ ಜೀವನ ಭಾಗಗಳು ಪ್ರಪಂಚ ವ್ಯಕ್ತಿಯ ಸುತ್ತ ಇರುವಂತಹದು, ಬದುಕು ಎದುರಾಗುವಂತದು, ಬಾಳ್ವೆ ಎದುರಿಸಿ ಪಡೆಯುವಂತಹದು. ವ್ಯಕ್ತಿ ಬೆಳೆದಂತೆ, ಆಹಾರ, ಅನ್ಯರ ಅನುಕರಣೆ ಯಾರದೋ ತೀರ್ಮಾನ ಮುಂತಾದವು ಸಮಸ್ಯೆಯಾಗುತ್ತದೆ. ವ್ಯಕ್ತಿಗೆ ಅರಿವು ಮುಖ್ಯ. ಅರಿವಿನಿಂದ ಬೆಳಕು ಅರಳಬೇಕು. ಏನು? ಏಕೆ? ಹೇಗೆ? ಎಂಬ ಪ್ರಶ್ನೆಗಳು ಬದುಕನ್ನು ಸರಿಪಡಿಸಿಕೊಳ್ಳಲು ಸಹಾಯ ಮಾಡುತ್ತವೆ. ನಮ್ಮಲ್ಲಿ ಪ್ರಚಲಿತವಿರುವ ತತ್ವಜ್ಞಾನಗಳಲ್ಲಿ ಸಾವು ನಮ್ಮನ್ನು ಅಳತೆ ಮೀರಿ ಹೆದರಿಸುತ್ತದೆ. ಸಾವಿನ ಭಯ ಬೇತಾಳವಾಗಿ ನಮ್ಮ ತಳಮಳವನ್ನು ಹೆಚ್ಚಿಸುತ್ತದೆ. ಹುಟ್ಟು ಸಾವಿನ ನಡುವಿನ ಬದುಕು ನಮಗೆ ಮುಖ್ಯವಾಗಬೇಕು. ಸಾವು ಒಂದು ಸಹಜ ಪ್ರಕ್ರಿಯೆ, ಚೆನ್ನಾಗಿ ಬದುಕಿದವನು ಸಾವನ್ನೂ ಸಹ ಹಿತವಾಗಿ ತಿಳಿಯುತ್ತಾನೆ. ಸಂತೆ ಮುಗಿದೊಡನೆ ಸಂತೆಯೇ ಆ ತಾಣವನ್ನು ಬಿಡಬೇಕು ಅದು ಅನುಭವಗಳ ಸಂತೆ, ಕಳಿತ ಮೇಲೆಯೂ ಹಣ್ಣು ತೊಟ್ಟಿಗೆ ತಗಲಿಕೊಂಡಿರಬಾರದು. ಮೋಕ್ಷ, ಸ್ವರ್ಗ, ನರಕ ಎಂಬುವು ದೇವರು ಎಂಬುದು ಮತಗಳು ಹುಟ್ಟಿಸಿದ ಮರಿ, ದೇವರ ಕಲ್ಪನೆಯ ಮೂಲದಲ್ಲಿ ಭೀತಿಯಿದೆ. ಭೀತಿಯಿಂದಾಗಿ ದೇವರ ಹುಟ್ಟು ಸಮನಾದ ಬಾಳ್ವೆಗೆ ಬಾಳ್ವೆಯ ಅರ್ಥಕ್ಕೆ ವಿಘಾತಕಾರಿಯಾಗಿದೆ. ಒಬ್ಬ ವ್ಯಕ್ತಿಯ ಜೀವನ ಇನ್ನೊಬ್ಬದರ ಪುನರಾವೃತ್ತಿ ಆಗಬಾರದು ಹೀಗೆ ಮತ ದೇವರುಗಳು ಭೀತಿಯಿಂದ ಹುಟ್ಟಿದ ಮನೋಧರ್ಮ ಎಂಬುದರ ಅರಿವು ಮುಖ್ಯ’’[೫೮] ಕಾರಂತರ ದೃಷ್ಟಿಕೋನ ವೈಚಾರಿಕತೆಯಿಂದ ಕೂಡಿದೆ. ಗಹನವಾದ ಆಲೋಚನೆಗಳು ಬದುಕನ್ನೂ ಬಗೆದು ತೋರಿಸುವಲ್ಲಿ ಯಶಸ್ವಿಯಾಗುತ್ತವೆ ಎನ್ನುವ ಶೆಟ್ಟರು, ಕಾರಂತರ ಇನ್ನಷ್ಟು ವಿಚಾರಗಳನ್ನು ಸಂಕ್ಷೇಪಿಸಿ ನೀಡಿದ್ದಾರೆ. ಸಂಪ್ರದಾಯ, ಗೋರಿ, ಗುಡಿ, ಕರ್ಮಫಲ, ವಿವಿಧ ದೇವರು ಪರಲೋಕ ಇತ್ಯಾದಿ ನಂಬಿಕೆಗಳು ಹೊಸ ಬೆಳವಣಿಗೆಗೆ ತೊಡಕಾಗುವ ಹಳೆಯ ಪರಂಪರೆಗಳು ಅವರವರ ಜೀವನದ ತಿಳಿವು ಅವರಿಂದಲೇ ಬೆಳೆಯ ತಕ್ಕದ್ದು. ಅದೇ ಸತ್ಯಾನ್ವೇಷಣೆ, ವ್ಯಕ್ತಿ ಪುರಾಣಗಳನ್ನು, ಭೌಗೋಳಿಕ ಆವರಣಗಳನ್ನು ತ್ಯಜಿಸಬೇಕು. ನಮ್ಮ ಬದುಕೇ ನಮಗೆ ಹಿರಿದಾದ ದೇವರು, ಜೀವನದಿಂದಲೇ ದೇವರು ಉದ್ಭವಿಸಬೇಕು. ನಮಗೆ ಇಂದ್ರಿಯಗಮ್ಯ ಅನುಭವ, ಅನುಭವಗಳ ಸ್ವೀಕರಣೆ ಮುಖ್ಯ ನಿರಾಕರಣೆಗಳಿಂದ ಅನುಭವಗಳು ಮಿತಿಗೊಳ್ಳುತ್ತವೆ. ಬಾಳ್ವೆ ಸ್ವೀಕರಣೆಗಿದೆ ನಿರಾಕರಣೆಗಲ್ಲ, ಸಮಸ್ತ ಮನುಷ್ಯ

ಕುಟುಂಬ ನಮ್ಮದಾಗಬೇಕು. ನಾವು ಸಾಧಿಸಬೇಕಾದ ಕಾರ್ಯಗಳಿಗಾಗಿ ಈ ನಮ್ಮ ಕಾಯವಿದೆ. ನಮ್ಮದು ಮಿತಿಯಾದ ಹೊಣೆ, ಇಡೀ ವಿಶ್ವವನ್ನು ನಾವು ಅರಿಯಲಾರೆವು ಮತ್ತು ಆ ಅಗತ್ಯವೂ ಇಲ್ಲ. ನಾವು ಕಾಳಗದ ಸೇನಾನಿಯಂತಿರಬೇಕು. ಮನುಷ್ಯ ಸ್ವಾರ್ಥಿಯಾದದ್ದು ಅನ್ನ ವಸ್ತು ವಡವೆಗಳಿಂದ ಅಧಿಕಾರ ಸಂಗ್ರಹದಿಂದ, ಜೀವನದಲ್ಲಿ ಅಭಿವೃದ್ಧಿ ನಿರಂತರ ವಿಕಾಸನದ ಗುರಿಯಾಗಿರಬೇಕು. ಜೀವನವನ್ನು ಸಮಷ್ಟಿಯಿಂದ ನೋಡಬೇಕು. ಸಾವು, ವಿಶ್ರಾಂತಿ, ನಮಗೆ ಸಿಗುವ ಬಹುಮಾನ, ಸಾವು ಮತ್ತು ಸೋಲನ್ನು ನಾವು ಒಪ್ಪಬೇಕು. ಇಂದು ಎನ್ನುವುದು ದೊಡ್ಡದು ಬಾಳ್ವೆ ಇರುವುದು ಬದುಕಿ ಬೆಳೆಯಲು, ಅನುಭವಗಳಿಂದ ಪ್ರತಿಸೃಷ್ಟಿ ಸಾಧ್ಯವಾಗುತ್ತದೆ. ಸಿಕ್ಕಷ್ಟು ಜ್ಞಾನ ತುಂಬಿಕೊಳ್ಳುವುದೇ ಕರ್ತವ್ಯ, ನಾವು ಮನೋದಾಸ್ಯಗಳಿಂದ ಮುಕ್ತರಾಗಬೇಕು. ಸಮಾಜದ ಶಿಕ್ಷಣಕ್ಕೆ ದೊಡ್ಡಸ್ಥಾನ ಸಿಗಬೇಕು. ಸಂಸ್ಕೃತಿ, ನಾಗರೀಕತೆ, ಇತ್ಯಾದಿ ಶಿಕ್ಷಣದಿಂದಲೇ ರೂಪಿತಗೊಳ್ಳುತ್ತವೆ. ಕಾಮ ಪ್ರೇಮ, ಪ್ರಣಯಗಳು ಸಹಜ ಭಾವಗಳು ಕಾರಂತರದು. ಮುಕ್ತ ಮನಸ್ಸಿನಿಂದ ಕೂಡಿದ ಸ್ಪಷ್ಟ ವಿಚಾರ ಸರಣಿ. ಕಾರಂತರು ದೇವರನ್ನು ಕುರಿತು ಬರೆದುದು ಅನೇಕರ ಮೇಲೆ ಪ್ರಭಾವ ಬೀರಿತು. ಎ.ಎನ್. ಮೂರ್ತಿರಾಯರ 'ದೇವರು' ಡಿ.ವಿ.ಜಿ.ಯವರ, 'ಬಾಳಿಗೊಂದು ನಂಬಿಕೆ', ಸಂಸ್ಕೃತಿ, ದೇವರು ಒಂದು ವಿಚಾರಲಹರಿ, ಕೃತಿಗಳು ಕಾರಂತರ ಬಾಳ್ವೆಯೇ ಬೆಳಕು ಅಡಿಯಲ್ಲಿ ಮೂಡಿ ಬಂದಿವೆ. ಎಂದು ಪಟ್ಟಣಶೆಟ್ಟರು ಹೇಳಿದ್ದಾರೆ.

ಶಾಂತಿನಾಥ ದೇಸಾಯಿಯವರ 'ಸೃಷ್ಟಿ' ಲೇಖನದಲ್ಲಿ ಪಟ್ಟಣಶೆಟ್ಟರು ಸೃಷ್ಟಿ ಕಾದಂಬರಿ ರಚನೆಯ ಕಾಲ ಸಂದರ್ಭಗಳನ್ನು ನೆನಪಿಸುತ್ತಾ ಅದಕ್ಕೆ ಬೆನ್ನುಡಿಯನ್ನು ಬರೆದಿದ್ದಾರೆ. ಕಾದಂಬರಿಯ ತಂತ್ರ ಕುರಿತು ಹೇಳುತ್ತಾ ಬಾದಲ್ ಸರ್ಕಾರ್ ಮತ್ತು ಶ್ರೀ ರಂಗರ ಕೆಲವು ನಾಟಕಗಳನ್ನು ನೆನಪಿಗೆ ತರುವ ಇಲ್ಲಿಯ ತಾಂತ್ರಿಕ ಪ್ರಯೋಗ ಬಾಹ್ಯದಲ್ಲಿ ನವ್ಯವೆನಿಸಿದರೂ ಅದರ ಮೂಲಸತ್ವ ಹಾಗೂ ಜೀವಾಳ ನಮ್ಮ ಬಯಲಾಟ ಯಕ್ಷಗಾನ ಪರಂಪರೆಯಲ್ಲಿರುವುದರಿಂದ ಓದುಗರಿಗೆ ಆತ್ಮೀಯವಾಗುತ್ತದೆ. ಎಂದು ಹೇಳಿದ್ದಾರೆ. ಆದರೆ ೧೯೮೭ ಮಾರ್ಚ್ ತಿಂಗಳಿನಲ್ಲಿ ಚಿಕ್ಕ ಮಗಳೂರಿನಲ್ಲಿ ನೆಡೆದ ೫೬ನೇ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಡಾ.ಎಸ್.ಎಲ್.ಭೈರಪ್ಪ ನವರು ಕಳೆದ ಐದು ವರ್ಷಗಳ ಸಾಹಿತ್ಯ ಎಂಬ ಗೋಷ್ಠಿಯ ಅಧ್ಯಕ್ಷ ಭಾಷಣದಲ್ಲಿ ಸೃಷ್ಟಿ ಕಾದಂಬರಿಯ ತಂತ್ರದ ಬಗ್ಗೆ ಪಟ್ಟಣಶೆಟ್ಟರ ಅಭಿಪ್ರಾಯಗಳನ್ನು ತಮ್ಮದೆಂಬಂತೆ ಬಿಂಬಿಸುತ್ತಾರೆ. ಇದಕ್ಕೆ ಪ್ರತಿಯಾಗಿ ಡಾ.ಎಚ್.ಸಿ. ವಿಷ್ಣುಮೂರ್ತಿಯವರು ದಿನಾಂಕ ೩೦.೦೪.೧೯೮೧ ರಂದು ಕನ್ನಡ ಪ್ರಭ ಪತ್ರಿಕೆಗೆ ಪತ್ರಬರೆದು ಪ್ರಕಟಿಸಿ ಅದನ್ನು ಅಲ್ಲಗಳೆಯುತ್ತಾರೆ. ಗಿರಡ್ಡಿ ಗೋವಿಂದರಾಜು ಅವರೂ ಸಹಿತ ಮಯೂರದಲ್ಲಿ ಬರೆಯುತ್ತಾ ಸೃಷ್ಟಿ ಕಾದಂಬರಿಯ ಬೆನ್ನುಡಿಯಲ್ಲಿ ಈ ವಿಷಯವಿರುವ ಬಗ್ಗೆ ಹೇಳುತ್ತಾರೆ. ಆದರೆ ಬೆನ್ನುಡಿ ಬರೆದ ಸಿದ್ಧಲಿಂಗ ಪಟ್ಟಣಶೆಟ್ಟರ ಹೆಸರನ್ನು ಮಾತ್ರ ಹೇಳುವುದಿಲ್ಲ. ನಂತರ ಭೈರಪ್ಪ ನವರು ೧೯೮೪ ಮಾರ್ಚ್ ೧೮ರ ಕನ್ನಡ ಪ್ರಭಾ ಸಂಚಿಕೆಯಲ್ಲಿ ಬರೆಯುತ್ತಾ ಸೃಷ್ಟಿ ಕಾದಂಬರಿಯ ತಂತ್ರದ ಬಗ್ಗೆ ನಾನೇ ಮೊದಲು ಕಂಡುಹಿಡಿದೆನೆಂದು ಹೇಳಿಕೊಂಡಿಲ್ಲ; ಪ್ರಕಾಶಕರೇ ಅದರ ಬೆನ್ನುಡಿಯಲ್ಲಿ ಹೇಳಿದ್ದಾರೆ ಎಂದು ಬರೆಯುತ್ತಾರೆ. ಹೀಗೆ ಪತ್ರಿಕೆಗಳಲ್ಲಿ ಪ್ರಕಟಗೊಂಡ ಪತ್ರಗಳ ಜೊತೆಗೆ ಸಾಹಿತಿಗಳ ಸಣ್ಣತನವನ್ನು ತಪ್ಪುಮಾಡಿ ಸಮರ್ಥಿಸಿಕೊಳ್ಳುವ ವಾದವನ್ನು ಕುರಿತು ಹೇಳುತ್ತಾರೆ. ಕನ್ನಡ ಸಾಹಿತ್ಯಲೋಕ ಸಾಕಷ್ಟು ಜನಪ್ರಿಯವಾಗಿರುವ ಈ ಇಬ್ಬರ ಬರಹಗಳನ್ನು ಕುರಿತು ಸಹೃದಯ ವಿಮರ್ಶಕರು ಪ್ರಾಮಾಣಿಕವಾಗಿ ಯೋಚಿಸಲಿ ಎಂದು ಹೇಳಿದ್ದಾರೆ.

ಎಂ.ಎಂ. ಕಲಬುರ್ಗಿ ನಾಡಿನ ಖ್ಯಾತ ಸಂಶೋಧಕರಲ್ಲಿ ಒಬ್ಬರು. ಸಂಶೋಧನೆ ಮತ್ತು ವಿಮರ್ಶ ಕ್ಷೇತ್ರದಲ್ಲಿ ದೊಡ್ಡ ಕೆಲಸಗಳನ್ನು ಮಾಡಿದ್ದಾರೆ. ಇವರು ಸೃಜನಶೀಲ ಕೃತಿಗಳಲ್ಲಿ ಯಶಸ್ಸು ಸಾಧಿಸಿದ್ದು ಬಹಳ ಕಡಿಮೆ. ಅವರ 'ಕೆಟ್ಟಿತ್ತು ಕಲ್ಯಾಣ' ನಾಟಕವು ಬಸವಣ್ಣನವರನ್ನು ಕುರಿತುದಾಗಿದೆ.

ಬಾಗೇವಾಡಿ, ಕೂಡಲ ಸಂಗಮ, ಮತ್ತು ಕಲ್ಯಾಣಗಳಲ್ಲಿ ಹರಡಿದ ಬಸವಣ್ಣನವರ ಸಮಗ್ರ ಬದುಕಿನ ನೋವು ನಲಿವುಗಳು, ವಿಚಾರ ಕ್ರಾಂತಿಗಳು ಈ ನಾಟಕದಲ್ಲಿವೆ. ಅಗ್ರಹಾರ ಸಂಸ್ಕೃಯಿಂದ ಬೇಸತ್ತು. ದೇವಾಲಯ ಪರಿಸರದಲ್ಲಿ ಹೊಸ ಸಂಸ್ಕೃತಿಯನ್ನು ಅರಸಿ ಹೋದ ಬಸವಣ್ಣ, ಅಲ್ಲಿಯೂ ನಿರಾಸೆಗೊಂಡು ಕಡೆಗೆ ರಾಜ ಸಂಸ್ಕೃತಿಯಲ್ಲಿ ಕ್ರಾಂತಿ ಮಾಡಿದರೂ ಈ ಮೂರೂ ಸಂಸ್ಕೃತಿಗಳು ಬಸವಣ್ಣನನ್ನು ಮುಗಿಸಿದ ಚಿತ್ರ ಈ ನಾಟಕದಲ್ಲಿದೆ. ಆದರೆ ಈ ಕೃತಿ ಒಂದು ನಾಟಕವಾಗಿ ಸೋಲನ್ನು ಅನುಭವಿಸುತ್ತದೆ. ನಾಟಕಕ್ಕೆ ಅನಿವಾರ್ಯವಾದ ತಂತ್ರಗಳು, ಚಿಕ್ಕಚಿಕ್ಕ ಮಾತುಗಳು, ಕಡಿಮೆ ದೃಶ್ಯಗಳು, ಕಡಿಮೆ ಪಾತ್ರಗಳು ಇವೆಲ್ಲ, ಈ ಕೃತಿಯಲ್ಲಿ ಇಲ್ಲ. ಇಲ್ಲಿ ಎಲ್ಲವೂ ಹೆಚ್ಚಾಗಿವೆ. ಈ ನಾಟಕ ರಂಗಭೂಮಿಯ ಮೇಲೆ ಯಶಸ್ವೀ ಪ್ರಯೋಗವಾಗಿ ಪ್ರದರ್ಶನಗೊಳ್ಳಲು ಸಾಧ್ಯವಿಲ್ಲ ಎಂದು ಪಟ್ಟಣಶೆಟ್ಟರು ಅಭಿಪ್ರಾಯ ಪಟ್ಟಿದ್ದಾರೆ.

ಪಂಚಾಕ್ಷರಿ ಹಿರೇಮಠ ಅವರ 'ಮಣ್ಣು ಚೆಲ್ಲಿದ ಬೆಳಕು', ಅನುವಾದ. ಕಾದಂಬರಿಯಾದ ಮಣ್ಣು ಚೆಲ್ಲಿದ ಬೆಳಕನ್ನು ಕುರಿತು ಹೇಳುತ್ತದೆ. ಹಿಂದಿಯಲ್ಲಿ ಡಾ.ರಾಂಗೇಯ್‌ರಾಘವ್ ಅವರು ರಚಿಸಿದ ಈ 'ಲೋಕ ತಾನಾ' ಎಂಬ ಕಾದಂಬರಿಯ ಅನುವಾದವಾಗಿದೆ. ಕಬೀರದಾಸರ ಜೀವನ ಸಾಧನೆಗಳೇ ಕಾದಂಬರಿಯ ಮೂಲ ವಸ್ತುವಾಗಿದೆ. ಪಂಚಾಕ್ಷರಿ ಹಿರೇಮಠರು ಡಾ.ರಾಘವ ಅವರನ್ನು ವ್ಯಕ್ತಿಗತವಾಗಿ ಮತ್ತು ಅವರ ಸಮಗ್ರ ಚಿಂತನೆಯನ್ನ ಅರಿತಿದ್ದರಿಂದ ಕಾದಂಬರಿಯು ಉತ್ತಮವಾಗಿ ಅನುವಾದ ಗೊಂಡಿದೆ. ಅನುವಾದವು ಸ್ವತಂತ್ರ ಲೇಖನದ ಹದ ಹಾಗೂ ಹಟ ಎರಡನ್ನೂ ಬಯಸುವ ಆಹ್ವಾನದ ಕ್ರಿಯೆ, ಕಥೆಯನ್ನು ಯಾರಾದರೂ ಹೇಳಬಹುದು. ಅನುವಾದಿಸಬಹುದು. ಆದರೆ ಕಬೀರರ ಪದ, ದೋಹೆಗಳಂಥ ವಿಶಿಷ್ಟ ಭಾವಪುಂಜಗಳನ್ನು ಬೆಂಕಿಗೆ ಉಂಡೆಗಳನ್ನು ನಂದದ ಹಾಗೆ ಕನ್ನಡಿಸುವುದು ನಿಜವಾಗಿಯೂ ಆಹ್ವಾನವೇ ಅದನ್ನು ತಿಳಿದು ಈ ಕಾರ್ಯಕ್ಕೆ ಕೈಹಾಕಿ ಡಾ.ಹಿರೇಮಠರು ಯಶಸ್ವಿಯಾಗಿದ್ದಾರೆ. ಎಂದು ಪಟ್ಟಣಶೆಟ್ಟರು ಹೇಳಿದ್ದಾರೆ. ಕಬೀರರ ಜೀವನದ ಎಲ್ಲಾ ವಿವರಗಳು ಈ ಕಾದಂಬರಿಯಲ್ಲಿ ದೊರೆಯುತ್ತವೆ. ಕಾದಂಬರಿಯಲ್ಲಿ ಬರುವ ಕಬೀರರ ಕಾವ್ಯಾನುವಾದಗಳ ನೆಪದಲ್ಲಿ ತತ್ವಾನುವೂ ಆಗಿದೆ. ಮೂಲತಃ ಕವಿಯಾಗಿರುವ ಹಿರೇಮಠರು ಕಾವ್ಯಾನುವಾದವನ್ನು ಸುಂದರವಾಗಿ ಮಾಡಿದ್ದಾರೆಂದು ಹೇಳಿ, ಕೆಲವು ಉದಾಹರಣೆ ನೀಡಲಾಗಿದೆ.

ಕಬೀರಾ ಕಡಲ ಒಡಲಲಿ ಚಿಪ್ಪು

ನೀರಡಿಕೆ ನೀರಡಿಕೆ ಎಂದು ಪರಿತಪಿಸುತಿದೆ

ಬೇರಾವ ನೀರಹನಿ ಬೇರೆಲ್ಲವದಕೆ

ಬರಿಯ ಸ್ವಾತಿಯ ಮಳೆಯ ಹನಿಯೊಂದೆ

ಬೇಕದಕೆ

ತುಳಿಸಿಕೊಳ್ಳುವ ಮಣ್ಣು ನುಡಿಯಿತಿಂತು

ಕುಂಬಾರ ಹೀಗೇಕೆ ನನ್ನ ತುಳಿಯುತಿಹೆ

ಆದಿನವೂ ಬರುತಿಹುದು ಮರೆಯದಿರು

ನಾನೆ ನಿನ್ನನ್ನು ಹೀಗೆ ತುಳಿದ ಬಿಡುವೆ

ಕಬೀರರ ಕಾವ್ಯದಲ್ಲಿ ಅನುಭಾವದ ಅಭಿವ್ಯಕ್ತಿ ಲೇಖನದಲ್ಲಿ ಶೆಟ್ಟರು ಮಧ್ಯ ಕಾಲೀನ ಹಿಂದಿ ಸಾಹಿತ್ಯ ಚರಿತ್ರೆಯಲ್ಲಿ ಭಕ್ತಿ ಕವಿ ಅನ್ನಿಸಿಕೊಂಡು, ಕಬೀರದಾಸರ ಜನನ ಬಾಲ್ಯ ಕೈಗೊಂಡ ವೃತ್ತಿ ನಿರಕ್ಷರಿಯಾಗಿದ್ದರೂ, ಕಾವ್ಯ ರಚನಾಶಕ್ತಿ, ಕಬೀರರು ಹಾಡಿದಾಗ ಶಿಷ್ಯರು ಬರೆದುಕೊಂಡು ಕಬೇರ್ ಕಿಬಾನಿ, ಕಬೀರ್ ಅಷ್ಟಕ, ಕಬೀರ್‌ಖೇ ಸಾಖೀ, ಬೀಜಕ್, ರಮೈಣೀ, ರಾಮಾರಕ್ಷಾ ಮುಂತಾದ ಅರವತ್ತಕ್ಕಿಂತ ಹೆಚ್ಚು ಕೃತಿಗಳಲ್ಲಿನ ಕಬೀರರ ಬೋಧನೆಗಳನ್ನು ತಿಳಿಯಬಹುದಾಗಿದೆ. ಹಿಂದೂ ಧರ್ಮದ ಮೇಲೆ ಮುಸ್ಲಿಮರ ರಾಜಕೀಯ ಶಕ್ತಿ ದಾಳಿ ಮಾಡಿದ ಸಂದರ್ಭದಲ್ಲಿ ಕಬೀರರು ಕಾವ್ಯ ರಚನೆ ಗೈದಿದ್ದಾರೆ. ಕಬೀರರು ದಾರ್ಶನಿಕ ಕವಿಗಳಾಗಿದ್ದಾರೆ. ನಿರಾಕಾರನೂ ನಿರ್ಗುಣನೂ ಆದ ಶ್ರೀರಾಮಾನೇ ಕಬೀರದಾಸರ ಆರಾಧ್ಯ ದೈವ. ಕಬೀರರ ಕಾವ್ಯಗಳಲ್ಲಿ ಅನುಭಾವ ಮಡುಗಟ್ಟಿ ನಿಂತಿರುವುದನ್ನು ಕಾಣಬಹುದಾಗಿದೆ. ದೇವರನ್ನು ಆ ಪರಬ್ರಹ್ಮನನ್ನು ಕಾಣಲು ಜೀವಾತ್ಮನು ನಿರಂತರ ಪ್ರಯತ್ನ ಪಡುತ್ತಿದ್ದಾನೆ. ಆಕಾರಕ್ಕೆ ಸಿಗದೆ ಗುಣಗಳ ಗಣಕ್ಕೆ, ಹಗ್ಗದಾರಗಳಿಗೆ ಸಿಲುಕದ ಆ ಸ್ವಾಮಿ ದೇವನನ್ನು ನಮ್ಮಲ್ಲಿಯೇ ಪಡೆದು ಇಟ್ಟುಕೊಂಡಿದ್ದರೂ, ನಾವು ಅವನನ್ನು ಅರಿಯದೇ ಅಜ್ಞಾನದಲ್ಲಿ ಅಲೆದಾಡುತ್ತಿದ್ದೇವೆ. ಹೀಗೆ ದೇವರನ್ನು ಕುರಿತು ಹೇಳುವ ಕಬೀರರ ಉಪದೇಶ ಬಗೆಯನ್ನು ತಿಳಿಸುತ್ತದೆ. ಜೀವಾತ್ಮ ಪರಮಾತ್ಮರು ಬೇರೆ ಬೇರೆಯಲ್ಲ ಆದ್ದರಿಂದಲೇ ಆತ್ಮ ಜ್ಞಾನದಿಂದ ಮಾನವ ನಮ್ಮದೇ ಆತ್ಮದ ವಿಸ್ತರಣೆಯಾಗಿದೆ. ಎಂಬ ಭಾವವನ್ನು ಆಹ್ವಾನಿಸಿ ಕೊಳ್ಳಬೇಕು. ಆಗ ಶರೀರ ಸುಖವನ್ನೂ ಮೀರಿದ ಅಲೌಕಿಕ, ಭೌತಿಕಗಳನ್ನು ಮೀರಿದ ಪಾರಲೌಕಿಕ, ಅಭೌತಿಕ ಸುಖದ ಹುಡುಕಾಟ ಹಾಗೂ ಸಿದ್ಧಿಗಳು ಸಾಧ್ಯವಾಗುತ್ತವೆ. ಆಗ ಅದ್ವೈತ, ದ್ವೈತರಾಹಿತ್ಯ ನಮಗೆ ಲಭಿಸುತ್ತದೆ. ಎನ್ನುವ ಕಬೀರ, ಬಸವಣ್ಣನ ಕಳಬೇಡ ಕೊಲಬೇಡ ಎಂಬ ವಚನ ನೆನೆಪಿಸುವಂತೆ ಹೇಳುತ್ತಾನೆ. ಸತ್ಯ, ಅಹಿಂಸೆ, ಅಸ್ವಾದ, ಆಸ್ತೀಯ ಅಪರಿಗ್ರಹ ಮುಂತಾದ ವ್ರತಗಳನ್ನು ಬೋಧಿಸುತ್ತಾನೆ. ಎಂದು ಪಟ್ಟಣಶೆಟ್ಟರು ಕಬೀರರ ಸಂದೇಶಗಳನ್ನು ಸಂಕ್ಷೇಪಿಸಿ ತಿಳಿಸಿದ್ದಾರೆ. ಕಬೀರರ ತತ್ವ ಚಿಂತನೆ, ಚಮತ್ಕಾರಿಕ ಭಾಷೆ, ಭವಾನು ಭೂತಿಯಿಂದ ನಳನಳಿಸುವ, ಅನೇಕ ಗುಹ್ಯವೆನಿಸುವ ಪದಗಳನ್ನು ಹಾಡಿದ್ದಾನೆ. ಹಿಂದೀ ಸಾಹಿತಿಗಳು ಅವುಗಳನ್ನು 'ಎಲಟ್ ಬಾಸ್ಸೀ' ಎಂದು ಕರೆಯುತ್ತಾರೆ. ಕಬೀರರ ಅನುಭಾವ ಸಂಪತ್ತು ದೊಡ್ಡದಾಗಿದೆ ಎಂದು ಪಟ್ಟಣಶೆಟ್ಟರು ಅಭಿಪ್ರಾಯ ಪಡುತ್ತಾರೆ.

ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಿಲ್ಲದೆ

ಚಿತ್ರ ಶುದ್ಧದಲ್ಲಿ ಕಾಯಕವ ಮಾಡುವಲ್ಲಿ

ಸದ್ಭಕ್ತರ ಎತ್ತ ನೋಡಿದತ್ತ ಲಕ್ಷ್ಮಿ ತಾನಾಗಿಪ್ಪಳು

ಮಾರಯ್ಯ ಪ್ರಿಯ ಅಮರೇಶ್ವರ ಲಿಂಗ ಸೇವೆಯುಳ್ಳನ್ನಕ್ಕ

ಆಯ್ದಕ್ಕಿ ಲಕ್ಕಮ್ಮನ ಈ ಮೇಲಿನ ವಚನದ ವಿಶ್ಲೇಷಣೆಯನ್ನು ಪಟ್ಟಣಶೆಟ್ಟರು ಈ ರೀತಿ ಮಾಡಿದ್ದಾರೆ. ಮನಸ್ಸು ಶುದ್ಧವಿಲ್ಲದವನಿಗೆ ದ್ರವ್ಯದ ಹಣದ ಬಡತನ ಬಾದಿಸಬಹುದು. ಆದರೆ ಮನಸು ಶುದ್ಧವಾಗಿ, ಪವಿತ್ರವಾಗಿ, ನಿರ್ಮಲವಾಗಿ ಉಳ್ಳವನಿಗೆ ದ್ರವ್ಯದ ಕೊರತೆ ಎಂದೂ ಬಾಧಿಸುವುದಿಲ್ಲ. ಯಾಕೆಂದರೆ ಶುದ್ಧ ಮನಸ್ಸಿನ ವ್ಯಕ್ತಿ ತನ್ನ ಚಿತ್ತವನ್ನೂ ಶುದ್ದವಾಗಿಟ್ಟುಕೊಳ್ಳಲು ಯತ್ನಿಸುತ್ತಾನೆ. ಭಾವಿಸುವ ಮನಸ್ಸು ಚೇತನವಾಗಿ ಯೋಚಿಸುವತ್ತ ಇವೆರೆಡು ಉಳ್ಳವನು ಪ್ರಾಪಂಚಿಕ ಮೋಹವನ್ನು ಬೆಳಸುವ ದ್ರವ್ಯಕ್ಕೆ ದಾಸನಾಗುವುದಿಲ್ಲ. ಅಂಥವ್ಯಕ್ತಿ ಕೈಗೊಳ್ಳುವ ಯಾವುದೇ ಕಾಯಕವು ಶುದ್ಧ ಹಾಗೂ ಸಂತೃಪ್ತ ಪರಿಣಾಮಗಳನ್ನುಂಟು ಮಾಡುವುದರಿಂದ ಸದ್ಭಕ್ತನೆನಿಸಿಕೊಳ್ಳುತ್ತಾನೆ. ಅಂಥ ಸದ್ಭಕ್ತನಿಗೆ ಎಲ್ಲಿ ನೋಡಿದರೂ ಅಲ್ಲಿ ಸಂಪತ್ತು ಗೋಚರಿಸುತ್ತದೆ. ಸಂಪತ್ತಿನಿಂದ ದ್ರವ್ಯದ ಪ್ರಭಾವದಿಂದ ಸಾಮಾನ್ಯ ವ್ಯಕ್ತಿಯೊಬ್ಬನು ಸಾಧಿಸಬಹುದೆಂದು, ಭಾವಿಸುವ ಕಾರ್ಯಗಳನ್ನು ಶುದ್ದ ಮನಸ್ಸು ಹಾಗೂ ಶುದ್ಧ ಚಿತ್ತವೆ ಸದ್ಭಕ್ತನು ತನ್ನ ನಿರ್ಮಲ ಹೃದಯದ ಪ್ರಭಾವದಿಂದಲೇ ಲಕ್ಷ್ಮಿಯಾಗಿ, ದೇವಿಯಾಗಿ, ನಿರ್ಜೀವದಾದದ್ದು ಸಜೀವವಾಗಿ ಪರಿಣಮಿಸುತ್ತದೆ. ಅಮರೇಶ್ವರ ಲಿಂಗದ ಸೇವೆಯಲ್ಲಿ ಭಕ್ತನ ಮನಸ್ಸು ನಿರತರಾಗಿರುವ ತನಕ ಇಂಥ ಪರಿಪೂರ್ಣ ದೃಷ್ಟಿಗೆ ಸಂತೃಪ್ತಿಗೆ ಕೊನೆಯೆಂಬುದಿಲ್ಲ. ಆಯ್ದಕ್ಕಿ ಲಕ್ಕಮ್ಮ ಬೋಧಿಸಿದ ಕಾಯಕಧರ್ಮ ಅಂದಿಗಿಂತಲೂ ಇಂದು ಹೆಚ್ಚು ಅವಶ್ಯಕವಾಗಿದೆಯೆಂದು ಶೆಟ್ಟರು ಅಭಿಪ್ರಾಯ ಪಡುತ್ತಾರೆ.

ಈ ಸಂಕಲನದ ಕೊನೆಯ ಭಾದಲ್ಲಿ ಕನ್ನಡದ ನಾಲ್ಕು ಪ್ರಮುಖ ಕವಿಗಳ ಕಾವ್ಯಗಳಲ್ಲಿನ ಮಳೆಗಾಲ ಕುರಿತು ಪಟ್ಟಣಶೆಟ್ಟರು ಬರೆದಿದ್ದಾರೆ. ಕುವೆಂಪು ಅವರ ಕಾವ್ಯಗಳಲ್ಲಿ ಪ್ರಕೃತಿ ಪ್ರೀತಿ ಮತ್ತು ಆರಾಧನೆಯನ್ನು ಧಾರಾಳವಾಗಿ ಕಾಣಬಹುದಾಗಿದೆ.

ಇವರ ಕೊಳಲು, ನನ್ನಮನೆ, ಪ್ರೇಮಕಾಶ್ಮೀರ, ಕೋಗಿಲೆ, ಮತ್ತು ಸೋವಿಯತ್ ರಷ್ಯ, ಪಕ್ಷಿಕಾಶಿ, ಪಾಂಚಜನ್ಯ, ಕೃತ್ತಿಕೆ, ಶ್ರೀ ರಾಮಾಯಣದರ್ಶನಂ ಕಾವ್ಯಗಳಿಂದ ಮಳೆಗಾಲದ ವರ್ಣನೆಯನ್ನು ಪಟ್ಟಣಶೆಟ್ಟರು ವಿಶ್ಲೇಷಣೆ ಮಾಡಿದ್ದಾರೆ. ಸೌಂದರ್ಯದಲ್ಲಿ ಶಿವತ್ವವನ್ನು ಕಾಣುವುದು. ಶೃಂಗಾರ, ರೌದ್ರತೆ, ಭಯಾನಕತೆ, ಶಾಂತತೆಗಳನ್ನು ಕವಿಯ ಕಾವ್ಯ ಒಳಗೊಂಡಿದೆ. ಕುವೆಂಪು ಮಳೆಯ ಎಲ್ಲಾ ವಿದ್ಯಾಮಾನಗಳನ್ನು ಮಗುವಾಗಿ ಮುಗ್ಧನಾಗಿ, ಕವಿಯಾಗಿ, ಅಮೋಘಚತುರ ಕಲ್ಪಕನಾಗಿ, ಗಂಭೀರ ವ್ಯಕ್ತಿಯಾಗಿ, ವಿಮರ್ಶಕನಾಗಿ, ದಾರ್ಶನಿಕನಾಗಿ ನೋಡಿದ ರೀತಿ ಕನ್ನಡ ಕಾವ್ಯ ಸಾಹಿತ್ಯದ ದೊಡ್ಡ ಸಂಪತ್ತಾಗಿದೆ. ಎಂಬುದು ಲೇಖಕರ ಅಭಿಪ್ರಾಯವಾಗಿದೆ.

ವಿ.ಕೃ. ಗೋಕಾಕರು ಪ್ರಕೃತಿಯನ್ನು ಕುರಿತು ಬರೆದಿರುವ ಕವನಗಳಲ್ಲಿ ಮೋಡ, ಮಳೆಗಾಲವನ್ನು ಕುರಿತು ಬರೆದಿರುವ ಕವನಗಳು ಹೆಚ್ಚು ಆಕರ್ಷಕವಾಗಿವೆ. ಇವರ ಅಭ್ಯುದಯ, ಆಕಾಶಗಂಗೆ, ಕಾಶ್ಮೀರ, ಸಿಮ್ಲಾ ಸಿಂಫಿಸನಿ, ಭಾರತ ಸಿಂಧುರಶ್ಮಿ ಕೃತಿಗಳಲ್ಲಿರುವ ಮಳೆಗಾಲದ ಸನ್ನಿವೇಷಗಳನ್ನು ವಿಮರ್ಶಿಸಲಾಗಿದೆ. ಕವಿ ಮೋಡಗಳಲ್ಲಿ ಸಾಮರಸ್ಯವನ್ನು ಸಮನ್ವಯದ ಬೆಳಕನ್ನು ಕಂಡಿದ್ದಾರೆಂದು ಮತ್ತು ಭೂಮಿ ಆಕಾಶಗಳನ್ನು ಒಂದುಗೂಳಿಸುವ ಶಕ್ತಿ ಮಳೆಗಿದೆಯೆಂದು ಗೋಕಾಕರ ಕಾವ್ಯ ಹೇಳುತ್ತದೆ. ಗೋಕಾಕರ ಪ್ರಕೃತಿವರ್ಣನೆಯ ಕಾವ್ಯಗಳಲ್ಲಿ ಪ್ರಕೃತಿಯ ರಮಣಿಯತೆ, ಮುಗ್ಧತೆ ಕಡಿಮೆಯಿದೆ. ಚಿಂತನಶೀಲ ಗೋಕಾಕರ ಮುಂದೆ ಕವಿ ವಿನಾಯಕರ ವ್ಯಕ್ತಿತ್ವ ಮಸುಕಾಗಿ ಬಿಡುತ್ತದೆ. ಎಂದು ಶೆಟ್ಟರು ಹೇಳಿದ್ದಾರೆ.

ಕಾವ್ಯಾವಂದ ಕಾವ್ಯನಾಮದಿಂದ ಪ್ರಸಿದ್ಧರಾದ ಸಿದ್ದಯ್ಯ ಪುರಾಣಿಕರು, ಕುವೆಂಪು, ಗೋಕಾಕರಂತೆ ಮಲೆನಾಡಿನ ಮಳೆಗಾಲ ಕಂಡವರಲ್ಲಿ ಆದರೂ ಇವರ ಕಾವ್ಯಗಳಲ್ಲಿ ಕಲ್ಪಕ ಶಕ್ತಿ, ಹೋಲಿಸುವ ಗುಣಗಳಿಂದ ಕಾವ್ಯಲಯ ಸೌದರ್ಯ ಹೆಚ್ಚಿದೆ. ಜಲಪಾತ, ಕುರುಣ ಶ್ರಾವಣ, ಮಾನಸ ಸರೋವರ, ಹಾಲ್ದೆನೆಗೆ, ಬಣ್ಣಬಣ್ಣದ ಓಕಳಿ, ವಚನನಂದನ, ಕೃತಿಗಳಿಂದ ಮಳೆಗಾಲದ ವರ್ಣನೀಯ ಕಾವ್ಯಾಂಶಗಳನ್ನು ಇಲ್ಲಿ ವಿಮರ್ಶಿಸಲಾಗಿದೆ. ತಮ್ಮ ಕಾವ್ಯಾಭಿವ್ಯಕ್ತಿ ಮಳೆ ಮೋಡಗಳನ್ನು ತಮ್ಮ ಕಲ್ಪನೆಯ ಸ್ವಸ್ಥ ಕುದುರೆಗಳನ್ನಾಗಿ ಮಾಡಿಕೊಂಡು ಹೃದಯ ತುಂಬಿ ಸಹಜ ಕವನಗಳನ್ನು ರಚಿಸಿ, ಕಾವ್ಯಯಾತ್ರೆ ಕೈಗೊಂಡ ಯಶಸ್ವೀ ಕವಿ ಸಿದ್ಧಯ್ಯಪುರಾಣಿಕರು ಎಂದು ಶೆಟ್ಟರು ಹೇಳಿದ್ದಾರೆ.

ಜಿ.ಎಸ್.ಶಿವರುದ್ರಪ್ಪನವರು ಕುವೆಂಪು ಅವರಂತೆ ಹೆಚ್ಚು ಪ್ರಕೃತಿಗೀತೆಗಳನ್ನು ಬರೆದ ಕವಿ. ಸುರಿವ ಮಳೆ ಕೇವಲ ನೀರಲ್ಲಿ ಅದು ಅಮೃತ ಅಲ್ಲಿ ಶಿವನ ಸೊಬಗು ಮತ್ತು ಕೃಪೆಗಳಿವೆ ಎಂದು ಕವಿ ಭಾವಿಸುತ್ತಾರೆ. ಶಿವರುದ್ರಪ್ಪನವರು ಸಮಗ್ರ ಕಾವ್ಯದಿಂದ ಅನೇಕ ಉದಾಹರಣೆಗಳನ್ನು ನೀಡುತ್ತಾ ಕಾವ್ಯದ ನಾಟ್ಯಮಯತೆ, ಮಳೆಯ ವೈವಿಧ್ಯತೆ, ಮುಂಗಾರು ಮಳೇ ಸುರಿದಾಗ ನೆಲ ಹೃದಯಗಳು ಹಸಿರು ಸಂತೋಷದಿಂದ ಆವೃತವಾಗಿ ಕವಿಯ ಜೀವೋತ್ಸಾಹ ಗಾನ ಕವನವಾಗುತ್ತದೆ. ಎಂದು ಪಟ್ಟಣಶೆಟ್ಟರು ಅಭಿಪ್ರಾಯ ಪಟ್ಟಿದ್ದಾರೆ.

### ೩.೧.೪. ಜೀವನ ಚರಿತ್ರೆ

ಸಮಾಜದಲ್ಲಿ ಬೇರೆ ಬೇರೆ ಕ್ಷೇತ್ರಗಳಲ್ಲಿ ಸಾಧನೆಮಾಡಿದ ವ್ಯಕ್ತಿಗಳ ಬಗ್ಗೆ ಜನಸಾಮಾನ್ಯರಲ್ಲಿಯ ಗೌರವಗಳನ್ನು ಸಮರ್ಪಿಸುವ ಇಲ್ಲವೆ ಅವರ ಆದರ್ಶಗಳನ್ನು ಮೇಲ್ಪಂಕ್ತಿಗೇರಿಸುವ ಉದ್ದೇಶದಿಂದ ಜೀವನ ಚರಿತ್ರೆಗಳು ರಚನೆಗೊಳ್ಳುತ್ತವೆ. ಒಂದು ರೀತಿಯಲ್ಲಿ ಸಮಾಜ ಮತ್ತು ಸಂಸ್ಕೃತಿಗಳ ಮೌಲ್ಯ ಪ್ರತಿಪಾದನೆಗೆ ಜೀವನ ಚರಿತ್ರೆಗಳು ಅವಶ್ಯಕವಾಗಿವೆ. ಪರಹಿತ ಚಿಂತನೆಯಿಂದ ಬದುಕಿದವರ ಜೀವನ ಚರಿತ್ರೆಗಳಿಗೆ ಈ ಗೌರವ ಸಲ್ಲುತ್ತದೆ. ಒಂದರ್ಥದಲ್ಲಿ ವ್ಯಕ್ತಿಯ ವಿಮರ್ಶೆಯಾಗದೆ ಆತನ ವ್ಯಕ್ತಿತ್ವ ವಿಮರ್ಶೆ ಇಲ್ಲಿ ನೆಡೆದಿರುತ್ತದೆ. ಈ ದೃಷ್ಠಿಯಿಂದ ಜೀವನ ಚರಿತ್ರೆಕಾರ ವ್ಯಕ್ತಿಗೆ ಸಂಬಂಧಿಸಿದ ಸಂಗತಿಗಳನ್ನು ಕೂಲಂಕುಷವಾಗಿ ಅರಿತು ಕೊಳ್ಳಬೇಕಾಗುತ್ತದೆ. ಹೊಗಳಿಕೆ ತೆಗಳಿಕೆಗಳಿಂದ ದೂರವಿರಬೇಕಾಗುತ್ತದೆ. ಸಮಾಜಕ್ಕೆ ತಿಳಿಸಬೇಕಾದ ನಿಜಸಂಗತಿಗಳನ್ನು ಮರೆಮಾಡದಂತಿರಬೇಕಾಗುತ್ತದೆ. ಈ ಎಲ್ಲಾ ಗುಣಲಕ್ಷಣಗಳಿಂದ ರಚನೆಗೊಂಡಿರುವ ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ 'ಹಳ್ಳಿಕೇರಿ ಗುದ್ಲೆಪ್ಪ'ನವರು ಮತ್ತು 'ಧರ್ಮಸ್ಥಳ' ಎಂಬ ಎರಡು ಜೀವನ ಚರಿತ್ರೆಗಳು ಗಾತ್ರದ ದೃಷ್ಟಿಯಿಂದ ಕಿರಿದೆನಿಸಿದರೂ ಗುಣಾತ್ಮಕ ದೃಷ್ಟಿಯಿಂದ ಹಿರಿದೆನಿಸಿವೆ. ರಾಜಕೀಯ ಮುತ್ಸದ್ದಿಯಾದ ಹಳ್ಳಿಕೇರಿ ಗುದ್ಲೆಪ್ಪನವರು ಮತ್ತು ಧರ್ಮಸ್ಥಳದ ಧರ್ಮಾಧಿಕಾರಿಗಳಾದ ಶ್ರೀ ವೀರೇಂದ್ರ ಹೆಗ್ಗಡೆಯವರನ್ನು ಕುರಿತ ಜೀವನ ಚರಿತ್ರೆಗಳನ್ನು ಇಲ್ಲಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

### ಹಳ್ಳಿಕೇರಿ ಗುದ್ಲೆಪ್ಪನವರು

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಬರೆದ ಮೊದಲನೆಯ ಜೀವನ ಚರಿತ್ರೆ ಹಳ್ಳಿಕೇರಿ ಗುದ್ಲೆಪ್ಪನವರು ಈ ಕೃತಿಯು ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಡಂಬಳ ಗದಗ ಇವರಿಂದ ಪ್ರಕಟಣೆಗೊಂಡಿದೆ. ೧೯೮೧ರಲ್ಲಿ ಮೊದಲ ಸಲ ಪ್ರಕಟಗೊಂಡ ಈ ಕೃತಿಯು ೧೯೮೯ ಮತ್ತು ೨೦೦೦ ನೇ ಇಸ್ವಿಯಲ್ಲಿ

ಎರಡು ಬಾರಿ ಮರುಮುದ್ರಣಗೊಂಡಿದೆ. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಹೀಗೆ ಹೇಳಿಕೊಂಡಿದ್ದಾರೆ. ಇಂಥ ಚರಿತ್ರಾತ್ಮಕ ಬರವಣಿಗೆ ನನಗೆ ಹೊಸದು ಇದರ ಯಶಸ್ಸಿನ ಪ್ರಮಾಣದ ಬಗ್ಗೆ ಸಹೃದಯರೇ ಹೇಳಬೇಕು. ಇದು ಅವರ ವಿನಮ್ರತೆಯನ್ನು ಸೂಚಿಸುತ್ತದೆ. ಡಾ.ಸಿದ್ಧಲಿಂಗ ಪಟ್ಟಣಶೆಟ್ಟರು ಮೂಲತಃ ಕವಿಯಾದ ಕಾರಣ ಈ ಜೀವನ ಚರಿತ್ರೆಯ ಬರವಣಿಗೆಯಲ್ಲಿ ಕಾವ್ಯದ ಸೊಗಸನ್ನು ಕಾಣಬಹುದಾಗಿದೆ. ಈ ಪುಸ್ತಕದಲ್ಲಿ ಬರುವ 'ದಾಂಡಿಯ ದಾರಿಯಲ್ಲಿ' 'ಹಳ್ಳಿಕೇರಿ ಹಳ್ಳಿಕೇರಿ', ಬಾಲ್ಯದಲ್ಲಿಯೇ ಸಂಖ್ಯಾಧಿಪತಿ, ಮುಂತಾದ ಉಪಶೀರ್ಷಿಕೆಗಳು ಕಾವ್ಯಮಯವಾಗಿವೆ. ಸಾಹಿತಿ, ಚಂದ್ರಶೇಖರ ವಸ್ತ್ರದ ಅವರು ಈ ಕೃತಿಯ ಬರವಣಿಗೆಯನ್ನು ಕುರಿತು ಹೀಗೆ ಅಭಿಪ್ರಾಯ ಪಟ್ಟಿದ್ದಾರೆ. ''ಪಟ್ಟಣಶೆಟ್ಟರಿಗೆ ಚರಿತ್ರಾತ್ಮಕ ಬರವಣಿಗೆ ಹೊಸದಿರಬಹುದು. ಆದರೆ ಬರವಣಿಗೆ ಹೊಸದೇನು ಅಲ್ಲ. ಒಬ್ಬ ಯಶಸ್ವೀ ಬರಹಗಾರ ಯಾವುದೇ ಪ್ರಕಾರದಲ್ಲಿ ಬರೆದರೂ ಅದಕ್ಕೊಂದು ನಾವಿನ್ಯತೆ ತರುತ್ತಾನೆ ಎನ್ನುವುದಕ್ಕೆ ಅವರು ಬರೆದ ಈ ಜೀವನ ಚರಿತ್ರೆ ಉತ್ತಮವಾದ ನಿದರ್ಶನವಾಗಿದೆ. ಸಾಮಾನ್ಯವಾಗಿ ಜೀವನ ಚರಿತ್ರೆಗಳೆಂದರೆ ಶುಷ್ಕವರದಿಗಳೆ ಹೆಚ್ಚಾಗಿರುತ್ತವೆ. ವ್ಯಕ್ತಿಯ ಲೈಕಿಕ ಸಾಧನೆಗಳನ್ನು ಪಟ್ಟಿಮಾಡಿ ನೀಡುವ ವಿವರಣಾತ್ಮಕ ಕೃತಿಯಾಗಿರದ ಇದು ಗುದ್ಲೆಪ್ಪನವರ ಅಂತರಂಗ ಬಹಿರಂಗದ ಸೂಕ್ಷ್ಮ ವಿವರಗಳನ್ನು ಸೆರೆ ಹಿಡಿದ ಕಲೆಗಾರಿಕೆ ಇಲ್ಲಿದೆ.''೬೮

ಶ್ರೀ ಹಳ್ಳಿಕೇರಿ ಗುದ್ಲೆಪ್ಪನವರದು ಲೇಖಕರೇ ಹೇಳುವಂತೆ ಹಿಮಾಲಯ ಸದೃಶ್ಯ ವ್ಯಕ್ತಿತ್ವ ಭಾರತದ ಸ್ವಾತಂತ್ರ್ಯ ಮತ್ತು ಕರ್ನಾಟಕ ಏಕೀಕರಣದ ಹೋರಾಟಗಾರರಾಗಿ, ನಿಷ್ಠಾವಂತ, ಕಾಂಗ್ರೆಸಿನ ರಾಜಕಾರಣಿಯಾಗಿ, ವಿವಿಧ ಉನ್ನತ ಹುದ್ದೆಗಳನ್ನು ಅಲಂಕರಿಸಿ, ಗಾಂಧೀ ಅನುಯಾಯಿಯಾಗಿ, ಅವರ ತತ್ವಗಳನ್ನು ಅನುಷ್ಠನಕ್ಕೆ ತಂದ ಕೀರ್ತಿ ಗುದ್ಲೆಪ್ಪನವರದು. ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ, ದೀನದಲಿತರ ಸೇವೆ ಮಾಡಿ ಸರಳ ಜೀವನವನ್ನು ನೆಡೆಸಿದ ಶ್ರೀ ಗುದ್ಲೆಪ್ಪನವರ ಜೀವನ ಎಲ್ಲರಿಗೂ ಆದರ್ಶಪ್ರಾಯವಾಗಿದೆ.

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಶ್ರೀ ಹಳ್ಳಿಕೇರಿ ಗುದ್ಲೆಪ್ಪನವರನ್ನು ಬಹಳ ಹತ್ತಿರದಿಂದ ಬಲ್ಲವರಾಗಿದ್ದರು. ಅಲ್ಲದೆ ಹಲವಾರು ಸಂದರ್ಭಗಳಲ್ಲಿ ಅವರ ಒಡನಾಟದಲ್ಲಿ ಕಾಲಕಳೆವ ಅವಕಾಶಗಳು ದೊರೆತಿದ್ದವು. ಇದರ ಫಲವಾಗಿ ಈ ಕೃತಿಯಲ್ಲಿನ ವಿಷಯಗಳಲ್ಲಿ ಸ್ಪಷ್ಟ ನಿಖರತೆಯಿರುವುದು ಕಂಡು ಬರುತ್ತದೆ.

ಹಾವೇರಿಗೆ ಹದಿನಾರು ಮೈಲು ದೂರದಲ್ಲಿರುವ ಹೊಸ ರಿತ್ತಿಯಲ್ಲಿ ೧೯೦೬ ಜೂನ್ ೦೬ ರಂದು ಒಂದು ಸಾಮಾನ್ಯ ರೈತ ಕುಟುಂಬದಲ್ಲಿ ಗುದ್ಲೆಪ್ಪನವರು ಜನಿಸಿದರು. ಇವರು ವೀರಶೈವ ಧರ್ಮೀಯರು, ತಂದೆ ವೀರಪ್ಪ ತಾಯಿ ವೀರಮ್ಮನವರು, ಈ ದಂಪತಿಗಳ ಐದನೇ ಮಗುವೇ ಗುದ್ಲೆಪ್ಪನವರು, ಇವರು ಚಿಕ್ಕವರಿರುವಾಗಲೇ ತಂದೆ ತಾಯಿಯರನ್ನು ಕಳೆದುಕೊಂಡರು. ಹಿರಿಯ ಅಣ್ಣನಾದ ಸಂಗಪ್ಪನವರ ಆಶ್ರಮದಲ್ಲಿ ಬೆಳೆದರು. ಗುದ್ಲೆಪ್ಪನವರ ಬಾಲ್ಯ ಅಸಾಮಾನ್ಯ ಪ್ರಸಂಗಗಳಿಂದ ತುಂಬಿದೆ. ಶೀಘ್ರ ಗ್ರಹಣಶಕ್ತಿಯನ್ನು ಹೊಂದಿದ್ದ ಗುದ್ಲೆಪ್ಪನವರದು ಗಣಿತದಲ್ಲಿ ಅಸಾಧಾರಣ ಪ್ರತಿಭೆ. ಬಹುಸಂಖ್ಯೆಗಳಿಂದ ಕೂಡಿದ ಗುಣಾಕಾರದ ಲೆಕ್ಕಗಳನ್ನು ಹಲಗೆ ಪುಸ್ತಕಗಳ ಸಹಾಯವಿಲ್ಲದೆ ಮಾಡುವ ಸಾಮರ್ಥ್ಯ ಅವರಲ್ಲಿತ್ತು. ಬೇಕಾದವರು ಬೇಕಾದಷ್ಟು ಸಂಖ್ಯೆಗಳನ್ನು ಹೇಳಿದರೂ ಅವುಗಳ ಗುಣಾಕಾರ, ಭಾಗಾಕಾರ, ವಜಾಬಾಕಿ, ಬೇರೀಜು, ಏನೇ ಕೇಳಿದರೂ ತತ್‌ಕ್ಷಣವೇ ಸರಿಯಾದ ಉತ್ತರ ಹೇಳುತ್ತಿದ್ದರು. ಧಾರವಾಡದ

ಮುರುಘರಾಜೇಂದ್ರಮಠದಲ್ಲಿದ್ದು, ಮಾಧ್ಯಮಿಕ ಶಿಕ್ಷಣವನ್ನು ಮುಗಿಸಿದರು. ಗಾಂಧೀಜಿಯವರ ಪ್ರಭಾವಕ್ಕೆ ಒಳಗಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಿದರು. ಗಣಿತದ ಶೀತಲ ಸೌಂದರ್ಯಕ್ಕೆ ಮಾರುಹೋಗದೆ ದೇಶ ಪ್ರೇಮಿಗಳಾದರು. ಜನರನ್ನು ಸ್ವಾತಂತ್ರ್ಯ ಹೋರಾಟಕ್ಕೆ ಸಜ್ಜುಗೊಳಿಸುವ ಸಲುವಾಗಿ ಹಗಲಿರುಳು ಎನ್ನದೇ ಹಳ್ಳಿಕೇರಿಗಳನ್ನು ಸುತ್ತಿ ಹಳ್ಳಿಕೇರಿ ಗುದ್ಲೆಪ್ಪನವರಾದರು. ನನ್ನ ಪಾಲಿಗೆ ಮೃತ್ಯುಂಜಯಸ್ವಾಮಿಗಳು ದೀಕ್ಷಾಗುರುಗಳು ಗಾಂಧೀಜಿ ಶಿಕ್ಷಾ ಗುರುಗಳು ಎಂದು ಗುದ್ಲೆಪ್ಪನವರು ಹೇಳುವ ಮಾತು, ಅಕ್ಷರಶಃ ಸತ್ಯವಾದುದಾಗಿತ್ತು.

ಗಾಂಧೀಜಿಯವರ ಅಸಹಾಕಾರ ಚಳುವಳಿ ದಂಡಿ ಸತ್ಯಾಗ್ರಹದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡ ಹಳ್ಳಿಕೇರಿ ಗುದ್ಲೆಪ್ಪನವರು ಅನೇಕ ತೊಂದರೆಗಳನ್ನು ಅನುಭವಿಸಬೇಕಾಯಿತು. ಸುಮಾರು ಸಲ ಸೆರೆಮನೆ ವಾಸವನ್ನು ಅನುಭವಿಸಬೇಕಾಯಿತು. ತಮ್ಮ ಹುಟ್ಟೂರಾದ ಹೊಸರಿತ್ತಿಯಲ್ಲಿ ಗಾಂಧೀ ಆಶ್ರಮವನ್ನು ಸ್ಥಾಪಿಸಿದರು. ಗಾಂಧೀಜಿಯವರ ವಿಚಾರಗಳನ್ನು ಅನುಷ್ಠಾನಕ್ಕೆ ತರುವ ವಿಶಿಷ್ಟ ಸಂಸ್ಥೆ ಇದಾಗಿತ್ತು. ಆಭಾಗದ ರಾಷ್ಟ್ರೀಯ ಚಳುವಳಿಗಳಲ್ಲಿ ಸುಮಾರು ಐದಾರು ಸಾವಿರ ಜನ ಸುತ್ತಮುತ್ತಲ ಹಳ್ಳಿಗಳಿಂದ ಭಾಗವಹಿಸಿದರೆ, ಅದರಲ್ಲಿಯೇ ಹೊಸರಿತ್ತಿಯಿಂದಲೇ ಸಾವಿರಾರು ಜನ ಸತ್ಯಾಗ್ರಹಿಗಳು ಭಾಗವಹಿಸುತ್ತಿದ್ದರು. ಇದರ ಹಿಂದೆ ಗುದ್ಲೆಪ್ಪನವರ ಪ್ರಭಾವ ಎದ್ದು ಕಾಣುತ್ತದೆ. ಅವರಲ್ಲಿ ಅಪಾರವಾದ ರಾಷ್ಟ್ರ ಪ್ರೇಮವಿತ್ತು ಇದನ್ನು ರಾಷ್ಟ್ರಮಟ್ಟದ ನಾಯಕರು ಗಂಭೀರವಾಗಿ ಪರಿಗಣಿಸಿದರು ಭಾರತ ಮಾತೆಯ ಬಿಡುಗಡೆಗಾಗಿ ತಲೆಕೊಡುವವರ ಸಾಲಿನಲ್ಲಿ ನಿನ್ನ ಹೆಸರನ್ನು ಸೇರಿಸಿದ್ದೇನೆ ಎಂಬ ಗಾಂಧೀಜಿಯವರ ಮಾತಿನಿಂದ ಗುದ್ಲೆಪ್ಪನವರು ಸ್ಫೂರ್ತಿ ಪಡೆದುಕೊಂಡರು. ಸ್ವಾತಂತ್ರ್ಯ ಹೋರಾಟದಲ್ಲಿ ಉತ್ಸಾಹದಿಂದ ಭಾಗವಹಿಸಿದರು.

ಮೈಲಾರ ಮಹಾದೇವ, ಗಂಗಾಧರರಾವ್ ದೇಶಪಾಂಡೆ, ಹ.ರಾ. ಪುರೋಹಿತ, ವೀರನಗೌಡ ಪಾಟೀಲ, ಸಿದ್ದಪ್ಪ ಹೊಸಮನಿಯವರಂಥ ನಾಯಕರೊಂದಿಗೆ ಸ್ವಾತಂತ್ರ್ಯ ಹೋರಾಟವನ್ನು ತೀವ್ರಗೊಳಿಸಿದರು. ಕರನಿರಾಕರಣೆ, ಉಪ್ಪಿನ ಸತ್ಯಾಗ್ರಹ, ಮಾಡು ಇಲ್ಲವೆ ಮಡಿ ಮುಂತಾದ ಚಳುವಳಿಗಳಲ್ಲಿ ಸಕ್ರಮವಾಗಿ ಭಾಗವಹಿಸಿದರು.

ಹಳ್ಳಿಕೇರಿ ಗುದ್ಲಿಪ್ಪನವರು ನಿಜವಾದ ಮಾನವ ಪ್ರೇಮಿಯಾಗಿದ್ದರು. ಗಾಂಧೀಜಿಯವರಿಂದ ಹರಿಜನೋದ್ಧಾರ ದೀಕ್ಷೆಯನ್ನು ಪಡೆದು ಕೊಂಡಿದ್ದರು. ನನಗೆ ಕಲ್ಲು ದೇವರ ಮೇಲೆ ಎಳ್ಳಷ್ಟೂ ವಿಶ್ವಾಸವಿಲ್ಲ. ಅತ್ಯಂತ ಕಡು ಬಡವ ಮತ್ತು ದೀನದಲಿತರೇ ನನ್ನ ದೇವರು. ಅವರ ಸರ್ವಾಂಗಣ ಉನ್ನತಿಗಾಗಿ ಹಗಲಿರುಳು ದುಡಿಯುವದರಲ್ಲಿಯೇ ನಾನು ದೇವರನ್ನು ಕಾಣುವೆ. ಇವರ ಸೇವೆಯೇ ನನಗೆ ಮೋಕ್ಷದ ಅಡಿಗಲ್ಲು, ಈ ಜನ್ಮದಲ್ಲಿ ಅಷ್ಟೇ ಅಲ್ಲ ಮುಂದಿನ ಯಾವ ಜನ್ಮದಲ್ಲಿ ಹುಟ್ಟಿ ಬಂದರೂ ದೀನದಲಿತರ ಸೇವೆ ಮಾಡುವ ಸುಬುದ್ಧಿಯನ್ನು ಕೊಡಲೆಂದು ಆ ದಯಾಮಯನಾದ ಭಗವಂತನಲ್ಲಿ ನನ್ನ ಪ್ರಾರ್ಥನೆ ಎಂದು ಆಗಾಗ ತಮ್ಮ ಮನಸ್ಸಿನ ತೀವ್ರ ಆಕಾಂಕ್ಷೆಯನ್ನು ವ್ಯಕ್ತಪಡಿಸುತ್ತಿದ್ದರು. ಇದಕ್ಕೆ ಸಾಕ್ಷಿಯೆಂಬಂತೆ ಬೆಳಗಾವಿ ಜಿಲ್ಲೆಯ ಸಾಶಿಕೊಪ್ಪ ದಂಪತಿಗಳ ಕೊನೆಯ ಮಗಳಾದ ಗಂಗಾದೇವಿಯವರನ್ನು ವಿವಾಹವಾದದ್ದೂ ಒಂದು ವಿಶೇಷ. ಜೀವನ ಪರ್ಯಂತ ಖಾದಿ ತೊಡಬೇಕು ಹರಿಜನ ಸೇವೆ ಮಾಡಬೇಕು. ತಮ್ಮೊಂದಿಗೆ ರಾಷ್ಟ್ರಕ್ಕಾಗಿ ದುಡಿಯಲು ಎಲ್ಲಾ ಬಗೆಯ ಕಷ್ಟನಷ್ಟಗಳನ್ನು ಅನುಭವಿಸಲು ಸಿದ್ಧಲಾಗಿರಬೇಕು ಎನ್ನುವ ಷರತ್ತುಗಳೊಂದಿಗೆ ವಿವಾಹವಾದರು. ವಿವಾಹದ ದಿನ ಗುದ್ಲೆಪ್ಪ ಮತ್ತು ಗಾಂಗಾ

ದೇವಿಯವರು ಹರಿಜನ ಕೇರಿಯನ್ನು ಸ್ವಚ್ಛಗೊಳಿಸಿ ಹರಿಜನರ ಮನೆಯಲ್ಲಿಯೇ ಸ್ನಾನಮಾಡಿದರು. ಹರಿಜನ ಕೇರಿಯ ಧ್ವಜ ಸ್ತಂಭದಡಿಯಲ್ಲಿ ಊರಿನ ಪ್ರಮುಖರೂ ದೇಶಭಕ್ತ ತರುಣರ, ಮತ್ತು ಮನೆಮಂದಿಯ ಸಮ್ಮುಖದಲ್ಲಿಯೇ ಮದುವೆಯಾದರು. ಅವರು ರಾಜಕಾರಣದಲ್ಲಿ ಮೇಲ್ಮಟ್ಟದ ಅಧಿಕಾರದಲ್ಲಿದ್ದಾಗಲೂ ಸಹಾಯ ಬೇಡಿ ಬಂದವರನ್ನು ನೀವು ಯಾವ ಜಾತಿಯವರೆಂದು ಕೇಳದೆ ಕೆಲಸಮಾಡಿ ಕೊಡುತ್ತಿದ್ದರು. ಇದು ಹಳ್ಳಿಕೇರಿ ಗುದ್ಲೆಪ್ಪನವರ ಜಾತ್ಯಾತೀತ ಮನೋಭಾವವನ್ನು ತೋರಿಸುತ್ತದೆ.

ಹಳ್ಳಿಕೇರಿ ಗುದ್ಲೆಪ್ಪನವರು ಸತತ ಅಭ್ಯಾಸಿಗಳೂ ಜ್ಞಾನ ದಾಹಿಗಳೂ ಆಗಿದ್ದರು. ಸೆರೆಮನೆಯಲ್ಲಿಯೇ ರವೀಂದ್ರನಾಥ ಠಾಕೂರು, ಟಾಲ್‌ಸ್ಟಾಯ್ ಮುಂತಾದವರ ಕೃತಿಗಳನ್ನು ಓದುತ್ತಿದ್ದರು. ವಿದ್ಯಾರ್ಥಿಯಾಗಿದ್ದಾಗ ಮನೆಯವರು ಬಟ್ಟೆತೆಗೆದು ಕೊಳ್ಳಲು ಹಣಕೊಟ್ಟರೆ ಪುಸ್ತಕಗಳನ್ನು ತೆಗೆದುಕೊಳ್ಳುತ್ತಿದ್ದರು. ಉತ್ತಮ ಖಾದಿ ಉತ್ತಮ ಪುಸ್ತಕ ನನಗೆ ಯಾವಾಗಲೂ ಪ್ರಿಯ ಎಂದು ಅವರು ಹೇಳುತ್ತಿದ್ದರು.

ಕರ್ನಾಟಕದ ಏಕೀಕರಣದ ಕನಸನ್ನು ಕಂಡು ಅದನ್ನು ಸಾಕಾರಗೊಳಿಸುವ ನಿಟ್ಟಿನಲ್ಲಿ ದುಡಿದ ಮಹನೀಯರಲ್ಲಿ ಶ್ರೀ ಹಳ್ಳಿಕೇರಿ ಗುದ್ಲೆಪ್ಪನವರು ಒಬ್ಬರು. ೧೯೫೩ ಮಾರ್ಚ್ ೨೮ ರಂದು ಹುಬ್ಬಳ್ಳಿಯಲ್ಲಿ ಅದರಗುಂಚಿಯ ಶಂಕರಗೌಡ ಪಾಟೀಲರು, ಅಮರಣಾಂತ ಉಪವಾಸ ಕೈಗೊಂಡರು. ಇದರಿಂದ ಏಕೀಕರಣ ಹೋರಾಟ ಕಾವು ಪಡೆದು ಬಹಳ ಗಂಭೀರವಾಯಿತು. ಪರಿಸ್ಥಿತಿ ಕೈಮೀರಿ ಹೋಗುವ ಲಕ್ಷಣಗಳು ಕಂಡು ಬಂದವು. ಆಗ ಗುದ್ಲೆಪ್ಪನವರು ತಮ್ಮ ಚಾಣಾಕ್ಷತನದಿಂದ ಆಗುವ ಅನಾಹುತವನ್ನು ತಪ್ಪಿಸಿದರು. ಅಂದು ಗುದ್ಲೆಪ್ಪನವರು ತೆಗೆದುಕೊಂಡ ನಿರ್ಣಯವೇ ೧೯೫೬ ರ ನವೆಂಬರ್ ೧ ರಂದು ಕನ್ನಡದ ರಾಜ್ಯ ಉದಯವಾಗುವಂತೆ ಮಾಡಿತು, ಏಕೀಕರಣಗೊಂಡ ಕರ್ನಾಟಕದಿಂದ ಮಾತ್ರ ಕನ್ನಡನಾಡಿನ ಬಹುಪ್ರದೇಶಗಳನ್ನು ಒಂದುಗೂಡಿಸಬಹುದು. ಕನ್ನಡನಾಡಿನ ಜನರ ಕಲ್ಯಾಣವಾಗುತ್ತದೆ. ನಮ್ಮ ಸಂಸ್ಕೃತಿ ಮತ್ತು ಪರಂಪರೆಗಳನ್ನು ಮುಂದುವರಿಸಿಕೊಂಡು ಹೋಗಲು ಸುಲಭ ಸಾಧ್ಯ ಎಂಬುದು ಗುದ್ಲೆಪ್ಪನವರ ಖಚಿತ ನಿಲುವಾಗಿತ್ತು. ಅದಕ್ಕಾಗಿ ಆಗಿನ ಮುಖ್ಯಮಂತ್ರಿಗಳಾಗಿದ್ದ ಕೆಂಗಲ್ ಹನುಮಂತಯ್ಯನವರನ್ನು ಮತ್ತು ಮೈಸೂರಿನ ಕಾಂಗ್ರೇಸಿಗರನ್ನು ಉತ್ತರ ಕರ್ನಾಟಕದ ನಾಯಕರನ್ನು ಒಂದೆಡೆ ಸೇರಿಸಿ ಸಭೆ ನಡೆಸುವಲ್ಲಿ ಯಶಸ್ವಿಯಾದರು. ರಾಜ್ಯ ಪುನರಚನಾ ಆಯೋಗವನ್ನು ಗಡಿ ಪ್ರದೇಶಕ್ಕೆ ಕರೆದು ಕೊಂಡು ಹೋಗಿ ಸಾವಿರಾರು ಜನರನ್ನು ನಿಲ್ಲಿಸಿ, ಕನ್ನಡ ಭಾಷಿಕರಿಗೆ ಅವರದೇ ಆದ ನಾಡಿನಲ್ಲಿ ಒಂದೆಡೆ ಸೇರಿ ವಾಸಿಸುವುದು ಎಷ್ಟು ಅಗತ್ಯ ಎಂದು ಮನವರಿಕೆ ಮಾಡಿಕೊಟ್ಟರು. ಅದು ಕರ್ನಾಟಕವೇ ಆಗಬೇಕೆಂದು ಬಲವಾಗಿ ವಾದಿಸಿದರು.

ರಾಜಕೀಯವಾಗಿಯೂ ಸಾಧನೆ ಮಾಡಿದ ಹಳ್ಳಿಕೇರಿ ಗುದ್ಲೆಪ್ಪನವರು, ೧೯೫೭ರಲ್ಲಿ ಹಾವೇರಿ ಕ್ಷೇತ್ರದ ಶಾಸಕರಾಗಿ ಆಯ್ಕೆಯಾದರು. ನಂತರ ವಿಧಾನ ಪರಿಷತ್ತಿನ ಸಭಾಪತಿಯಾಗಿ, ಕಾಂಗ್ರೇಸಿನ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದರು. ಆಗಿನ ಮುಂಬೈ ಕರ್ನಾಟಕದ ಪ್ರಮುಖ ರಾಜಕಾರಣಿಯಾಗಿದ್ದ ಮುರಾರ್ಜಿ ದೇಸಾಯಿಯವರು ಚುನಾವಣೆಯಲ್ಲಿ ಸೋತು ಮುಖ್ಯಮಂತ್ರಿಗಳಾದಾಗ ಅವನ್ನು ಯಾವುದೇ ಮುಲಾಜಿಲ್ಲದೆ ವಿರೋಧಿಸಿದರು.

ಹಳ್ಳಿಕೇರಿ ಗುದ್ಲೆಪ್ಪನವರು ಒಬ್ಬ ಶಿಕ್ಷಣ ಪ್ರೇಮಿಯಾಗಿದ್ದರು. ಶಿಕ್ಷಣದಿಂದ ಮಾತ್ರ ಜನರ ಜೀವನವನ್ನು ಸುಧಾರಿಸಬಹುದು. ಸಮೃದ್ಧ ನಾಡನ್ನು ಕಟ್ಟಲು ಸಾಧ್ಯ ಎಂಬುದು ಅವರ ಅನಿಸಿಕೆಯಾಗಿತ್ತು. ಈ ನಿಟ್ಟಿನಲ್ಲಿ ಅವರು

ಕಾರ್ಯೋನ್ಮುಖಿರಾದರು. ಹುಬ್ಬಳ್ಳಿಯಲ್ಲಿ ಕರ್ನಾಟಕ ಮೆಡಿಕಲ್ ಕಾಲೇಜನ್ನು ಆರಂಭಿಸಲು ಬಹುವಾಗಿ ಶ್ರಮಿಸಿದರು. ಹೊಸರಿತ್ತಿಯಲ್ಲಿ ಗುರುಕುಲ ಎನ್ನುವ ಆಶ್ರಮ ಶಾಲೆಯನ್ನು ಸ್ಥಾಪಿಸಿದರು. ಗ್ರಾಮೀಣ ಭಾಗದ ಮಕ್ಕಳು ಸ್ವಾವಲಂಬಿಗಳಾಗಿ ಬದುಕಬೇಕು. ತಮ್ಮ ಭವಿಷತ್ತನ್ನು ತಾವೇ ಸುಂದರವಾಗಿ ರೂಪಿಸಿಕೊಳ್ಳಬೇಕು. ಅವರು ದೇಶ ಪ್ರೇಮಿಗಳೂ ಸ್ವಾಭಿಮಾನಿಗಳೂ ಆಗಿ ಬದುಕಬೇಕೆಂಬ ಆಶಯಗಳನ್ನು ಈ ವಿದ್ಯಾಸಂಸ್ಥೆ ಹೊಂದಿತ್ತು. ಅದೇರೀತಿ ಬೆಳಗಾವಿಯ ಜವಾಹರಲಾಲ್ ನೆಹರೂ ಮೆಡಿಕಲ್ ಕಾಲೇಜಿನ ನಿರ್ಮಾಣದಲ್ಲಿಯೂ ಇವರು ದುಡಿದರು. ಬೆಂಗಳೂರಿನ ರಾಜಾಜೀನಗರದಲ್ಲಿ ನಿಜಲಿಂಗಪ್ಪ ಕಾಲೇಜನ್ನು ಮತ್ತು ೧೯೬೩ರಲ್ಲಿ ಆಗಿನ ರಾಷ್ಟ್ರಾಧ್ಯಕ್ಷ ಡಾ.ಸರ್ವಪಲ್ಲಿ ರಾಧಾ ಕೃಷ್ಣನ್ ಅವರಿಂದ ಉದ್ಘಾಟಿಸಲ್ಪಟ್ಟ 'ಕಾಲೇಜ್ ಆಫ್ ಬಿಜನಸ್ ಮ್ಯಾನೇಜ್‌ಮೆಂಟ್' ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸುವಲ್ಲಿ ಗುದ್ಲೆಪ್ಪನವರು ತೋರಿದ ಉತ್ಸಾಹ ಆಸ್ಥೆಗಳು ಅನುಕರಣೀಯವಾಗಿದೆ.

ಹಳ್ಳಿಕೇರಿ ಗುದ್ಲೆಪ್ಪನವರು ಉತ್ತಮ ವಾಕ್ಪಟುತ್ವವನ್ನು ಹೊಂದಿದ್ದರು. ಜೀವನದಲ್ಲಿ ಶಿಸ್ತು ಮತ್ತು ಸಮಯ ಪಾಲನೆಯನ್ನು ಅಳವಡಿಸಿಕೊಂಡಿದ್ದರು. ನಾಡಿಗಾಗಿ ಸದಾಕಾಲ ಚಿಂತಿಸುತ್ತಾ ದುಡಿಯುತ್ತಿದ್ದರು. ಸರಳ ಮತ್ತು ಸಜ್ಜನಿಕೆಯಿಂದ ಕೂಡಿದ ಜೀವನ ಅವರದಾಗಿತ್ತು, ಅವರ ಸಂಘಟನಾ ಶಕ್ತಿ ಸಮರ್ಥವಾಗಿತ್ತು. ಅವರ ರಾಷ್ಟ್ರ ಪ್ರೇಮ, ವೈಯುಕ್ತಿಕ ಮತ್ತು ಸಾಮಾಜಿಕ ಜೀವನದ ಅನೇಕ ಮಗ್ಗಲುಗಳನ್ನು ಡಾ.ಸಿದ್ಧಲಿಂಗ ಪಟ್ಟಣಶೆಟ್ಟರು ರಸವತ್ತಾಗಿ, ಸಹಜವಾಗಿ ವಿವರಿಸಿದ್ದಾರೆ.

ಈ ಕೃತಿಯ ರಚನೆಯಗಾಗಿ ಪಟ್ಟಣಶೆಟ್ಟರು ಎರಡು ರೀತಿಯ ಆಕರಗಳನ್ನು ಬಳಸಿಕೊಂಡಿದ್ದಾರೆ. ಗುದ್ಲೆಪ್ಪನವರು ಬರೆದ ಲೇಖನಗಳು ದಿನಚರಿ ಹಾಗೂ ಅವರೊಂದಿಗಿನ ಒಡನಾಟದ ನೆನಪುಗಳು ಅಂತರಂಗಿಕ ಆಕರಗಳಾಗಿದ್ದರೆ, ಬಾಹ್ಯ ಆಕರಗಳನ್ನಾಗಿ ಹಳ್ಳಿಕೇರಿಯವರ ಬಗ್ಗೆ ವಿವಿಧ ಪತ್ರಿಕೆಗಳಲ್ಲಿ ಬಂದ ಲೇಖನಗಳು, ಸಂದ ಭಿನ್ನವತ್ತಳೆಗಳು, ಸನ್ಮಾನ ಪತ್ರಗಳು, ಗೌರವ ಗ್ರಂಥ ಹಾಗೂ ಇತರ ಕೃತಿಗಳಲ್ಲಿಯ ಅನುಷಂಗಿಕ ವಿವರಗಳನ್ನು ಬಳಸಿಕೊಂಡಿದ್ದಾರೆ. ಹೀಗಾಗಿ ಈ ಕೃತಿಗೆ ಅಧಿಕೃತತೆ ಪ್ರಾಪ್ತವಾಗಿದೆ. ಒಟ್ಟಾರೆಯಾಗಿ ಪರಿಷ್ಕರಣೆಗೆ ಒಳಪಡುತ್ತಾ ಮೂರು ಮುದ್ರಣವನ್ನು ಕಂಡಿರುವ ಈ ಕೃತಿ ಹಳ್ಳಿಕೇರಿ ಗುದ್ಲೆಪ್ಪನವರ ಜೀವನ ಸಾಧನೆಗಳನ್ನು ಸಾದ್ಯಾಂತವಾಗಿ ಮತ್ತು ನಿಖರವಾಗಿ ತಿಳಿಸುತ್ತದೆ. ಡಾ. ಸಿದ್ಧಲಿಂಗ ಪಟ್ಟಣಶೆಟ್ಟರು ಉತ್ತಮವಾದ ಜೀವನ ಚರಿತ್ರೆಯನ್ನು ಸಾರಸ್ವತ ಲೋಕಕ್ಕೆ ನೀಡಿದ್ದಾರೆ.

**೨. ಧರ್ಮಸ್ಥಳ**

ಡಾ. ಸಿದ್ದಲಿಂಗ ಪಟ್ಟಣಶೆಟ್ಟಿಯವರು ಬರೆದ ಧರ್ಮಸ್ಥಳ. ಧರ್ಮಸ್ಥಳದಲ್ಲಿ ಧರ್ಮಾಧಿಕಾರಿಗಳಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ವೀರೇಂದ್ರ ಹೆಗ್ಗಡೆಯವರ ಜೀವನ ಚರಿತ್ರೆಯಾಗಿದೆ. ೧೯೮೧ ರಲ್ಲಿ ಧಾರವಾಡದ ಚಂದ್ರನಾಥ ಪ್ರಕಾಶನದಿಂದ ಇದು ಪ್ರಕಟಣನೆಗೊಂಡಿದೆ. ಈ ಜೀವನ ಚರಿತ್ರೆಯು ಪೀಠಿಕೆ, ವೀರೇಂದ್ರ ಹೆಗ್ಗಡೆಯವರ ವ್ಯಕ್ತಿತ್ವ ಅವರ ಕಾರ್ಯ ಮತ್ತು ಸಮಾರೋಪ ಎಂಬ ಆರು ಅಧ್ಯಾಯಗಳಲ್ಲಿಪರಡಿಕೊಂಡಿದೆ.

ಈ ಕೃತಿಯನ್ನು ಕುರಿತು ಚಂದ್ರಶೇಖರ ವಸ್ತ್ರದ ಅವರು ಹೀಗೆ ಹೇಳಿದ್ದಾರೆ. ಪ್ರಗತಿಶೀಲ ಮನೋಭಾವದವರೂ ಸಂಕ್ರಮಣ ಪತ್ರಿಕೆ ಸಂಪಾದಕರಲ್ಲಿ ಒಬ್ಬರಾದ ಪಟ್ಟಣಶೆಟ್ಟರು ಬರೆದರೆ ಏನು ಅಂದು ಕೊಳ್ಳುವರೋ ಎಂಬ

ಸಂಕೋಚದ ಪ್ರಶ್ನೆ ಲೇಖಕರನ್ನು ಕಾಡಿದೆ ಎಂಬಂತೆ ಕಾಣುತ್ತದೆ. ಪೀಠಿಕೆಯ ಪ್ರಾರಂಭದಲ್ಲಿಯೇ ನಾನು ವೀರೇಂದ್ರ ಹೆಗ್ಗಡೆಯವರ ಬಗ್ಗೆ ಲೇಖನವನ್ನಾಗಲೀ, ಪುಸ್ತಕವನ್ನಾಗಲೀ ಬರೆಯುವುದು ಕೆಲವರಿಗೆ ಆಶ್ಚರ್ಯವೆನಿಸಬಹುದು, ವಿಚಿತ್ರವೆನಿಸಬಹುದು. ನನ್ನ ದೃಷ್ಟಿಯಲ್ಲಿ ಸರಿಯೆನಿಸಿದೆ. ಸುಂದರವೆನ್ನಿಸಿದ ಪವಿತ್ರವೆನ್ನಿಸಿದ ಯಾವ ವ್ಯಕ್ತಿತ್ವವನ್ನು, ಯಾವ ದೃಶ್ಯ ಅಥವಾ ಪ್ರಸಂಗವನ್ನೂ ನಾನು ಎಂದೂ ಮೆಚ್ಚದೆ ಪ್ರಶಂಸಿಸದೆ ಉಳಿದಿಲ್ಲ. ಹೆಗ್ಗಡೆಯವರ ಬಗ್ಗೆ ಧರ್ಮಸ್ಥಳದ ಬಗ್ಗೆ ನಾನು ಬರೆಯುತ್ತಿರುವುದಕ್ಕೆ ಇಷ್ಟುವಿವರಣೆ ಸಾಕು. ಧರ್ಮಸ್ಥಳವೆಂದರೆ ಅನ್ಯಧರ್ಮೀಯರ ಸಂಕುಚಿತವಾದ ಕ್ಷೇತ್ರ ಎನ್ನುವ ಭಾವನೆ ಲೇಖಕರಲ್ಲಿತ್ತು. ಆದರೆ ಅವರ ಆತ್ಮೀಯ ಮಿತ್ರರಾದ ಪಂಚಾಕ್ಷರಿಯವರು ಧರ್ಮಸ್ಥಳದ ಬಗ್ಗೆ ವೀರೇಂದ್ರ ಹೆಗ್ಗಡೆಯವರ ಬಗ್ಗೆ ತಿಳಿಸಿ ಹೇಳಿದ ಮೇಲೆ ಲೇಖಕರು ತಮ್ಮ ಭಾವನೆಯನ್ನು ಬದಲಾಯಿಸಿಕೊಂಡರು.

ದಕ್ಷಿಣ ಭಾರತದಲ್ಲಿ ತಿರುಪತಿಯ ನಂತರ ಅತ್ಯಂತ ಮಹತ್ವದ ಧರ್ಮಕ್ಷೇತ್ರ ಧರ್ಮಸ್ಥಳ, ತಿರುಪತಿ ಧನಪತಿಗಳ, ವ್ಯವಹಾರಪತಿಗಳ, ಶ್ರೀಪತಿಗಳ ಸ್ಥಾನವಾದರೆ, ಧರ್ಮಸ್ಥಳ ಸರ್ವಧರ್ಮ ಸಮನ್ವಯಗಳ ಕೇಂದ್ರ, ಸಾಮಾನ್ಯ ಅಸಮಾನ್ಯ ಎಂಬ ಬೇಧಭಾವವಿಲ್ಲದೆ ಎಲ್ಲರನ್ನು ಸ್ವಾಗತಿಸುವ ಸಮತಾಕೇಂದ್ರವಾಗಿದೆ. ಈ ದೃಷ್ಟಿಯಿಂದ ಸಾಮಾನ್ಯರಿಗೆ, ಆಸ್ತಿಕರಿಗೆ, ಧರ್ಮವಂತರಿಗೆ, ಧರ್ಮಸ್ಥಳದಲ್ಲಿ ಲಭಿಸುವ ಮನಶಾಂತಿ ತಿರುಪತಿಯಲ್ಲಿ ಸಿಗಲಾರದು ಎಂಬುದು ಲೇಖಕರ ಅಭಿಪ್ರಾಯವಾಗಿದೆ. ಅದಕ್ಕೆ ಇಲ್ಲಿಯ ಧಾರ್ಮಿಕ ಹಿನ್ನೆಲೆಗಳು, ಪರಂಪರೆಗಳು, ಹೆಗ್ಗಡೆಯವರ ಮನೋವೈಶಾಲ್ಯ, ಔದಾರ್ಯಗಳು, ಇವೆಲ್ಲದರ ಜೊತೆಗೆ ಅಲ್ಲಿನ ಪ್ರಕೃತಿಕ ಸೌಂದರ್ಯ ಮೊದಲಾದವುಗಳು ಕಾರಣಗಳಾಗಿವೆ ಎಂದು ಲೇಕರು ಹೇಳುತ್ತಾರೆ.

ರತ್ನವರ್ಮ ಹೆಗ್ಗಡೆ ರತ್ನಮ್ಮ ದಂಪತಿಗಳ ಹಿರಿಯ ಮಗನಾಗಿ ವೀರೇಂದ್ರರು ೧೯೪೮ ನವೆಂಬರ್ ೨೫ ರಂದು ಜನಿಸಿದರು. ಬಂಟ್ವಾಳ, ಧರ್ಮಸ್ಥಳ, ಮತ್ತು ಮಂಜಯ್ಯನವರು ಆರಂಭಿಸಿದ್ದ ಸಿದ್ದವನ ಗುರುಕುಲಗಳಲ್ಲಿ ಆರಂಭದ ಶಿಕ್ಷಣವನ್ನು ಪಡೆದರು. ಬೆಂಗಳೂರಿನಲ್ಲಿ ಪ್ರೌಢಶಿಕ್ಷಣ ಹಾಗೂ ಕಾಲೇಜು ಶಿಕ್ಷಣವನ್ನು ಪಡೆದರು. ಬಿ.ಎ. ಪದವಿ ಮುಗಿದೊಡನೆ ೧೯೬೮ ಅಕ್ಟೋಬರ್ ೨೪ರಂದು ವೀರೇಂದ್ರರು ಧರ್ಮಸ್ಥಳದ ಹೆಗ್ಗಡೆಯಾಗಿ ಅಧಿಕಾರವಹಿಸಿಕೊಡರು. ವೀರೇಂದ್ರರಲ್ಲಿ ಯೌವನ, ಸೌಂದರ್ಯ ಸಂಪತ್ತುಗಳ ಜೊತೆಗೆ ಅಪಾರ ವಿವೇಕವಿದೆ. ಅಸದಳ ವ್ಯಾವಹಾರಿಕ ಚತುರತೆಯಿದೆ. ಇವು ಅವರಲ್ಲಿ ಸಜ್ಜನಿಕೆ, ಸರಳತೆ, ಮತ್ತು ಕಲ್ಯಾಣ ಗುಣಗಳನ್ನು ಬೆಳೆಸಿಕೊಳ್ಳುವಲ್ಲಿ ಸಹಾಯ ಕಾರಿಯಾಗಿವೆ. ಧರ್ಮಸ್ಥಳದ ಸರ್ವಮಾನ್ಯ ವಿಶ್ವಸ್ಥವ್ಯಕ್ತಿ ಅವರೆಂದು ಡಾ. ಸಿದ್ಧಲಿಂಗಪಟ್ಟಣಶೆಟ್ಟರು ಹೇಳಿದ್ದಾರೆ.

ವೀರೇಂದ್ರ ಹೆಗ್ಗಡೆಯವರು ಜೈನ ಮತಾವಲಂಬಿಗಳಾಗಿದ್ದರೂ, ಅನ್ಯಧರ್ಮಗಳ ಬಗ್ಗೆ ಅವರಲ್ಲಿ ಅಪಾರ ಗೌರವವಿದೆ. ಮಂಜುನಾಥನ ಭಕ್ತರು ಶೈವರು, ಅರ್ಚಕರು ವೈಷ್ಣವರು, ಧರ್ಮಾಧಿಕಾರಿಗಳು ಜೈನರಾಗಿರುವುದು ಈ ದೈವದ ವೈಶಿಷ್ಟ್ಯವಾಗಿದೆ. ಇಲ್ಲಿಗೆ ಎಲ್ಲಾ ಧರ್ಮದವರೂ ಬಂದು ಹೋಗುತ್ತಾರೆ. ಧರ್ಮಸ್ಥಳವನ್ನು ಭಕ್ತಿ ಸಂಗಮಗಳ ಕ್ಷೇತ್ರವನ್ನಾಗಿ ಬೆಳೆಸುವ ಕಾರ್ಯದಲ್ಲಿ ವೀರೇಂದ್ರರು ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕ್ಷೇತ್ರಕ್ಕೆ ಬರುವ ಪ್ರತಿಯೊಬ್ಬರ ಯೋಗ ಕ್ಷೇಮವನ್ನು ವೀರೇಂದ್ರ ಹೆಗ್ಗಡೆಯವರು ಪ್ರೀತಿಯಿಂದ ನೋಡಿಕೊಳ್ಳುವುದರಿಂದ ಜನ ಇವರನ್ನು ಮಾತನಾಡುವ ಮಂಜುನಾಥ ಎಂದು ನಂಬಿದ್ದಾರೆ. ಸಂಸ್ಕೃತಿಯ ರಕ್ಷಕರಾಗಿ, ಧರ್ಮ ಚೇತನರಾಗಿ

ನಾಡಿನ ಎಲ್ಲಾ ಧರ್ಮಗಳ ಧರ್ಮಾಧಿಕಾರಿಗಳನ್ನು ಮಠಾಧೀಶರನ್ನು ಕರೆದು ಗೌರವಿಸಿ ಸರ್ವಧರ್ಮ ಸಮ್ಮೇಳನಗಳು ರಾಷ್ಟ್ರೀಯ ಭಾವೈಕ್ಯವನ್ನು ಬಲಪಡಿಸುವ ನಿಟ್ಟಿನಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ವೀರೇಂದ್ರ ಹೆಗ್ಗಡೆಯವರದು ನಿಜವಾಗಿಯೂ ಮನುಷ್ಯ ಧರ್ಮವಾಗಿದೆ ಎಂದು ಪಟ್ಟಣಶೆಟ್ಟರು ಅಭಿಪ್ರಾಯ ಪಟ್ಟಿದ್ದಾರೆ.

ವೀರೇಂದ್ರ ಹೆಗ್ಗಡೆಯವರು ಕೊಡುಗೈದಾನಿಯಾಗಿದ್ದಾರೆ. ಅನ್ನದಾನ, ವಿದ್ಯಾದಾನ, ಆರೋಗ್ಯದಾನ, ಶಾಂತಿದಾನಗಳು ಈ ಸಾಲಿನಲ್ಲಿ ಸೇರಿವೆ. ಅವರು ನೆಡೆಸಿದ ಸಾಹಿತ್ಯ ಸಮ್ಮೇಳನಗಳು, ಸಂಘಟಿಸಿದ ಹಲವಾರು ಕಾರ್ಯಕ್ರಮಗಳು, ಯಕ್ಷಗಾನ ಬಯಲಾಟಗಳು ಅವರಿಗೆ ನಮ್ಮ ಸಂಸ್ಕೃತಿಯ ಮೇಲಿರುವ ಗೌರವದ ಪ್ರತೀಕಗಳಾಗಿವೆ. ಬಡ ವಿಧ್ಯಾರ್ಥಿಗಳಿಗಾಗಿ ಊಟ ವಸತಿಯ ವ್ಯವಸ್ಥೆ, ಪ್ರತಿಭಾವಂತರಿಗೆ ಉನ್ನತ ವ್ಯಾಸಾಂಗಕ್ಕಾಗಿ ಸಹಾಯ ಸಂಚಾರಿ ಆಸ್ಪತ್ರೆಗಳು, ಡಾ.ಎಂ.ಸಿ. ಮೋದಿಯವರಿಗೆ ನೀಡಿದ ಎಲ್ಲಾ ಅನುಕೂಲಗಳುಳ್ಳ, ಮೋಟಾರುಗಾಡಿ ಅವರ ಜನ ಸೇವೆಗೆ ಸಾಕ್ಷಿಯಾಗಿವೆ. ಬೆಳ್ತಂಗಡಿ ತಾಲೂಕಿನಲ್ಲಿ ಸ್ವಯಂ ಸೇವಕರೊಂದಿಗೆ ಹಮ್ಮಿಕೊಂಡ ಗ್ರಾಮೀಣಾಭಿವೃದ್ಧಿ ಯೋಜನೆ, ತಾಲೂಕಿನ ೮೧ ಹಳ್ಳಿಗಳನ್ನು ದತ್ತೂ ತೆಗೆದುಕೊಂಡು ಹರಿಜನರ, ದೀನದಲಿತರ ಉದ್ದಾರಕ್ಕಾಗಿ ಹಮ್ಮಿಕೊಂಡ ಜನ ಮಂಗಳ ಕಾರ್ಯ ಒಂದು ವಿಶಿಷ್ಟ ಸೇವೆಯಾಗಿದೆ. ಕೃಷಿ ಮತ್ತು ವಸತಿ, ಶಿಕ್ಷಣ ಕ್ಷೇತ್ರಗಳಲ್ಲಿ ವೀರೇಂದ್ರ ಹೆಗ್ಗಡೆಯವರು ಅನುಪಮ ಸೇವೆಗೈದಿದ್ದಾರೆಂದು ಸ್ಪಷ್ಟ ಉದಾಹರಣೆಗಳೊಂದಿಗೆ ಲೇಖಕರು ವಿವರಿಸಿದ್ದಾರೆ. ಅದೇ ರೀತಿಯಾಗಿ ಮಧ್ಯಪಾನ ವಿರೋಧಿ ಆಂದೋಲನವನ್ನು ಉದ್ಧರಿಸಿದ್ದಾರೆ. ಬಡವರಿಗೆ ಬಹಳ ಉಳಿತಾಯವಾಗುವಂತಹ ಸಾಮೂಹಿಕ ವಿವಾಹಗಳನ್ನು ಜಾರಿಗೆ ತಂದರು. ಧರ್ಮಸ್ಥಳದ ವತಿಯಿಂದಲೇ ಜಾತಿ ಬೇಧ ಮಾಡದೇ ಪ್ರತಿವರ್ಷವೂ ನಿರಂತರವಾಗಿ ನೆಡೆಸಿಕೊಂಡು ಬಂದಿದ್ದಾರೆ. ಇಂದರಿಂದ ದುಂದು ವೆಚ್ಚಕ್ಕೆ ಕಡಿವಾಣ ಹಾಕಿ ಬಡವರು ಮದುವೆಗಾಗಿ ಸಾಲಗಾರರಾಗುವುದನ್ನು ತಪ್ಪಿಸಿದ್ದಾರೆಂದು ಪಟ್ಟಣಶೆಟ್ಟರು ಔದಾರ್ಯದಿಂದ ಹೇಳಿದ್ದಾರೆ. ಮಿತ ಭಾಷಿಗಳೂ ಹಿತಭಾಷಿಗಳೂ ಆದ ವೀರೇಂದ್ರರು ಸದಾಕಾಲ ಸಮಾಜಭಿವೃದ್ಧಿ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡು. ಧರ್ಮಪೋಷಕರಾಗಿ, ಸಮಾಜಮುಖೀ ಕಾರ್ಯಗಳನ್ನು ಮಾಡಿದ್ದಾರೆ. ಇಂತಹ ಬಹುಮುಖ ವ್ಯಕ್ತಿತ್ವವುಳ್ಳ ವೀರೇಂದ್ರರು ಈ ದೇಶದ ಆಸ್ತಿಯಾಗಿದ್ದಾರೆಂದು ಲೇಖಕರು ಅಭಿಮಾನದಿಂದ ಹೇಳಿದ್ದಾರೆ.

ವೀರೇಂದ್ರರ ಪರಂಪರೆಯೆಂಬ ಅಧ್ಯಾಯದಲ್ಲಿ ಧರ್ಮಸ್ಥಳದ ಐತಿಹ್ಯ ಮತ್ತು ಹೆಗ್ಗಡೆ ಮನೆತನದ ಪೂರ್ವಜರ ಇತಿಹಾಸಗಳನ್ನು ಕುರಿತು ಲೇಖಕರು ಹೇಳಿದ್ದಾರೆ. ಧರ್ಮಸ್ಥಳಕ್ಕೆ ಸುಮಾರು ಎಂಟುನೂರು ವರ್ಷಗಳ ಇತಿಹಾಸ ಪರಂಪರೆಯಿದೆ 'ಕುಡುಮ' ಅಥವಾ 'ಕೂಡುಮ' ಎಂಬುದು ಧರ್ಮಸ್ಥಳದ ಮೂಲನಾಮವಾಗಿತ್ತು. ನಂತರದಲ್ಲಿ 'ಮಲ್ಲರಮಾಡಿ' ಅಥವಾ 'ಮಲ್ಲರ್ಮಾಡಿ' ಎಂಬ ಹೆಸರು ಬಳಕೆಯಲ್ಲಿತ್ತು. ನಂತರ ೧೯೦೫ ರಲ್ಲಿ ಮಲ್ಲರ್ಮಾಡಿ ಮತ್ತು ಹತ್ತಿರದ ಕನ್ಯಾಡಿ ಗ್ರಾಮಗಳನ್ನು ಕೂಡಿಸಿ ಧರ್ಮಸ್ಥಳ ಎಂಬ ಈಗಿನ ನಾವು ಈ ಗ್ರಾಮಕ್ಕೆ ಬಂದಿತು. ಈ ಹೆಸರು ಅನ್ವರ್ಥಕನಾಮವಾಗಿ, ನಿಜದ ಸತ್ಯದ ಹೆಸರಾಯಿತೆಂದು ಪಟ್ಟಣಶೆಟ್ಟರು ಹೇಳಿದ್ದಾರೆ. ಹದಿನೈದನೆಯ ಶತಮಾನದ ಕೊನೆ ಭಾಗದಲ್ಲಿದ್ದ ಉಡುಪಿಯ ಶ್ರೀ ವಾದಿರಾಜ ತೀರ್ಥರು ತಮ್ಮ ಪ್ರಯಾಣದಿಂದ ಹಿಂದಿರುಗುತ್ತಿದ್ದಾಗ ಕುಡುಮದಲ್ಲಿ ತಂಗಬೇಕಾಯಿತು. ಆಗ ಶ್ರೀಗಳು ದೇವಾಲಯವಿಲ್ಲದ ಈ ಊರಿನಲ್ಲಿ ತಾವು ಊಟಮಾಡುವುದಿಲ್ಲ. ತಂಗುವುದಿಲ್ಲ ಎಂದು ಮುಂದಕ್ಕೆ ಹೊರಡಲು ಸಿದ್ದರಾದಾಗ ಪಕ್ಕದ ಹಳ್ಳಿಯ ಗ್ರಾಮ ದೇವತೆ ಶಿವಲಿಂಗದ

ಮೇಲ್ಭಾಗವನ್ನು ತಂದು ಸ್ಥಾಪಿಸಿತು ಎಂಬ ಐತಿಹ್ಯವಿದೆ. ಮುಂದೆ ಇದೇ ಲಿಂಗವು ಮಂಜುನಾಥನೆಂಬ ಹೆಸರಿನಿಂದ ಪ್ರಸಿದ್ಧವಾಯಿತು. ಈಗಲೂ ಸಹ ದೇವದೂತ ಅಪ್ಪಣ್ಣಸ್ವಾಮಿ ಹೆಗ್ಗಡೆಯವರ ಎಲ್ಲಾ ಕಾರ್ಯಗಳಲ್ಲಿ ಸಹಕರಿಸುತ್ತಾನೆ ಎಂಬ ನಂಬಿಕೆ ಜನರಲ್ಲಿದೆ.

ಬರ್ಮಣ್ಣ ಹೆಗ್ಗಡೆ ಈಗ ತಿಳಿದಿರುವಂತೆ ಹೆಗ್ಗಡೆ ಮನೆತನದ ಮೂಲ ಪುರುರಷರು ಆದಿಚಂದ್ರನಾಥ ಬಸದಿಯ ಹತ್ತಿರದಲ್ಲಿದ್ದ ನೆಲ್ಯಾಡಿ ಇವರ ಮೂಲ ನೆಲೆ. ಆದಿಚಂದ್ರನಾಥ ಸ್ವಾಮಿಯೇ ಇವರ ಮನೆದೇವರು. ಚಂದಯ್ಯ ಹೆಗ್ಗಡೆ, ದೇವರಾಜಯ್ಯ, ಮಂಜಯ್ಯ, ಜಿನ್ನಪ್ಪ, ದೇವರಾಜಪ್ಪ, ಅನಂತಯ್ಯ ಮುಂತಾದವರು ಧರ್ಮಕಾರ್ಯಗಳನ್ನು ಮಾಡುತ್ತಾ ಸಾಗಿ ಬಂದಾಗ ೧೮ನೇ ಶತಮಾನದ ಕೊನೆಗಾಲವಾಗಿತ್ತು. ನಂತರ ಬಂದ ಕುಮಾರಯ್ಯ ಹೆಗ್ಡೆ, ಅಜ್ಜ ಬಾಂವಂದರು. ಚಂದಯ್ಯ ಹೆಗ್ಗಡೆ ಅನೇಕ ಸಾಮಾಜಿಕ ಧಾರ್ಮಿಕ ಕಾರ್ಯಗಳನ್ನು ಮಾಡುತ್ತಾ ಬಂದರು. ೧೯೧೮ ರಲ್ಲಿ ಅಧಿಕಾರವಹಿಸಿಕೊಂಡ ಮಂಜಯ್ಯ ಹೆಗ್ಗಡೆಯವರದು ಬಹು ದೊಡ್ಡ ವ್ಯಕ್ತಿತ್ವ, ಇವರು ದೇವದಾಸಿ ಪದ್ಧತಿಯನ್ನು ನಿಲ್ಲಿಸಿದರು. ಊಟದ ವ್ಯವಸ್ಥೆಯನ್ನು ಆರಂಭಿಸಿದರು. ಧರ್ಮ, ಕಲೆ, ಸಾಹಿತ್ಯ, ವಿದ್ಯಾಭ್ಯಾಸಗಳಿಗೆ ಧನವಿನಿಯೋಗ ಮಾಡಿದರು. ನಂತರ ೧೯೫೫ ಸೆಪ್ಟಂಬರ್ ೧೩ರಂದು ಅಧಿಕಾರಕ್ಕೆ ಬಂದ ರತ್ನವರ್ಮ ಹೆಗ್ಗಡೆಯವರ ಹದಿಮೂರು ವರ್ಷಗಳ ಕಾಲಾವಧಿಯಲ್ಲಿ ಇನ್ನೂ ಹೆಚ್ಚಿನ ಕೆಲಸ ಕಾರ್ಯಗಳು ನೆಡೆದವು. ೧೯೬೮ ರಲ್ಲಿ ವೀರೇಂದ್ರರು ಹೆಗ್ಗಡೆಯವರಾಗಿ ಅಧಿಕಾರ ವಹಿಸಿಕೊಂಡಾಗ ಅವರ ವಯಸ್ಸು ಕೇವಲ ಇಪ್ಪತ್ತು ವರ್ಷ, ತಾಯಿ ರತ್ನಮ್ಮನವರ ಪ್ರೋತ್ಸಾಹದಿಂದ ಹೆಂಡತಿ ಹೇಮಾ ಮತ್ತು ಕುಟುಂಬದ ಇತರ ಸದಸ್ಯರ ಸಹಕಾರಗಳಿಂದ ಸಮಾಜಮುಖಿ ಕಾರ್ಯಗಳನ್ನು ನಡೆಸಿಕೊಂಡು ಬಂದಿರುವ ವಿವರಗಳನ್ನು ಲೇಖಕರು ಇಲ್ಲಿ ನೀಡಿದ್ದಾರೆ.

ವೀರೇಂದ್ರರ ಕ್ಷೇತ್ರ ಎಂಬ ಅಧ್ಯಾಯದಲ್ಲಿ ಧರ್ಮಸ್ಥಳದ ನಿಸರ್ಗ ಸಂಪತ್ತನ್ನು, ಧಾರ್ಮಿಕ ಹಿರಿಮೆಯನ್ನು ಕುರಿತು ವಿವರಿಸಲಾಗಿದೆ. ಮಂಜುನಾಥ ದೇವಾಲಯ ಮತ್ತು ಚಂದ್ರನಾಥ ಬಸದಿಗಳ ಮಾಹಿತಿ ಇಲ್ಲಿದೆ. ಇಲ್ಲಿನ ಸಹ್ಯಾದ್ರಿ ಬೆಟ್ಟಗಳನ್ನು ಹಸಿರ ವನಸಿರಿಯನ್ನು ಲೇಖಕರು ಮೆಚ್ಚಿಕೊಂಡಿದ್ದಾರೆ. ಧರ್ಮಸ್ಥಳದ ನಿಸರ್ಗ ಸೌಂದರ್ಯ ಮನಮೋಹಕವಾದವು, ಇದು ದಕ್ಷಿಣ ಭಾರತದ ಕಾಶ್ಮೀರ ಎಂದಿದ್ದಾರೆ. ಯಾತ್ರಾರ್ಥಿಗಳಿಗಾಗಿ ನಿರ್ಮಿಸಿದ ೧೫೦ ಕೊಠಡಿಗಳ ಗಂಗಾ ೭೫ ಕೊಠಡಿಗಳ ಕಾವೇರಿ ೫೦ ಕೊಠಡಿಗಳ ಗಂಗಾವಸತಿ ಭವನಗಳು ಮತ್ತು ೨೫ ದೊಡ್ಡ ಹಾಲ್‌ಗಳುಳ್ಳ ನರ್ಮದಾ ವಿಶ್ರಾಂತಿ ಭವನಗಳ ಬಗ್ಗೆ ಮಾಹಿತಿಯಿದೆ. ನಿತ್ಯ ಅನ್ನದಾನ ನೆಡೆಯುವ ಸ್ಥಳ ಅನ್ನಪೂರ್ಣ ಮತ್ತು ವಸಂತಮಹಲಿನ ವಾಸ್ತುಶಿಲ್ಪದ ಕುರಿತು ಮಾಹಿತಿಯಿದೆ. ಪಟ್ಟಣಶೆಟ್ಟರು ವೀರೇಂದ್ರರ ಕೆಲಸಗಳ ಬಗ್ಗೆ ಮೆಚ್ಚಿಗೆ ಸೂಚಿಸುತ್ತಾ, ಕೆಲವೊಂದು ಸಲಹೆ ನೀಡಿದ್ದಾರೆ. ವಸ್ತುಸಂಗ್ರಹಾಲಯ, ಧರ್ಮಗ್ರಂಥಾಲಯ ಸಾಹಿತ್ಯ ಪ್ರಕಾಶನ ಮುಂತಾದ ಮಾಡಲು ಸಾಧ್ಯವಿರುವ ಕಾರ್ಯಗಳ ಕಡೆಗೆ ಗಮನ ಸೆಳೆದಿದ್ದಾರೆ.

ವೀರೇಂದ್ರರ ಕಾರ್ಯ ಅಧ್ಯಾಯದಲ್ಲಿ ವೀರೇಂದ್ರ ಹೆಗ್ಗಡೆಯವರು ವಿವಿಧ ಕ್ಷೇತ್ರಗಳಲ್ಲಿ ಮಾಡಿದ ಕೈಂಕರ್ಯಗಳನ್ನು ಕುರಿತು ಹೇಳಿದ್ದಾರೆ. ವೀರೇಂದ್ರರಿಗೆ ಸಮಾಜವೇ ಮುಖ್ಯ. ದೇವರು ಹೀಗಾಗಿ ಅವರು ವಿವಿಧ ಸಾಮಾಜಿಕ ಕಾರ್ಯಗಳನ್ನು ಯೋಜಿಸಿಕೊಂಡು ಅವುಗಳ ಅನುಷ್ಠಾನಕ್ಕಾಗಿ ತಮ್ಮ ತನು, ಮನ, ಧನಗಳನ್ನು ಸಮರ್ಪಿಸುವ ನಿಷ್ಠೆಯನ್ನು ತೋರಿದ್ದಾರೆ. ಅವರು ಮಾಡುವ ಯಾವುದೇ ಕೆಲಸಗಳ ಹಿಂದೆ ಸಮಾಜದ ಏಳ್ಗೆಯ

ಉದ್ದೇಶ ಹೊಂದಿರುವುದನ್ನು ಕಾಣಬಹುದಾಗಿದೆ. ಮೂಡಿಗೆರೆ, ಗೋಕರ್ಣ, ಮತ್ತು ಮಂಗಳೂರಿನ ಆಸ್ಪತ್ರೆಗಳಿಗೆ ಅನೇಕ ವೈದ್ಯಕೀಯ ಉಪಕರಣಗಳನ್ನು ನೀಡಿರುವುದು. ಶ್ರೀ ಧರ್ಮಸ್ಥಳ ಮಂಜುನಾಥ ಸಂಚಾರೀಶ್ವರ ಆಸ್ಪತ್ರೆ, ಕ್ಷಯರೋಗ ನಿವಾರಣೆ ಆಸ್ಪತ್ರೆ, ಧಾರವಾಡ, ಹುಬ್ಬಳ್ಳಿ ಮಧ್ಯದಲ್ಲಿರುವ ಕ್ಯಾನ್ಸರ್ ಆಸ್ಪತ್ರೆಗೆ ನೀಡಿದ ಒಂದು ಲಕ್ಷ, ಅರವತ್ತು ಸಾವಿರದ ದೇಣಿಗೆ ಅವರು ಸ್ಥಾಪಿಸಿದ ಮೆಡಿಕಲ್ ಟ್ರಸ್ಟ್ ಇತ್ಯಾದಿಗಳು ಅವರ ಅಮೂಲ್ಯ ಮಾನವೀಯ ಸೇವೆಗಳಾಗಿವೆ. ೧೯೭೩ ಮತ್ತು ೧೯೭೫ ರ ಬರಗಾಲದಲ್ಲಿ ಕಲ್ಬುರ್ಗಿ, ವಿಜಾಪುರದ ಜನತೆಗೆ ವಿವಿಧ ರೀತಿಯ ನೆರವನ್ನು ನೀಡಿದ್ದಾರೆ. ರೈತರಿಗೆ ಕೃಷಿ ಉಪಕರಣಗಳು, ಬ್ಯಾಂಕಿನ ಸೌಲಭ್ಯ ಸಿಗುವಂತೆ ಮಾಡಿದ್ದಾರೆ. ಗ್ರಾಮಗಳನ್ನು ದತ್ತು ತೆಗೆದುಕೊಂಡು ಅಭಿವೃದ್ಧಿ ಪಡಿಸಿದ್ದಾರೆ. ಸಾಮೂಹಿಕ ವಿವಾಹಗಳನ್ನು ಮಾಡಿದ್ದಾರೆ. ಶಿಕ್ಷಣ ಪ್ರೇಮಿಯಾದ ವೀರೇಂದ್ರರ ಕರ್ನಾಟಕದ ಅನೇಕ ಕಡೆ ಶಿಕ್ಷಣ ಸಂಸ್ಥೆಗಳನ್ನು ನಡೆಸುತ್ತಿದ್ದಾರೆ. ೧೯೭೫ರಲ್ಲಿ ಧರ್ಮಸ್ಥಳದಲ್ಲಿ ಗೊಮ್ಮಟೇಶ್ವರನ ವಿಗ್ರಹ ಸ್ಥಾಪಿಸಿದ್ದಾರೆ. ೧೯೭೯ರಲ್ಲಿ ಐವತ್ತೊಂದನೆಯ ಅಖಿಲ ಭಾರತ ಸಾಹಿತ್ಯ ಸಮ್ಮೇಳನಗಳನ್ನು ಧರ್ಮಸ್ಥಳದಲ್ಲಿ ಯಶಸ್ವಿಯಾಗಿ ನಡೆಸಿ ಕೊಟ್ಟಿದ್ದಾರೆ. ಹೀಗೆ ವೀರೇಂದ್ರ ಹೆಗ್ಗಡೆಯವರು ಮಾಡಿದ ಸಾರ್ಥಕ ಕಾರ್ಯಗಳು ಸಾವಿರಾರು.

ಈ ಕೃತಿಯು ಚಿಕ್ಕದಾದರೂ ಧರ್ಮಸ್ಥಳ ಮತ್ತು ವೀರೇಂದ್ರ ಹೆಗ್ಗಡೆಯವರ ಬಗ್ಗೆ ಅನೇಕ ಮಾಹಿತಿಗಳನ್ನು ಲೇಖಕರು ನಮಗೆ ಒದಗಿಸಿಕೊಟ್ಟಿದ್ದಾರೆ.

### ೩.೧.೫. ವ್ಯಕ್ತಿ ಚಿತ್ರಣ

ವ್ಯಕ್ತಿಯ ಬದುಕಿನಲ್ಲಿ ಹಲವಾರು ಜನ ಸ್ನೇಹಿತರು ಸಾಹಿತಿಗಳು, ಚಿಂತಕರೂ, ಸಮಾಜಸುಧಾರಕರೂ ಹೋರಾಟಗಾರರೂ ಬಂದು ಹೋಗುತ್ತಾರೆ. ಅವರ ಸಾಧನೆ ವ್ಯಕ್ತಿಯ ಮೇಲೆ ಪರಿಣಾಮ ಬೀರುತ್ತದೆ. ಅವರ ಪ್ರಭಾವ, ಪ್ರೇರಣೆ, ಆದರ್ಶಗಳು ವ್ಯಕ್ತಿಯ ಹಾಗೂ ಸಮಾಜದ ಬೆಳವಣಿಗೆಗೆ ಪೂರಕವಾಗುತ್ತವೆ. ಹೀಗೆ ಆದರಣೀಯ ಬದುಕನ್ನು ಬದುಕಿದಂಥವರ ನೇರಸಂಪರ್ಕ ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರಿಗೆ ಆಗಿದೆ. ಈ ದೃಷ್ಟಿಯಿಂದ ಋಣಾನುಬಂಧ ಎಂಬ ಅವರ ಕೃತಿ, ಹದಿನೆಂಟು ಜನ ಬೇರೆ ಬೇರೆ ಕ್ಷೇತ್ರಗಳಲ್ಲಿ ಕೆಲಸಮಾಡಿದ ವ್ಯಕ್ತಿಗಳ ಭಾವ ಕೋಶವಾಗಿದೆ. ಇಲ್ಲಿ ಅವರ ಸಂದರ್ಶನ ಮಾತುಕತೆಗಳ ಜೊತೆಗೆ ಅವರ ಒಡನಾಟದ ಅನುಭವಗಳನ್ನು ಸಂಸ್ಮರಣ ಸ್ವರೂಪದಲ್ಲಿ ಸಂಯೋಜಿಸಲಾಗಿದೆ.

#### ಋಣಾನುಬಂಧ

ಋಣಾನುಬಂಧ ಕೃತಿಯು ಸಂಸ್ಮರಣ, ಸಂದರ್ಶನ ಲೇಖನಗಳ ಸಂಗ್ರಹವಾಗಿದೆ. ೧೯೬೯ ರಿಂದ ಇತ್ತೀಚಿನ ಮೂವತ್ತು ವರ್ಷಗಳಲ್ಲಿ ಬರೆದ ಲೇಖನಗಳು ಇಲ್ಲಿವೆ. ಧಾರಾಡದ ಅನನ್ಯ ಪ್ರಕಾಶನದಿಂದ ಈ ಕೃತಿ ಪ್ರಕಟಿತಗೊಂಡಿದೆ. ಈ ಕೃತಿಯಲ್ಲಿ ಒಟ್ಟು ಹದಿನೆಂಟು ಲೇಖನಗಳಿವೆ. ಸಾಹಿತ್ಯಿಕ, ಧಾರ್ಮಿಕ, ಸಂಗೀತ, ಸಂಶೋಧನೆಯ ಕ್ಷೇತ್ರದಲ್ಲಿ ಸಾಧಿಸಿದ ಹಿರಿಯರನ್ನು ಕುರಿತಾದ ಲೇಖನಗಳಾಗಿವೆ. ಇದರಲ್ಲಿ ೬ ಅವ್ಯಕ್ತಿಗಳು ನಿಧಾನ ನಂತರ ಬರೆದ ಶ್ರದ್ಧಾಂಜಲಿ ಲೇಖನಗಳಾಗಿವೆ. ಉಳಿದಂತವು ಆಕಾಶವಾಣಿ ಅಭಿನಂದನಾಗ್ರಂಥ, ಪತ್ರಿಕೆಗಳಿಗಾಗಿ ಬರೆದ ಲೇಖನ ಮತ್ತು ಸಂದರ್ಶನಗಳಿವೆ. ಇದರಲ್ಲಿ ಮೂರು ಸಂದರ್ಶನಗಳಿವೆ.

ವಿಜ್ಞಾನದ ಮುನ್ನಡೆ ಜಗತ್ತನ್ನು ಹಳ್ಳಿಯಂತಾಗಿಸಿದೆ. ಮಾನವ ಭೌತಿಕವಾಗಿ ಹಿರಿದಾದುದ್ದನ್ನು ಸಾಧಿಸಿದ್ದಾನೆ. ವಿಶ್ವವೇ ಶರವೇಗದಲ್ಲಿ ಪರಿವರ್ತನೆಯಾಗುತ್ತಲಿದೆ. ಈ ಎಲ್ಲಾ ಸಾಧನೆಗಳ ಅವಸರದಲ್ಲಿ ಮಾನೀಯ ಸಂಬಂಧಗಳಿಗೆ ಬೆಲೆಯಿಲ್ಲದಂತಾಗಿದೆ. ಭಾವನೆಗಳಿಗೆ ನೆರೆಯಿಲೆದಂತಾಗಿದೆ. ಇಂತಹ ಸಂದರ್ಭದಲ್ಲಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟರು, ತಮ್ಮ ಜೀವನದಲ್ಲಿ ಬಹಳ ಹತ್ತಿರದಿಂದ ಕಂಡ ವ್ಯಕ್ತಿಗಳ ವ್ಯಕ್ತಿತ್ವದ ಬಗ್ಗೆ, ಅವರು ತಮ್ಮ ಮೇಲೆ ಬೀರಿದ ಪ್ರಭಾವಗಳ ಬಗ್ಗೆ, ಅವರ ಸಂಕಷ್ಟಗಳ ಬಗ್ಗೆ ಮತ್ತು ಅವರ ಗುಣದೋಷಗಳ ಬಗ್ಗೆ, ಸರಳ ಮತ್ತು ನೇರ ಮಾತುಗಳಲ್ಲಿ ಚಿತ್ರಿಸಿದ್ದಾರೆ. ಇಲ್ಲಿಯ ವ್ಯಕ್ತಿಗಳ ಬಗ್ಗೆ ಅಭಿಮಾನ ಮತ್ತು ಗೌರವ ಪೂರ್ವಕವಾದ ಮಾತುಗಳನ್ನಾಡುತ್ತಾ, ಅವರ ಕಷ್ಟಗಳಲ್ಲಿ ಭಾಗಿಯಾಗಿದ್ದಾರೆ. ಅವರ ದುಖಃಕ್ಕೆ ಇವರೂ ದುಃಖಿಸಿದ್ದಾರೆ. ಅವರಲ್ಲಿನ ದೋಷಗಳನ್ನು ಕಂಡು ಸಾತ್ವಿಕ ಸಂತಾಪ ವ್ಯಕ್ತಪಡಿಸಿದ್ದಾರೆ. ವ್ಯಂಗ ಮಾತುಗಳಿದ್ದರೂ ವಿಷಾದದ ಛಾಯೆ ಮೂಡಿಸಿದ್ದಾರೆ.

ಕನ್ನಡದ ನುಡಿಯೆನೆಗೆ ಗಾಯತ್ರಿಯೆದ್ಭುತ ಮಂತ್ರವೆಂದ ಸಾಲಿರಾಮುಚಂದ್ರರಾಯರು ಸಿದ್ಧಲಿಂಗ ಪಟ್ಟಣಶೆಟ್ಟರಿಗೆ ಅತ್ಮೀಯರು ಹಿತೈಶಿಗಳು ಅವರನ್ನು ಕುರಿತ ಮೊದಲ ಲೇಖನವೇ ಋಣಾನುಬಂಧ. ಈ ಕೃತಿಯ ಶೀರ್ಷಿಕೆಯು ಇದೇ ಆಗಿದೆ. ಯಾವ ಜನಮ್ಮದ ಋಣಾನುಬಂಧವೊ ಏನೋ, ಲೇಖಕ ಮತ್ತು ಸಾಲಿರಾಮಚಂದ್ರರಾಯರನ್ನು ಕೌಟುಂಬಿಕ ಸಂಬಂಧದಂತೆ ಹಿಡಿದಿಟ್ಟಿದೆ. ಪಟ್ಟಣಶೆಟ್ಟಿಯವರ ಬರಹದ ಚಿತ್ರಿಕ ಶಕ್ತಿ ಉತ್ತಮವಾಗಿದೆ. ಈ ಲೇಖನ ಕರಣರಸ ಪ್ರಧಾನವಾಗಿದೆ. ಸಾಲಿರಾಮಚಂದ್ರರಾಯರ ಸಾಹಿತ್ಯ ಏಳ್ಗೆಯನ್ನು ಕಂಡು ಅವರನ್ನು ತುಳಿದವದರ ಬಗ್ಗೆ ವಿಷಾದವಿದೆ. ರಾಯರು ಶ್ರೀರಾಮಚರಿತೆ ಕಾವ್ಯ ಬರೆದಾಗ ಅದರ ಬಗ್ಗೆ ಆಗಿನ ಕಾಲದ ಸಾಹಿತಿಗಳು ತೋರಿದ ಉದಾಸೀನದ ಅಗೌರವಗಳ ಬಗ್ಗೆ ಬೇಸರ ವ್ಯಕ್ತಪಡಿಸಿದ್ದಾನೆ. ರಾಯರು ಸಾಹಿತ್ಯಿಕವಾಗಿ ಕೊಟ್ಟ ಸಲಹೆ ಪ್ರೋತ್ಸಾಹಗಳು ಕೌಟುಂಬಿಕವಾಗಿ ನೀಡಿದ ಸಹಾಯಗಳನ್ನು ಲೇಖಕರು ಕೃತಜ್ಞತೆಯಿಂದ ನೆನೆದಿದ್ದಾರೆ. ಕೀರ್ತಿ ವಿಮುಖರಾಗಿ ಸಾಹಿತ್ಯ ಸೇವೆಗೈದ ರಾಯರ ಬಗ್ಗೆ ಲೇಖಕರಲ್ಲಿ ಅಪಾರವಾದ ಭಕ್ತಿ ಗೌರವಗಳಿವೆ. ಲೇಖಕರು ರಾಮಚಂದ್ರರಾಯರನ್ನು ಪ್ರೀತಿಯಿಂದ ಅಜ್ಜ ಎಂದು ಕರೆದಿದ್ದಾರೆ. ರಾಯರು ಸ್ವರ್ಗಸ್ಥರಾದಾಗ ಅವರ ಶವಸಂಸ್ಕಾರಕ್ಕಾಗಿ ಅನುಭವಿಸಿದ ತೊಂದರೆಗಳನ್ನು ಮನುಷ್ಯತ್ವವಿಲ್ಲದ ಮನುಷ್ಯರನ್ನು ಒಬ್ಬ ಸಾಹಿತಿಗೆ ಸಾವಿನ ಸಮಯದಲ್ಲಿ ನಂತರ ಸಿಗಬೇಕಾದ ಗೌರವ ಸಿಗದೇ ಇದ್ದುದಕ್ಕೆ ಮಮ್ಮಲ ಮರುಗಿದ್ದಾರೆ. ಈ ಲೇಖನ ಓದುಗನ ಅಂತಃಕರಣವನ್ನು ಕಲಕಿ ನಮ್ಮನ್ನು ಲೇಖಕರ ಆಗಿನ ದುಖಃದಲ್ಲಿ ಭಾಗಿದಾರರನ್ನಾಗಿ ಮಾಡುವಲ್ಲಿ ಯಶಸ್ವಿಯಾಗುತ್ತದೆ.

ಬಸವರಾಜ ಕಟ್ಟೀಮನಿಯವರನ್ನೂ ಕುರಿತು ಬರೆದ ಈ ಲೇಖನ ಪತ್ರರೂಪದಲ್ಲಿ ಹೊರಬಂದಿದೆ. ಕಟ್ಟೀಮನಿಯವರನ್ನು ಮೊದಲು ಕಂಡದ್ದು. ಹತ್ತು ಹಡೆಯುವುದಕ್ಕಿಂತ ಒಂದು ಮುತ್ತು ಹಡೆಯುವುದು ಲೇಸು, ನಿಮ್ಮ ಮೊದಲನೆಯ ಮಗುವೇ ಮುತ್ತಿನಂತಿದೆ. ಎಂದು ನೀನು ಕವನಸಂಕಲನವನ್ನು ಕುರಿತು ಆಡಿದ ಮಾತುಗಳನ್ನು ಲೇಖಕರು ನೆನೆಪಿಸಿಕೊಂಡಿದ್ದಾರೆ. ಹಳ್ಳಿಕೇರಿ ಗುದ್ಲೆಪ್ಪನರ ಸಹಾಯದಿಂದ ಎಂ.ಎಲ್.ಸಿ. ಆದದ್ದು, ತುರ್ತು ಪರಿಸ್ಥಿತಿಯಲ್ಲಿ ಜಯಪ್ರಕಾಶ ನಾರಾಯಣರನ್ನು ಹೀಗಳೆದದ್ದು ಅವರ ಮಾನವೀಯ ಸಂಬಂಧಗಳನ್ನು ಅವರ ಸಿಟ್ಟು ಹಠಮಾರಿತನಗಳನ್ನು ತಮ್ಮ ಪತ್ನಿಯ ನಿಧನದ ನಂತರ ನಿಸ್ಸಾಹಯಕರಾದುದನ್ನು ನೇರವಾಗಿ ಹೇಳಿದ್ದಾರೆ. ಬಸವರಾಜ ಕಟ್ಟೀ ಮನಿಯವರು ಪ್ರಚಾರ ಪ್ರಿಯರಾಗಿರಲಿಲ್ಲ. ತಮ್ಮ ಕೊನೆಗಾಲದಲ್ಲಿ ಏಕಾಂತವಾಗಿದ್ದು ನಿಶ್ಚಿಂತರಾಗಿರಬೇಕು.

ಬರೆಯಬೇಕೆಂದು ಹಂಬಲಿಸಿದರೂ ಅದು ಸಾಧ್ಯವಾಗದ ಬಗ್ಗೆ ಹೇಳಿದ್ದಾರೆ. ಅವರು ಸತ್ತಾಗ ನಂತರ ಅವರ ಹೆಣದ ಮುಂದೆ ನೆಡೆದ ನಾಟಕದಂತಹ ಸನ್ನಿವೇಷದಲ್ಲಿ ಲೇಖಕರಿಗೆ ತುಂಬಾ ಬೇಸರವೆನಿಸಿದೆ. ಅಲ್ಲಿಯವರ ವರ್ತನೆ ಮಾನವೀಯತೆಯಿಂದ ಕೂಡಿರಲಿಲ್ಲವೆಂದು ದುಃಖಿಃಸಿದ್ದಾರೆ. ಇಲ್ಲಿ ಪಟ್ಟಣಶೆಟ್ಟರ ಕಥನಕಲೆ ಅಲ್ಲಲ್ಲಿ ಬಂದು ಹೋಗುತ್ತದೆ. ಈ ಲೇಖನವು ಬಸವರಾಜ ಕಟ್ಟೀಮನಿಯವರ ವ್ಯಕ್ತಿ ಚಿತ್ರಣವಾಗಿದೆ. ಬದುಕಿನ ದುರಂತಗಳನ್ನು ಕುರಿತು ಹೇಳುತ್ತದೆ.

ತಮ್ಮ ಗುರುಗಳಾದ ವಿ.ಕೃ. ಗೋಕಾಕರ ಜೀವನ ಸಾಧನೆಗಳನ್ನು ಅವರು ದೇಶದ ನಾನಾ ಭಾಗಗಳಲ್ಲಿ ಕೈಗೊಂಡ ಭೋದನಾ ಕಾರ್ಯವನ್ನು ಗಳಿಸಿದ ಶಿಷ್ಯಂದಿರ ಬಗ್ಗೆ ಮತ್ತು ತಮ್ಮ ಕೊನೆಗಾಲದಲ್ಲಿ ಮುಂಬೈನಲ್ಲಿರುವ ಮಗ ನಮನೆಯಲ್ಲಿ ಕಾಲವಾದುದರ ಬಗ್ಗೆ ಹೇಳಿದ್ದಾರೆ. ಅವರ ಸಾಹಿತ್ಯಿಕ ಸಾಧನೆ, ಕರ್ತವ್ಯ ಶಕ್ತಿಗಳ ಬಗ್ಗೆ, ಲೇಖಕರಲ್ಲಿ ಹೆಮ್ಮೆಯಿದೆ.

ಮೋಹನ್ ರಾಕೇಶ್ ಪ್ರಸಿದ್ಧ ಹಿಂದೀ ನಾಟಕಕಾರ ಇವರನ್ನು ಕನ್ನಡಕ್ಕೆ ಪರಿಚಯಿಸಿದವರು ಡಾ. ಸಿದ್ದಲಿಂಗ ಪಟ್ಟಣಶೆಟ್ಟರೆ, ರಾಕೇಶರ ಸಾವು ಲೇಖಕರನ್ನು ನಿಸ್ಸಾಹಯಕರನ್ನಾಗಿ ಮಾಡಿದೆ. ಕೆಲವು ದಿನಗಳ ಕಾಲ ಕಾಡಿದೆ. ರಾಕೇಶರ ಮೂರು ನಾಟಕಗಳನ್ನು ಸಿದ್ಧಲಿಂಗ ಪಟ್ಟಣಶೆಟ್ಟರೇ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ರಾಕೇಶರ 'ಆಷಾಡಕ್ ಏಕ್‌ದಿನ್' ನಾಟಕವನ್ನು ತುಂಬಾ ಮೆಚ್ಚಿಕೊಂಡ ಲೇಖಕರು ಭಾಷೆಯ ಪ್ರಯೋಗ, ವಸ್ತುವಿನ ಅಭಿವ್ಯಕ್ತಿ, ಮತ್ತು ಚಯನದ ದೃಷ್ಟಿಯಿಂದ ನವೀನದೃಷ್ಠಿಯಲ್ಲಿ ಕ್ರಾಂತಿಕಾರಿ ನಾಟಕವೆಂದು ಅಭಿಪ್ರಾಯ ಪಟ್ಟಿದ್ದಾರೆ. ಹಿಂದೀ ಭಾಷೆಯ ಅತ್ಯಂತ ಪ್ರಮುಖರೆನಿಸಿದ ಕೆಲವೇ ಸಾಹಿತಗಳಲ್ಲಿ ರಾಕೇಶರು ಒಬ್ಬರು. ಆದರೆ ಅವರ ನಾಟಕಗಳು ಮಾತ್ರ ಹಿಂದೀ ನಾಟಕ ಪರಂಪರೆಯ ದಿಕ್ಕನ್ನು ಬದಲಿಸುವ ಕೇಂದ್ರ ಸಾಹಿತ್ಯ ಅಕಾಡೆಮಿಯ, ಒಂದು ನಾಟಕಕ್ಕೆ ತನ್ನ ಪ್ರಥಮ ಪುರಸ್ಕಾರವನ್ನು ನೀಡಿದ್ದು ಇವರ ಕೃತಿಯೇ ಆಗಿದೆ. ಇವರಿಗೆ ಅನೇಕ ಪುರುಸ್ಕಾರಗಳೂ ಬಂದಿವೆ. ರಾಕೇಶರ 'ಲಹರ್‍ಲೋಕೆ ರಾಜಹಂಸ್' ಮತ್ತು ೧೯೬೯ ರಲ್ಲಿ ಪ್ರಕಟವಾದ ಅಧೇ ಅದೊರೇ, ಕೃತಿಗೂ ಶ್ರೇಷ್ಠ ಕಲಾಕೃತಿಗಳಾಗಿವೆ. ಹೀಗೆ ಈ ಲೇಖನವು ರಾಕೇಶರ ಸಂಕ್ಷಿಪ್ತ ಪರಿಚಯ ಮಾಡಿಕೊಡುತ್ತದೆ.

ಕನ್ನಡದ ರಾಯರು ರಾಯ ಧಾರಾವಾಡಕರರ ಸಾಧನೆಯ ಮಜಲುಗಳನ್ನು ಪರಿಚಯಿಸುತ್ತದೆ. ಅವರ ಬಾಲ್ಯದ ವಿದ್ಯಾಭ್ಯಾಸ ವಿದ್ಯಾರ್ಥಿಯಾಗಿದ್ದಾಗಿನ ಚುರುಕುತನ, ಪ್ರಬಂಧ ಲೇಖನ ಸ್ಫಿರ್ತಿ, ಭಾಷಣ ಸ್ಪರ್ಧೆಗಳಲ್ಲಿ ಭಾಗ ಎನ್ನುವುದು ತಿಳಿಸುತ್ತಿದೆ. ಆಕಸ್ಮಿಕವಾಗಿ ಪ್ರಾಂಶುಪಾಲಗಿರಿ ಬಂದಾಗ ರಾಯರು, ವಿನಯವಾಗಿ ಆಡಳಿತ ನನ್ನ ಬರವಣಿಗೆಯನ್ನು ನುಂಗುತ್ತದೆ. ವಲ್ಲೆ ಎಂದಾಗ ಹಾಗದರೆ ನೀನು ಹೇಡಿ ಎಂಬ ಮಾತುಗಳು ಬಂದಾಗ ಅದನ್ನು ಸವಾಲಾಗಿ ಸ್ವೀಕರಿಸಿ ೨೩ ವರ್ಷಗಳ ಕಾಲ ಯಶಸ್ವಿಯಾಗಿ ಆಡಳಿತ ನೆಡೆಸಿದುದು, ಕನ್ನಡ ಭಾಷೆ, ಶಾಸ್ತ್ರ, ಹೊಸಗನ್ನಡ ಸಾಹಿತ್ಯದ ಉದಯಕಾಲ ಮುಂತಾದ ಸಾಹಿತ್ಯಿಕ ಸಾಧನೆಗಳ ಪರಿಚಯವನ್ನು ಈ ಲೇಖನವು ಮಾಡಿಕೊಡುತ್ತದೆ.

ಕನ್ನಡದ ಕಸ್ತೂರಿ ಬಾ ಪಾಂವೆ ಆಚಾರ್ಯ ಲೇಖನವು, ಅವರ ವಿಶಿಷ್ಟ ವ್ಯಕ್ತಿತ್ವ ಪ್ರತಿಭೆಗಳನ್ನು ಪರಿಚಯಿಸುತ್ತದೆ. ಇವರ ಪತ್ರಿಕೋದ್ಯಮ ಮತ್ತು ವೈಚಾರಿಕ ಸಾಹಿತ್ಯ ಸಾಧನೆಗಳು ಅವರು ಜಾತಿಯಿಂದಾಗಿ ಅನುಭವಿಸಿದ ಅವಮಾನಗಳು ಜೀವನದಲ್ಲಿ ಎಂಥಹ ಕಷ್ಟ ಬಂದರೂ ಅನ್ಯರ ಮುಂದೆ ಸಹಾಯಕ್ಕಾಗಿ ಕೈ ಚಾಚದ ಅವರ ಸ್ವಾಭಿಮಾನ ಮುಂತಾದ ವಿಷಯಗಳನ್ನು ಈ ಲೇಖನ ಪರಿಚಯಿಸುತ್ತದೆ.

ನನ್ನ ಪ್ರೀತಿಯ ಸಾರ್ ಡಾ. ವರದರಾಜ ಹುಯಿಲಗೋಳ ಲೇಖನವು ವರದರಾಜರ ಸಜ್ಜನತೆಯನ್ನು, ಅವರ ಪರಿಣಾಮಕಾರಿ ಬೋಧಕ ಕಲೆಯನ್ನು, ಅವರು ಸಿದ್ಧಲಿಂಗ ಪಟ್ಟಣಶೆಟ್ಟರ ಮೇಲೆ ತೋರಿದ ಸಾಹಿತ್ಯದ ಪ್ರೇಮವನ್ನು ಅಭಿಮಾನವನ್ನು ಲೇಖಕರು, ಹೇಳಿದ್ದಾರೆ.

ಕೀರ್ತಿನಾಥ ಕುರ್ತುಕೋಟಿ 'ಮೂರು ಪ್ರಸಂಗಗಳು' ಲೇಖನವು, ಲೇಖಕರ ಮೊದಲ ಸಂಕಲನ ನೀನಾವನ್ನು ಕಂಡು ಮೆಚ್ಚಿದ್ದು, ಗೋಪಾಲಕೃಷ್ಣ ಅಡಿಗರ ಜೊತೆ ಪಟ್ಟಣಶೆಟ್ಟರು ಕುರ್ತುಕೋಟಿಯವರೊಂದಿಗೆ ಮಾತನಾಡಿದುದು. ಮತ್ತು ದೇವನೂರು ಮಹಾದೇವರೊಂದಿಗೆ ಕುರ್ತುಕೋಟಿಯವರನ್ನು ಭೇಟಿಯಾದ ಪ್ರಸಂಗಗಳು ಇಲ್ಲಿವೆ. ಕುರ್ತುಕೋಟಿಯವರ ನಿರಂತರ ಅಧ್ಯಯನ, ನೆನಪಿನ ಶಕ್ತಿ, ಅರ್ಥಪೂರ್ಣ ವಿಚಾರಗಳು ಇಲ್ಲಿ ಕಂಡು ಬರುತ್ತವೆ.

ಗೆಳೆಯ ಎಂ.ಎಂ. ಕಲಬುರ್ಗಿ ಲೇಖನವು ಕಲಬುರ್ಗಿಯವ ಕಾಲೇಜಿನ ದಿನಗಳಲ್ಲಿನ ಒಡನಾಟವನ್ನು ಅಧ್ಯಯನದ ಶಿಸ್ತನ್ನು ಕುರಿತು ಹೇಳುತ್ತದೆ. ಕಲಬುರ್ಗಿ ರೂಢಿಸಿಕೊಂಡ ಶಿಸ್ತು, ಮುಕ್ತವಾದ ಸೃಜನಶೀಲ ಕವಿ ವ್ಯಕ್ತಿತ್ವಕ್ಕೆ, ವಿರೋಧಿ ಅನಿಸುವಷ್ಟು ಕಠಿಣ ದಾರಿಯಾಗಿತ್ತು. ಕಾರಣ ಕವಿಯಾಗಲಾರದೆ ಸಂಶೋಧಕನಾದೆ ಎಂದು ಲೇಖಕರು ಅಭಿಪ್ರಾಯ ಪಡುತ್ತಾರೆ. ಕಲಬುರ್ಗಿಯವರಿಗೆ ಪಂಪ ಪ್ರಶಸ್ತಿ ಬಂದದ್ದು ಅದರ ಹಣವನ್ನು ಹಿಂದಿರುಗಿಸಿದಾಗ ಆಗದವರು ನಾಟಕ ಎಂದು ಮಾತನಾಡಿಕೊಂಡದ್ದನ್ನು ಲೇಖಕರು ಖಂಡಿಸಿದ್ದಾರೆ. ಕಲಬುರ್ಗಿಯವರ ಶಕ್ತಿ ಸಾಮರ್ಥ್ಯಗಳು ವೃದ್ಧಿಯಾಗಲಿ ಎಂದು ಹಾರೈಸಿದ್ದಾರೆ.

ಮಿತ್ರ ಸಂತೋಷ ಕುಮಾರ ಗುಲ್ವಾಡಿ ಲೇಖನವು ಗುಲ್ವಾಡಿಯರ ತರಂಗ ಪತ್ರಿಕೆಯ ಸಾಧನೆಯನ್ನು ಗುಲ್ವಾಡಿಯವರ ಅಂತರಂಗ-ಬಹಿರಂಗ ಸಂಪಾದಕೀಯವನ್ನು ಅವರಲ್ಲಿದ್ದ ವೃತ್ತಿಪತ್ರಿಕೆಗೆ ಸ್ಪರ್ಧೆಯೊಡ್ಡುವಂತೆ ತರಂಗ ವಾರಪತ್ರಿಕೆಯನ್ನು ಬೆಳೆಸಿ ಯಶಸ್ವೀ ಸಂಪಾದಕರಾಗಿ ಕಾರ್ಯ ನಿರ್ವಸಿದ ಬಗ್ಗೆನೊ ಲೇಖಕರು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ಮ್ಯಾಗಸೆಸೆ ಪ್ರಶಸ್ತಿಪಡೆದ ಕೆ.ಎಂ. ಸುಬ್ಬಣ್ಣ ಲೇಖನದಲ್ಲಿ, ಸುಬ್ಬಣ್ಣನವರು ಒಬ್ಬ ಶ್ರೀಮಂತದ ಜಮೀನುದಾರರಾಗಿದ್ದು, ಸಾಂಸ್ಕೃತಿಕ ಲೋಕವನ್ನು ಆಯ್ದು ಕೊಂಡಿರುವುದರ ಬಗ್ಗೆ ಲೇಖಕರಲ್ಲಿ ಮೆಚ್ಚುಗೆಯಿದೆ. ಹೆಗ್ಗೋಡಿನಲ್ಲಿ ನೀಲಕಂಠೇಶ್ವರ ನಾಟ್ಯ ಸಂಘವನ್ನು ಕಟ್ಟಿ ಬೆಳೆಸಿ ಅನೇಕ ರಂಗ ಪ್ರಯೋಗಗಳನ್ನು ವಿನೂತನವಾಗಿ ನೀಡಿದುದರ ಬಗ್ಗೆ ತೃಪ್ತಿಯಿದೆ. ಅಕ್ಷರ ಪ್ರಕಾಶನ, 'ಸಾಕ್ಷಿ' ಪತ್ರಿಕೆ ನೆಡೆಸಿದ್ದಕ್ಕಾಗಿ, ಕನ್ನಡ ಸಾಹಿತ್ಯ ಸಾಂಸ್ಕೃತಿಕ ಲೋಕಕ್ಕಾಗಿ ಮ್ಯಾಗ್‌ಸೆಸೆ ಪ್ರಶಸ್ತಿಯನ್ನು ತಂದು ಕೊಟ್ಟಿದ್ದಕ್ಕಾಗಿ ಲೇಖಕರು, ಸುಬ್ಬಣ್ಣನವರಿಗೆ ಹಾರ್ದಿಕ ಅಭಿನಂದನೆಗಳನ್ನು ಸಲ್ಲಿಸಿದ್ದಾರೆ.

ಸಿ. ಅಶ್ವತ್ಥ ಕನ್ನಡ ಭಾವಗೀತ ಪ್ರಪಂಚದ ಅನುಪಮ ಆಸ್ತಿ. ಕನ್ನಡದ ಪ್ರಸಿದ್ಧ ಸಾಹಿತಿಗಳ ಗೀತೆಗಳನ್ನು ಜನರ ಬಾಯಿಯಲ್ಲಿ ಉಳಿಯುವಂತೆ ಮಾಡಿದ ಕೀರ್ತಿ ಅಶ್ವತ್ಥರಿಗೆ ಸಲ್ಲುತ್ತದೆ. ಅಶ್ವತ್ಥ ಎಲ್ಲ ಬಗೆಯ ಭಾವಗಳನ್ನು ತಮ್ಮ ವಿಶಿಷ್ಟವಾದ ಧ್ವನಿಯಿಂದ ಹೊರ ಹೊಮ್ಮಿಸ ಬಲ್ಲರು. ಶೃಂಗಾರ, ವೀರ, ಶಾಂತ ಎಲ್ಲ ಬಗೆಯ ಭಾವಗಳಿಗೆ ಅವರ ಕಂಠ ನೆಲೆಯಾಗ ಬಲ್ಲದು. ಮೂಲತಃ ಗಾಯಕರಾದ ಅಶ್ವಥ ಅವರು ಒಬ್ಬ ಯಶಸ್ವೀ ಸ್ವರ

ಸಂಯೋಜಕರಾಗಿದ್ದಾರೆ ಎಂದು ಮುಂತಾಗಿ ಅವರ ಪ್ರತಿಭೆ ಸಾಧನೆಗಳನ್ನು ಲೇಖಕರು ಹೇಳಿದ್ದಾರೆ. ಜೊತೆಗೆ ಕರ್ನಾಟಕದಲ್ಲಿ ಸುಗಮಸಂಗೀತ ಬೆಳೆದು ಬಂದ ಬಗೆಯನ್ನು ಕುರಿತು ಹೇಳಿದ್ದಾರೆ.

ಎನ್ಕೆ ಕುಲಕರ್ಣಿ, ಗೀತಾ ಕುಲಕರ್ಣಿ ಮತ್ತು ಚೆನ್ನವೀರ ಕಣವಿಯವರ ಸಂದರ್ಶನ ಲೇಖನಗಳಲ್ಲಿ ಪಟ್ಟಣಶೆಟ್ಟರು, ಉತ್ತಮ ಪ್ರಶ್ನೆಗಳನ್ನು ಕೇಳುವ ಮೂಲಕ ಅನೇಕ ಸತ್ಯಗಳನ್ನು ಅವರ ವ್ಯಕ್ತಿತ್ವವನ್ನು ಹೊರ ಹೊಮ್ಮಿಸಿದ್ದಾರೆ. ಜೀವನದಲ್ಲಿ ಕಷ್ಟಗಳನ್ನು, ನೋವುಗಳನ್ನೇ ಹೆಚ್ಚಾಗಿ ಅನುಭವಿಸಿದರೂ, ಸಮಾಧಾನಿಯಾಗಿ ಬದುಕಿದ ಎನ್ಕೆ ಕುಲಕರ್ಣಿ, ಬದುಕನ್ನು ಸವಾಲಾಗಿ ಸ್ವೀಕರಿಸಿ ಬದುಕಿದ ಗೀತಾ ಕುಲಕರ್ಣಿ ಸ್ನೇಹ ಸಂಯಮ, ಸೌಜನ್ಯ ಗುಣಗಳ ಮೂರ್ತಿವೆತ್ತಂತೆ ಇತ್ತು, ಚೆನ್ನವೀರ ಕಣವಿಯವರ ಸಂದರ್ಶನಗಳು ಉತ್ತಮವಾಗಿವೆ.

ಅದ್ಭುತಸ್ಮರಣ ಶಕ್ತಿಯ ಹಳ್ಳಿಕೇರಿ ಗುದ್ಲೆಪ್ಪನವರ ಲೇಖನವು ಸಂದರ್ಶನ ರೂಪದಲ್ಲಿದೆ. ಗುದ್ಲೆಪ್ಪನವರ ಸ್ಮರಣಶಕ್ತಿ ರಾಜಕೀಯ ಸಾಧನೆ, ಸ್ವಾತಂತ್ರ್ಯ ಹೋರಾಟ, ಗಾಂಧೀಜಿಯ ಒಡನಾಟಗಳನ್ನು ನಿಖರವಾಗಿ ಹೇಳುವುದು ಒಂದು ವಿಚಿತ್ರವಾಗಿ ಕಂಡು ಬರುತ್ತದೆ.

ಮುರುಘಾಮಠದ ಮೃತ್ಯುಂಜಯಸ್ವಾಮಿಗಳು ಮತ್ತು ಗದುಗಿನ ಡಾ. ತೋಂಟದ ಸಿದ್ಧಲಿಂಗಯತಿಗಳ ಮಾನವೀಯ ಕಳಕಳಿ ಪ್ರಕಾಶಮಾನವಾದ ವ್ಯಕ್ತಿತ್ವ ಅವರ ಸಾಹಿತ್ಯ ಸೇವೆಗಳ ಬಗ್ಗೆ ಹೇಳುತ್ತಾರೆ. ಸಿದ್ಧಲಿಂಗ ಸ್ವಾಮಿಗಳು ಮೂಲತಃ ಭಾವಿಸುವ ಕವಿ ಯೋಜಿಸುವ ಕಲಾವಿದ, ಶ್ರಮಿಸುವ ಕೃಷಿಕ, ಹೋರಾಡುವ ಯೋಧ, ಗೆಲ್ಲುವ ಮಾತೃ ಹೃದಯಿ ಎಂದು ಹೆಮ್ಮೆಯಿಂದ ಹೇಳುತ್ತಾರೆ.

ಇಲ್ಲಿನ ಹಲವಾರು ಲೇಖನಗಳಲ್ಲಿ ಕಂಡು ಬರುವ ಪ್ರಮುಖ ಅಂಶಗಳೆಂದರೆ ಡಾ. ಸಿದ್ಧಲಿಂಗ ಪಟ್ಟಣಶೆಟ್ಟರ ಉಪಕಾರ ಸ್ಮರಣೆ, ನೆಡೆನುಡಿ, ಕಾವ್ಯಮಯ ಶೈಲಿ. ಸಾಹಿತಿ ಚಂದ್ರಶೇಖರ ವಸ್ತ್ರದ ಹೇಳುವ ಹಾಗೆ ''ಯಾರನ್ನೂ ಅನಾವಶ್ಯಕವಾಗಿ ಹೊಗಳಿ ಅಟ್ಟಕ್ಕೇರಿಸಿ ವೈಭವೀಕರಿಸಿ ವಿಕೃತ ತೃಪ್ತಿ ಕಾಣುವ ಅಥವಾ ತೃಪ್ತಿ ಪಡಿಸುವ ಇರಾದೆಯ ಬರವಣಿಗೆ ಪಟ್ಟಣಶೆಟ್ಟರಲ್ಲಿ ಯಾರ ಬಗ್ಗೆಯೂ ಅನಗತ್ಯ ಆರಾಧನಾ ಮನೋಭಾವವನ್ನು ತಾಳಿದೆ. ಅಂತವಳು ಬದುಕಿ ಬಾಳಿದ ಬಗೆನ್ನು ಮಾತ್ರ ಮನೋಜ್ಞವಿಗೆ ಮೈದುಂಬಿ ಮೈತುಂಬಿ ಬರೆದಿದ್ದಾರೆ. ಅಂತೆಯೇ ಅವು ವ್ಯಕ್ತಿ ಪೂಜೆಯಾಗಿ ಉಳಿಯದೆ ವ್ಯಕ್ತಿತ್ವದ ಗುಣಗಾನವಾಗಿವೆ.''[೧೭]

**೩.೧.೬. ಸಂಪಾದನೆ**

ಕನ್ನಡದಲ್ಲಿ ಸಂಪಾದನೆ ಬಹು ವಿಧದಲ್ಲಿ ರೂಪಗೊಂಡಿದೆ. ಅಭಿನಂದನೆ, ಸಂಸ್ಮರಣೆ, ಇವು ವ್ಯಕ್ತಿಯ ಬದುಕು ಬರಹಗಳನ್ನು ಹಿಡಿದಿಡುವ ಸಂಪಾದನೆಗಳಾದರೆ, ಇನ್ನೂ ಕೆಲವು ಕಥೆ, ಕವನ, ಕಾದಂಬರಿ, ಲೇಖನ ಮುಂತಾದವುಗಳನ್ನು ಇದ್ದ ರೀತಿಯಲ್ಲಿಯೇ ಒಂದು ಕಡೆ ವ್ಯವಸ್ಥಿತವಾಗಿ ಯೋಜಿಸಿ ಕೊಡುವ ಸಂಪಾದನೆಯಿದೆ.

ಗ್ರಂಥ ಸಂಪಾದನೆಗಿಂತ (Texual Critim) ಶ್ರಮವನ್ನು ಬಯಸದ ಸಂಪಾದನಾ (Editing) ಕ್ಷೇತ್ರವು ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡಿದೆ. ಒಬ್ಬ ವ್ಯಕ್ತಿ ಹತ್ತು ಜನರಿಗೆ ಕಂಡ ರೀತಿ ಅಥವಾ ಒಂದು ಕೃತಿ ಹಲವು ನಿಟ್ಟಿನಲ್ಲಿ ಚಿಂತನೆಗೊಂಡ ಕ್ರಮದಿಂದಾಗಿ ಅನೇಕಾಂತವಾದವನ್ನು ಆಶ್ರಯಿಸಿ ರೂಪಿಸಿದ ಸಂಯೋಜನೆಯನಿಸಿದೆ.

ಈ ದೃಷ್ಟಿಯಿಂದ ಪಟ್ಟಣಶೆಟ್ಟಿಯವರು ಸಂಪಾದಿಸಿದ ಎನ್ಕೆ ಅವರ ಮೂರು ಕೃತಿಗಳು, ಕೈಲಾಸಂ, ಸಾಲಿರಾಮ ಚಂದ್ರರಾಯರ ಸಾಹಿತ್ಯ, ಜಗದ್ಗುರು ತೋಂಟದ ಸಿದ್ಧಲಿಂಗಮಹಾಸ್ವಾಮಿಗಳ ಜೀವನ ಗತಿಗಳನ್ನು ಹಿಡಿದಿಡುವ ಕಲ್ಯಾಣದಹಾದಿ ಎಸ್.ಎಂ. ಕೃಷ್ಣ ಅವರ ಬದುಕು ಹಾಗೂ ಸಂಕ್ರಮಣ ಕಾವ್ಯಗಳಲ್ಲಿದೆ. ರಂಗ ಸಂಪನ್ನರ ಮಾಲಿಕೆಯಲ್ಲಿ ಸಂಪಾದಕರಾಗಿ ದುಡಿದಿದ್ದಾರೆ. ಆ ಕೃತಿಗಳನ್ನು ಇಲ್ಲಿ ಸಮೀಕ್ಷಿಸಲಾಗಿದೆ. ಒಟ್ಟಿನಲ್ಲಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸ್ವತಂತ್ರ್ಯ ಸಂಪಾದನೆಗಳನ್ನು ೧. ಸ್ವತಂತ್ರ್ಯ ಸಂಪಾದನೆ ೨. ಇತರರೊಂದಿಗಿನ ಸಂಪಾದನೆ ಎಂದು ವರ್ಗೀಕರಿಸಬಹುದು.

### ೧. ನಾನಿಕಾಕಾ ಎನ್ಕೆಬದುಕು

ಕನ್ನಡ ಸಾಹಿತ್ಯ ಲೋಕದಲ್ಲಿ ಎನ್ಕೆ ಎಂದು ಜನಪ್ರಿಯರಾಗಿರುವ ಎನ್.ಕೆ. ಕುಲಕರ್ಣಿಯವರಿಗೆ ಎಪ್ಪತ್ತು ವರ್ಷ ತುಂಬಿದಾಗ ಅವರ ಅಭಿಮಾನಿಗಳು ಸೇರಿಕೊಂಡು ಮೂರು ಮಾದರಿಯ ಅಭಿನಂದನಾ ಗ್ರಂಥಗಳನ್ನು ಅರ್ಪಿಸಿದ್ದಾರೆ. ೧೯೮೩ ಆಗಸ್ಟ್ ೨೯ಕ್ಕೆ ಎನ್ಕೆ ಕುಲಕರ್ಣಿಯವರ ಎಪ್ಪತ್ತೊಂದಕ್ಕೆ ಕಾಲಿಡುವಾಗ ಅವರ ವ್ಯಕ್ತಿತ್ವ ಹಾಗೂ ಕೃತಿಗಳನ್ನು ಕುರಿತು ಪುಸ್ತಕ ಹೊರತರಬೇಕೆಂದು ಶೇ.ಗೋ. ಕುಲಕರ್ಣಿಯವರು ಸಿದ್ಧಲಿಂಗ ಪಟ್ಟಣಶೆಟ್ಟರಲ್ಲಿ ತಮ್ಮ ಕಳಕಳಿಯನ್ನು ವ್ಯಕ್ತಪಡಿಸಿದ್ದರು. ಸ್ನೇಹಿತರ ಒತ್ತಾಸೆಯ ಮೇರೆಗೆ ಪಟ್ಟಣಶೆಟ್ಟರು ನಾರಾಯಣ ಕೃಷ್ಣ ಕುಲಕರ್ಣಿಯವರನ್ನು ಕುರಿತು ಮೂರು ಗ್ರಂಥಗಳನ್ನು ಸಂಪಾದಿಸಿದರು.

೧. ನಾನಿಕಾಕಾ ಎನ್ಕೆ ಬದುಕು

೨. ನಾನಿಕಾಕಾ ಎನ್ಕೆ ಬರಹ

೩. ನಾನಿಯ ನೆನಹುಗಳು.

ಈ ಮೂರೂ ಕೃತಿಗಳು ಸುಂದರ ಪ್ರಕಾಶನ ಧಾರವಾಡದಿಂದ ಪ್ರಕಟಣೆಗೊಂಡಿವೆ.

ನಾನಿಕಾಕಾ ಬದುಕು ಕೃತಿಯು ಎನ್ಕೆಯವರ ವ್ಯಕ್ತಿತ್ವದ ವಿವಿಧ ಮಗ್ಗಲುಗಳನ್ನು ಪರಿಚಯಿಸುತ್ತದೆ. ಎನ್ಕೆಯವರ ಬದುಕಿಗೆ ಸಂಬಂಧಿಸಿದ ಹಲವಾರು ವಿಷಯಗಳು ಇಲ್ಲಿವೆ. ಎನ್ಕೆಯವರ ಸಂಬಂಧಿಗಳು ಮಿತ್ರರು, ಹಿರಿಯರು, ಆತ್ಮೀಯರು, ಶಿಷ್ಯರು ಮುಂತಾದವರಿಂದ ಸಿದ್ಧಲಿಂಗ ಪಟ್ಟಣಶೆಟ್ಟರು ಲೇಖನಗಳನ್ನು ಸಂಗ್ರಹಿಸಿದ್ದಾರೆ. ಈ ಕೃತಿಯಲ್ಲಿ ಒಟ್ಟು ಎಂಬತ್ತು ಲೇಖನಗಳಿವೆ.

ಈ ಕೃತಿಯಲ್ಲಿ ಮಾಸ್ತಿ ವೆಂಕಟೇಶ್ಅಯ್ಯಂಗಾರ್ ಶ್ರೀರಂಗ, ಸ.ಸ. ಮಾಳವಾಡ, ವಿ.ಕೃ.ಗೋಕಾಕ್, ರಂ.ಶ್ರೀ. ಮುಗಳಿ, ಚದುರಂಗ, ರಾ.ಯ, ಧಾರವಾಡಕರ ಗಂಗೂಬಾಯಿ ಹಾನಗಲ್ಲ, ಪಾಟೀಲ ಪುಟ್ಟಪ್ಪನಂತಹ ನಾಡಿನ ಖ್ಯಾತನಾಮರಿಂದ ಹಿಡಿದು ಎನ್ಕೆ ಸಂಪರ್ಕದಲ್ಲಿದ್ದ ಆಕಾಶವಾಣಿ ಕಲಾವಿದರೂ, ಸ್ನೇಹಿತರೂ, ಆತ್ಮೀಯರೂ, ಸಂಬಂಧಿಕರು ಬರೆದ ಲೇಖನಗಳು ಈ ಕೃತಿಯಲ್ಲಿವೆ.

ಈ ಎಲ್ಲಾ ಲೇಖನಗಳು ಎನ್ಕೆ ಅವರ ಬದುಕಿನ ಶುದ್ಧ ವ್ಯಕ್ತಿತ್ವವನ್ನು ಪರಿಚಯಿಸುತ್ತವೆ. ಎನ್ಕೆ ಅವರು ಶುದ್ಧ ಅಂತಃಕರಣಿಗಳು, ವಾತ್ಸಲ್ಯಮಯಿಗಳು, ಶಿಕ್ಷಕರಾಗಿ, ಪತ್ರಿಕಾ ಸಂಪಾದಕರಾಗಿ, ನಟರಾಗಿ, ಲೇಖಕರಾಗಿ ಆಕಾಶವಾಣಿಯಲ್ಲಿ ಯಶಸ್ವೀ ಪ್ರಸಾರಕರಾಗಿ ಕಾರ್ಯನಿರ್ವಹಿಸಿದವರು, ಅವರು ಸಹೋದ್ಯೋಗಿಗಳಿಗೆ ಒಳ್ಳೆಯ

ಹಿತೈಷಿಗಳಾಗಿ, ಲೇಖಕರ ಬಳಗಕ್ಕೆ ಒಳ್ಳೆಯ ಬರಹಗಾರರಾಗಿ, ಚತುರ ಮಾತುಗಾರರಾಗಿ ತೆಳು ಹಾಸ್ಯಗಾರರಾಗಿ ಇಲ್ಲಿನ ಲೇಖಕರಿಗೆ ಭಿನ್ನಭಿನ್ನ ರೀತಿಯಲ್ಲಿ ಕಂಡಿದ್ದಾರೆ.

ಎನ್ಕೆ ಅವರು ಬದುಕಿನಲ್ಲಿ ಸಿಹಿಗಿಂತ ಕಹಿ ಅನುಭವಗಳನ್ನು ಅನುಭವಿಸಿದ್ದೇ ಹೆಚ್ಚು. ಇದರಿಂದ ಅವರು ಬಹಳ ನೊಂದಿದ್ದಾರೆ. ಅವರ ಸರಳ ನಡೆಯ ನೇರ ನುಡಿಯ ವ್ಯಕ್ತಿತ್ವವುಳ್ಳವರಾಗಿದ್ದರು. ಅವರು ಯಾವುದೇ ಕೆಲಸವನ್ನಾಗಲೀ ನಿಯಮತವಾಗಿ ತಪ್ಪದೇ ಮಾಡುತ್ತಿದ್ದರು. ಹಿಡಿದ ಕೆಲಸವನ್ನು ಮಾಡಿ ಮುಗಿಸಿದ ಮೇಲೆಯೇ ಅವರಿಗೆ ಸಂತೃಪ್ತಿ. ಇವರ ಸಾಹಿತ್ಯವನ್ನೂ ಕನ್ನಡ ವಿಮರ್ಶಾಲೋಕ ಸರಿಯಾಗಿ ಗುರುತಿಸಲಿಲ್ಲ ಎಂಬ ಖೇದ ಅವರಲ್ಲಿದೆ. ಈ ಕೃತಿಯಲ್ಲಿನ ಎನ್ಕೆಯವರ ನನ್ನ ಕನ್ನಡಿಯಲ್ಲಿ ಮೂಡಿ ಬಂದಿದೆ. ಅವರ ಮನಸ್ಸಿನ ಆಳದಲ್ಲಿರುವ ನೋವಿನ ಭಾವನೆಗಳನ್ನು ಹೊರಕೆಡವಿದೆ. ನಾನೊಬ್ಬ ಉಪೇಕ್ಷಿತ ಸಾಹಿತಿ, ಅನಾಥ ಪ್ರಜ್ಞೆಯಿಂದ ಬಳಲುತ್ತಿರುವ ಬಡವ್ಯಕ್ತಿ ಬಾಲ್ಯದಿಂದಲೇ ಸಾವು ನೋವುಗಳು ನನ್ನೊಡನೆ ಕಣ್ಣು ಮುಚ್ಚಾಲೆ ಆಡುತ್ತಾ ನನ್ನ ಕಣ್ಣು ಕಟ್ಟಿ, ಬದುಕಿನ ಒಂದು ಪ್ರಪಾತದ ತುದಿಗೆ ನನ್ನನ್ನು ನಿಲ್ಲಿಸಿ ಹೋಗಿವೆ.

ಪ್ರೇಮ, ವಾತ್ಸಲ್ಯ, ಸ್ನೇಹ, ಕರುಣೆ, ಅನುಕಂಪ, ಸಹಾನು ಭೂತಿಗಳಿಂದ ನಾನು ವಂಚಿತ. ಹೀಗೆ ನನ್ನ ಬದುಕಿನ ಒಲವಿನ ಆವರಣವನ್ನೆಲ್ಲಾ ಸುಲಿದ ಕ್ರೂರ ಕಾಮನೆ ನನ್ನನ್ನು ಬತ್ತಲೆ ಮಾಡಿದೆ. ಅವರು ತಮ್ಮ ಸಾಹಿತ್ಯ ಸೃಷ್ಠಿಗೆ ಸಹಕಾರಿಯಾದ ಅಂಶಗಳನ್ನು ಹೇಳಿಕೊಂಡಿದ್ದಾರೆ. ಕುಮಾರವ್ಯಾಸನ ವ್ಯಾಸಾಂಗ, ಬೇಂದ್ರೆಕಾವ್ಯ, ಬೇಂದ್ರೆಗದ್ಯಗಳ ಅಭ್ಯಾಸ, ಬೇಂದ್ರೆಸಹವಾಸ, ನನ್ನ ಬದುಕಿಗೆ, ನನ್ನ ಬರವಣಿಗೆಗೆ ಜೀವನದಲ್ಲಿ ನೋವನ್ನು ಸಾಕಷ್ಟು ಕಂಡವರಾದ ಕಾರಣ ಅವರು ವಿಷಾದದಿಂದ ಹೀಗೆ ಹೇಳಿದ್ದಾರೆ. ನನಗೆ ಮದುವೆಯ ಮನೆಗಿಂತ ಸೂತಕದ ಮನೆಗೆ ಹೋಗುವುದು ಹೆಚ್ಚು ಇಷ್ಟ ಎಂದು ನುಡಿಯುವ ಬೈಬಲ್ ವಾಕ್ಯ ನನ್ನ ಬದುಕಿನ ರೀತಿಯಾಗಿದೆ.

ಕೃತಿಯ ಆರಂಭದಲ್ಲಿ ಎನ್ಕೆ ಅವರ ತಂದೆ, ಸಹೋದರರು, ಕುಟುಂಬ, ಹಿರಿಯ ಸಾಹಿತಿಗಳೊಂದಿಗೆ ಇದ್ದ ಪ್ರಸಂಗಗಳ ಛಾಯಾ ಚಿತ್ರಗಳಿವೆ. ವಿದ್ಯಾಭ್ಯಾಸ, ಮದುವೆ, ಮುಂತಾದ ಬದುಕಿನ ಪ್ರಮುಖ ಘಟನೆಗಳನ್ನು ಅವುಗಳ ದಿನಾಂಕಗಳನ್ನು ಮತ್ತು ಎನ್ಕೆಯವರ ಪ್ರಕಟಿತ ಕೃತಿಗಳ ಪಟ್ಟಿ ನೀಡಲಾಗಿದೆ.

**೨.ನಾನಿಕಾಕಾ ಎನ್ಕೆಬರಹ**

ಈ ಪುಸ್ತಕವು ಎನ್ಕೆ ಕುಲಕರ್ಣಿ ಬರೆದಿರುವ ಸಮಗ್ರ ಸಾಹಿತ್ಯವನ್ನು ಕುರಿತು ವಿಶ್ಲೇಷಿಸುತ್ತದೆ. ಎನ್ಕೆಯವರ ಸಾಹಿತ್ಯವನ್ನು ಕುರಿತು ಮೂವತ್ತೈದು ಜನ ಲೇಖಕರು ವಿಮರ್ಶಾತ್ಮಕ ಲೇಖನಗಳನ್ನು ಬರೆದಿದ್ದಾರೆ. ಎನ್ಕೆ ಕುಲಕರ್ಣಿಯವರ ಸಾವಿನ ಉಡಿಯಲ್ಲಿ ಎರಡೆಸಿಯ ಸಂಬಂಧ, ವೈನಿ, ಕಲೋಪ ಜೀವಿ, ಗೌರಿಶಂಕರ, ಮೂರು ತಲೆಮಾರು, ಲಲಿತಾ ಎನ್ನುವ ಏಳು ಕಾದಂಬರಿಗಳು, ಏಕಾಂತ ಸಂಗ್ರಹಗಳು ದೊಡ್ಡ ನಾಟಕಗಳು, ಹರಟೆಗಳು, ಸಾಹಿತ್ಯ ಮತ್ತು ಕಾವ್ಯ ವಿಮರ್ಶಾ ಕೃತಿಗಳು, ಆತ್ಮಕಲೆ, ಜೀವನ ಪರಿಚಯ ಕೃತಿಗಳ ವಿಶ್ಲೇಷಣೆ ಇಲ್ಲಿದೆ.

ಡಾ. ವರದರಾಜ ಹುಯಿಲಗೋಳ, ಡಾ.ಜಿ.ಎಂ. ಹೆಗಡೆ, ಕೀರ್ತಿನಾಥ ಕುರ್ತುಕೋಟಿ, ಡಾ. ವೀರಣ್ಣರಾಜೂರು, ಡಾ. ಶಾಂತಿನಾಥ ದಿಬ್ಬದ, ಡಾ. ಬಸವರಾಜ ಮಲಶೆಟ್ಟಿ, ವಸಂತಕುಷ್ಟಗಿ, ಡಾ.ವಾಮನ ಬೇಂದ್ರೆ, ಡಾ. ಗುರುಲಿಂಗ ಕಾಪಸೆ ಮುಂತಾದ ವಿದ್ವಾಂಸರು ಎನ್ಕೆಯವರ ನಲವತ್ತೆಂಟು ಕೃತಿಗಳನ್ನು ಇಲ್ಲಿ ವಿಶ್ಲೇಷಣೆಗೆ ಒಳಪಡಿಸಿದ್ದಾರೆ.

ಎನ್ಕೆಯವರು ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಕೃತಿಗಳನ್ನು ರಚಿಸಿದರೂ ಅವರ ನಾಟಕ, ಏಕಾಂಕಗಳು, ಹರಟೆಗಳು ಹೆಚ್ಚು ಜನಪ್ರಿಯತೆಯನ್ನು ಪಡೆದಿದೆ. ಆಕಾಶವಾಣಿ ಪ್ರಸಾರಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಕಾರಣ ಈ ಪ್ರಕಾರಗಳಲ್ಲಿ ಸಾಹಿತ್ಯ ಸೃಷ್ಟಿಸುವ ಅನಿವಾರ್ಯತೆ ಕುಲಕರ್ಣಿಯವರಿಗೆ ಇತ್ತು. ಗೋಪಾಲ ವಾಜಪೇಯಿ ಅವರು ಇವರ ನಾಟಕಗಳನ್ನು ಕುರಿತು ಹೇಳುವ ಹಾಗೆ ಒಬ್ಬ ನಾಟಕಕಾರ ಮುಖ್ಯವಾಗಿ ನಟನಾಗಿರಬೇಕು. ನಿರ್ದೇಶಕನ ಗುಣಗಳೂ ಅವನಲ್ಲಿರಬೇಕು, ಜೊತೆಗೆ ಪ್ರೇಕ್ಷಕನಾಗಿಯೂ ತನ್ನ ನಾಟಕವನ್ನು ನೋಡಬೇಕು. ಇವೆಲ್ಲದರ ಜೊತೆಗೆ ಆತನಿಗೆ ಸಮಕಾಲೀನ ಸಾಮಾಜಿಕ ಪ್ರಜ್ಞೆ, ಕಳಕಳಿಗಳೂ ಇರಬೇಕು. ಅಂದರೆ ಮಾತ್ರ ಆತ ಯಶಸ್ವೀ ನಾಟಕಕಾರನಾಗಿ ನಿಲ್ಲುತ್ತಾನೆ. ಗೆಲ್ಲುತ್ತಾನೆ ಎಂಬ ಮಾತನ್ನು ಎನ್ಕೆ ನಿಜವಾಗಿಸಿದ್ದಾರೆ. ಅವರ ನಾಟಕಗಳು ಸಾಮಾಜಿಕ ಸಂಬಂಧಗಳನ್ನು ಒಳಗೊಂಡಿವೆ. ಇವರ ಅಭಿನಯವೂ ಉತ್ತಮವಾಗಿತ್ತು. ವರದಕ್ಷಿಣೆ ಮಹಿಳಾ ಶೋಷಣೆ ಸಾಮಾಜಿಕ ಪಿಡುಗಾದ ಮದ್ಯಪಾನ, ಎಂತಹ ವಸ್ತುವಾದರೂ ಸರಿ ಅದನ್ನು ಸುಂದರ ಸರಳ ನಾಟಕವನ್ನಾಗಿ ಮಾಡುವ ಕಲೆ ಅವರಲ್ಲಿ ಕರಗತವಾಗಿತ್ತು. ಎನ್ಕೆಯವರು ನಾಟಕವನ್ನು ವಿಡಂಬನೆಯ ಮಾಧ್ಯಮವನ್ನಾಗಿ ಆಯ್ಕೆ ಮಾಡಿಕೊಂಡಿದ್ದರು. ಜಿ.ಹೆಚ್. ರಾಘುವೇಂದ್ರರು ಹೇಳುವ ಹಾಗೆ, ಎನ್ಕೆಯವರು ಆಕಾಶವಾಣಿಗೆ ಸೇರಿ ತಮ್ಮ ಶಬ್ದ ಸಂಪತ್ತು ಚಾಣಾಕ್ಷ ಸಂಭಾಷಣೆಗಳನ್ನೆಲ್ಲಾ ಗಾಳಿಯಲ್ಲಿ ಬಿಡದಿದ್ದರೆ ಇವತ್ತು ಎನ್ಕೆ ನಾಟಕಗಳು ಕನ್ನಡ ಸಾಹಿತ್ಯಕ್ಕೆ ಬಹುದೊಡ್ಡ ಕೊಡುಗೆಗಳಾಗುತ್ತಿದ್ದವು.

ಎನ್ಕೆಯವರ ಕಾದಂಬರಿಗಳು ಆತ್ಮೀಯತೆಯ ಧಾಟಿಯಲ್ಲಿಹೇಳುತ್ತಾ ಸಾಗುವುದರಿಂದ ಓದುಗರಿಗೆ ಸುಲಭವಾಗಿ ಅರ್ಥವಾಗಿ ಬಿಡುತ್ತವೆ. ಮೃದುತನವೇ ಎನ್ಕೆಯವರ ಹಾಸ್ಯದ ಪ್ರಾಣ ಗುಣವಾಗಿದೆ. ಅವರ ಕೃತಿಗಳಲ್ಲಿನ ಹಾಸ್ಯ ಭರಿತ ಮಾತುಗಳು ಚುಚ್ಚುವ ಬಾಣಗಳಾಗಿರದೇ ಮುಟ್ಟಿ ಪುಳಕಗೊಳಿಸುವ ಹೂಬಾಣಗಳಾಗಿ ಚಿಮ್ಮಿ ಬರುತ್ತವೆ. ಗಂಭೀರ ವಾತಾವರಣದಲ್ಲೂ ಸುವಾಸನೆಯ ಬೆಳದಿಂಗಳನ್ನು ಮೂಡಿಸುತ್ತದೆ.

ಎನ್ಕೆಯವರಿಗೆ ಕುಮಾರವ್ಯಾಸನೆಂದರೆ ಬಹು ಪ್ರಿಯವಾದ ಕವಿ, ಇವರು ಕೋಳಿವಾದಕ್ಕೆ ಹೋಗಿ ಕವಿಯನ್ನು ಕುರಿತು ಅನೇಕ ಮಾಹಿತಿಗಳನ್ನು ಸಂಗ್ರಹಿಸಿದ್ದಾರೆ. ಕುಮಾರವ್ಯಾಸನ ಹತ್ತು ಪರ್ವತಗಳನ್ನು ತಿಮ್ಮಣ್ಣ ಕವಿಯ ಎಂಟು ಪರ್ವಗಳನ್ನು ಸಂಪಾದಿಸಿ ಕನ್ನಡ ವ್ಯಾಸಭಾರತವನ್ನು ಪ್ರಕಟಿಸಿದ್ದಾರೆ. ಕುಮಾರವ್ಯಾಸನನ್ನು ಕುರಿತು ಐದು ಗ್ರಂಥಗಳನ್ನು ರಚಿಸಿದ್ದಾರೆ.

ಆಕಾಶವಾಣಿಯಲ್ಲಿ ಸುದೀರ್ಘವಾಗಿ ಸೇವೆ ಸಲ್ಲಿಸಿದ ಇವರು ನಡುಮನೆಯಲ್ಲಿ ಗಿಳಿವಿಂಡು ಮುಂತಾದ ಕಾರ್ಯ ಕ್ರಮಗಳನ್ನು ಜನಪ್ರಿಯಗೊಳಿಸಿದ ಕೀರ್ತಿ ಎನ್ಕೆಯವರಿಗೆ ಸಲ್ಲುತ್ತದೆ. ಎನ್ಕೆಯವರ ಸಾಹಿತ್ಯದ ಎಲ್ಲಾ ಮಗ್ಗುಲುಗಳನ್ನು, ವಿಶೇಷತೆಗಳನ್ನು ಈ ಕೃತಿಯು ಪರಿಚಯಿಸುತ್ತದೆ.

**೩. ನಾನಿಯ ನೆನಹುಗಳು**

ಈ ಕೃತಿ ಎನ್ಕೆ ಕುಲಕರ್ಣಿಯವರ ಆತ್ಮ ಕಥೆಯಾಗಿದೆ. ಸಂಯುಕ್ತಕರ್ನಾಟಕ ದಿನಪತ್ರಿಕೆಯಲ್ಲಿ ೧೯೮೩ ಮೇ ೧ ರಿಂದ ಆಗಸ್ಟ್ ೨೮ರ ವರೆಗೆ ಹದಿನೆಂಟು ಕಂತುಗಳಲ್ಲಿ ಧಾರವಾಹಿಯ ರೂಪದಲ್ಲಿ ಪ್ರಕಟಣೆಗೊಂಡಿದೆ. ಅವರ ಎಪ್ಪತ್ತರ ಹುಟ್ಟು ಹಬ್ಬಕ್ಕೆ ಸರಿಯಾಗಿ ಮುಕ್ತಾಯವಾಗುವಂತೆ ಧಾರವಾಹಿಯಾಗಿ ಪ್ರಕಟವಾಗುವುದನ್ನು ಯೋಚಿಸಿದ

ಯಶಸ್ಸು ಸಂಯುಕ್ತಕರ್ನಾಟಕ ಪತ್ರಿಕಾ ಬಳಗದ ಸುರೇಂದ್ರ ದಾನಿಯವರದು. ಇದನ್ನು ಪುಸ್ತಕ ರೂಪದಲ್ಲಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟರು ಸಂಪಾದಿಸಿಕೊಟ್ಟಿದ್ದಾರೆ.

ಈ ಕೃತಿಯಲ್ಲಿ ಪ್ರತಿವಾರ ಪ್ರಕಟವಾಗುವ ಎನ್ಕೆಯವರ ಆತ್ಮಚರಿತ್ರೆಯ ಅಂಕಣಕ್ಕೆ ಪರ್ವ ಎಂದು ಹೆಸರಿಸಿ ಬರೆದಿದ್ದಾರೆ. ಒಟ್ಟು ಹದಿನೆಂಟು ಪರ್ವಗಳಲ್ಲಿ ಇವರ ಆತ್ಮಚರಿತ್ರೆ ಹರಡಿಕೊಂಡಿದೆ. ಜನನ ಬಾಲ್ಯ, ಪ್ರಾಥಮಿಕ ವಿದ್ಯಾಭ್ಯಾಸ, ತದಂತರ ಲೇಖಕರಲ್ಲಿ ಬಲವಾಗಿ ಮೂಡಿದ ಕಾಲೇಜು ಕಲಿಯವ ಹಂಬಲ. ಅದಕ್ಕೆ ಒದಗಿ ಬಂದ ಆರ್ಥಿಕ ಅಡಚಣೆಗಳು, ಅಣ್ಣನ ಹೆಂಡತಿ ವೈನಿಯವರಿಂದ ಶಿಫಾರಸು ಮಾಡಿಸಿ ಮಾವನ ಮನೆಸೇರಿ ಮನೆ ಪಾಠ ಹೇಳುವುದು. ಕಾಲೇಜು ಶುಲ್ಕ ಪಾವತಿಸಲಾಗದೇ ತೊಂದರೆಗೆ ಒಳಗಾಗುವುದು. ಈ ಕೊನೆಗೆ ಮಾವನವರೇ ಓದಿನ ಎಲ್ಲಾ ಜವಾಬ್ದಾರಿಗಳನ್ನು ವಹಿಸಿಕೆಳ್ಳುವುದು, ಆದರೆ ಅವರು ತಮ್ಮ ಮಗಳನ್ನು ಮದುವೆಯಾಗುವಂತೆ, ಹೇಳುವುದು. ಬಹಳ ಸರಳ ಸುಂದರವಾಗಿ ಮೂಡಿಬಂದಿವೆ. ಅನಿವಾರ್ಯ ಕಾರಣಗಳಿಂದಾಗಿ ವಿದ್ಯಾರ್ಥಿಯಾಗಿದ್ದಾಗಲೇ ಮದುವೆ ಮಾಡಿಕೊಂಡ ಎನ್ಕೆ ಮಧು ಚಂದ್ರವಿಲ್ಲದೆ ಅಭ್ಯಾಸ ಮುಂದುವರೆಸುತ್ತಾರೆ. ಸಾಹಿತ್ಯ ಸೃಷ್ಠಿಯಲ್ಲಿ ತೊಡಗಿದುದು. ಪತ್ರಿಕಾ ಸಂಪಾದಕರಾಗಿ ಕಾರ್ಯ ನಿರ್ವಹಿಸಿದುದು ನಟ ನಾಟಕಕಾರರಾದ ವಿಚಾರಗಳು ಇಲ್ಲಿವೆ. ಮುಂದೆ ಮೇಲಿಂದ ಮೇಲೆ ಬಂದೆರೆಗಿದ ಸಾವುಗಳು ಅವರ ಜೀವನದಲ್ಲಿ ದುಃಖವನ್ನುಂಟು ಮಾಡಿವೆ. ಆಕಾಶವಾಣಿ ಕಲಾವಿದರಾಗಿ ಮುಂಬೈ ಮತ್ತು ಬೆಂಗಳೂರುಗಳಲ್ಲಿ ಕಾರ್ಯ ನಿರ್ವಹಿಸಿದ ಮುಂತಾದ ವಿಷಯಗಳು ಈ ಕೃತಿಯಲ್ಲಿವೆ. ಸಂಪಾದಕರಾದ ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಕೃತಿಯನ್ನು ಕುರಿತು ಬೆನ್ನುಡಿಯಲ್ಲಿ ಕೆಲವು ಮಹತ್ವದ ಮಾತುಗಳನ್ನು ಆಡಿದ್ದಾರೆ. ಆತ್ಮಕಥೆ ಬರೆಯುವುದು ಎರಡೂ ಕಡೆಗೆ ಹರಿತ ಅಲಗು ಹೊಂದಿದ ಖಡ್ಗದ ಮೇಲೆ ನಡೆದಂತೆ, ಒಂದು ಹೇಳಿದರೆ ಕಷ್ಟ ಹೇಳದಿದ್ದರೆ ಅಪರಾಧ, ಸ್ವಪ್ರಶಂಸೆ, ಅಹಂಕಾರ, ಭಾವುಕತೆ, ಕಲ್ಪನೆ, ಮರೆವು ಇತ್ಯಾದಿಗಳ ಭಯಂಕರ ಕೊಳ್ಳಗಳನ್ನು ದಾಟಿ ಬಂದು ಸತ್ಯವನ್ನು, ಸಾಚಾತನವನ್ನು ಮೆರಗಿನಿಂದ ತೋರಿಸಿ ನುಡಿದು ಬರೆಯ ಬೇಕಾದದ್ದು ಆಪೇಕ್ಷಣೀಯ, ಮೈತುಂಬಿ ಮನಸ್ಸಿನ ತುಂಬ ಕ್ಷಣಕ್ಷಣದ ಈ ಎಚ್ಚರಿಕೆಯನ್ನು ಚುಚ್ಚು ಮುಳ್ಳುಗಳಿಂದ ಸ್ವರಕ್ಷಣೆ ಮಾಡಿಕೊಂಡು ಬರೆದರೆ ಅದು ನಿಜವಾದ, ಯೋಗ್ಯವಾದ, ಇತಿಹಾಸವಾಗಿಯೂ ಸಾಹಿತ್ಯವಾಗಿ, ಉಳಿಯುವಂಥ ಕೃತಿ ಆಗುತ್ತದೆಯೇ ಕನ್ನಡದಲ್ಲಿ ಈ ಹಾದಿಯಲ್ಲಿ ನೆಡೆದವರು ಕಡಿಮೆ. ಬದುಕು ಹಾಗೂ ಬರಹದ ಈ ಜೀವಂತ ಪ್ರಕಾರದ ಆಹ್ವಾನವನ್ನು ಸ್ವೀಕರಿಸಿ ತಮ್ಮೊಳಗೆ ಹುದುಗಿದ ನಾನಿಯನ್ನು ಹಿಡಿದೆಳೆದು ಅವನ ನೆನಹುಗಳನ್ನು ಗ್ರಂಥಿಸಿದ ಎನ್ಕೆಯವರ ಈ ಕೃತಿ ಉತ್ತರ ಕರ್ನಾಟಕದ ಕಳೆದ ಐದಾರು ದಶಕಗಳ ಸಂಕ್ಷಿಪ್ತ ರಾಮಾಯಣವನ್ನು ನಾಟ್ಯೀಕರಿಸಿದೆ.[೨೫] ಎನ್ಕೆಯವರು ರಚಿಸಿರುವ ಹಲವಾರು ಕೃತಿಗಳಲ್ಲಿ ಈ ಆತ್ಮಕಥೆ ಶ್ರೇಷ್ಠ ಕೃತಿಯಾಗಿದೆ. ನೆಡೆದದ್ದನ್ನು ಅನಿಸಿದ ಭಾವನೆಗಳಿಗೆ ಬಣ್ಣ ಹಚ್ಚದೇ ನೇರವಾಗಿ ಹೇಳುವ, ತಪ್ಪುಗಳನ್ನು ಒಪ್ಪಿಕೊಳ್ಳಲು ಪ್ರಾಮಾಣಿಕ ಬರಹ ಇದಾಗಿದೆ.

**೪. ಕೈಲಾಸಂ**

ಕನ್ನಡಕ್ಕೊಬ್ಬನೇ ಕೈಲಾಸಂ ಎಂಬ ಉಕ್ತಿಯಿಂದ ಪ್ರಸಿದ್ಧರಾಗಿರುವ ಟಿ.ಪಿ. ಕೈಲಾಸಂ ಅವರದು ಕನ್ನಡ ನಾಟಕ ಪ್ರಪಂಚದಲ್ಲಿ ಬಹುದೊಡ್ಡ ಹೆಸರು. ೧೯೮೫ ರಲ್ಲಿ ಕರ್ನಾಟಕ ನಾಟಕ ಅಕಾಡೆಮಿ ಕೈಲಾಸಂ ಶತಮಾನೋತ್ಸವವನ್ನು ವಿಶಿಷ್ಟ ರೀತಿಯಲ್ಲಿ ಆಚರಿಸಲು ನಿರ್ಧರಿಸಿತು. ಪ್ರಯುಕ್ತ ಧಾರವಾಡದಲ್ಲಿ ನಾಟಕೋತ್ಸವ ಮತ್ತು ಅವರನ್ನು ಕುರಿತ

ವಿಚಾರ ಸಂಕೀರ್ಣಗಳು ನಡೆದವು. ಇಲ್ಲಿ ನಾಡಿನ ಅನೇಕ ಲೇಖಕರು ಕೈಲಾಸಂ ಅವರನ್ನು ಕುರಿತು ಪ್ರಬಂಧಗಳನ್ನು ಮಂಡಿಸಿದರು. ಅದನ್ನು ಸಂಪಾದಿಸಿ ಪುಸ್ತಕ ರೂಪದಲ್ಲಿ ಪಟ್ಟಣಶೆಟ್ಟರು ನೀಡಿದ್ದಾರೆ.

೧೮೮೪ರಲ್ಲಿ ಮದ್ರಾಸಿನಲ್ಲಿ ಜನಿಸಿದ ಕೈಲಾಸಂ ಉನ್ನತ ಶಿಕ್ಷಣವನ್ನು ಲಂಡನ್ನಿನಲ್ಲಿ ಪಡೆದಿದ್ದರು. ರಾಯಲ್‌ಜಿಯಾಲಾಜಿಕಲ್ ಸೊಸೈಟಿಗೆ ಪ್ರಬಂಧ ಬರೆದು ಅದರ ಫೆಲೋಶಿಪ್ ಪಡೆದ ಮೊದಲ ಭಾರತೀಯ ಇವರು. ೧೯೪೫ರಲ್ಲಿ ಮದ್ರಾಸಿನಲ್ಲಿ ಜರುಗಿದ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿದ್ದರು. ತಮ್ಮ ಅರವತ್ತೆರಡನೇ ವಯಸ್ಸಿನಲ್ಲಿ ಬೆಂಗಳೂರಿನಲ್ಲಿ ತೀರಿಕೊಂಡರು.

೧೯೮೫ ಡಿಸೆಂಬರ್ ೨೫.೨೬.೨೭. ರಂದು ಮೂರು ದಿನಗಳ ಕಾಲ ಧಾರವಾಡದಲ್ಲಿ ನಡೆದ ನಾಟಕೋತ್ಸವದಲ್ಲಿ ಕೈಲಾಸಂ ಅವರ 'ಬಂಡ್ವಾಳವಿಲ್ಲದ ಬಡಾಯಿ' 'ಸಾಕಯ್ಯ ನಮ್ ಬ್ರಾಹ್ಮಣಿಕೆ' ಅನುಕೂಲಕ್ಕೊಬ್ಬಣ್ಣ 'ನಂಕಂಪ್ನಿ' ನಾಟಕಗಳು ಪ್ರದರ್ಶನಗೊಂಡವು. ಇದರ ಜೊತೆಗೆ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧಗಳಿವೆ ವಿವಿಧ ಲೇಖಕರು ಕೈಲಾಸಂರವರನ್ನು ಕುರಿತು ಪ್ರಬಂಧ ಮಂಡಸಿದ್ದಾರೆ.

| | |
|---|---|
| ಉದ್ಘಾಟನಾ ಸಮಾರಂಭದ ಅಧ್ಯಕ್ಷೀಯ ಭಾಷಣ | ಪರ್ವತ ವಾಣಿ |
| ಕೈಲಾಸಂ ವ್ಯಕ್ತಿತ್ವ | ಮ.ಗು. ಸದಾನಂದಯ್ಯ |
| ನಟರಾಗಿ ಕೈಲಾಸಂ | ಡಾ.ಎಚ್.ಎಸ್. ಪಾರ್ಶ್ವನಾಥ |
| ನಾನು ಅಭಿನಯಿಸಿದ ಕೈಲಾಸಂ ಪಾತ್ರಗಳು | ಎಸ್.ವಿ. ರಾಮಚಂದ್ರಮೂರ್ತಿ |
| ಕೈಲಾಸಂ ಕನ್ನಡ ನಾಟಕಗಳು | ಹೂಲಿಶೇಖರ |
| ಕೈಲಾಸಂ ಅವರ ಕಥೆಗಳು, ಹಾಡುಗಳು | ಡಾ. ಹೇಮಾಪಟ್ಟಣಶೆಟ್ಟಿ |
| ಕೈಲಾಸಂ ಅವರ ಅಪ್ರಕಟಿತ ಕೃತಿಗಳು | ಡಾ. ಆರ್. ಮೋಹನ್ ಕುಮಾರ್ |
| ಕೈಲಾಸಂ ಸಂಕಿರಣ ಸಮಾರೋಪ ಭಾಷಣ | ಪರ್ವತವಾಣಿ |
| ಕೈಲಾಸಂ ಸಾಹಿತ್ಯ | ಡಾ.ಎಚ್.ಎ. ಪಾರ್ಶ್ವನಾಥ |

ಇಲ್ಲಿನ ಹನ್ನೆರೆಡು ಲೇಖನಗಳು ಕೈಲಾಸಂ ಅವರ ಬದುಕು ಸಾಹಿತ್ಯವನ್ನು ಕುರಿತು ಹೇಳುತ್ತವೆ. ನಾಟಕ ಜನಸಾಮಾನ್ಯರ ಜೀವನಕ್ಕೆ ಸಂಬಂಧಿಸಿದುದಾಗಿರಬೇಕು. ಅವರ ಸಮಸ್ಯೆ ಸಂಕಷ್ಟಗಳನ್ನು ಬಿಂಬಿಸುವಂತಿರಬೇಕು. ಅದಕ್ಕೆ ಸೂಕ್ತ ಪರಿಹಾರವನ್ನು ನೀಡುವಂತರಿಬೇಕು. ಹಾಗಿದ್ದಲ್ಲಿ ಮಾತ್ರ ನಾಟಕ ಸಾರ್ಥಕತೆಯನ್ನು ಪಡೆದು ಕೊಳ್ಳುತ್ತದೆ. ನಾಟಕ ಕೇವಲ ಮನರಂಜನೆಗೆ ಸೀಮಿತವಾಗದೇ ನೋಡುಗರಲ್ಲಿ ವಿಚಾರ ಪ್ರಬೋಧನೆ ಮಾಡುವಂತಿರಬೇಕು. ಎನ್ನುವುದು ಕೈಲಾಸಂ ಅವರ ಧೋರಣೆಯಾಗಿತ್ತು. ಕೆಲವು ಗಂಭೀರ ನಾಟಕಗಳನ್ನು ಬರೆದ ಕೈಲಾಸಂ ಮಧ್ಯಮ ವರ್ಗದ ಜನರ ಹಂಬಲ, ಕೌಟುಂಬಿಕ ಕಲಹಗಳು, ಗಂಡಸಿನ ಅಹಂಗಳನ್ನು ನಾಟಕದ ವಸ್ತುವನ್ನಾಗಿಸಿ ಕೊಂಡಿದ್ದರು. ಎಂದು ಇಲ್ಲಿನ ಪ್ರಬಂಧಗಳಿಂದ ತಿಳಿದು ಬರುತ್ತದೆ. ಡಾ.ಮೋಹನ್‌ಕುಮಾರ್ ಅವರ ಲೇಖನ ಕೈಲಾಸಂ ಅವರ ಅಪ್ರಕಟಿತ ಕೃತಿಗಳು ಮತ್ತು ಪಾರ್ಶ್ವನಾಥರ ಕೈಲಾಸಂ ಸಾಹಿತ್ಯ ಅಮೂಲ್ಯ ಮಾಹಿತಿಯನ್ನು ನೀಡುತ್ತವೆ. ಈ

ಕೃತಿಯನ್ನು ಕುರಿತು ಡಾ. ವೀರಣ್ಣ ರಾಜೂರು ಹೀಗೆ ಹೇಳಿದ್ದಾರೆ. ''ಕೈಲಾಸಂ ವಿಶಿಷ್ಟ ವ್ಯಕ್ತಿತ್ವದ ಬಗ್ಗೆ ಬರೆದ ಬೆನ್ನುಡಿ ಮಾತುಗಳು ಸಂಪಾದಕರ ಗುಣಗ್ರಾಹಕ ಸೂಕ್ಷ್ಮ ದೃಷ್ಠಿ ಹಾಗೂ ಸಂಗ್ರಹ ಶಕ್ತಿಗೆ ನಿದರ್ಶನವೆನಿಸಿದೆ. ಕೈಲಾಸಂ ಬಗ್ಗೆ ಈವರೆಗೆ ಸಂಕಲನವೂ ತನ್ನ ಕಾಣಿಕೆಯನ್ನು ಸ್ವಲ್ಪ ಹೆಚ್ಚಿಸಿದರೆ ನನಗೆ ಸಮಾಧಾನ ಎಂಬ ಸಂಪಾದಕರ ಆಶಯದಂತೆ, ಕೈಲಾಸಂ ಕುರಿತು ಕೃತಿಗಳಲ್ಲಿ ಇದಕ್ಕೆ ತನ್ನದೇ ಆದ ಒಂದು ಮಹತ್ವದ ಸ್ಥಾನ ಮೀಸಲಾಗಿದೆ''.[೨೬] ಹೀಗೆ ಈ ಕೃತಿಯ ಕನ್ನಡ ರಂಗನಟನ ಬಗ್ಗೆ ಅಮೂಲ್ಯ ಮಾಹಿತಿ ನೀಡುವ ಉತ್ತಮ ಕೃತಿಯಾಗಿದೆ.

**೫. ಸಾಲಿ ರಾಮಚಂದ್ರರಾಯರ ಸಮಗ್ರಕಾವ್ಯ**

ಡಾ. ಸಿದ್ಧಲಿಂಗ ಪಟ್ಟಣ ಶೆಟ್ಟರು ಸರ್ವೋದಯದ ಕವಿ. ಸಾಲಿರಾಮಚಂದ್ರ ರಾಯರನ್ನು ಪಿತೃ ಸಮಾನರೆಂದು ಭಾವಿಸಿದರು. ಇವರ ಎಲ್ಲಾ ಕಾವ್ಯಗಳನ್ನು ಸಾಲಿರಾಮಚಂದ್ರರಾಯರ ಸಮಗ್ರಕಾವ್ಯ ಹೆಸರಿನಡಿಯಲ್ಲಿ ಸಂಗ್ರಹಿಸಲಾಗಿದೆ. ೧೯೯೭ರಲ್ಲಿ ಈ ಕೃತಿಯು ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ಇವರಿಂದ ಪ್ರಕಟಣೆಗೊಂಡಿದೆ. ಸಾಲಿರಾಮಚಂದ್ರರಾಯರು ಸಾತ್ವಿಕ ಸ್ವಾಭಾವದರು. ಯಾರ ತಂಟೆಗೂ ಹೋಗದೇ ತಮ್ಮ ಸಾಹಿತ್ಯ ಕೃಷಿ ಗೈದವರು, ಕನ್ನಡ ಪ್ರೇಮೀ ದೇಶಾಭಿಮಾನಿ, ಗಾಂಧೀಜಿ ಅನುಯಾಯಿಗಳಾಗಿದ್ದರು. ಈ ಅಂಶಗಳನ್ನು ಅವರ ಕಾವ್ಯಗಳಲ್ಲಿ ಕಾಣಬಹುದಾಗಿದೆ. ಪಟ್ಟಣಶೆಟ್ಟಿ ಮತ್ತು ಸಾಲಿರಾಮಚಂದ್ರರ ನಡುವೆ ಆತ್ಮೀಯವಾದ, ಆಪ್ತವಾದ ಸಂಬಂಧಿಗಳಿದ್ದವು. ಡಾ.ಜಿ.ಎಂ. ಹೆಗಡೆ ಹೇಳುವ ಹಾಗೆ, ಚಿಕ್ಕಂದಿನಲ್ಲಿಯೇ ತಂದೆಯನ್ನು ಕಳೆದುಕೊಂಡು ಸಿದ್ಧಲಿಂಗ ಪಟ್ಟಣಶೆಟ್ಟರು ಸಾಲಿರಾಮಚಂದ್ರರಾಯರಲ್ಲಿ ಪಿತೃಪ್ರೇಮವನ್ನು ಕಂಡರು. ತಮ್ಮ ಒಬ್ಬನೇ ಮಗನಾದ ಶ್ರೀ ಕೃಷ್ಣನನ್ನು ಕಳೆದುಕೊಂಡು ಸಾಲಿಯವರು ಪಟ್ಟಣಶೆಟ್ಟಿಯವರನ್ನು ಮಾನಸ ಪುತ್ರರಾಗಿ ಪಡೆದು ಪ್ರೀತಿ-ವಾತ್ಸಲ್ಯ ತೋರಿದರು. ಎರಡು ದಶಕಗಳ ಸಾಲಿಯವರ ಸಿದ್ಧಲಿಂಗರ ಸಂಬಂಧ ಮಾಲೆ ಪರಸ್ಪರ ವ್ಯಕ್ತಿ ಸಂಬಂಧವಾಗಿ ಉಳಿಯದೆ ಸಾಹಿತ್ಯ ಮೈತ್ರಿಯಾಗಿ ಬೆಳೆದುದು ಗಮನಾರ್ಹ ವಿಷಯವಾಗಿದೆ.

ಹೊಸಗನ್ನಡದ ಕವಿಗಳಾದ ಸಾಲಿರಾಮಚಂದ್ರರಾಯರು ಕಾವ್ಯ ಕೃಷಿ ಆರಂಭಿಸಿದಾಗ ಹಳೆಗನ್ನಡದ ಛಂದಸ್ಸಿನಿಂದ ಹೊರಬಂದು ಮುಕ್ತವಾಗಿ ಬರೆಯುವ ಅವಕಾಶವಿರಲಿಲ್ಲ. ಕಾರಣ ಹಳೆಯ ಬಂಧದಲ್ಲಿಯೇ ಕಾವ್ಯ ರಚಿಸಿದಾಗ ರಾಮಚಂದ್ರರಾಯರು ಪ್ರತಿಭಾವಂತ ಕವಿ, ಧಾರವಾಡದಲ್ಲಿ ಮರಾಠಿ ಪ್ರಾಬಲ್ಯವಿದ್ದ ಕಾಲದಲ್ಲಿ ಕನ್ನಡ ಅನಾಥವಾಗಿರುವಂತಹ ಸನ್ನಿವೇಷದಲ್ಲಿ ಸಾಲಿರಾಮಚಂದ್ರರಾಯರು ಕನ್ನಡ ಸಾಹಿತ್ಯವನ್ನು ರಚಿಸಿದರು. ಜನರಲ್ಲಿ ಕನ್ನಡಾಭಿಮಾನ ಮೂಡಿಸುವಲ್ಲಿ ಪ್ರಯತ್ನಿಸಿದರು. ಅವರು ಕನ್ನಡ ನುಡಿ, ಸಂಸ್ಕೃತಿಯ ಆರಾಧಕರಾಗಿದ್ದರು. ಅದನ್ನು ಅವರ ಸಾಹಿತ್ಯದಲ್ಲಿ ಕಾಣಬಹುದಾಗಿದೆ.

ಕನ್ನಡ ನೆಲದ ಪುಲ್ಲೆನೆಗೆ ಪಾವನ ತುಲಸಿ !
ಕನ್ನಡ ನೆಲದ ನೀರ್ವೊನಲೆನಗೆ ದೇವನದಿ
ಕನ್ನಡ ನೆಲದ ಕಲ್ಲೆನೆಗೆ ಸಾಲಿ ಗ್ರಾಮಶಿಲೆ ! ಕನ್ನಡಂ ದೈವ ಮೈ
ಕನ್ನಡದ ಶಬ್ಧಮನಗೊಂಕಾರ ಮೀಯನ್ನ

ಕನ್ನಡದ ನುಡಿಯ ಗಾಯತ್ರಿಯದ್ಭುತ ಮಂತ್ರ

ಮಿನ್ನಾವುದೈ ಪೆರೆಡು ಕನ್ನಡದ ಸೇವೆಯಿಂದಧಿಕಮಿ

ಜಗದೊಳಗೆ

ಈ ಸಂಪಾದನಾ ಕೃತಿಯಲ್ಲಿ ಸಾಲಿರಾಮಚಂದ್ರರಾಯರ ಎಲ್ಲಾ ಪ್ರಕಟಿತ ಮತ್ತು ಅಪ್ರಕಟಿತ ಕವನಗಳಿವೆ. ಮೊದಲ ಭಾಗವಾದ ಚಿತ್ತಸೃಷ್ಠಿಯಲ್ಲಿ ಹದಿನಾಲ್ಕು ಕವಿತೆಗಳಿವೆ. ಇವು ಕನ್ನಡ ಪ್ರೇಮ ದೇಶಾಭಿಮಾನ ಮತ್ತು ರಾಷ್ಟ್ರೀಯತೆಯನ್ನು ಕುರಿತು ಹೇಳುತ್ತವೆ. ನಂತರದ ಇಪ್ಪತ್ತೆಂಟು ಕವಿತೆಗಳಲ್ಲಿ ನಿಸರ್ಗದ ಸುಂದರ ವರ್ಣನೆಯಿದೆ. ನಂತರದ ಇಪ್ಪತ್ತೈದು ಕವಿತೆಗಳು ಸಂಕೀರ್ಣ ಭಾವನೆಗಳಿಂದ ಕೂಡಿವೆ. ಒಬ್ಬನೇ ಮಗನಾದ ಶ್ರೀಕೃಷ್ಣನ ಸಾವು ಸಾಲಿರಾಮಚಂದ್ರರಾಯರ ಮೇಲೆ ತುಂಬಾ ಕೆಟ್ಟ ಪರಿಣಾಮ ಬೀರಿತು. ಆಗ ರಚಿಸಿದ ಗೀತೆಯೇ ತಿಲಾಂಜಲಿ ಕನ್ನಡದ ಶೋಕಗೀತೆಗಳಲ್ಲಿ ಉತ್ತಮವಾದ ಕವಿತೆ ಇದಾಗಿದೆ. ಮುಂದೆ ಬರುವ ಚಿಗುರೆಲೆ ಕವಿತೆಗಳಲ್ಲಿ ಸಮಾಜದ ಜೊತೆಗಿನ ಸಂಬಂಧವಿತ್ತು ಸಾಮಾಜಿಕ ಪ್ರಜ್ಞೆಯನ್ನು ಸೂಚಿಸುತ್ತವೆ. ಸಾಲಿರಾಮ ಚಂದ್ರರಾಯರು ಮಧ್ವ ಸಿದ್ಧಾಂತಕ್ಕೆ ಒಳಗಾಗಿ, 'ಕುಸುಮಾಂಜಲಿ' ಮತ್ತು 'ಶ್ರೀಕೇಶವ ಕುಸುಮಾಂಜಲಿ' ಎನ್ನುವ ಭಕ್ತಿರಸವಿರುವ ಕವಿತೆಗಳನ್ನು ರಚಿಸಿದ್ದಾರೆ. 'ಧ್ವನಿಪಂಚಮ' ಎನ್ನುವ ಭಾರವು ನಲವತ್ತೆರೆಡು ಕವಿತೆಗಳನ್ನು ಒಳಗೊಂಡಿದೆ. ಇಲ್ಲಿ ಸಾಲಿರಾಮ ಚಂದ್ರರಾಯರ ಕಾವ್ಯ ಪ್ರಜ್ಞೆ ಮರೆದಿರುವುದು ಕಂಡು ಬರುತ್ತದೆ.

ಸಂಪಾದಕರಾದ ಪಟ್ಟಣಶೆಟ್ಟರು ಹದಿನಾಲ್ಕು ಪುಟಗಳ ದೀರ್ಘ ಪ್ರಸ್ತಾವನೆಯಲ್ಲಿ ಸಾಲಿರಾಮ ಚಂದ್ರರಾಯರನ್ನು ಕುರಿತು, ಅವರ ಕಾವ್ಯಗಳನ್ನು ಕುರಿತು ಅನೇಕ ಮಹತ್ವದ ಮಾತುಗಳನ್ನು ಉಲ್ಲೇಖಿಸಿದ್ದಾರೆ. ಸಾಲಿರಾಮ ಚಂದ್ರರಾಯರು ಹೊಸಗನ್ನಡದಲ್ಲಿ ರಾಮಾಯಣವನ್ನು ಬರೆದವರಲ್ಲಿ ಮೊದಲಿಗರು. ಕುವೆಂಪು ಅವರ ಶ್ರೀ ರಾಮಾಯಣ ದರ್ಶನಂ, ಮಾಸ್ತಿಯವರ ಶ್ರೀ ರಾಮ ಪಟ್ಟಾಭಿಷೇಕ ಕಾವ್ಯಗಳಿಗಿಂತ ಮುಂಚೆಯೇ ಸಾಲಿಯವರು ರಾಮಾಯಣ ರಚಿಸಿದ್ದರು. ಅವರ ಶ್ರೀ ರಾಮಚರಿತ, ಬಾಲಕಾಂಡ, ಅಯೋಧ್ಯಾ ಕಾಂಡ ಪೂರ್ವರ್ಧ ಅಯೋಧ್ಯಾಕಾಂಡ, ಉತ್ತರಾರ್ಧ ಅರಣ್ಯಕಾಂಡ ಹಾಗೂ ಅದರ ಉತ್ತರಾರ್ಧ, ಕೌಶಲ್ಯಾ ವಿವಾಹಗಳನ್ನು ಈ ಸಂಕಲನದಲ್ಲಿ ಅಳವಡಿಸಲಾಗಿದೆ. ಈ ಕೃತಿಯನ್ನು ಕುರಿತು ಡಾ.ಜಿ.ಎಂ. ಹೆಗಡೆಯವರು ಈ ರೀತಿ ಹೇಳಿದ್ದಾರೆ. ಕನ್ನಡ ಸಂಸ್ಕೃತಗಳೆರಡರಲ್ಲಿಯೂ ಕವಿತಾ ಶಕ್ತಿಯ ಪ್ರಭುತ್ವ ಪಡೆದ ಸಾಲಿಯವರ ಹೆಸರು ಕನ್ನಡ ನವೋದಯ ಸಾಹಿತ್ಯದಲ್ಲಿ ಮರೆಯಾಗಿ ಹೋಗದಂತೆ ಅವರ ಪ್ರಕಟಿತ ಹಾಗೂ ಅಪ್ರಕಟಿತ ಕವಿತೆಗಳನ್ನು ಸಮಗ್ರ ಕಾವ್ಯದಲ್ಲಿ ಸಂಪಾದಿಸಿ ಕೊಟ್ಟಿರುವುದು ಶ್ಲಾಘನೀಯ ಕಾರ್ಯವಾಗಿದೆ. ಇದರಿಂದ ಸಾಲಿಯವರ ಕಾವ್ಯದ ಬಗೆಗೆ ಸಾಹಿತ್ಯ ಸಹೃದಯರ, ವಿಮರ್ಶಕರ ಗಮನ ಹರಿಯುವಂತಾಗಿದೆ. ನವೋದಯ ಕಾವ್ಯದ ಬೆಳವಣಿಗೆಯಲ್ಲಿ ಉತ್ತರ ಕರ್ನಾಟಕದ ಸಾಧನೆಯ ಸಮೀಕ್ಷೆ ಮಾಡುವ ಸಂದರ್ಭದಲ್ಲಿ ಸಾಲಿಯವರ ಕವಿತೆಗಳನ್ನು ಪರಿಶೀಲಿಸಲು ಪ್ರಸ್ತುತ ಸಂಪುಟ ನೆರವು ನೀಡುತ್ತದೆ. ಕನ್ನಡ ಕಾವ್ಯದಲ್ಲಿ ರಾಷ್ಟ್ರೀಯತೆ, ಉಪರಾಷ್ಟ್ರೀಯತೆಯ ವಸ್ತು ವೈವಿಧ್ಯತೆಯನ್ನು ಗುರುತಿಸುವ ಸಂದರ್ಭದಲ್ಲಿ ರಾಷ್ಟ್ರಪ್ರಜ್ಞೆ ಸ್ವಾತಂತ್ರದ ಅಭೀಪ್ಸೆ, ನಾದ ಪ್ರೀತಿಯ ಅನನ್ಯ ಭಾವಗಳ ಸ್ಫುರಣವಾಗಿರುವೆ. ಸಾಲಿಯವರ ಕವಿತೆಗಳನ್ನು ಅಭ್ಯಸಿಸಲು ಪಟ್ಟಣಶೆಟ್ಟಿಯವರು ಸಂಪಾದಿಸಿದ ಸಮಗ್ರ ಕಾವ್ಯ ಉಪಯೋಗವಾಗಿದೆ. ಸಾತ್ವಿಕ ಮನಸ್ಸಿನ

ಉದಾರವಾದ ಧೋರಣೆಯ ಸುಸಂಸ್ಕೃತ ಚೇತನದ ಸಾಲಿಯವರ ಕವಿ ವ್ಯಕ್ತಿತ್ವ ಈ ಸಮಗ್ರ ಕಾವ್ಯದಲ್ಲಿ ಸಾಕಾರಗೊಂಡು ಕನ್ನಡ ಜನರಿಗೆ ಪ್ರಿಯವಾಗುತ್ತದೆ. ಹೀಗೆ ನವೋದಯದ ಪ್ರಮುಖ ಕವಿ ಸಾಲಿರಾಮಚಂದ್ರರಾಯರು ಕಾವ್ಯಗಳಲ್ಲಿ ಒಂದೆಡೆ ಸಿಗುವಂತೆ ಮಾಡಿದ ಶ್ರೇಯಸ್ಸು ಪಟ್ಟಣಶೆಟ್ಟರಿಗೆ ಸಲ್ಲುತ್ತದೆ.

**೬. ಕಲ್ಯಾಣದ ಹಾದಿ**

ವೀರಶೈವ ಧರ್ಮದ ವಿರಕ್ತಮಠಗಳು ನಾಡಿನ ತುಂಬೆಲ್ಲಾ ವ್ಯಾಪಿಸಿದ್ದು, ನಿರಂತರ ಚಲನಶೀಲತೆಯಿಂದ ಕೂಡಿವೆ. ನಿಜ ಅರ್ಥದಲ್ಲಿ ಜಂಗಮತ್ವವನ್ನು ಪಡೆದುಕೊಂಡಿವೆ. ಧಾರ್ಮಿಕ, ಸಾಹಿತ್ಯ, ಶಿಕ್ಷಣ ಸಮಾಜದ ಏಳ್ಗೆಯ ಕಾರ್ಯದಲ್ಲಿ ನಿರತವಾಗಿವೆ. ಅಂತವುಗಳಲ್ಲಿ ಪ್ರಸಿದ್ಧವಾದದು ಗದುಗಿನ ಶ್ರೀ ಜಗದ್ಗುರು ತೋಂಟದಾರ್ಯ ಮಠವೂ ಒಂದಾಗಿದೆ. ಇಲ್ಲಿನ ಪೀಠಾಧಿಪತಿಗಳಾದ ಡಾ.ತೋಂಟದ ಸಿದ್ಧಲಿಂಗಸ್ವಾಮಿಗಳವರು ಶ್ರೀ ಸಾಮಾನ್ಯರ ಸ್ವಾಮಿಗಳೆಂದೇ ಹೆಸರುವಾಸಿಯಾಗಿದ್ದಾರೆ. ಧಾರ್ಮಿಕ ಪರಂಪರೆಯ ಹಿನ್ನೆಲೆ, ವಿರಕ್ತಿಯ ಇತಿಹಾಸ ಮತ್ತು ಸಂಪ್ರದಾಯದ ಕುಲುಮೆಯಲ್ಲಿ ಮೂಡಿ ಬಂದವರಾಗಿದ್ದಾರೆ. ಆತುದಿ ಕಲ್ಯಾಣದ ಅಲ್ಲಮ ಪ್ರಭುಗಳು ಈ ತುದಿ ಗದುಗಿನ ತೋಂಟದ ಸಿದ್ಧಲಿಂಗಸ್ವಾಮಿಗಳು ಎನ್ನುವ ಎಂ.ಎಂ.ಕಲಬುರ್ಗಿಯವರ ಮಾತಿನಲ್ಲಿ ಅಕ್ಷರಶಃ ಸತ್ಯಾಂಶವಿದೆ.

ಕಲ್ಯಾಣದ ಹಾದಿ ಸಿದ್ಧಲಿಂಗ ಪಟ್ಟಣಶೆಟ್ಟರ ಸಂಪಾದಕತ್ವದಲ್ಲಿ ಹೊರಬಂದ ಡಾ.ತೋಂಟದ ಸಿದ್ಧಲಿಂಗಸ್ವಾಮಿಗಳ ಅಭಿನಂದನಾ ಗ್ರಂಥವಾಗಿದೆ. ೧೯೯೯ರಲ್ಲಿ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ ಗದಗ ಇವರಿಂದ ಪ್ರಕಟಣೆಗೊಂಡಿದೆ. ಈ ಗ್ರಂಥದಲ್ಲಿರುವ ಬಹುತೇಕ ಲೇಖನಗಳೆಲ್ಲವೂ ವಿವರಣಾತ್ಮಕ ಪ್ರಬಂಧಗಳಾಗಿವೆ. ದಾಸೋಹ, ಕಾಯಕಗಳಿಂದಾಗಿ ಆಧ್ಯಾತ್ಮಿಕ ಕೀರ್ತಿಯನ್ನು ಬೆಳಗಿಸಿದ್ದಾರೆ. ಸಂಪಾದಕರೇ ಹೇಳುವ ಹಾಗೆ ''ಡಾ.ಸಿದ್ಧಲಿಂಗಸ್ವಾಮಿಗಳವರು ಮೂಲತಃ ಭವಿಸುವ ಕವಿ. ಯೋಜಿಸುವ ಕಲಾವಿದ, ಶ್ರಮಿಸುವ ಕೃಷಿಕ ಹೋರಾಡುವ, ಯೋಧ, ಗೆಲ್ಲುವ ಮಾತೃಹೃದಯ ಸಮಷ್ಟಿಯ ಕಲ್ಯಾಣ ಬಯಸುವ ಚೇತನದ ಮಗು, ಈ ಮಗುವಿನ ಕಣ್ಣುಗಳಲ್ಲಿ ಕಲ್ಯಾಣಾಕಾಂಕ್ಷಿಯಾದ ಮಡುಗಟ್ಟಿದ ದೂರಗಾಮಿ ಚಿಂತನೆಯನ್ನು ಈಚಿನ ದಿನಗಳಲ್ಲಿ ನಾನು ಲಕ್ಷಿಸಿದ್ದೇನೆ. ಶ್ರೀಗಳವರು ಪೀಠಾಧ್ಯಕ್ಷರಾಗಿ ಇಪ್ಪತ್ತೈದು ವರ್ಷ ತುಂಬಿದ ಸಂದರ್ಭದಲ್ಲಿ ಈ ಅಭಿನಂದನಾ ಗ್ರಂಥವನ್ನು ಹೊರತರಲಾಗಿದೆ. ಕಲ್ಯಾಣದಹಾದಿ ಆರನೂರಾ ಐವತ್ತೈದು ಪುಟಗಳ ವ್ಯಾಪ್ತಿಯುಳ್ಳ ದೊಡ್ಡ ಕೃತಿಯಾಗಿದೆ. ಈ ಗ್ರಂಥದಲ್ಲಿ ಮುಖ್ಯವಾಗಿ ಎರೆಡು ಭಾಗಗಳಿದ್ದು ಒಂದರಲ್ಲಿ ಕರ್ನಾಟಕದ ವಿವಿಧ ಭಾಗಗಳಲ್ಲಿ ಕಾರ್ಯ ನಿರತವಾಗಿರುವ ಎಲ್ಲಾ ಜನಾಂಗದ, ವಿವಿಧ ಧರ್ಮಗಳ ಮಠಗಳ, ಧಾರ್ಮಿಕ, ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಿಕ ಹಾಗೂ ಸಾಂಸ್ಕೃತಿಕ ಕೊಡುಗೆಗಳನ್ನು ತಿಳಿಸುವ ಇಪ್ಪತ್ತಾರು ಲೇಖನಗಳಿವೆ. ಇನ್ನೊಂದು ಭಾಗದಲ್ಲಿ ತೋಂಟದಾರ್ಯಮಠದ ಕೊಡುಗೆಗಳನ್ನು ತಿಳಿಸುವ ಹದಿನೈದು ಲೇಖನಗಳಿವೆ.

ಕರ್ನಾಟಕದಲ್ಲಿ ಪ್ರಸಿದ್ಧವಾಗಿರುವ ಸಿದ್ಧಗಂಗಾ ಮಠ, ಶ್ರೀ ಸುತ್ತೂರುಮಠ, ಸಿರಿಗೆರೆಯ ತರಳಬಾಳು ಬೃಹನ್ಮಠ, ಬೀದರ್ ಜಿಲ್ಲೆಯ ಬಾಲ್ಕಿ ಹಿರೇಮಠ, ಹುಬ್ಬಳ್ಳಿಯ ಮೂರು ಸಾವಿರಮಠ, ಚಿತ್ತರಗಿಯ ವಿಜಯ ಮಹಾಂತೇಶ್ವರ ಮಠ, ಬೆಳಗಾವಿ ಜಿಲ್ಲೆಯ ನಾಗನೂರು ರುದ್ರಾಕ್ಷಿಮಠ, ಗುಲ್ಬರ್ಗಾದ ಶರಣಬಸವೇಶ್ವರ ಸಂಸ್ಥಾನ, ನಿಡಸೋಸಿಯ ಸಿದ್ಧಸಂಸ್ಥಾನಮಠ, ಮುಂಡರಗಿಯ ಅನ್ನದಾನೇಶ್ವರ ಸಂಸ್ಥಾನ ಮಠ, ಚಿತ್ರದುರ್ಗದ ಮುರುಘ ರಾಜೇಂದ್ರ ಬೃಹನ್ಮಠ,

ಚಿಕ್ಕಮಗಳೂರು ಜಿಲ್ಲೆಯ ಪಂಚಪೀಠಗಳಲ್ಲಿ ಒಂದಾದ ಬಾಳೆಹೊನ್ನೂರಿನ ರಂಭಾಪುರಿಪೀಠ ಧಾರವಾಡದ ಮುರುಘಾಮಠಗಳ ಇತಿಹಾಸ, ಗುರುಪರಂಪರೆ ಆಚಾರ, ಎಲ್ಲಾ ಕ್ಷೇತ್ರಗಳಲ್ಲಿ ಸಾಧಿಸಿದ ಸಾಧನೆಗಳು ಮುಂತಾದ ಕೊಡುಗೆಗಳನ್ನು ಇಲ್ಲಿ ದಾಖಲಿಸಲಾಗಿದೆ. ನಾಡಿನ ಖ್ಯಾತ ಸಂಶೋಧಕರು, ಬರಗಾರರು, ಈ ಲೇಖನಗಳನ್ನು ರಚಿಸಿದ್ದಾರೆ. ಈ ಹದಿಮೂರು ಇದೇ ತೆರನಾಗಿ ಮೂರು ಜೈನಮಠಗಳು ಎರಡು ಕ್ರೈಸ್ತಮಠಗಳು, ಎರಡು ಬ್ರಾಹ್ಮಣಮಠಗಳು, ಒಂದು ಬೌದ್ಧ, ಒಂದು ಮುಸ್ಲಿಂ, ಒಂದು ಒಕ್ಕಲಿಗ, ಒಂದು ಕುರುಬ, ಹಾಗೂ ಶ್ರೀರಾಮ ಕೃಷ್ಣಾಶ್ರಮಕ್ಕೆ ಸಂಬಂಧಿಸಿದ ಮಠಗಳ ವಿವರಣೆ ಇಲ್ಲಿದೆ. ಈ ಭಾಗವು ನಾಡಿನ ಪ್ರಮುಖ ಮಠಗಳ ಬಗ್ಗೆ ಒಳ್ಳೆಯ ಮಾಹಿತಿಯನ್ನು ನೀಡುವುದರಿಂದ ವಿವಿಧ ಮಠಗಳ ತೌಲನಿಕ ಅಧ್ಯಯನಕ್ಕೆ ಅಮೂಲ್ಯ ಮಾಹಿತಿಯನ್ನು ನೀಡುವ ಒಳ್ಳೆಯ ಆಕರ ಗ್ರಂಥವಾಗಿದೆ.

ಎರಡನೆಯ ಭಾಗದಲ್ಲಿ ಡಂಬಳ ಗದುಗಿನ ತೋಂಟದಾರ್ಯ ಸಂಸ್ಥಾನ ಮಠದ ಪರಂಪರೆ, ಸಂಸ್ಕೃತಿ, ಶಿಕ್ಷಣ ಸಾಹಿತ್ಯ, ಸಮಾಜ ಸೇವೆ, ದಾಸೋಹ ಮುಂತಾದ ವಿಷಯಗಳನ್ನು ಕುರಿತು ಹದಿನೈದು ಲೇಖನಗಳಿವೆ. ಚೆನ್ನವೀರ ಕಣವಿಯವರು ತೋಂಟದ ಶ್ರೀಗಳನ್ನು ಕುರಿತು 'ವಿನೀತ' ಕಾವ್ಯ ರಚಿಸಿದ್ದಾರೆ. ಡಾ.ಸಿದ್ಧಲಿಂಗ ಪಟ್ಟಣಶೆಟ್ಟರು ತಮ್ಮ ಲೇಖನದಲ್ಲಿ ತೋಂಟದ ಶ್ರೀಗಳನ್ನು ಕುರಿತು ಹೆಚ್ಚಿನ ಆಧಾರಗಳೊಡನೆ ಶ್ರೀಗಳ ಬಾಲ್ಯ, ವಿದ್ಯಾರ್ಥಿಜೀವನ ಅವರು ಸಾಗಿಬಂದದಾರಿ ಸಾಧಿಸಿದ ಕಾರ್ಯ, ಅವರ ಸೇವಾ ಮನೋಭಾವ, ಕೈಗೊಂಡ ಕ್ರಮಗಳನ್ನು ವಿವರಿಸಿದ್ದಾರೆ. ತೋಂಟದಾರ್ಯ ಪರಂಪರೆಯನ್ನು ಕುರಿತು ಖ್ಯಾತ ಸಂಶೋಧಕರಾದ ಎಂ.ಎಂ. ಕಲಬುರ್ಗಿಯವರು, ತೋಂಟದಾರ್ಯ ಮಠದ ಶಾಖಾಮಠಗಳನ್ನು ಕುರಿತು ಗಂಗಾಧರ ಕಲಬುರ್ಗಿ ಲೇಖನಗಳನ್ನು ರಚಿಸಿದ್ದಾರೆ.

ಸಂಪಾದಕರಾದ ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರು, ಶ್ರೀಗಳ ಅಭಿನಂದನಾ ಗ್ರಂಥವನ್ನು ಕುರಿತು, ಶ್ರೀಗಳನ್ನು ಕುರಿತು ಮನನೀಯವಾದ ಮಾತುಗಳನ್ನು ಆಡಿದ್ದಾರೆ. ''ತೋಂಟದ ಡಾ.ಸಿದ್ಧಲಿಂಗಸ್ವಾಮಿಗಳನ್ನು ಅಭಿನಂದಿಸುವುದೆಂದರೆ ನಮ್ಮೊಳಗಿನ ಪ್ರತಿಯೊಬ್ಬರ ಸಜ್ಜನಿಕೆಯನ್ನು ವಿಸ್ತರಿಸುವ ಪ್ರಜ್ಞೆಗೆ ಪ್ರತಿಸ್ಪಂದಿಸಿದಂತೆ ಈ ಕಲ್ಯಾಣದ ಹಾದಿ''[೮೦] ಈ ಕೃತಿಯ ಕರ್ನಾಟಕದ ಪ್ರಮುಖ ಮಠಮಾನ್ಯಗಳನ್ನು ಕುರಿತು ಮಾಹಿತಿ ನೀಡುವಲ್ಲಿ ಯಶಸ್ವಿಯಾಗಿದೆ.

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಸ್ವತಂತ್ರವಾಗಿ ಸಂಪಾದಿಸಿದ ಕೃತಿಗಳನ್ನು ಇದುವರೆಗೆ ಅವಲೋಕಿಸಲಾಯಿತು. ನಾಡಿನ ಇತರ ವಿದ್ವಾಂಸ ಮಿತ್ರರೊಂದಿಗೆ ಕೂಡಿ ಸಂಪಾದಿಸಿದ ಇವರ ಕೃತಿಗಳನ್ನು ಚರ್ಚಿಸಲಾಗಿದೆ.

**II ಇತರೊಂದಿಗಿನ ಸಂಪಾದನೆಗಳು**

**೧. ಸಂಕ್ರಮಣ ಕಾವ್ಯ**

ಸಂಕ್ರಮಣ, ಸಾಹಿತ್ಯ ಪತ್ರಿಕೆಯು, ಕನ್ನಡಸಾಹಿತ್ಯ ಪತ್ರಿಕೆಗಳ ಸಾಲಿನಲ್ಲಿ ಪ್ರಮುಖವಾಗಿ ನಿಲ್ಲುವಂತಹದು. ಚಂದ್ರಶೇಖರ ಪಾಟೀಲ, ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಗಿರಡ್ಡಿ ಗೋವಿಂದರಾಜರು ಸೇರಿ ಈ ಪತ್ರಿಕೆಯನ್ನು ೧೯೬೪ರಲ್ಲಿ ಆರಂಭಿಸಿದರು ಪತ್ರಿಕೆಗೆ ಒಂದು ವರ್ಷ ತುಂಬಿದಾಗ ಹೊರತಂದ ವಿಶೇಷ ಸಂಚಿಕೆಯ 'ಸಂಕ್ರಮಣ

ಕಾವ್ಯ' ವಾಗಿದೆ. ಸಂಕ್ರಮಣ ಪತ್ರಿಕೆಯ ಸಂಪಾದಕರೇ ಈ ಕವನ ಸಂಕಲನದ ಸಂಪಾದಕರಾಗಿದ್ದಾರೆ. ಪ್ರಾತಿನಿಧಿಕ ನವ್ಯ ಕವನಗಳ ಸಂಕಲನ ಇದಾಗಿದೆ. ೧೯೬೫ರಲ್ಲಿ ಧಾರವಾಡದ ಸಂಕ್ರಮಣ ಪ್ರಕಾಶನದಿಂದ ಮೊದಲ ಪ್ರಕಟಣೆ ಕಂಡಿತು. ಅನಂತರ ೧೯೬೯, ೧೯೭೦ರಲ್ಲಿ ದ್ವಿತೀಯ ಮತ್ತು ತೃತೀಯ ಮುದ್ರಣ ಕಂಡಿದೆ. ೨೦೦೫ರಲ್ಲಿ ಬೆಂಗಳೂರಿನ ಸ್ವಪ್ನ ಬುಕ್ ಹೌಸ್ ಇವರಿಂದ ನಾಲ್ಕನೆಯ ಮುದ್ರಣ ಕಂಡಿದೆ.

ಈ ಕೃತಿಯು ೧೯೫೦ರಿಂದ ಈಚೆಗೆ ಕನ್ನಡದ ನವ್ಯಕಾವ್ಯ ಬೆಳೆದು ಬಂದ ಬಗೆಯನ್ನು ಬಿಂಬಿಸುವ ಪ್ರತಿನಿಧಿಕ ಕವನ ಸಂಕಲನವಾಗಿದೆ. ೧೯೭೭ರಲ್ಲಿ ಈ ಸಂಕಲನವು ಬೆಂಗಳೂರು ವಿಶ್ವವಿದ್ಯಾಲಯದ ಬಿ.ಎ. ಪದವಿಯ ಮೊದಲನೆ ವರ್ಷದ ಪಠ್ಯವಾಗಿತ್ತು.

ನವ್ಯ ಸಾಹಿತಿಗಳಲ್ಲಿ ಪ್ರಮುಖರಾದ ಗೋಪಾಲಕೃಷ್ಣ ಅಡಿಗ, ಯು.ಆರ್. ಅನಂತಮೂರ್ತಿ, ವಿನಾಯಕ, ಬಿ.ಸಿ. ರಾಮಚಂದ್ರಶರ್ಮ, ಚಂದ್ರಶೇಖರ ಪಾಟೀಲ, ಕೆ.ಎಸ್.ನಿಸಾರ್ ಅಹಮ್ಮದ್ ಮುಂತಾದ ಕವಿಗಳ ಐವತ್ತೊಂಬತ್ತು ಕವನಗಳು ಈ ಸಂಕಲನದಲ್ಲಿವೆ.

ಸಂಪಾದಕರು ಈ ಸಂಕಲನವನ್ನು ಕುರಿತು ನಮ್ಮ ಮಾತು ಎಂಬ ಬರಹದಲ್ಲಿ ಈ ರೀತಿಯಾಗಿ ಹೇಳಿದ್ದಾರೆ. ''ಹೊಸ ಒಲವುಗಳನ್ನು ಪ್ರತಿಬಿಂಬಿಸುವ ಕನ್ನಡ ಕಾವ್ಯದ ಸೃಷ್ಟಿಯಲ್ಲಿ ತೊಡಗಿದ ಕವಿಗಳ ಪ್ರಕಟಿತ ಮತ್ತು ಅಪ್ರಕಟಿತ ಕವನಗಳಿಂದ ಪ್ರತಿನಿಧಿಕವೆನ್ನಿಸಬಹುದಾದುದನ್ನು ಇಲ್ಲಿ ಸಂಗ್ರಹಿಸಲಾಗಿದೆ. ಈ ನಿಟ್ಟಿನಲ್ಲಿ ನವ್ಯಕಾವ್ಯದ ಮೊದಮೊದಲಿನ ಸಾಲಿನಲ್ಲಿ ತೊಡಗಿದವರನ್ನು ಅನಂತರ ಅದರ ಬೆಳವಣಿಗೆಗಾಗಿ ಈಗಾಗಲೇ ಸಾಕಷ್ಟು ಪ್ರಯತ್ನ ಪಟ್ಟವರನ್ನು ಮತ್ತು ಇನ್ನು ಮುಂದೆ ಈ ಹಾದಿಯಲ್ಲಿ ನಡೆಯಲಾರಂಭಿಸುತ್ತಿರುವವರನ್ನು ಇಲ್ಲಿ ಪ್ರತಿನಿಧಿಸಲಾಗಿದೆ. ಈ ಕವನಗಳು ಪ್ರಾತಿನಿಧಿಕವೆಂದ ಮಾತ್ರಕ್ಕೆ ಉತ್ಕೃಷ್ಟವಾದವುಗಳೆಂದಲ್ಲ. ನಾಡಿನ ವಿಮರ್ಶಾ ಪ್ರಜ್ಞೆಯು ಮಾಡಬೇಕಾದ ನಿರ್ಣಯ ಅದು''[೮೧] ಈ ರೀತಿಯ ಪ್ರಯತ್ನ ಆ ಕಾಲದಲ್ಲಿ ಹೊಸ ರೀತಿಯದಾಗಿತ್ತು. ಪ್ರಮುಖ ನವ್ಯ ಕವಿಗಳ ಕವನಗಳನ್ನು ಒಂದೆಡೆ ಸೇರಿಸಿ ಪ್ರಕಟಿಸಿದ್ದು ಒಂದು ಸಾಧನೆಯಾಗಿದೆ. ಡಾ. ವೀರಣ್ಣ ರಾಜೂರು ಅವರು ಅಭಿಪ್ರಾಯ ಪಡುವಂತೆ ''ನವ್ಯ ಧೋರಣೆಯ ಪ್ರತಿನಿಧಿಕ ಕವನಗಳನ್ನೊಳಗೊಂಡ ಈ ಕೃತಿ ಹೊರಬಂದಾಗ ಸಾರಸ್ವತಲೋಕ ತೋರಿದ ಸ್ವಾಗತ ಹಾಗೂ ಮೆಚ್ಚಿಗೆಯ ಪ್ರತಿಕ್ರಿಯೆ. ಅದು ಇಂದಿನವರೆಗೂ ತನ್ನ ಗಟ್ಟಿಯಾದ ನೆಲೆಯನ್ನು ಉಳಿಸಿಕೊಂಡು ಬಂದು ವಿಮರ್ಶಕರ ಗಮನವನ್ನು ನಿತ್ಯ ಸೆಳೆಯುತ್ತಿರುವ ರೀತಿ ಅಪೂರ್ವವೆನಿಸಿದೆ. ಇದಕ್ಕೆ ಸಂಪಾದಕರ ಕಾವ್ಯ ಪರಂಪರೆಯ ಪ್ರಜ್ಞೆ ಹಾಗೂ ಸೂಕ್ಷ್ಮ ದೃಷ್ಟಿಕೋನಗಳು ಕಾರಣವಾಗಿವೆ.''[೮೨] ಹೀಗೆ ಈ ಕವನ ಸಂಕಲನ ಕನ್ನಡ ಕಾವ್ಯಲೋಕದ ಮಹತ್ವದ ಕೃತಿಯಾಗಿದೆ. ಕನ್ನಡ ನವ್ಯ ಕಾವ್ಯದ ಆರಂಭದ ಮುನ್ನುಡಿಯಾಗಿದೆ.

**೨. ಸಾಲಿ ರಾಮಚಂದ್ರರಾಯ**

ಉತ್ತರ ಕರ್ನಾಟಕದ ನವ್ಯ ಕವಿಗಳಲ್ಲಿ ಪ್ರಮುಕವಾದ ಕವಿ ಸಾಲಿರಾಮಚಂದ್ರರಾಯರೂ, ಸಾಲಿರಾಮ ಚಂದ್ರರಾಯರ ಎರೆಡನೆಯ ಪುಣ್ಯತಿಥಿಯ ಸಂಧರ್ಬದಲ್ಲಿ ಡಾ. ಸಿದ್ದಲಿಂಗ ಪಟ್ಟಣಶೆಟ್ಟರು ಮತ್ತು ಪರಮೇಶ್ವರ ಹೆಗಡೆಯವರು ಸೇರಿ ಈ ಕೃತಿಯನ್ನು ಸಂಪಾದಿಸಿದ್ದಾರೆ. ಸಾಲಿರಾಮಚಂದ್ರರಾಯ ವ್ಯಕ್ತಿತ್ವಗಳನ್ನು ಕುರಿತು ಹೇಳುವ

ಐವತ್ತಾರು ಲೇಖನಗಳು ಈ ಕೃತಿಯಲ್ಲಿವೆ. ಅನುಬಂಧದಲ್ಲಿ ರಾಮಚಂದ್ರರಾಯರ ಬದುಕಿನ ಪ್ರಮುಖ ಘಟನೆಗಳು ಮತ್ತು ಅವರ ಕೃತಿಗಳನ್ನು ಪಟ್ಟಿಮಾಡಿ ಕೊಡಲಾಗಿದೆ. ಕೃತಿಯ ಆರಂಭದಲ್ಲಿ ಸಾಲಿಯವರಿಗೆ ಸಂಬಂಧಿಸಿದ ಹನ್ನೊಂದು ಛಾಯಾ ಚಿತ್ರಗಳನ್ನು ಕೊಡಲಾಗಿದೆ.

ಸಾಲಿರಾಮಚಂದ್ರರಾಯ ಆಗಿನ ಕಾಲದಲ್ಲಿ ಅನೇಕ ಕೃತಿಗಳನ್ನು ರಚಿಸಿದರೂ ಅವರಿಗೆ ಸಾಹಿತ್ಯ ಲೋಕದಲ್ಲಿ ಸಿಗಬೇಕಾದ ಸ್ಥಾನ ಸರಿಯಾಗಿ ಸಿಗಲಿಲ್ಲ. ಸಾಲಿಯವರು ತಮ್ಮ ಪಾಡಿಗೆ ತಾವು ಇದ್ದು ಬಿಡುವ ಸರಳ ವ್ಯಕ್ತಿತ್ವದವರು. ಇದನ್ನು ಪಟ್ಟಣಶೆಟ್ಟರು ಮುಮ್ಮಾತುಗಳಲ್ಲಿ ಹೇಳಿದ್ದಾರೆ. ಸಾಲಿಯವರು ಯಾವೊಂದು ಗುಂಪಿಗೆ ಸೇರದೆ ಸಾಹಿತ್ಯ ಕೃಷಿಯನ್ನು ಮಾಡಿದವರು. ನವೋದಯ ಕಾವ್ಯ ಕರ್ನಾಟಕದ ಪ್ರಮುಖ ಭಾಗಗಳಲ್ಲಿ ಆರಂಭಗೊಂಡಾಗ ಧಾರವಾಡದಲ್ಲಿ ಸಾಲಿರಾಯಚಂದ್ರರಾಯರು ಹೊಸ ಪ್ರಯೋಗಗಳನ್ನು ಮಾಡಿದರು. ಸ್ವಾತಂತ್ರ ಪೂರ್ವದಲ್ಲಿ ಕನ್ನಡ ಕಾವ್ಯ ರಚಿಸಿದ ಸಾಲಿಯವರು ಗಾಂಧೀ ವಿಚಾರಧಾರೆ, ದೇಶಪ್ರೇಮ ನುಡಿಪ್ರೇಮಗಳನ್ನು ತಮ್ಮ ಸಾಹಿತ್ಯದಲ್ಲಿ ಸೃಷ್ಟಿಸಿದ್ದಾರೆ. ಇದ್ದ ಒಬ್ಬ ಮಗನನ್ನು ಕಳೆದುಕೊಂಡು ಜೀವನದಲ್ಲಿ ನೊಂದಿದ್ದಾರೆ. ಎಂಬ ಅನೇಕ ಮಾಹಿತಿಗಳು ಈ ಕೃತಿಯಲ್ಲಿ ದೊರೆಯುತ್ತವೆ. ಇದು ಅತ್ಯುತ್ತಮವಾದ ಸಂಸ್ಮರಣಾ ಗ್ರಂಥವಾಗಿದೆ.

**೨. ಎಸ್.ಎಂ. ಕೃಷ್ಣ ಬದುಕು, ಸಾಧನೆ**

ಡಾ.ದೇ.ಜವರೇಗೌಡರು ಪ್ರಧಾನ ಸಂಪಾದಕರು ಡಾ.ಎಚ್.ಸಿ. ವಿಷ್ಣುಮೂರ್ತಿ, ಅಬ್ದುಲ್ ಮಜೀದ್‌ಖಾನ್ ಇದರ ಸಂಪಾದಕರಾಗಿದ್ದಾರೆ. ೧೯೯೯ರಲ್ಲಿ ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ಎಸ್.ಎಂ.ಕೃಷ್ಣ ಅವರ ಅಭಿನಂದನಾಗ್ರಂಥ ಇದಾಗಿದೆ. ಏಳುನೂರು ತೊಂಬತ್ತೆಂಟು ಪುಟಗಳ ಈ ಅಭಿನಂದನಾ ಗ್ರಂಥವನ್ನು ಎಸ್.ಎಂ. ಕೃಷ್ಣ ಅವರಿಗೆ ಅರವತ್ತೆಂಟರ ಹುಟ್ಟು ಹಬ್ಬದ ಸಂದರ್ಭದಲ್ಲಿ ಹೊರತರಲಾಯಿತು.

ಈ ಕೃತಿಯ ಪ್ರಧಾನ ಸಂಪಾದಕರಾದ ಡಾ.ದೇ. ಜವರೇಗೌಡರು ದೀರ್ಘವಾದ ಪ್ರಸ್ತಾವನೆಯನ್ನು ಬರೆದಿದ್ದಾರೆ. ಈ ಪ್ರಸ್ತಾವನೆಯಲ್ಲಿ ಎಸ್.ಎಂ.ಕೃಷ್ಣ ಅವರ ರಾಜಕೀಯ, ವಿದ್ಯಾಭ್ಯಾಸ, ವ್ಯಕ್ತಿತ್ವ ಅಲ್ಲದೆ ಅವರು ಬೇರೆ ಬೇರೆ ಕ್ಷೇತ್ರಗಳಲ್ಲಿ ಬೆಳೆದು ಕೃತಿಯು 'ಅಭಿನಂದನೆ' ಬದುಕು ಸಾಧನೆಯೆಂಬ ಮೂರು ಭಾಗಳಿವೆ.

ಮೊದಲನೆಯ ಭಾಗವಾದ ಅಭಿನಂದನೆಯಲ್ಲಿ ಹಿರಿಯರು, ಎಸ್.ಎಂ.ಕೃಷ್ಣ ಅವರನ್ನು ಹತ್ತಿರದಿಂದ ಕಂಡವರು, ಮಿತ್ರರು ಹಿತೈಷಿಗಳು ಬರೆದಿರುವ ಮೂವತ್ತೆರೆಡು ಲೇಖನಗಳಿವೆ. ಇವು ಎಸ್.ಎಂ.ಕೃಷ್ಣ ಅವರು ಅಭಿರುಚಿಗಳನ್ನು, ಆಸಕ್ತಿಗಳನ್ನು ಅವರ ವ್ಯಕ್ತಿತ್ವದ ಅನೇಕ ಮಗ್ಗಲುಗಳನ್ನು ಪರಿಚಯ ಮಾಡಿಸುತ್ತವೆ.

ಬದುಕು ಎನ್ನುವ ಎರಡನೆಯ ಭಾದಲ್ಲಿ ಎಸ್.ಎಂ. ಕೃಷ್ಣ ಅವರ ಆಪ್ತ ಮಿತ್ರರಾದ ಪ್ರೊ.ಟಿ.ಶಿವಣ್ಣ ಅವರು ಕೃಷ್ಣರ ಜೀವನ ಚರಿತ್ರೆಯನ್ನು ಬರೆದಿದ್ದಾರೆ. ಶಿವಣ್ಣ ಅವರು ಕೃಷ್ಣರನ್ನು ಬಾಲ್ಯದಿಂದಲೇ ಬಹಳ ಹತ್ತಿರದಿಂದ ಕಂಡವರು. ಇಂದಿಗೂ ಅವರ ಒಳ್ಳೆಯ ಗೆಳೆಯರು, ಅವರ ವೈಯುಕ್ತಿಕ ಜೀವನದ ಸುಖದುಃಖಗಳನ್ನು ರಾಜಕೀಯ ಕ್ಷೇತ್ರದ ಏಳು ಬೀಳುಗಳನ್ನು ಕಣ್ಣಾರೆ ಕಂಡವರು. ಆದ ಕಾರಣ ಈ ಭಾಗದಲ್ಲಿ ಎಸ್.ಎಂ. ಕೃಷ್ಣ ಅವರ ಜೀವನದ ನೈಜ ಚಿತ್ರಣಗಳನ್ನು ಕಾಣಬಹುದಾಗಿದೆ.

ಸಾಧನೆ ಮೂರನೇ ಭಾಗವಾಗಿದ್ದು, ಐದುನೂರಾ ಎಪ್ಪತ್ತು ಪುಟಗಳನ್ನು ಒಳಗೊಂಡಿದೆ. ಎಸ್.ಎಂ. ಕೃಷ್ಣ ಅವರು, ಸಂಸತ್ ಸದಸ್ಯರಾಗಿ, ಕರ್ನಾಟಕಶಾಸನ ಸಭೆಯ ಸದಸ್ಯರಾಗಿ, ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳಲ್ಲಿ ಉನ್ನತ ಸಚಿವರಾಗಿ, ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದವರು. ತಮ್ಮ ರಾಜಕೀಯ ಅಧಿಕಾರಾವಧಿಯಲ್ಲಿ ಮಾಡಿದ ಕಾರ್ಯಗಳು, ಶಾಸನ ಸಭೆಗಳಲ್ಲಿ ಮಂಡಿಸಿದ ವಿಷಯಗಳು ಈ ಭಾಗದಲ್ಲಿವೆ. ಎಸ್.ಎಂ.ಕೃಷ್ಣ ಅವರ ರಾಜಕೀಯ ಇಚ್ಛಾಶಕ್ತಿ, ಪ್ರಜ್ಞೆ ಸಾಧನೆಗಳನ್ನು ಇಲ್ಲಿ ಪರಿಚಯಿಸಲಾಗಿದೆ. ಇದು ಶ್ರಮದೇ ಕೆಲಸವಾಯಿತು ಎಂದು ಸಂಪಾದಕರು ಹೇಳುವ ಮಾತಿನಿಂದ ಸಂಪಾದಕರ ಶ್ರಮ ಮತ್ತು ಕಾಳಜಿಗಳು ಅರ್ಥವಾಗುತ್ತಾರೆ.

ಈ ಕೃತಿಯಲ್ಲಿ ಎಸ್.ಎಂ. ಕೃಷ್ಣ ಅವರು ವಿವಿಧ ಸಂದರ್ಭಗಳಲ್ಲಿ ಗಣ್ಯ ವ್ಯಕ್ತಿಗಳ ಜೊತೆಗೆ ಇರುವ ಛಾಯಾ ಚಿತ್ರಗಳನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ. ಒಬ್ಬ ರಾಜಕೀಯ ವ್ಯಕ್ತಿಯನ್ನು ಕುರಿತು ಹೊರಬಂದಿರುವುದು ವಿರಳ ಎಂದೇ ಹೇಳಬಹುದು.

**೩. ರಂಗ ಸಂಪನ್ನೆಯ ಮಾಲಿಕೆ**

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಕನ್ನಡ ರಂಗಭೂಮಿಗೆ ಅನೇಕ ಮಹತ್ವದ ಕಾಣಿಕೆಗಳನ್ನು ನೀಡಿದ್ದಾರೆ. ತಾವು, ನಾಟಕ ಅಕಾಡೆಮಿಯ ಸದಸ್ಯರಾಗಿದ್ದ ಸಂದರ್ಭದಲ್ಲಿ, ಕರ್ನಾಟಕ ನಾಟಕ ಅಕಾಡೆಮಿಯ ಯೋಜನೆಯಾದ ರಂಗಸಂಪನ್ನರು ಮಾಲಿಕೆಯ ರೂಪರೇಷಗಳನ್ನು ಹಾಕಿಕೊಟ್ಟು ಓದುಗರಿಗೆ ರಂಗಕರ್ಮಿಗಳ ಸಾಧನೆಗಳನ್ನು ಪರಿಚಯಿಸುವ ಜನಪ್ರಿಯ ಸಂಪುಟಗಳನ್ನು ೧೯೯೯ರಲ್ಲಿ ತಮ್ಮ ಸಂಪಾದಕತ್ವರಲ್ಲಿ ಹೊರತಂದಿದ್ದಾರೆ. ಈ ಮಾಲಿಕೆಯಲ್ಲಿ ಎಚ್.ಎನ್. ಹೂಗಾರ್, ಬಿ.ವಿ. ಕಾರಾಂತ, ಮಾಸ್ಟರ್ ಹಿರಣ್ಣಯ್ಯ, ಆರ್ ನಾಗರತ್ನಮ್ಮ, ಹೆಚ್.ಕೆ. ಯೋಗಾನರಸಿಂಹ, ಬಿ.ಎನ್.ವಾಣಿ, ಚಿಂದೋಡಿ ಲೀಲಾ, ಆರ್.ನಾಗೇಶ್, ಎಂ.ಎಸ್.ಸತ್ಯು, ಹಾಗೂ ಪಿ.ಬಿ. ಧುತ್ತರಿಗಿಯವರ ಜೀವನ ಹಾಗೂ ಸಾಧನೆಗಳನ್ನು ಸಂಪಾದಿಸಿ ಕೊಡಲಾಗಿದೆ. ಇದರಿಂದ ನಾಟಕ ಅಕಾಡೆಮಿ ನಾಟಕೋತ್ಸವ, ವಿಚಾರಸಂಕಿರಣ, ಪ್ರಶಸ್ತಿ ಪ್ರಧಾನ ಸಮಾರಂಭಗಳಿಗೆ ಮಾತ್ರ ಸೀಮಿತವಾಗಿದ್ದ ಅದರ ಕಾರ್ಯವ್ಯಾಪ್ತಿಯನ್ನು ನಾಟಕಕಾರ, ಕಲಾವಿದ, ನಾಟಕಕಂಪನಿ, ಕಂಪನಿಯ ಮಾಲಿಕರು ಇತ್ಯಾದಿ ರಂಗಭೂಮಿಯಲ್ಲಿ ದುಡಿದ ಮಹನೀಯರನ್ನು ಕುರಿತು ಇಂಥ ಮಾಲಿಕೆಗಳ ಮೂಲಕ ಸಿದ್ಧಗೊಂಡರೆ ಚರಿತ್ರೆ ದೊರೆತಂತಾಗುತ್ತದೆ. ಇಂತಹ ಸಮಗ್ರತೆಯ ಕಡೆಗೆ ಆಲೋಚಿಸುವಂತಹ ಯೋಜನೆಯೊಂದನ್ನು ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಆಕಾಡೆಮಿಗೆ ರೂಪಿಸಿಕೊಟ್ಟಿರುವುದು, ಹೆಮ್ಮೆಯ ಸಂಗತಿಯಾಗಿದೆ.

**೪. ಕರ್ನಾಟಕ ವಿದ್ಯಾವರ್ಧಕ ಸಂಘದ ಸಂಪಾದನೆಗಳು**

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಪ್ರಧಾನ ಕಾರ್ಯದರ್ಶಿಯಾಗಿದ್ದಾಗ ಹದಿನೈದು ಮಹತ್ವದ ಪುಸ್ತಕಗಳನ್ನು ಸಂಪಾದಿಸಿ ಮರು ಮುದ್ರಿಸಿದ್ದಾರೆ. ೧೮೯೦ ರಲ್ಲಿ ಸ್ಥಾಪಿತವಾದ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘವು ಕಾಲಕಾಲಕ್ಕೆ ಕನ್ನಡ ಭಾಷೆ ಸಂಸ್ಕೃತಿಕೆ ಮಹತ್ವದ ಕೊಡುಗೆ ನೀಡಿರುವ ಲೇಖಕರನ್ನು ಕುರಿತು ಪುಸ್ತಕಗಳನ್ನು ಬರೆಯಿಸಿ ಪ್ರಕಟಿಸಿತ್ತು. ಈಗ ನೂರರ ಗಡಿ ಧಾಟಿರುವ ಈ ಸಂಸ್ಥೆ ಪ್ರಕಟಿಸಿದ ಅನೇಕ ಪುಸ್ತಕಗಳು ಅರವತ್ತು ಎಪ್ಪತ್ತು ವರ್ಷಗಳಿಂದ ಅಲಭ್ಯವಾಗಿದ್ದವು. ಅಂಥಹ ಪುಸ್ತಗಳಲ್ಲಿ

ಹದಿನೈದು ಪುಸ್ತಕಗಳನ್ನು ಆಯ್ದು ಅವು ಕನ್ನಡ ಓದುಗರಿಗೆ ಸಿಗುವಂತೆ ಪಟ್ಟಣಶೆಟ್ಟಿವರು ಸಂಪಾದಿಸಿ ಪ್ರಕಟಿಸಿದ್ದಾರೆ. ಆ ಪುಸ್ತಕಗಳು ಈ ಕೆಳಕಂಡಂತೆ ಇವೆ.

೧. ಶ್ರೀ ವಿದ್ಯಾರಣ್ಯ ಸ್ವಾಮಿಗಳು - ಪಂಡಿತ ಭೀಮಾಜಿ ಜೀವಾಜಿ ಹುಲಿಕವಿ

೨. ಮೋಹನೀ ಅಥವಾ ನಿಂದಕರ ನಡಾವಳಿ - ಗದಿಗಯ್ಯ ಹುಚ್ಚಯ್ಯ ಹೊನ್ನಾಪುರಮಠ

೩. ಕನ್ನಡಿಗರ ಜನ್ಮ ಸಾರ್ಥಕತೆ - ವಲ್ಲಭಮಹಾಲಿಂಗ ತಟ್ಟಿ

೪. ಗೃಹ ವೈದ್ಯಕವು - ನರಸಿಂಹಾಚಾರ್ಯ ಪುಣೇಕರ (ಕಾವ್ಯನಂದ)

೫. ನರಗುಂದದ ಬಂಡಾಯ - ಪಂಡಿತ ಭೀಮಾಜಿ ಜೀವಾಜಿ ಹುಲಿಕವಿ

೬. ಭಾರತೀಯ ವಿದುಷಿಯರು - ಮ.ಪ್ರ. ಪೂಜಾರ

೭. ಕರ್ನಾಟಕ ಕಥಾ ಸರಿತ್ಸಾಗರ - ಸಿದ್ಧಾಂತಿ ಶಿವಶಂಕರ ಶಾಸ್ತ್ರಿ

೮. ಕನ್ನಡ ಮಾತು ತಲೆಯತ್ತುವ ಬಗೆ - ಬಿ.ಎಂ. ಶ್ರೀ ಕಂಠಯ್ಯ

೯. ಇಸೋಪನ ಚರಿತ್ರೆ - ತ.ನಾ. ಅಮೀನಭಾವಿ

೧೦. ಕನ್ನಡ ಶೌರ್ಯ ಸಾಗರ - ಗೂಳಪ್ಪ ಕೊಟ್ರಪ್ಪ ಅರಳಿ

೧೧. ಕಾಲಿದಾಸ ಚರಿತ್ರೆ - ಗುರುನಾಥ ವೆಂಕಟೇಶ ಕಿತ್ತೂರು

೧೨. ಶ್ರೇಯ: ಸಾಧನ - ಪಂಡಿತ ಭೀಮಾಜಿ ಜೀವಾಜಿ ಹುಲಿಕವಿ

೧೩. ಪಂಡಿತರಾಜ ಜಗನ್ನಾಥ - ಕೇಶವರಂಗ ಭಟ್ಟ ಜೋಶಿ

೧೪. ಕರ್ನಾಟಕ ಯಯಾತಿ ನಾಟಕಂ - ಶಾ. ವೆಂಕಟರಮಣಯ್ಯ

**ಟಿಪ್ಪಣಿಗಳು**

೧. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ 'ನೀನಾ' ಮುನ್ನುಡಿ ಅನನ್ಯ ಪ್ರಕಾಶನ ಧಾರವಾಡ ೧೯೬೪ ಪು. ಸಂ. ೨

೨. ಅದೇ ಮುನ್ನುಡಿ, ಪು.ಸಂ.೨

೩. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಪಟ್ಟಣಶೆಟ್ಟಿ ಸಮಗ್ರಕಾವ್ಯ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯಮಠ, ಗದಗ, ಬಿಂದಿ, ಪು.ಸಂ. ೪೬೨,೪೬೩

೪. ಅದೇ ಪು.ಸಂ. ೪೫೬, ೪೫೭

೫. ಅದೇ ಪು.ಸಂ. ೪೫೭

೬. ದೇ.ಜ.ಗೌ, ಪ್ರ.ಸಂ, ಸಹೃದಯ ೨೦೦೪ ವನಶ್ರೀ ಪ್ರಕಾಶನ ಮೈಸೂರು ೨೦೦೪ ಪು.ಸಂ. ೧೩

೭. ಅದೇ ಪು.ಸಂ. ೧೯

೮. ಅದೇ ಪು.ಸಂ. ೧೯೫

೯. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, 'ನೀನಾ' ಮುನ್ನುಡಿ ಅನನ್ಯ ಪ್ರಕಾಶನ, ಮೈಸೂರು, ೧೯೫೪, ಪು.ಸಂ. ೨

೧೦. ದೇ.ಜ.ಗೌ, ಪ್ರ.ಸಂ, ಸಹೃದಯ ಪ್ರಕಾಶನ, ಮೈಸೂರು, ೨೦೦೪, ಪು.ಸಂ. ೨೦೦೪

೧೧. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಪಟ್ಟಣಶೆಟ್ಟಿ ಸಮಗ್ರ ಕಾವ್ಯ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಮಠ ಗದಗ ೨೦೦೦ ಪು.ಸಂ. ೪೫೮, ೪೫೯

೧೨. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ, ಮೈಸೂರು, ೨೦೦೪, ಪು.ಸಂ. ೨೦೭

೧೩. ಅದೇ ಪು.ಸಂ. ೨೦೭

೧೪. ಅದೇ ಪು.ಸಂ. ೨೦೯

೧೫. ಅದೇ ಪು.ಸಂ. ೨೧೫

೧೬. ಅದೇ ಪು.ಸಂ. ೨೧೬

೧೭. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಪಟ್ಟಣಶೆಟ್ಟಿ ಸಮಗ್ರಕಾವ್ಯ ವೀರಶೈವಅಧ್ಯಯ ಸಂಸ್ಥೆ ಶ್ರೀಜಗದ್ಗುರು ತೋಂಟದಾರ್ಯ ಮಠ ಗದಗ ೨೦೦೦, ಪು.ಸಂ. ೪೬೧

೧೮. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ, ಮೈಸೂರು, ೨೦೦೪, ಪು.ಸಂ. ೨೧೬

೧೯. ಅದೇ ಪು.ಸಂ. ೨೧೬

೨೦. ಅದೇ ಪು.ಸಂ. ೨೧೭

೨೧. ಅದೇ ಪು.ಸಂ. ೧೯೭,೧೯೮

೨೨. ಅದೇ ಪು.ಸಂ. ೨೦೬

೨೩. ಅದೇ ಪು.ಸಂ. ೧೯೭

೨೪. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಪಟ್ಟಣಶೆಟ್ಟಿ ಸಮಗ್ರಕಾವ್ಯ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಮಠ ಗದ ೨೦೦೦, ಪು.ಸಂ. ೪೬೩

೨೫. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ಮೈಸೂರು ೨೦೦೪, ಪು.ಸಂ. ೨೩೧

೨೬. ಅದೇ ಪು.ಸಂ. ೧೯೮

೨೭. ಅದೇ ಪು.ಸಂ. ೨೪೨

೨೮. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಪಟ್ಟಣಶೆಟ್ಟಿ ಸಮಗ್ರ ಕಾವ್ಯ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಗದಗ ೨೦೦೦, ಪು.ಸಂ. ೪೬೪

೨೯. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ೨೦೦೪ ಪು.ಸಂ. ೨೪೩

೩೦. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಪಟ್ಟಣಶೆಟ್ಟಿ ಸಮಗ್ರ ಕಾವ್ಯ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಮಠ ಗದಗ ೨೦೦೦ ಪು.ಸಂ. ೪೬೪

೩೧. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ಮೈಸೂರು ೨೦೦೪, ಪು.ಸಂ. ೨೨೨,೨೨೩

೩೨. ಅದೇ ಪು.ಸಂ. ೨೨೫

೩೩. ಅದೇ ಪು.ಸಂ. ೨೨೬

೩೪. ಅದೇ ಪು.ಸಂ. ೨೪೬

೩೫. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ಬಂದಿದ್ದಾಳೆ ಅನನ್ಯ ಪ್ರಕಾಶನ ಧಾರವಾಡ, ೧೯೮೨ ಪು.ಸಂ. ೫

೩೬. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ಮೈಸೂರು ೨೦೦೪ ಪು.ಸಂ. ೨೪೩

೩೭. ಅದೇ ಪು.ಸಂ. ೨೪೬

೩೮. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಪಟ್ಟಣಶೆಟ್ಟಿ ಸಮಗ್ರ ಕಾವ್ಯ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಮಠ ಗದಗ ೨೦೦೦ ಅಡಿಟಿಪ್ಪಣಿ ಪು.ಸಂ. ೨೭೮

೩೯. ಅದೇ ಪು.ಸಂ. ೧.೭

೪೦. ಅದೇ ಪು.ಸಂ. ೧೮

೪೧. ಅದೇ ಪು.ಸಂ. ೨೨,೨೩

೪೨. ಅದೇ ಪು.ಸಂ. ೩೫

೪೩. ಅದೇ ಪು.ಸಂ. ೪೨

೪೪. ಅದೇ ಪು.ಸಂ. ೪೨

೪೫. ಅದೇ ಪು.ಸಂ. ೪೭

೪೬. ಅದೇ ಪು.ಸಂ. ೫೫

೪೭. ಅದೇ ಪು.ಸಂ. ೫೭

೪೮. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಹಳ್ಳಿಕೇರಿ ಗುದ್ಲೆಪ್ಪನವರು, ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಮಠ ಡಂಬಳ-ಗದಗ ೧೯೮೧

೪೯. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ಮೈಸೂರು, ಪು.ಸಂ. ೨೮೧

೫೦. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ಮೈಸೂರು, ಪು.ಸಂ. ೨೮೧

೫೧. ಅದೇ ಪು.ಸಂ. ೨೮೪

೫೨. ಅದೇ ಪು.ಸಂ. ೩೦೦

೫೩. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ನಾನಿಕಾರ, ಎನ್ನೆ ಬದುಕು, ಸುಂದರ ಪುಸ್ತಕ ಪ್ರಕಾಶನ ಧಾರವಾಡ ೧೯೮೩ ಪು.ಸಂ. ೨೮೬

೫೪. ಅದೇ ಪು.ಸಂ. ೨೮೭

೫೫. ಅದೇ ಪು.ಸಂ. ೨೮೭

೫೬. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ನಾನಿಕಾರ, ಎನ್ನೆ ಬರಹ, ಸುಂದರ ಪ್ರಕಾಶನ, ಧಾರವಾಡ ೧೯೮೩, ಪು.ಸಂ. ೭೪

೫೭. ಅದೇ ಪು.ಸಂ. ೭೮

೫೮. ಸಂ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ ನಾಯಿ ನೆನಹುಗಳು ಸುಂದರ ಪ್ರಕಾಶನ ಧಾರಾಡ, ೧೯೮೪ ಬೆನ್ನುನುಡಿ.

೫೯. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ಮೈಸೂರು, ೨೦೦೪, ಪು.ಸಂ. ೩೩೫

೬೦. ಅದೇ ಪು.ಸಂ. ೩೩೮

೬೧. ಅದೇ ಪು.ಸಂ. ೩೪೧

೬೨. ಡಾ ಸಿದ್ಧಲಿಂಗ ಪಟ್ಟಣಶೆಟ್ಟಿ, ಕಲ್ಯಾಣದ ಹಾದಿ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರುತೋಂಟದಾ ಮಠ ಗದಗ ೧೯೯೯ ಪು.ಸಂ ೪೮೭

೬೩. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಇಂದು ರಾತ್ರಿಯ ಹಾಗೆ ಅನನ್ಯ ಪ್ರಕಾಶನ ಧಾರವಾಡ ೧೯೯೪ ಮುನ್ನುಡಿ ಪುಟ ೨

೬೪. ದೇ.ಜ.ಗೌ, ಪ್ರ.ಸಂ, ವನಶ್ರೀ ಪ್ರಕಾಶನ ಮೈಸೂರು ೨೦೦೪ ಪು.ಸಂ. ೨೪೨

೬೫. ಪು.ಸಂ. ೨೪೨

೬೬. ಅದೇ ಪು.ಸಂ. ೨೪೨

೬೭. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಪಟ್ಟಣಶೆಟ್ಟಿ ಸಮಗ್ರ ಕಾವ್ಯ ವೀರಶೈವ ಅಧ್ಯಯನ ಸಂಸ್ಥೆ, ಶ್ರೀ ಜಗದ್ಗುರು ತೋಂಟದಾರ್ಯ ಮಠ ಗದಗ, ೨೦೦೦ ಪು.ಸಂ. ೪೫೩

೬೮. ಅದೇ ಪು.ಸಂ. ೪೫೬

೬೯. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ಮೈಸೂರು ೨೦೦೪ ಪು.ಸಂ. ೨೭೫

೭೦. ಅದೇ ಪು.ಸಂ. ೨೭೫

೭೧. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಆಧುನಿಕ ಕನ್ನಡ ಹಿಂದೀ ಕಾವ್ಯ ಕ.ವಿ.ವಿ. ಪ್ರಸಾರಾಂಗ ಧಾರವಾಡ ೧೯೭೦ ಪೀಠಿಕೆ ಪು.ಸಂ. ೧

೭೨. ಅದೇ ಪು.ಸಂ. ೩೧

೭೩. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ ಅನುಶೀಲನ, ಅನನ್ಯ ಪ್ರಕಾಶನ ಮೈಸೂರು, ೧೯೮೨ ಮುನ್ನುಡಿ

೭೪. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ೨೦೦೪ ಪು.ಸಂ. ೩೧೫

೭೫. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಅನುಶೀಲನ ಅನನ್ಯ ಪ್ರಕಾಶನ ಮೈಸೂರು ೧೯೮೨ ಪು.ಸಂ. ೨೬

೭೬. ಅದೇ ಪು.ಸಂ. ೬೭

೭೭. ಡಾ.ಸಿದ್ಧಲಿಂಗ ಪಟ್ಟಣ ಶೆಟ್ಟಿ, ಪರಿಭಾವನ ಅನನ್ಯ ಪ್ರಕಾಶನ ಧಾರವಾಡ, ೨೦೦೦ ಬೆನ್ನುಡಿ

೭೮. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ಮೈಸೂರು ೨೦೦೪ ಪು.ಸಂ. ೨೦೦೮

೭೯. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಪರಿಭಾವನ್ ಅನನ್ಯ ಪ್ರಕಾಶನ ಧಾರವಾಡ, ೨೦೦೦ ಪು.ಸಂ. ೯

೮೦. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ಮೈಸೂರು, ೨೦೦೪ ಪು.ಸಂ. ೩೧೩

೮೧. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಅನುಸ್ವಾದನ ಅನನ್ಯ ಪ್ರಕಾಶನ ಧಾರವಾಡ, ೨೦೦೨, ಪು.ಸಂ. ೧೫

೮೨. ಅದೇ ಮುನ್ನುಡಿ

೮೩. ಸಂ. ಚಂದ್ರಶೇಖರ ಪಾಟೀಲ, ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಗಿರಡ್ಡಿಗೋವಿಂದರಾಜ, ಸಂಕ್ರಮಣ ಪ್ರಕಾಶನ ಧಾರವಾಡ ೧೯೬೫ ಮುನ್ನುಡಿ.

೮೪. ದೇ.ಜ.ಗೌ, ಪ್ರ.ಸಂ, ಸಹೃದಯ ವನಶ್ರೀ ಪ್ರಕಾಶನ ಮೈಸೂರು ೨೦೦೪ ಪು.ಸಂ. ೩೨೬.

* * *

## ಭಾಗ-೨, ಹಿಂದೀ ಸ್ವತಂತ್ರ ಕೃತಿಗಳು

೩.೨.೧. ಕಾವ್ಯ ಸಂಕಲನ ೧. ಶೈಲ್ ಔರ್ ಸಾಗರ್

೩.೨.೨. ನಿಬಂಧ ಸಂಕಲನ ೧. ಮೋಹನ್‌ರಾಕೇಶ್ ಔರ್ ಗಿರೀಶ್ ಕಾರ್ನಾಡಕೋ ನಾಟಕೋಂಕ ತುಲನಾತ್ಮಕ ಅಧ್ಯಯನ

೩.೨.೩. ವಿಮರ್ಶೆ ೧. ಆಧುನಿಕ ಹಿಂದೀ ಔರ್ ಕನ್ನಡ ಕಾವ್ಯ

೩.೨.೪. ಜೀವನ ಚರಿತೆ ೧. ರಾಷ್ಟ್ರಕವಿ ಗೋವಿಂದಪೈ

೨. ಮಹಾಮಾನವ್ ಬಸವೇಶ್ವರ

೩.೨.೫. ನಾಟಕ ೧. ಕಿನ್ನರಿಜೋಗಿ

೨. ಸೀಮಾಪಾರ್

೩.೨.೬. ಸಂಪಾದನೆ ೧. ಹಿಂದೀ ಗದ್ಯಮಾಧುರಿ

೨. ಹಿಂದೀ ಮಂಜರಿ

೩. ಸಾಹಿತ್ಯ ಮಾನಸ

೪. ಹಿಂದೀ ಸರಿತಾ

೫. ಐದು ನಾಟಕಗಳು

## ಭಾಗ-೨, ಹಿಂದೀ ಸ್ವತಂತ್ರ ಕೃತಿಗಳು

### ೩.೨.೧. ಕಾವ್ಯ

### ೧. ಶೈಲ್ ಔರ್ ಸಾಗರ್

ಶೈಲ್ ಔರ್ ಸಾಗರ್ ೧೯೬೩ರಲ್ಲಿ ಪ್ರಕಟವಾದ ಹಿಂದೀ ಕವನ ಸಂಕಲನ. ಸ್ನೇಹ ಪ್ರಕಾಶನ ಬೆಳಗಾವಿಯಿಂದ ಇದು ಪ್ರಕಟಗೊಂಡಿದೆ. ಈ ಸಂಗ್ರಹದಲ್ಲಿ ಅಪ್ಪಾಸಾಹೇಬ ಸನದಿ ಮತ್ತು ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಕವನಗಳಿವೆ. ಅಪ್ಪಸಾಹೇಬ ಸನದಿ ಅವರ ಕಾವ್ಯಗಳಿಗೆ 'ಶೈಲ' ಎಂದೂ, ಪಟ್ಟಣಶೆಟ್ಟಿಯವರ ಕಾವ್ಯಗಳಿಗೆ 'ಸಾಗರ' ಎಂದು ಹೆಸರಿಸಲಾಗಿದೆ. ಈ ಸಂಕಲನದಲ್ಲಿ ಲಹ್- ಏಕ್, ಲಹ್-ದೋ ಅಂದರೆ ಅಲೆ ಅಥವಾ ಭಾಗ ಎಂದರ್ಥ. ಲಹ್-ಏಕ, ಭಾಗ ಒಂದರಲ್ಲಿ ಸನದಿಯವರ ಇಪ್ಪತ್ನಾಲ್ಕು ಕವಿತೆಗಳಿವೆ. ಲಹ್-ದೊ, ಭಾಗ ಎರಡರಲ್ಲಿ ಪಟ್ಟಣ ಶೆಟ್ಟಿಯವರ ಇಪ್ಪತ್ಮೂರು ಕವಿತೆಗಳಿವೆ. ಇಲ್ಲಿನ ಇಬ್ಬರು ಕವಿಗಳು ತಮ್ಮ ತಮ್ಮ ಕವಿತೆಗಳ ಬಗ್ಗೆ ೧೯೬೨ ನವಂಬರ್‌ನಲ್ಲಿ ಬರೆದಿರುವ ಪೀಠಿಕಾ ಟಿಪ್ಪಣಿಗಳನ್ನು ನೀಡಿದ್ದಾರೆ.

ಪಟ್ಟಣಶೆಟ್ಟರು ಮೂಲತಃ ಕನ್ನಡದಲ್ಲಿ ಕವಿತೆಗಳನ್ನು ಬರೆಯುತ್ತಿದ್ದರು. ಅವರ ಹಿಂದೀ ಕವಿತೆಗಳ ಈ ಸಂಗ್ರಹ ೧೯೬೩ ಜನವರಿಯಲ್ಲಿ ಪ್ರಕಟವಾಯಿತು. ನಂತರ ಅವರ ಕನ್ನಡದ ಮೊದಲ ಕವನ ಸಂಕಲನ ನೀನಾ ೧೯೬೪ರಲ್ಲಿ ಪ್ರಕಟವಾಯಿತು. ಎರಡನೆಯ ಭಾಗದಲ್ಲಿರುವ ತಮ್ಮ ಕವಿತೆಗಳನ್ನು ಕುರಿತು ಪಟ್ಟಣಶೆಟ್ಟಿಯವರು ಪ್ರವೇಶ ರೂಪದಲ್ಲಿ ಕೆಲವು ಮಾತುಗಳನ್ನು ಬರೆದಿದ್ದಾರೆ. ಆ ಹೊತ್ತಿಗಾಗಲೇ ಹಿಂದಿಯಲ್ಲಿಯೂ ಆರೇಳು ವರ್ಷಗಳಿಂದ ತಾವು ಕವಿತೆಗಳನ್ನು ಬರೆಯುತ್ತಿದ್ದು ಈ ಸಂಗ್ರಹದಲ್ಲಿ ಐದು ವರ್ಷಗಳಲ್ಲಿ ಆಗಾಗ ಬರೆದ ಕವಿತೆಗಳಲ್ಲಿ ಕೆಲವನ್ನು ಆಯ್ದು ಸಂಗ್ರಹಿಸಲಾಗಿದೆ ಎಂದಿದ್ದಾರೆ.

''ನನ್ನ ಕವಿತೆಗಳ ಬಗ್ಗೆ ನನ್ನ ಕಾವ್ಯಗಳೇ ತಾವಾಗಿಯೇ ಹೇಳುತ್ತವೆ. ಅವುಗಳ ಬಗ್ಗೆ ಹೆಚ್ಚು ವಿವರಣೆ ನಾನು ಕೊಡಬೇಕಾಗಿಲ್ಲ''[೧] ಎನ್ನುತ್ತಾರೆ. ತಮ್ಮ ಆರಂಭದ ಕೆಲವು ಕವಿತೆಗಳ ಮೇಲೆ ಶೈಲಿ, ಭಾಷೆಯ ದೃಷ್ಟಿಯಿಂದ ಹಿಂದಿಯ ಖ್ಯಾತ ಕವಿಗಳಾದ ಜೈ ಶಂಕರ್ ಪ್ರಸಾದ್ ಮತ್ತು ಹರಿವಂಶರಾಯ್ ಬಚ್ಚನ್ ಅವರ ಪ್ರಭಾವ ಕಾಣುತ್ತದೆ. ನಂತರದ

ಕವಿತೆಗಳು ಈ ಪ್ರಭಾವದಿಂದ ಮುಕ್ತವಾಗಿ ತಮ್ಮ ಸ್ವತಂತ್ರ ಅಸ್ತಿತ್ವವನ್ನು ಉಳಿಸಿಕೊಂಡಿವೆಯೆಂದು ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ. ಹೆಚ್ಚಿನ ಕವಿತೆಗಳಲ್ಲಿ ನಾಟಕದ ಸೂತ್ರಧಾರನಂತೆ ಒಂದು ಭಾವಾತ್ಮಕ ಅಭಿವ್ಯಕ್ತಿ ಪ್ರಮುಖವಾಗಿದೆ. ನಂತರದ ಕೆಲವು ಕವಿತೆಗಳಲ್ಲಿ ರೋಮ್ಯಾಂಟಿಕ್ ಭಾವವನ್ನು ದಾಟಿ ಬಂದು ಹೊಸ ಸಂವೇದನೆಯ ಹಿಂದಿಯ 'ನಯೀ ಕವಿತಾ' (ನವ್ಯ ಕಾವ್ಯ) ತಾನಾಗಿಯೇ ವಿಜೃಂಭಿಸಿದೆ ಎಂದು ತಮ್ಮ ಈ ಸಂಗ್ರಹದ ಕವಿತೆಗಳನ್ನು ಕುರಿತು ಹೇಳಿದ್ದಾರೆ.

ಗೀತ್ ಬನ್‌ರಹಾ ಮೇರಾಕ್ರಂದನ್
ಪಾಕರ್ ತುಮ್‌ಸೇ ಕೋಮಲ್ ಸ್ಪಂದನ್
ಗುನ್ ಗುನಾ ಉಟೀ ಜಗಕಾ ಕಣಕಣ
ದೇಹ ಪುಲಕಮೇ ಭರ್‌ಮನ್ ಭಾವನ್
ದೊ ಕುರುಣಾಕೀ ಭಿಕ್ಷಾ ಪಾವನ್

(ಪ್ರಾರ್ಥನಾ-ಪು. ೫೩)

ಇದು ಸಂಕಲನದ ಮೊದಲ ಪ್ರಾರ್ಥನಾ ಗೀತೆ ನಿನ್ನ ಕೋಮಲ ಸ್ಪಂದನ ಲಭಿಸಿದ್ದರಿಂದ ನಿನ್ನ ದುಃಖ ರೋದನ ಈಗ ಗೀತೆಯಾಗುತ್ತಲಿದೆ. ಜಗತ್ತಿನ ಒಂದೊಂದು ಕಣವೂ ಸಂಗೀತವಾಗಿ ಗುನುಗುನಿಸಿದಂತೆ ಭಾಸವಾಗುತ್ತಲಿದೆ. ದೇಹ ಮತ್ತು ಮನಸ್ಸಿನಲ್ಲಿ ನಿನ್ನ ನೆನಪಿನ ಪುಲಕ ಭಾವ ತುಂಬಿದೆ. ನನಗೆ ನಿನ್ನ ಕರುಣೆಯ ಭಿಕ್ಷೆ ಯಾವಾಗಲೂ ಬೇಕು, ಅದನ್ನು ನೀಡುತ್ತಿರು ಎಂದು ಕಾವ್ಯ ದೇವತೆಯನ್ನು ಭಾವದೇವನನ್ನು ಕವಿ ಬೇಡುತ್ತಾನೆ. ಈ ಸಾಲುಗಳಲ್ಲಿ ಲೌಕಿಕ ಬದುಕಿನ ಅರ್ಥದೊಂದಿಗೆ ಪರೋಕ್ಷವಾಗಿ ಆಧ್ಯಾತ್ಮಿಕ ಭಾವಸ್ಪಂದನೆಯೂ ಗೋಚರಿಸುತ್ತದೆ. ಕವಿ ತಮ್ಮ ಮಾತಿನಲ್ಲಿ ಜಯಶಂಕರ್ ಪ್ರಸಾದರನ್ನ ಪ್ರಭಾವದ ದೃಷ್ಟಿಯಿಂದ ನೆನಪಿಸಿಕೊಂಡದ್ದು ಈ ಕವಿತೆಯ ಬಗ್ಗೆ ಇದ್ದಿರಬಹುದು. ಈ ಕವಿತೆಯಲ್ಲಿ ಆ ಪ್ರಭಾವವನ್ನು ಮೀರಿ ಕವಿಗಳ ಸ್ವಂತಿಕೆಯೂ ಕಾಣುತ್ತದೆ. ಹರಿವಂಶರಾಯ್ ಬಚ್ಚನ್‌ರವರ ಪ್ರಭಾವವನ್ನು ನೆನಪಿಸುವ ಒಂದು ಕವಿತೆ 'ನದೀ ಕಿನಾರೆ' (ನದಿಯ ದಡದಲ್ಲಿ) ಸಹ ಗೇಯ ಸುಂದರ ಕವಿತೆಯಾಗಿದೆ.

ಆವೋ ಬೈಟೀ ನದೀ ಕಿನಾರೆ!
ಸುನ್‌ಲೋ ಮೇರಿ ವಿಗತ್ ಕಹಾನಿ
ನಯನೋಮೋ ಢುಲ್ ಕಾವೋ ಪಾನಿ
ತಬ್‌ಮಿಲ್ ಜೈಯೇಂಗೇ ಸಬ್ ದುಃಖ್‌ಗನ್ ಜಮ್‌ಕಾಕರ್
ಮನ್‌ಕೆ ಸುಖ್ ತಾರೆ!
ಆವೋ ಬೈಟೀ ನದೀ ಕಿನಾರೆ!

(ನದೀ ಕಿನಾರೆ-ಪು. ೬೦)

ಬಾ ಇಲ್ಲಿ ನದಿಯ ದಂಡೆಯಲ್ಲಿ ಕೂಡೋಣ, ನನ್ನ ಬದುಕಿನ ಹಳೆಯ ಕಥೆಯನ್ನು ಹೇಳುತ್ತೇನೆ. ಅದನ್ನು ಕೇಳಿಸಿಕೋ ಆಗ ಸಹಜವಾಗಿಯೇ ನೀನು ಕಂಬನಿ ಸುರುಸುತ್ತೀ. ಅದರಿಂದಾಗಿ ದುಃಖದ ಮೋಡಗಳು ಚದುರಿ ಹೋಗುತ್ತವೆ. ಇಂತಹ ಕವನಗಳಲ್ಲಿ ಹಿಂದೀ ಕವಿ ಬಚ್ಚನ್ ಅವರ ಪ್ರಭಾವವಿದ್ದರೂ ಇಲ್ಲಿಯ ಅಭಿವ್ಯಕ್ತಿ ಪಟ್ಟಣಶೆಟ್ಟಿಯವರದೇ ಆಗಿದೆಯೆಂಬುದು ವಿಶಿಷ್ಟ.

ಈ ಸಂಕಲನದಲ್ಲಿ ಪ್ರೇಮ, ಸಾಮಾಜಿಕಚಿಂತನೆ, ಮುಗ್ಧ ಪ್ರೀತಿ ಮುಂತಾದ ವಿಷಯಗಳನ್ನು ಒಳಗೊಂಡ ಕವನಗಳಿವೆ. ಹಿಂದಿಯ ನವ್ಯಕಾವ್ಯದ ಉತ್ಕೃಷ್ಟ ಉದಾಹರಣೆಯಾಗಿರುವ ಹಲವಾರು ಪದ್ಯಗಳು ಇಲ್ಲಿವೆ. ಸಮಾಧಾನ ಎಂಬ ಒಂದು ಪದ್ಯವು ವಿಶಿಷ್ಟ ಧ್ವನಿ ಹಾಗೂ ಭಾವ ತೀವ್ರತೆಯಿಂದ ಕೂಡಿದೆ. ಹಲವಾರು ಹಿಂದಿ ಭಾಷಿಕ ವಿಮರ್ಶಕರು ಇದನ್ನು ಮೆಚ್ಚಿಕೊಂಡಿದ್ದಾರೆ. ಸ್ವತಃ ಹರಿವಂಶರಾಯ್ ಬಚ್ಚನ್‌ರವರು ಈ ಕವಿತೆಯನ್ನು ಮೆಚ್ಚಿ ಪತ್ರರೂಪದಲ್ಲಿ ಪ್ರತಿಕ್ರಿಯಿಸಿರುವುದು ಈ ಕವಿತಗೆಳ ಮುಕುಟ ಎಂದು ಹೇಳಬಹುದು.

ದುನಿಯಾಕೆ ಹಜಾರೊಂ ಜಮೇಲೋನೆ

ಮೇರಿ ಮುಲಾಯಂ ಮುಸ್ಕರಾ ಹಟ್‌ರೋ

ಬಹತ್ ಸಸ್ತೇ ದಾಂಪರ್ ಖರೀದಾ ಹೈ

ಕಹೋ ಮೈ ಕೈಸೇ ಮುಸ್ಕರಾಂವೋ?

ಬಾಜಾರ್‌ಕೀ ಅನವರತ ಮೇಟಿ ಆವಾಂಜೋಮೆ

ಮೇರಿಏಕ್ ಗೀಲಿ ಕರುಣ ಆವಾಂಜ್

ಕ್ಷೀಣ ವೋತಿವುಯಿ ದಬ್‌ಗಯೀ ಹೈ

ಕಹೋ ಮೈ ಕೈಸಾ ಗಾವೊಂ?

(ಸಮಾಧಾನ ಪು.ಸಂ. ೭೫.೭೬)

ಈ ಪ್ರಪಂಚದ ಸಾವಿರಾರ ಗೊಂದಲಗಳು ನನ್ನ ಕೋಮಲ ಮುಗುಳು ನಗೆಯನ್ನು ಅತ್ಯಂತ ಕಡಿಮೆ ಬೆಲೆಗೆ ಖರೀದಿಮಾಡಿವೆ. ಹೀಗಿದ್ದ ಮೇಲೆ ನಾ ಹೇಗೆ ನಗಲಿ ಹೇಳು ಪೇಟೆಯ ಎಡಬಡದ ಸದ್ದಿರದ ಸಪ್ಪಳಗಳಲ್ಲಿ ನನ್ನ ಒಂದು ಅಂತಃಕರುಣ ಸ್ವರ ಕ್ಷೀಣವಾಗುತ್ತಾ, ಇದೇ ರೀತಿ ಸಾಗುವ ಪದ್ಯ ಕೊನೆಯಲ್ಲಿ ಒಂದು ನಾಟಕೀಯ ತಿರುವನ್ನು ಪಡೆದುಕೊಳ್ಳುತ್ತದೆ. ಕವಿ ತನ್ನ ವ್ಯಕ್ತಿತ್ವವನ್ನು ಎದುರಾಗಿಟ್ಟುಕೊಂಡು ಮುಖಾಮುಖಿಯಾಗಿ ಹೇಳುತ್ತಾನೆ. ಕೇಳುತ್ತಾನೆ. ಕೊನೆಯಲ್ಲಿ ತನ್ನ ಚಿಂತೆಗೆ ಕಳವಳಕ್ಕೆ ಬೇರೆ ಯಾರೂ ಅಲ್ಲ. ತಾನು ಮಾತ್ರ ನೆಮ್ಮದಿ ಸಮಾಧಾನದ ಉತ್ತರ ಕೊಡಬಲ್ಲೆ ಎಂಬ ಮನಸ್ಥಿತಿಗೆ ತಲುಪುತ್ತಾನೆ. ಆಗ ಎದುರಿನಲ್ಲಿ ಭಾವುಕ ಮಿತ್ರ ನಿಂತಿದ್ದಾನೆ. ಸಹೃದಯ ವಿಮರ್ಶಕ ಸ್ಪಂದಿಸುತ್ತಿದ್ದಾನೆ ಎಂದು ಕಲ್ಪಿಸಿಕೊಂಡು ಅವನಿಗೆ ಉತ್ತರ ಹೇಳುತ್ತಾನೆ.

ಏ ಉದಾಸಿ ಘನೇ ಕ್ಯೂಂ?

ಕ್ಯಾ ತುಮ್‌ಭೀ ಮೇರಿ ಡ್ಯುಪ್ಲಿಕೇಟ್ ಕಾಪಿ ಹೊ?

ತಬ್ ಸಾರೀ ಖುಷೀ ಯಹೀ ಹೈ

ಕೀ ತುಮ್ ಹಮ್ ಧಮ್ ಟಖಲೆ

ಏಕೆ ನಿನ್ನ ಮುಖದಲ್ಲಿ ಉದಾಸೀನತೆ ತುಂಬಿದೆ. ನೀನು ಕೂಡಾ ನನ್ನ ಪ್ರತಿರೂಪವೇ? ಹಾಗಿದ್ದ ಮೇಲೆ ನನಗೊಬ್ಬ ನಿನ್ನಂಥ ಸಂಗಾತಿ ಸಿಕ್ಕ ಎಂಬುದೇ ನನಗೇ ಮಹಾ ಸಂತೋಷ.

ಇಂಗ್ಲೀಷ್‌ನಿಂದ ಪಿ.ಬಿ. ಶೆಲ್ಲಿ ಕವಿಯ 'ಲವ್ ಫಿಲಾಸಫಿ' ಎಂಬ ಎಂದುಪದ್ಯವನ್ನು 'ಬಂಧನ' ಎಂಬ ಹೆಸರಿನಿಂದ ಅತ್ಯಂತ ಯಶಸ್ವೀಯಾಗಿ ಅನುವಾದಿಸಿದ ಕವನವೂ ಇಲ್ಲಿದೆ.

ಹಿಂದಿಯ ಖ್ಯಾತ ವಿಮರ್ಶಕ ಅಜಯ್‌ಕುಮಾರ್ ಅವರು ಹಿಂದಿಯ ಪ್ರಸಿದ್ಧ ಸಾಪ್ತಾಹಿಕವಾದ 'ಧರ್ಮಯುಗ' ಪತ್ರಿಕೆಯಲ್ಲಿ ಒಂದು ಲೇಖನವನ್ನು ಬರೆದು ಅದರಲ್ಲಿ ೧೯೬೨, ೬೩, ೬೪ ಈ ಮೂರು ವರ್ಷಗಳಲ್ಲಿ ಸಮಗ್ರ ಭಾರತದಲ್ಲಿ ಪ್ರಕಟವಾದ ಹಿಂದೀ ಕವನ ಸಂಕಲನಗಳನ್ನು ಒಟ್ಟಾರೆಯಾಗಿ ವಿಮರ್ಶಿಸಿ ಅವುಗಳಲ್ಲಿಯ ಅತ್ಯುತ್ತಮವಾದ ಇಪ್ಪತ್ತು ಸಂಕಲನಗಳನ್ನು ಹೆಸರಿಸಿದ್ದಾರೆ. ಈ ಇಪ್ಪತ್ತು ಸಂಕಲನಗಳಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟಿಯವರ 'ಸೈಲ್ ಔರ್ ಸಾಗರ್' ಸಂಕಲನದ ಸಾಗರ ಪದ್ಯಗಳನ್ನು ವಿಶ್ಲೇಷಿಸಿ ಉಲ್ಲೇಖಿಸಿದ್ದಾರೆ. ಇದು ಪಟ್ಟಣಶೆಟ್ಟರ ಹಿಂದೀ ಕಾವ್ಯದ ಶ್ರೇಷ್ಠತೆಯನ್ನು ಹೆಚ್ಚಿಸುವ ಅಂಶವಾಗಿದೆ.

**೩.೨.೨. ನಿಬಂಧ**

**೧. ಮೋಹನ್ ರಾಕೇಶ್ ಔರ್ ಗಿರೀಶ್ ಕಾರ್ನಾಡ್‌ಕೋ ನಾಟಕೊಂಕಾ ತುಲನಾತ್ಮಕ ಅಧ್ಯಯನ**

ಸಿದ್ಧಲಿಂಗಪಟ್ಟಣಶೆಟ್ಟರು ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಪ್ರಬಂಧ ಇದಾಗಿದೆ. ಮೈಸೂರು ವಿಶ್ವವಿದ್ಯಾಲಯದ ಹಿಂದೀ ವಿಭಾಗದ ಪ್ರಾಧ್ಯಾಪಕರಾದ ಡಾ.ಎಂ.ಎಸ್.ಕೃಷ್ಣಮೂರ್ತಿಯವರ ಮಾರ್ಗದರ್ಶನದಲ್ಲಿ ಈ ಸಂಶೋಧಾನಾ ಪ್ರಬಂಧವನ್ನು ೧೯೭೨ರ ಸೆಪ್ಟಂಬರ್ ತಿಂಗಳಿನಲ್ಲಿ ಸಲ್ಲಿಸಲಾಗಿದೆ.

ಹಿಂದೀ ಮತ್ತು ಕನ್ನಡದ ಇಬ್ಬರು ಆಧುನಿಕ ಶ್ರೇಷ್ಠ ನಾಟಕಕಾರರನ್ನು, ಅವರು ನಾಟಕ ಕ್ಷೇತ್ರಕ್ಕೆ ನೀಡಿದ ಕೊಡುಗೆಗಳನ್ನು ವಿಶ್ಲೇಷಣೆಗೆ ಬಳಪಡಿಸಲಾಗಿರುವ ಸುಮಾರು ೬೦೦ ಪುಟಗಳ ಈ ಬೃಹತ್ ಪ್ರಬಂಧವು ಮೈಸೂರು ವಿಶ್ವವಿದ್ಯಾಲಯಕ್ಕೆ ಸಲ್ಲಿಸಲಾದ ಸಂಶೋಧನಾ ಪ್ರಬಂಧಗಳಲ್ಲಿಯೇ ವಿಶಿಷ್ಟವಾದುದೆಂದು ಹೇಳಲಾಗಿದೆ. ಹಿಂದೀ ನಾಟಕಕಾರ ಮೋಹನ್ ರಾಕೇಶ್ ಅವರನ್ನು ಪಟ್ಟಣಶೆಟ್ಟಿಯವರು ಕನ್ನಡದ ಖ್ಯಾತ ನಾಟಕ ನಿರ್ದೇಶಕರಾದ ಬಿ.ವಿ. ಕಾರಾಂತರ ಮೂಲಕ ಪರಿಚಯ ಮಾಡಿಕೊಂಡಿದ್ದರು. ಗಿರೀಶ್ ಕಾರ್ನಾಡರು, ಪಟ್ಟಣಶೆಟ್ಟಿಯವರ ಒಡನಾಡಿ ಮಿತ್ರರಾಗಿದ್ದಾರೆ. ಈ ಪ್ರಬಂಧವನ್ನು ರಚಿಸುವ ಕಾಲಕ್ಕೆ ಮೋಹನ್ ರಾಕೇಶ್ ತೀರಿಹೋಗಿದ್ದರು. ಗಿರೀಶ್ ಕಾರ್ನಾಡರು ಇನ್ನೂ ಬರವಣಿಗೆ ನೆಡೆಸುತ್ತಲೇ ಇದ್ದಾರೆ. ರಾಕೇಶ್‌ರ ವ್ಯಕ್ತಿತ್ವ ಅವರ ಕಥೆ, ಕಾದಂಬರಿ, ಲಲಿತ ಪ್ರಬಂಧ, ವಿಮರ್ಶೆ, ನಾಟಕ, ಅನುವಾದ ಮುಂತಾದ ಕ್ಷೇತ್ರಗಳಲ್ಲಿ ವ್ಯಾಪಿಸಿದೆ. ಗಿರೀಶ್ ಕಾರ್ನಾಡರ ಸಂಪೂರ್ಣ ಪ್ರತಿಭೆ ನಾಟಕ ಕ್ಷೇತ್ರಕ್ಕೆ ಮೀಸಲಾಗಿದೆ. ರಾಕೇಶರ ನಾಟಕಗಳು ಸಂಖ್ಯೆಯಲ್ಲಿ ಕಡಿಮೆಯಿದ್ದರೂ, ಭಾರತೀಯ ಸಂಸ್ಕೃತಿ ಹಾಗೂ ಸಾಹಿತ್ಯ ಪ್ರಪಂಚದ ಪ್ರತಿನಿಧಿಗಳೆನಿಸಿವೆ. ಅವರ ಕೃತಿಗಳಲ್ಲಿ ಭಾರತದ ನಾಗರೀಕ ಜೀವನದ ಮಧ್ಯಮವರ್ಗದ ಸಮಸ್ಯೆಗಳು,

ಚಿತ್ರಿತಗೊಂಡಿವೆ. ಗಿರೀಶರ ನಾಟಕಗಳು ಪುರಾಣ, ಇತಿಹಾಸ, ಕಲ್ಪನೆಗಳ, ಮೂಲಕ ವರ್ತಮಾನ ಜೀವನದ ಪ್ರತಿಯೊಬ್ಬ ವ್ಯಕ್ತಿಯ ಮನಸ್ಸಿನ ನೋವು ದ್ವಂದ್ವ ಅರಿಯುವ ಪ್ರಯತ್ನವಿದೆ.

ಈ ಇಬ್ಬರ ನಾಟಕಕಾರರ ಎಲ್ಲಾ ನಾಟಕಗಳೂ ಪ್ರಖ್ಯಾತಿ ಪಡೆದಿವೆ. ಹಾಗೂ ಈಗಲೂ ವಿವಿಧ ಭಾಷೆಗಳಿಗೆ ಅನುವಾದಗೊಂಡು ರಂಗದ ಮೇಲೆ ಪ್ರಯೋಗಗೊಳ್ಳುತ್ತಲಿವೆ. ಇವರಿಬ್ಬರ ಸಮಗ್ರಸಾಹಿತ್ಯದ ಸಂಕ್ಷಿಪ್ತ ಪರಿಚಯದೊಂದಿಗೆ ಇವರ ನಾಟಕಗಳನ್ನು ಪೂರಕವಾಗಿ ಈ ಸಂಶೋಧನಾ ಪ್ರಬಂಧದಲ್ಲಿ ಚರ್ಚಿಸಲಾಗಿದೆ. ರಾಕೇಶರನ್ನು ಕುರಿತು ಹಿಂದಿಯಲ್ಲಿ ಸಾಕಷ್ಟು ಕೃತಿಗಳು ಪ್ರಕಟವಾಗಿವೆ. ಆದರೆ ರಾಕೇಶರ ನಿಧನಾ ನಂತರ ಅವರ ಆತ್ಮಕಥೆಯಿಂದ ಅನೇಕ ಉಲ್ಲೇಖಗಳನ್ನು, ಹೊಸ ಸುಳಿವುಗಳನ್ನು ಗುರುತಿಸಿ ರಾಕೇಶರ ಸಮಗ್ರ ನಾಟಕ ಸಾಹಿತ್ಯವನ್ನು ಮರು ಚಿಂತನೆಗೆ ಪುನರ್ ವಿಶ್ಲೇಷಣೆಗೆ ಒಳಪಡಿಸಲಾದ ಮೊದಲ ಕೃತಿ ಇದಾಗಿದೆ. ಹಾಗೆಯೇ ಗಿರೀಶ್ ಕಾರ್ನಾಡರ ಸಮಗ್ರ ಜೀವನ ಮತ್ತು ಸಾಹಿತ್ಯ ಮೊದಲ ಬಾರಿಗೆ ಇಲ್ಲಿ ಬಂದಿದೆ. ಅದುವರೆಗೆ ಕನ್ನಡದಲ್ಲಿ ಅವರ ಜೀವನ ಪರಿಚಯ ಇಷ್ಟೊಂದು ವಿಸ್ತೃತ ರೀತಿಯಲ್ಲಿ ಬಂದಿರಲಿಲ್ಲ. ಕಾರ್ನಾಡರ ನಾಟಕಗಳನ್ನು ವಿಶ್ಲೇಷಣೆಗೆ ಒಳಪಡಿಸುವುದರ ಜೊತೆಗೆ ಅವರ ಕೆಲವು ಲೇಖನಗಳನ್ನು ಪ್ರಕಟಿತ ಹಾಗೂ ಅಪ್ರಕಟಿತ ಸಾಹಿತ್ಯವನ್ನು ಸಹ ಇಲ್ಲಿ ಮೊದಲ ಬಾರಿಗೆ ಪರಿಚಯಿಸಲಾಗಿದೆ. ಕಾರ್ನಾಡರನ್ನು ಕುರಿತು ಅಧ್ಯಯನ ಮಾಡುವ ಯಾವುದೇ ಭಾಷೆಯ ಅಭ್ಯಾಸಿಗಳಿಗೆ ನೆರವಾಗುವ ಅನೇಕ ಮಾಹಿತಿಗಳು ಇಲ್ಲಿವೆ.

ಈ ಸಂಶೋಧನಾ ಪ್ರಬಂಧದ ಮೊದಲ ಅಧ್ಯಯನದಲ್ಲಿ ಸಮಗ್ರವಾಗಿ, ಸಂಕ್ಷಿಪ್ತವಾಗಿ ಭಾರತೀಯ ನಾಟಕದ ಐತಿಹಾಸಿಕ ಹಿನ್ನೆಲೆ, ನೀಡಲಾಗಿದೆ. ಸಂಸ್ಕೃತದ ಅಶ್ವಘೋಷ, ಭಾಸ, ಶೂದ್ರಕ, ಕಾಳಿದಾಸ, ವಿಶಾಖದತ್ತ, ಭವಭೂತಿ, ಹರ್ಷವರ್ಧನ, ಭಟ್ಟನಾರಾಯಣ, ಮುಂತಾದವರ ಕೊಡುಗೆಯನ್ನು ಚರ್ಚಿಸಲಾಗಿದೆ. ಸಮಗ್ರ ಭಾರತದ ನಂತರದ ದಿನಗಳಲ್ಲಿ ಬಂದ ಜನಪದ ನಾಟಕಗಳ ಬೆಳವಣಿಗೆಯನ್ನು ಚರ್ಚಿಸುತ್ತಾ, ಹಿಂದಿಯ 'ಲೋಕನಾಟ್ಯ' (ಜಾನಪದ ರಂಗಭೂಮಿ) ಮತ್ತು ಕನ್ನಡ ಜಾನಪದ ನಾಟಕಗಳನ್ನು ಪರಿಚಯಿಸಲಾಗಿದೆ, ಅದರ ನಂತರ ಹಿಂದೀ ಮತ್ತು ಕನ್ನಡ ನಾಟಕಗಳ ಸಂಕ್ಷಿಪ್ತ ಪರಿಚಯವಿದೆ.

ಎರಡನೆಯ ಅಧ್ಯಾಯನದಲ್ಲಿ ಆಧುನಿಕ ರಂಗಮಂಚ ಕುರಿತು ಬರೆಯಲಾಗಿದೆ. ಸಂಸ್ಕೃತ ರಂಗಭೂಮಿಯ ಪರಿಚಯ ನೀಡುತ್ತಾ ಬಾಂಗ್ಲಾ, ಮರಾಠೀ, ಗುಜರಾತಿ, ಮುಂತಾದ ಭಾಷೆಗಳ ರಂಗಭೂಮಿಯ ಜೊತೆಗೆ ಪಾರ್ಸಿ, ಹಿಂದೀ ರಂಗಭೂಮಿಯನ್ನು ಹಾಗೂ ಮುಂಬೈಯಿಂದ ಸಂಚಾಲಿತಗೊಂಡು ಭಾರತವನ್ನೆಲ್ಲಾ ಸುತ್ತಿದ 'ಪೃಥ್ವೀ ಥೇಟರ್ಸ್' ಕೊಡುಗೆಯನ್ನು ಹಾಗೂ ಕನ್ನಡ ರಂಗಭೂಮಿಯ ವಿವರ ಕೊಡಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಮೋಹನ್ ರಾಕೇಶರ ವ್ಯಕ್ತಿತ್ವ ಹಾಗೂ ಸಮಗ್ರ ಲೇಖನಗಳನ್ನು ಕುರಿತು ಹೇಳಲಾಗಿದೆ. ರಾಕೇಶರ ಡೈರಿಯ ಪ್ರಕಟಣೆಯ ನಂತರ ಅನೇಕ ಹೊಸ ವಿವರಣೆಗಳು ಸಿಕ್ಕದ್ದು, ಅವುಗಳ ಹಿನ್ನೆಲೆಯಲ್ಲಿ ರಾಕೇಶರ ಸಂಪೂರ್ಣ ಸಾಹಿತ್ಯವನ್ನು ಪುನರ್ ಪರಿಶೀಲನೆಗೆ ಒಳಪಡಿಸಲಾಗಿದೆ. ರಾಕೇಶರ ಕಥೆ, ಕಾದಂಬರಿ, ನಾಟಕ ಮುಂತಾದ ಎಲ್ಲದರಲ್ಲಿಯೂ ಎದ್ದು ಕಾಣುವ ಅವರ ವೈಯುಕ್ತಿಕ ಬದುಕಿನ ಅನೇಕ ಛಾಯೆಗಳನ್ನು ಗುರುತಿಸಲಾಗಿದೆ.

ನಾಲ್ಕನೆಯ ಅಧ್ಯಾಯದಲ್ಲಿ ಗಿರೀಶ್ ಕಾರ್ನಾಡರ ವ್ಯಕ್ತಿತ್ವ ಹಾಗೂ ಸಾಹಿತ್ಯದ ವಿಸ್ತೃತ ಪರಿಚಯ ನೀಡಲಾಗಿದೆ. ಪಟ್ಟಣಶೆಟ್ಟರು, ಗಿರೀಶ್ ಕಾರ್ನಾಡರು ಧಾರವಾಡದ ಬಾಸಲ್ ಮಿಷಿನ್ ಹೈಸ್ಕೂಲ್ ಮತ್ತು ಕರ್ನಾಟಕ ಕಾಲೇಜು ಧಾರವಾಡಗಳಲ್ಲಿ ಒಂದೆರೆಡು ವರ್ಷ ಹಿಂದೆ ಮುಂದೆ ಒಟ್ಟಿಗೆ ಓದಿದ ಓಡನಾಡಿಗಳು. ಸ್ನೇಹಿತರಾದ ಕಾರಣ ಬಾಲ್ಯದಿನಗಳಿಂದ ಕಾರ್ನಾಡರ ಬದುಕನ್ನು ಬಹಳ ಹತ್ತಿರದಿಂದ ಕಂಡಿದ್ದಾರೆ. ಅಂತಹ ಅನೇಕ ವಿವರಣೆಗಳನ್ನು ಈ ಭಾಗದಲ್ಲಿ ನಮೂದಿಸಲಾಗಿದೆ. ಈ ವಿವರಣೆಗಳು ಕಾರ್ನಾಡರ ನಾಟಕಗಳಲ್ಲಿ ಸಾಹಿತ್ಯ ರೂಪ ಪಡೆದುದನ್ನು ಸಹಜವಾಗಿ ಗಮನಿಸಬಹುದಾಗಿದೆ.

ಐದನೆಯ ಅಧ್ಯಾಯದಲ್ಲಿ ಮೋಹನ್ ರಾಕೇಶರ ಪೂರ್ಣ ಪ್ರಮಾಣದ ನಾಲ್ಕು ನಾಟಕಗಳನ್ನು ಹಾಗೂ ಎರಡು ಸಂಕಲನಗಳಲ್ಲಿ ಪ್ರಕಟವಾಗಿರುವ ಏಕಾಂಕ, ಬೀಜನಾಟಕಗಳನ್ನು, ಧ್ವನಿನಾಟಕಗಳನ್ನು ವಿಶ್ಲೇಷಿಸಲಾಗಿದೆ. ರಾಕೇಶರ 'ಆಷಾಢ್‌ಕೆ ಎಕ್ ದಿನ್' ಲಹರೊಂ ಕೆ ರಾಜಹಂಸ' ಮತ್ತು 'ಅದೋ ಅಧೋರೇ' ಎಂಬ ನಾಟಕಗಳನ್ನು ಸಿದ್ದಲಿಂಗ ಪಟ್ಟಣಶೆಟ್ಟರು ಬಹಳ ಮೊದಲೇ ಕನ್ನಡಕ್ಕೆ ಅನುವಾದಿಸಿ  ಕನ್ನಡ ರಂಗ ಭೂಮಿಗೆ ರಾಕೇಶರನ್ನು ಪರಿಚಯಿಸಿದ್ದರು. ಈಗ ಈ ನಾಟಕಗಳನ್ನು ಇನ್ನಷ್ಟು ಹೊಸ ಬೆಳಕಿನಲ್ಲಿ ವಿಶ್ಲೇಷಿಸುತ್ತಾ ರಾಕೇಶರ ನಿಧನ ನಂತರ ಪ್ರಕಟವಾದ 'ಪೈರ್ ಥಲೇಕಿ ಜಮೀನ್' (ಕಾಲಕೆಳಗಿನ ನೆಲ) ಎಂಬ ನಾಟಕಗಳನ್ನು ವಿಶ್ಲೇಷಣಾತ್ಮಕವಾಗಿ ಪರಿಚಯಿಸಿದ್ದಾರೆ. ಇವುಗಳ ಜೊತೆಗೆ 'ಅಂಡೇಕೆ ಚಿಲ್ಕೇ' 'ಅನ್ಯೇಕಾಂಕಿ' 'ತಥಾಬೀಜ್ ನಾಟಕ' 'ರಾತ್ ಬೀತ್‌ನೇ ತಕ್ ತಥಾ' 'ಅನ್ಯಾ ಧ್ವನಿ ನಾಟಕ್' ಎಂಬ ರೇಡಿಯೋ ನಾಟಕಗಳನ್ನು ಕುರಿತು ಬರೆಯುತ್ತಾ ರಾಕೇಶರ ನಾಟಕ ಲೇಖನಗಳನ್ನು ಹಾಗೂ ಪೂರ್ಣಾವಧಿ ನಾಟಕಗಳ ಹಿನ್ನೆಲೆಯಾಗಿರುವ ಕಿರು ನಾಟಕಗಳನ್ನು ಮುಕ್ತವಾಗಿ ಚರ್ಚಿಸಲಾಗಿದೆ.

ಆರನೆಯ ಅಧ್ಯಾಯನದಲ್ಲಿ ಗಿರೀಶ್ ಕಾರ್ನಾಡರು ಪ್ರಕಟಿಸಿರುವರ ಎಂಟು ನಾಟಕಗಳ ವಿಸ್ತೃತ ವಿಶ್ಲೇಷಣೆಯನ್ನು ಒಂದೇ ಕಡೆಗೆ ಇಲ್ಲಿ ನೀಡಲಾಗಿದೆ. ಇಂಗ್ಲೀಷ್, ಬಾಂಗ್ಲಾ, ಮರಾಠೀ, ಹಿಂದೀ, ಮುಂತಾದ ಭಾಷೆಗಳಲ್ಲಿ ಗಿರೀಶ್ ಕಾರ್ನಾಡರ ನಾಟಕಗಳನ್ನು ಕುರಿತು ಬರೆಯಲ್ಪಟ್ಟ ವಿಮರ್ಶೆಗಳನ್ನು ಲೇಖನಗಳನ್ನು ರಂಗ ಪ್ರಯೋಗದ ವಿವರಗಳನ್ನು ಹೇಳಲಾಗಿದೆ. ಗಿರೀಶ್ ಕಾರ್ನಾಡರ ಸಾಮಿಪ್ಯದಿಂದಾಗಿ ಅವರ ಮನೆಯಲ್ಲಿದ್ದ ಲೇಖನ ಇತ್ಯಾದಿಗಳ ನೆರವು ಪಡೆಯಲಾಗಿದೆ. ಕಾರ್ನಾಡರ ಪ್ರಮುಖ ನಾಟಕಗಳಾದ ಯಯಾತಿ, ತುಘಲಕ್, ಮಾನಿಪಥ, ಹಯವದನ, ಅಂಜು ಮಲ್ಲಿಗೆ, ಹಿಟ್ಟಿನ ಹುಂಜ, ನಾಗಮಂಡಲ, ಮತ್ತು ತಲೆದಂಡ ನಾಟಕಗಳನ್ನು ಇಲ್ಲಿ ಚರ್ಚಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ರಂಗಭೂಮಿ ಮತ್ತು ತಮ್ಮ ಹಾಗೂ ಇತರ ನಾಟಕಗಳನ್ನು ಕುರಿತು ರಾಕೇಶರು ಮತ್ತು ಕಾರ್ನಾಡರು ಬರೆದಿರುವ ಅನೇಕ ಲೇಖನಗಳನ್ನು ಚರ್ಚಿಸಲಾಗಿದೆ. ನಾಟಕ ರಚನೆಯ ಜೊತೆಗೆ ಕಾರ್ನಾಡರು ಪಾತ್ರವಹಿಸಿದ ನಾಟಕಗಳು ಸಿದ್ಧಪಡಿಸಿದ ಚಲನಚಿತ್ರ ಮತ್ತು ಟೆಲಿಚಿತ್ರಗಳ ವಿವರಣೆ ಇಲ್ಲಿದೆ.

ಎಂಟನೆಯ ಅಧ್ಯಾಯದಲ್ಲಿ ರಾಕೇಶ ಮತ್ತು ಕಾರ್ನಾಡರ ಸಮಗ್ರ ಕೊಡುಗೆಯನ್ನು ಹಾಗೂ ಅವರ ವಿಚಾರ ಚಿಂತನೆಗಳನ್ನು ತೌಲನಿಕ ದೃಷ್ಟಿಯಿಂದ ಚರ್ಚಿಸಲಾಗಿದೆ.

ಒಂಭತ್ತನೆಯ ಅಧ್ಯಾಯವು ಉಪಸಂಹಾರ ರೂಪದಲ್ಲಿದ್ದು; ಇವರ ಸಾಹಿತ್ಯಿಕ ಕೊಡುಗೆಯನ್ನು ಚರ್ಚಿಸುತ್ತಾ ಸಾಹಿತ್ಯದ ವಿವಿಧ ಪ್ರಕಾರಗಳ ರಚನೆಗಳಲ್ಲಿ ತೊಡಗಿಸಿಕೊಂಡ ರಾಕೇಶರ ವ್ಯಕ್ತಿತ್ವ ವೈವಿಧ್ಯಮಯವಾದರೆ, ಕಾರ್ನಾಡರು

ತಮ್ಮ ಅಭಿವ್ಯಕ್ತಿಯ ಮಾಧ್ಯಮವನ್ನಾಗಿ ನಾಟಕವನ್ನು ಆಯ್ದು ಕೊಂಡರು. ಅವರ ವ್ಯಕ್ತಿತ್ವ, ವೈಚಾರಿಕ ನಿಲುವುಗಳು ಚಿಂತನೆಗಳನ್ನು ಅವರ ನಾಟಕಗಳಲ್ಲಿ ಕಾಣಬಹುದು ಎಂದು ಪಟ್ಟಣಶೆಟ್ಟರು ಹೇಳುತ್ತಾರೆ.

ಈ ಕೃತಿಯ ರಚನೆಗಾಗಿ ಕನ್ನಡ, ಹಿಂದೀ, ಸಂಸ್ಕೃತ, ಇಂಗ್ಲೀಷ್, ಭಾಷೆಗಳಲ್ಲಿದೆ. ಮರಾಠೀ ಬಾಂಗ್ಲಾ, ಗುಜರಾತೀ, ಮುಂತಾದ ಭಾಷೆಗಳ ಪುಸ್ತಕ ಪತ್ರಿಕೆಗಳ ಸಹಾಯ ಪಡೆಯಲಾಗಿದೆ.

**೩.೨.೩. ವಿಮರ್ಶೆ**

**೧. ಆಧುನಿಕ್ ಹಿಂದೀ ಔರ್ ಕನ್ನಡ ಕಾವ್ಯ**

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಈ ಕೃತಿಯಲ್ಲಿ ಹಿಂದೀ ಮತ್ತು ಕನ್ನಡ ಸಾಹಿತ್ಯದ ಆಧುನಿಕ ಕಾವ್ಯಗಳನ್ನು ಕುರಿತು ತುಲನಾತ್ಮಕವಾದ ವಿಮರ್ಶೆಮಾಡಿದ್ದಾರೆ. ಈ ಕೃತಿಯ ೧೯೭೭ರಲ್ಲಿ ಧಾರವಾಡದ ಗಿರಿಜಾ ಪ್ರಕಾಶನದಿಂದ ಪ್ರಕಟಗೊಂಡು, ೧೯೮೦ರಲ್ಲಿ ಎರಡನೆ ಮುದ್ರಣ ಕಂಡಿದೆ.

ಈ ಕೃತಿಯಲ್ಲಿರುವ ಏಳು ಲೇಖನಗಳು ಸಂಶೋಧನಾ ರೀತಿಯ ತೌಲನಿಕ ವಿಮರ್ಶೆಯಿಂದ ಕೂಡಿವೆ. ಸಮಗ್ರ ಆಧುನಿಕ ಹಿಂದೀ ಕನ್ನಡ ಕಾವ್ಯವನ್ನು ಲಕ್ಷದಲ್ಲಿರಿಸಿಕೊಂಡು ರಚಿತವಾದ ಈ ಅಧ್ಯಾಯಗಳು ಕ್ರಮವಾಗಿ ಈ ರೀತಿಯಾಗಿವೆ.

೧. ಹಿಂದೀ ಮತ್ತು ಕನ್ನಡ ಕಾವ್ಯಗಳ ಮೇಲೆ ಕೆಲವು ಪ್ರಭಾವಗಳು

೨. ತೌಲನಿಕ ಅಧ್ಯಯನದ ವಿಧಾನಗಳು

೩. ಹಿಂದೀ ಮತ್ತು ಕನ್ನಡ ಮಹಾಕಾವ್ಯ ಮತ್ತು ಖಂಡಕಾವ್ಯ

೪. ಹಿಂದಿಯ ಗೀತಕಾವ್ಯ ಮತ್ತು ಕನ್ನಡದ ಭಾವಗೀತೆಗಳು

೫. ಹಿಂದಿಯ ನಯೀ ಕವಿತಾ ಮತ್ತು ಕನ್ನಡ ನವ್ಯಕಾವ್ಯ

೬. ಹಿಂದೀ ಕವಿ ಪಂತ್ ಮತ್ತು ಕನ್ನಡ ಕವಿ ಬೇಂದ್ರೆ

೭. ಹಿಂದಿಯ ಜಯಶಂಕರ್‌ಪ್ರಸಾದ ಮತ್ತು ಕನ್ನಡದ ಕುವೆಂಪು

ಹಿಂದೀ ಮತ್ತು ಕನ್ನಡ ಸಾಹಿತ್ಯದ ತೌಲನಿಕ ವಿಶ್ಲೇಷಣೆ ಈ ಕೃತಿಯಲ್ಲಿ ಮಾಡಲಾಗಿದೆ. ಲೇಖಕರು ಹಲವಾರು ಉದಾಹರಣೆಗಳೊಂದಿಗೆ ಅನೇಕ ವಿಷಯಗಳನ್ನು ಇಲ್ಲಿ ಚರ್ಚಿಸಿದ್ದಾರೆ. ಪುಸ್ತಕದ ಆರಂಭದ ತಮ್ಮ ಮಾತಿನಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟರು ಈ ಕೃತಿ ರಚನೆಯ ಹಿನ್ನೆಲೆಯನ್ನು ವಿವರಿಸಿದ್ದಾರೆ. ತಾವು ಸ್ವತಃ ಒಬ್ಬ ವಿದ್ಯಾರ್ಥಿಯಂತೆ. ಹೀಂದಿ ಮತ್ತು ಕನ್ನಡದ ಅನೇಕ ವಿಷಯಗಳನ್ನು ತಿಳಿಯಲು ಯತ್ನಿಸಿ ಬರೆದ ಲೇಖನಗಳು ಇವು ಎಂದಿದ್ದಾರೆ. ಧಾರವಾಡದ ಕರ್ನಾಟಕ ಕಾಲೇಜಿನ ವಿದ್ಯಾರ್ಥಿಗಳಿಗೆ ಪಾಠಮಾಡುವಾಗ ಬಿ.ಎ. ಕೊನೆಯ ವರ್ಷದ ವಿದ್ಯಾರ್ಥಿಗಳಿಗೆ ಕಲಿಸಿದ ಮತ್ತು ಬರೆಸಿದ ಲೇಖನಗಳು ಇವಾಗಿವೆ. ಆಗ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಹಿಂದೀ ಪ್ರಧಾನ ವಿಷಯವನ್ನು ಕಲಿಯುವ ವಿದ್ಯಾರ್ಥಿಗಳಿಗೆ ನೂರು ಅಂಕದ ಒಂದು ಪತ್ರಿಕೆ ಅನಿವಾರ್ಯವಾಗಿತ್ತು. ಆಗ ಹಿಂದೀ

ಕನ್ನಡ ಎರಡನ್ನೂ ಚೆನ್ನಾಗಿ ತಿಳಿದಿದ್ದ ಪಟ್ಟಣಶೆಟ್ಟಿಯವರು ಬರೆದ ಈ ಲೇಖನಗಳು ಅತ್ಯಂತ ಮೌಲಿಖವಾಗಿವೆ. ಹಲವಾರು ವರ್ಷ ಈ ಪುಸ್ತಕವು ಕರ್ನಾಟಕ ಮತ್ತು ಮೈಸೂರು ವಿಶ್ವವಿದ್ಯಾಲಯಗಳ ಪಠ್ಯಮಾಡಿತ್ತು. ಕನ್ನಡದ ಬಗ್ಗೆ ಅಭಿಮಾನವಿದ್ದರೂ ಇದೊಂದು ತೌಲನಿಕ ಅಧ್ಯಯನವಾದ್ದರಿಂದ ಎರಡೂ ಭಾಷೆಗಳ ಸಾಹಿತ್ಯ, ಪ್ರಕಾರ, ಪ್ರವೃತ್ತಿಗಳು ಮತ್ತು ಸಾಹಿತಿಗಳ ಬಗ್ಗೆ ನೇರ ಹಾಗೂ ನಿಷ್ಠುರ ಅಭಿಪ್ರಾಯಗಳನ್ನು ಪಟ್ಟಣಶೆಟ್ಟಿಯವರು ಇಲ್ಲಿ ವ್ಯಕ್ತಪಡಿಸಿದ್ದಾರೆ.

ಆರಂಭದ ಮಾತಿನಲ್ಲಿ ಅವರ ಕೆಲವು ನೇರ ಪ್ರಶ್ನೆಗಳು ಉಲ್ಲೇಖನೀಯವಾಗಿವೆ. ''ಹಿಂದಿಯೇತರ ಭಾಷೆಯ ಜನರು ಹಿಂದೀ ಭಾಷೆಯನ್ನು ಕಲಿಯಬೇಕು. ಹಿಂದೀ ಸಾಹಿತ್ಯವನ್ನು ಓದಬೇಕು ಎಂಬುದು ಹಿಂದೀ ಭಾಷಿಕ ಪ್ರದೇಶದ ಸಾಹಿತಿ ಮತ್ತು ವಿದ್ವಾಂಸರ ಆಪೇಕ್ಷೆ. ಆದರೆ ಹೀಗೆ ಹೇಳುವ ಎಷ್ಟು ಜನ ಹಿಂದೀ ಭಾಷಿಕ ಸಾಹಿತಿಗಳು ದಕ್ಷಿಣ ಭಾರತದ ಭಾಷೆ ಸಾಹಿತ್ಯವನ್ನು ತಿಳಿದಿದ್ದಾರೆ? ಅಥವಾ ತಿಳಿಯುವ ಕನಿಷ್ಠ ಪ್ರಯತ್ನ ಮಾಡಿದ್ದಾರೆ? ಇಂಥವರು ದಕ್ಷಿಣದ ಭಾಷೆಗಳನ್ನು ಕಲಿತು ಅವುಗಳ ಸಾಹಿತ್ಯವನ್ನು ಅಧ್ಯಯನ ಮಾಡಿ ಆ ಬಗ್ಗೆ ವಿಚಾರಗಳನ್ನು ವ್ಯಕ್ತಪಡಿಸುವುದಾಗಲೀ ಅಥವಾ ತಮ್ಮ ಭಾಷೆಯೊಂದಿಗೆ ದಕ್ಷಿಣ ಭಾಷೆಗಳ ಸಾಹಿತ್ಯವನ್ನು ತೌಲನಿಕವಾಗಿ ನೋಡುವ ಪ್ರಯತ್ನವನ್ನಾಗಲೀ ಈವರೆಗೂ ಮಾಡಲಿಲ್ಲ. ಉತ್ತರ ಭಾರತದ ಯಾವ ವಿಶ್ವವಿದ್ಯಾಲಯಗಳಲ್ಲಿ ಇಂತಹ ಪ್ರಯತ್ನ ಕೂಡಾ ನಡೆಯಲಿಲ್ಲ.''[೨] ಇಷ್ಟು ದಿಟ್ಟವಾದ ಆ ಕಾಲದ ಪ್ರಶ್ನೆಗಳಿಗೆ ಈವರೆಗೂ ಯಾವ ಹಿಂದೀ ಸಾಹಿತಿಗಳೂ ಮತ್ತು ಉತ್ತರದ ವಿಶ್ವವಿದ್ಯಾಲಯಗಳೂ ಉತ್ತರ ನೀಡಿಲ್ಲ. ಕನ್ನಡ ಮತ್ತು ಹಿಂದೀ ಭಾಷೆ ಬಲ್ಲ ವಿದ್ವಾಂಸರು ಇಂತಹ ಕೃತಿಯನ್ನ ರಚಿಸಬಲ್ಲರು ಎಂಬುದೇ ಈ ಕೃತಿಯ ಹೆಗ್ಗಳಿಕೆಯಾಗಿದೆ.

ಮೊದಲನೆಯ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಎರಡೂ ಭಾಷೆಗಳ ಸಾಹಿತ್ಯದ ಮೇಲೆ ಪ್ರಭಾವ ಬೀರಿರುವ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಅಂಶಗಳ ವಿವರಣೆಯಿದೆ. ಕನ್ನಡ ಸಾಹಿತ್ಯವು, ಹಿಂದೀ ಸಾಹಿತ್ಯಕ್ಕಿಂತ ಐದುನೂರು ವರ್ಷಗಳಷ್ಟು ಪ್ರಾಚೀನವಾದುದರಿಂದ ಅದರ ಹಿನ್ನಲೆ ಹೆಚ್ಚು ಸುಭದ್ರವಾಗಿದೆ. ಉತ್ತರ ಭಾರತದಲ್ಲಿನ ರಾಜಕೀಯ ಹಾಗೂ ನೈಸರ್ಗಿಕ ಪಲ್ಲಟಗಳಿಂದಾಗಿ ಮೇಲಿಂದ ಮೇಲೆ ಜನಸಾಮಾನ್ಯರು ಸ್ಥಿತ್ಯಂತರಗಳಿಗೆ ಒಳಗಾಗುತ್ತಿದ್ದರು. ಇದರ ಪರಿಣಾಮ ಸಾಹಿತ್ಯದ ಮೇಲೆಯೂ ಆಯಿತು ಎಂಬುದನ್ನು ಪಟ್ಟಣಶೆಟ್ಟಿಯು ಇಲ್ಲಿ ವಿವರಿಸಿದ್ದಾರೆ. ಕನ್ನಡ ಸಾಹಿತ್ಯ ರಾಜಾಶ್ರಯದಿಂದ ಆರಂಭಗೊಳ್ಳುತ್ತದೆ. ಎರಡೂ ಭಾಷೆಗಳಲ್ಲಿನ ಶರಣರ, ದಾಸರ, ಭಕ್ತಿ ಸಾಹಿತ್ಯ ನಾಥ ಪಂಥ, ಮತ್ತು ಸಿದ್ಧಪಂಥದ ಯೋಗ, ಸಾಹಿತ್ಯಗಳು ವೈದಿಕ ಪಂಥಕ್ಕೆ ಅಭಿಮುಖವಾಗಿ ಮೂಡಿಬಂದಿವೆ. ವೀರತ್ವ ಮತ್ತು ಧಾರ್ಮಿಕತೆಗಳಿಂದ ತುಂಬಿರುವ ಎರಡೂ ಭಾಷೆಯ ಪ್ರಾಚೀನ ಸಾಹಿತ್ಯಗಳು ಜನಸಾಮಾನ್ಯರ ಬದಕನ್ನು ಬಿಂಬಿಸುವಲ್ಲಿ ನಿರ್ಲಕ್ಷ್ಯ ಮಾಡಿವೆ ಎಂದಿದ್ದಾರೆ. ಆಧುನಿಕ ಕಾವ್ಯಗಳ ಮೇಲೆ ಇಂಗ್ಲೀಷ್ ಭಾಷೆ ಸಾಹಿತ್ಯದ ಪ್ರಭಾವ, ರಮ್ಯ ಕಾವ್ಯದ ಮೇಲೆ ರವೀಂದ್ರನಾಥ ಟ್ಯಾಗೋರರ ಗೀತಾಂಜಲಿಯ ಪ್ರಭಾವ, ಮಹಾತ್ಮ ಗಾಂಧೀಜಿಯವರ ಸ್ವಾತಂತ್ರ ಆಂದೋಲನದ ಪ್ರಭಾವ, ಹೊಸರೀತಿಯ ಕಾವ್ಯಶೈಲಿಯ ಮತ್ತು ಭಾಷೆಯ ಪ್ರಯೋಗ, ಪ್ರಗತಿಶೀಲ ಸಾಹಿತ್ಯ, ಮತ್ತು ನವ್ಯಕಾವ್ಯದ ನೇರ ಪ್ರಭಾವ, ಇವುಗಳ ಹಿನ್ನೆಲೆಯಲ್ಲಿ ಎರಡೂ ಭಾಷೆಗಳ ಕಾವ್ಯಗಳನ್ನು ಅಧ್ಯಯನ ಮಾಡುವ ಅಗತ್ಯಗಳನ್ನು ಹೇಳಿದ್ದಾರೆ.

ಎರಡನೆಯ ಅಧ್ಯಾಯದಲ್ಲಿ ತೌಲನಿಕ ಅಧ್ಯಯನಕ್ಕೆ ತಾವು ಆಯ್ದುಕೊಂಡ ಐದು ಮಾರ್ಗಗಳನ್ನು ವಿವರಿಸಿದ್ದಾರೆ. ಅವು ಯಾವುವೆಂದರೆ,

೧. ಕಾವ್ಯದ ಆಕಾರದ ದೃಷ್ಟಿಯಿಂದ

೨. ವಿಷಯ ಮತ್ತು ಪ್ರವೃತ್ತಿಗಳ ದೃಷ್ಟಿಯಿಂದ

೩. ಕಾವ್ಯಶಿಲ್ಪದ ದೃಷ್ಟಿಯಿಂದ

೪. ಕವಿಗಳ ಕೃತಿಗಳನ್ನು ವಿಶ್ಲೇಷಿಸುವುದರ ಮೂಲಕ

೫. ವಿವಿಧ ಕವಿಗಳು ರಚಿಸಿದ ಏಕರೂಪದ, ಏಕವಿಷಯದ ಕೃತಿಗಳ ತೌಲನಿಕ ಅಧ್ಯಯನ.

ಹೀಗೆ ಸಮಗ್ರ ಆಧುನಿಕ ಕಾವ್ಯವನ್ನು ವಿಶ್ಲೇಷಣೆಗೆ ಒಳಪಡಿಸಬಹುದು ಎಂದಿದ್ದಾರೆ.

ಮೂರನೆಯ ಅಧ್ಯಾಯದಲ್ಲಿ ಹಿಂದೀ ಮತ್ತು ಕನ್ನಡದ ಪ್ರಮುಖ ಕವಿಗಳ ಮಹಾಕಾವ್ಯ ಮತ್ತು ಖಂಡ ಕಾವ್ಯಗಳನ್ನು ಕುರಿತು ಹೇಳಲಾಗಿದೆ. ಹಿಂದೀ ಮತ್ತು ಕನ್ನಡ ಎರಡೂ ಭಾಷೆಗಳಲ್ಲಿ ವಿವಿಧ ವಿಷಯಗಳನ್ನೊಳಗೊಂಡ ಮಹಾಕಾವ್ಯಗಳು ರಚಿತಗೊಂಡಿದ್ದರೂ, ಮುಖ್ಯವಾಗಿ ರಾಮಾಯಣದ ರಾಮ ಮತ್ತು ಮಹಾಭಾರತದ ಕೃಷ್ಣರನ್ನು ಕೇಂದ್ರವಾಗಿಟ್ಟುಕೊಂಡ ರಚನೆಗಳೇ ಹೆಚ್ಚಾಗಿವೆ. ಹಿಂದಿಯ ಮಹಾಕಾವ್ಯ ಚಂದ ಬರದಾಯಿಯ 'ಪೃಥ್ವಿರಾಜ್ ರಾಸೋ'ವಿನಿಂದ ಆರಂಭವಾಗುತ್ತದೆ. ಹಿಂದಿಯ ಪುರಾತನ ಸಾಹಿತ್ಯದಲ್ಲಿ ಮಹಾಕಾವ್ಯಗಳ ರಚನೆಯಾದುದು ಕಡಿಮೆ. ಹಾಗೆ ಹೋಲಿಸಿದರೆ ಹಳಗನ್ನಡದ ಸಾಹಿತ್ಯವೆಲ್ಲಾ ಮಹಾಕಾವ್ಯಗಳಿಂದಲೇ ತುಂಬಿದೆ. ಹಿಂದಿಯಲ್ಲಿ ಅತಿ ಹೆಚ್ಚು ಗೌರವವನ್ನು ಪಡೆದ ಪ್ರಸಿದ್ಧ ಕಾವ್ಯವೆಂದರೆ 'ರಾಮಚರಿತಮಾನಸ' ಈ ಹಿಂದೀ ಕೃತಿಯ ರಾಮ ಜನರ ಹತ್ತಿರಕ್ಕೆ ಬಂದಷ್ಟು ಕುವೆಂಪು ಅವರ ರಾಮ ಬರಲಿಲ್ಲ. ಹಿಂದಿಯಲ್ಲಿ 'ಕಾಮಾಯಿನಿ' ಮೇರು ಕೃತಿಯಾದರೆ ಕನ್ನಡದಲ್ಲಿ 'ಶ್ರೀ ರಾಮಾಯಣದರ್ಶನಂ' ಆಗಿದೆ. ಮೈಥಲೀ ಶರಣಗುಪ್ತರ ರಾಮಚರಿತಮಾನಸದ ವರ್ಣನೆಯಲ್ಲಿ ಸರಳತೆಯಿದ್ದರೆ. ಕುವೆಂಪು ಅವರ ವರ್ಣನೆಯಲ್ಲಿ ಭವ್ಯತೆಯಿದೆ ಎಂದು ಹೇಳಿದ್ದಾರೆ. ಹಿಂದಿಯ ಮೈಥಲೀಕರಣ ಗುಪ್ತ, ಹರಿಹೌದ, ರಾಮ್ ನರೇಶ್ ತ್ರಿಪಾಠಿ, ಜಯಶಂಕರ್‌ಪ್ರಸಾದ್, ದ್ವಾರಕಾಪ್ರಸಾದ್ ಮಿಶ್ರ, ದಿನಕರ್ ಮುಂತಾದವರ ಪ್ರಬಂಧ ಕಾವ್ಯಗಳನ್ನು ವಿವರಿಸಿದ್ದಾರೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹಿಂದೀ ಸಾಹಿತ್ಯಕ್ಕೆ ಹೋಲಿಸಿದರೆ ಇಂತಹ ಮಹಾಕಾವ್ಯಗಳ ರಚನೆ ತೀರಾ ಕಡಿಮೆಯೆಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

ನಾಲ್ಕನೇ ಅಧ್ಯಾಯದಲ್ಲಿ ಹಿಂದೀ ಮತ್ತು ಕನ್ನಡದ ಭಾವಗೀತೆಗಳನ್ನು ಕುರಿತು ಹೇಳಲಾಗಿದೆ. ಆಂಗ್ಲ ಪ್ರಭಾವದಿಂದ ಬಂದ ಸುನೀತ, ಶೋಕಗೀತ, ಕಥನಕಾವ್ಯ, ಸರಳರಗಳೆ, ವಿಡಂಬನೆ, ಮುಂತಾದವುಗಳನ್ನು ಇಲ್ಲಿ ಚರ್ಚಿಸಲಾಗಿದೆ. ಹಿಂದಿಯ ಪ್ರಸಿದ್ಧ ಗೀತ ಕವಿಗಳಾದ ಪಂತ್, ನಿರಾಲ, ಮಹಾದೇವಿವರ್ಮ, ನರೇಂದ್ರಶರ್ಮಾ, ರಾಮಾವಾತಾರ್‌ತ್ಯಾಗಿ, ನೀರಜ್, ಹರಿವಂಶರಾಯ್ ಬಚ್ಚನ್, ರಾಮ್‌ಕುಮಾರ್‌ವರ್ಮಾ, ಮುಂತಾದವರ ಭಾವಗೀತೆಗಳನ್ನು ಕನ್ನಡದ ಗೋವಿಂದಪೈ, ಡಿ.ವಿ.ಜಿ., ಕುವೆಂಪು, ಮಾಸ್ತಿ, ಬೇಂದ್ರೆ, ಪು.ತಿ.ನ., ಶಿವರುದ್ರಪ್ಪ, ನರಸಿಂಹಸ್ವಾಮಿ, ಪರಮೇಶ್ವರಭಟ್ಟ, ಸಾಲಿರಾಮಚಂದ್ರರಾಯರು, ಬಿ.ಎಂ.ಶ್ರೀ, ಮಧುರಚೆನ್ನ, ಆನಂದಕಂದ, ರಾಜರತ್ನಂ ಮುಂತಾದವರ ಭಾವಗೀತೆಗಳನ್ನು

ಚರ್ಚಿಸಿದ್ದಾರೆ. ಹಿಂದೀ ಮತ್ತು ಕನ್ನಡ ಕವಿಗಳಲ್ಲಿರುವ ಸಮಾನಧರ್ಮ, ವ್ಯತ್ಯಾಸ ಮತ್ತು ಕಾವ್ಯ ಶೈಲಿಗಳನ್ನು ಕುರಿತು ಸಮೀಕ್ಷಿಸಿದ್ದಾರೆ. ಹಿಂದೀ ಭಾಷೆ ಸಹಜವಾಗಿಯೇ ಕನ್ನಡಕ್ಕಿಂತ ಹೆಚ್ಚು ಮಧುರ ಮತ್ತು ಸಂಗೀತಾತ್ಮಕವಾಗಿರುವುದರಿಂದ ಹಿಂದಿಯಲ್ಲಿ ಭಾವಗೀತೆಗಳು ಆಕರ್ಷಣೀಯವಾಗಿವೆ. ಪ್ರಸಿದ್ಧಿಯನ್ನು ಪಡೆದಿವೆ ಎಂಬುದು ಪಟ್ಟಣಶೆಟ್ಟಿಯವರ ಅಭಿಪ್ರಾಯವಾಗಿದೆ.

ಐದನೆಯ ಅಧ್ಯಾಯದಲ್ಲಿ ಇಂಗ್ಲೀಷ್ ಕವಿ ಟಿ.ಎಸ್. ಇಲಿಯಟ್‌ನ ಪ್ರಭಾವದಿಂದ ಹಿಂದೀ ಮತ್ತು ಕನ್ನಡದಲ್ಲಿ ಅವತರಿಸಿದ ನವ್ಯ ಕಾವ್ಯದ ಬಗ್ಗೆ ಬರೆದಿದ್ದಾರೆ. ಹಿಂದಿಯ ಪ್ರಸಿದ್ಧ ಕವಿ 'ಅಜ್ಞೇಯ' ಅವರ ಕವಿತೆಗಳು ಹಾಗೂ ಅವರು ಹೊರತಂದ 'ತಾರಾಸಪ್ತಕ' ಎಂಬ ಹೆಸರಿನ ವಿವಿಧ ಸಂಪುಟಗಳ ನವ್ಯ ಕವನಗಳ ಕೊಡುಗೆಗಳನ್ನು ಇಲ್ಲಿ ಚರ್ಚಿಸಲಾಗಿದೆ. ಹಿಂದಿಯಲ್ಲಿ ನವ್ಯಕಾವ್ಯ ರಚನೆಗೊಂಡು ಏಳೆಂಟು ವರ್ಷಗಳ ನಂತರ ವಿ.ಕೃ. ಗೋಕಾಕ, ಮತ್ತು ಗೋಪಾಲಕೃಷ್ಣ ಅಡಿಗರ ಪ್ರಯತ್ನಗಳಿಂದಾಗಿ ಕನ್ನಡದಲ್ಲಿ ನವ್ಯ ಕಾವ್ಯ ಬಂತು. ಹಿಂದಿಯ ನವ್ಯ ಕವಿಗಳಲ್ಲಿ ಅಜ್ಞೇಯ, ಗಜಾನನ ಮಾಧವ, ಮುಕ್ತಿ ಬೋಧ ಭರತ್ ಭೂಷಣ, ಅಗರವಾಲ. ಭವಾನಿ ಪ್ರಸಾದ್‌ಮಿಶ್ರ, ಶಂಶೀರ್ ಬಹದ್ದೂರ್ ಸಿನ್ಹಾ, ರಘುವೀರ್ ಸಹಾಯಿ, ಧರ್ಮವೀರ್ ಭಾರತೀ, ಮುಂತಾದವರ ಕಾವ್ಯದ ಪರಿಚಯವಿದೆ. ಅದೇ ರೀತಿ, ಕನ್ನಡ ನವ್ಯ ಕವಿಗಳಾದ ಪೇಜಾವರ ಸದಾಶಿವರಾವ್, ವ್ಹಿ.ಜಿ. ಭಟ್ಟ, ಗೋಕಾಕ, ಗೋಪಾಲಕೃಷ್ಣ ಅಡಿಗ, ರಾಮಚಂದ್ರ ಶರ್ಮಾ, ಚಂದ್ರಶೇಖರ ಕಂಬಾರ, ಶಂಕರ್‌ಮೊಕಾಶಿ ಪುಣೇಕರ, ಲಂಕೇಶ, ಸುಮತೀಂದ್ರನಾಡಿಗ, ಪೂರ್ಣಚಂದ್ರ ತೇಜಸ್ವಿ, ನಿಸಾರ್‌ಅಹಮದ್, ಮುಂತಾದವರ ಕವಿತೆಗಳ ಬಗ್ಗೆ ಹೇಳಲಾಗಿದೆ.

ಆರನೇಯ ಅಧ್ಯಾಯದಲ್ಲಿ ಸುಮಿತ್ರಾನಂದನ್ ಪಂತ್ ಮತ್ತು ದ.ರಾ. ಬೇಂದ್ರೆಯವರ ಸಮಗ್ರ ಕಾವ್ಯವನ್ನು ಹಾಗೂ ಏಳನೇ ಅಧ್ಯಾಯದಲ್ಲಿ ಜಯಶಂಕರ್ ಪ್ರಸಾದ್ ಹಾಗೂ ಕುವೆಂಪು ಅವರ ಸಮಗ್ರ ಕಾವ್ಯವನ್ನು ವಿಸ್ತಾರ ಪೂರ್ವಕವಾಗಿ ತೌಲನಿಕ ಅಧ್ಯಯನ ಮಾಡಲಾಗಿದೆ.

**೨. ಮೋಹನ್ ರಾಕೇಶ್ ಔರ್ ಉನ್‌ಕೆ ನಾಟಕ್**

ಮೋಹನ್ ರಾಕೇಶ್ ಹಿಂದಿಯ ಬಹುದೊಡ್ಡ ನಾಟಕ ರಚನಾಕಾರರಾಗಿದ್ದಾರೆ. ಸಿದ್ಧಲಿಂಗ ಪಟ್ಟಣಶೆಟ್ಟರಿಗೆ ರಾಕೇಶ್ ಅವರು ವೈಯಕ್ತಿಕವಾಗಿ ಪರಿಚಯದವರಾದ ಕಾರಣ ರಾಕೇಶ್‌ರ ನಾಟಕದ ಒಳಹೊರಗುಗಳನ್ನು ತಿಳಿದುಕೊಂಡು ತಲಸ್ಪರ್ಶಿಯಾಗಿ ವಿಮರ್ಶಿಸಿದ್ದಾರೆ. ೧೯೭೫ ರಲ್ಲಿ ಅಮನ್ ಪ್ರಕಾಶನ ರಾಂಭಾಗ್ ಕಾನ್ಪುರದಿಂದ ಈ ಪುಸ್ತಕವು ಪ್ರಕಟಗೊಂಡಿತು. ಪಟ್ಟಣಶೆಟ್ಟಿಯವರು ಮೋಹನ್ ರಾಕೇಶ್ ಮತ್ತು ಗಿರೀಶ್ ಕಾರ್ನಾಡರ ನಾಟಕಗಳನ್ನು ಕುರಿತು ಸಂಶೋಧನಾ ಪ್ರಬಂಧ ಬರೆದಿದ್ದಾರೆ. ರಾಕೇಶ್‌ರ ನಾಟಕಗಳನ್ನು ಕುರಿತು ಇರುವ ವಿಷಯಗಳನ್ನು ಆಯ್ದು ಈ ಪುಸ್ತಕದಲ್ಲಿ ಹೊರತರಲಾಗಿದೆ. ರಾಕೇಶ್‌ರು ಪಟ್ಟಣಶೆಟ್ಟಿಯವರಿಗೆ ಆಪ್ತವಾಗಿದ್ದ ಕಾರಣ ಇಲ್ಲಿನ ಬರವಣಿಗೆಯಲ್ಲಿ ನಿಖರತೆಗಳು ಕಂಡು ಬರುತ್ತವೆ.

ಈ ಕೃತಿಯಲ್ಲಿ ಒಟ್ಟು ಮೂರು ಅಧ್ಯಾಯಗಳಿದ್ದು, ಮೊದಲನೆಯ ಅಧ್ಯಾಯದಲ್ಲಿ ರಾಕೇಶ್‌ರ ಸಮಗ್ರ ರಚನೆಯ ವಿವರಗಳೊಂದಿಗೆ ಅವರ ವ್ಯಕ್ತಿಗತ ಜೀವನದ ಬಗೆಗೆ ವಿಪುಲ ಮಾಹಿತಿ ದೊರೆಯುತ್ತದೆ.

ಎರಡನೆಯ ಅಧ್ಯಾಯವು ಸುದೀರ್ಘವಾಗಿದೆ. ರಾಕೇಶ್‌ರ ನಾಟಕಗಳಾದ 'ಆಷಾಢದ ಒಂದು ದಿನ', 'ಅಲೆಗಳಲ್ಲಿ ರಾಜಹಂಸಗಳು', ಅಧೊ ಅಧೋರೆ (ಅಪೂರ್ಣರು) ಹಾಗೂ 'ಕಾಲ ಕೆಳಗಿನ ನೆಲ', 'ಸತ್ಯ ಹಾಗೂ ಕಲ್ಪನೆ', 'ಮೊಟ್ಟೆಯ ಸಿಪ್ಪೆ' ಇತರ ನಾಟಕಗಳು ಮತ್ತು 'ರಾತ್ರಿ ಕಳೆಯುವವರೋ' ಮುಂತಾದ ಕೃತಿಗಳನ್ನು ಕುರಿತು ಅತ್ಯಂತ ವಿಸ್ತಾರವಾಗಿ ಬರೆದಿದ್ದಾರೆ. ಈ ನಾಟಕಗಳ ರಂಗಸಾಫಲ್ಯತೆ, ವಿಶೇಷತೆ, ಮುಂತಾದ ಅಂಶಗಳನ್ನು ಕುರಿತು ಚರ್ಚಿಸಿದ್ದಾರೆ.

ಮೂರನೆಯ ಅಧ್ಯಾಯವು ರಾಕೇಶ್ ಹಾಗೂ ನೈಜ ರಂಗಭೂಮಿಯ ಹುಡುಕಾಟ ಎಂಬ ಹೆಸರಿನಲ್ಲಿದ್ದು ರಾಕೇಶರ ನಾಟಕಗಳು ವೈವಿಧ್ಯತೆಗಳನ್ನು ವಿವಿಧ ಆಯಾಮಗಳನ್ನು ರಂಗಭೂಮಿಯ ಬಗ್ಗೆ ರಾಕೇಶರು ಇಟ್ಟುಕೊಂಡಿದ್ದ ಅಭಿಪ್ರಾಯಗಳನ್ನು ಕುರಿತು ಬರೆದಿದ್ದಾರೆ.

ಈ ಕೃತಿಯನ್ನು ಪಟ್ಟಣ ಶೆಟ್ಟರು ರಚಿಸುತ್ತಿರುವಾಗ ಅಂದರೆ ೧೯೭೨ ರಲ್ಲಿ ರಾಕೇಶರು ನಿಧನ ಹೊಂದಿದ್ದರು, ಆಗ ಅವರ ಡೈರಿ ಪ್ರಕಟವಾಯಿತು. ಇದರಿಂದ ಅವರ ವ್ಯಕ್ತಿಗತ ಜೀವನವನ್ನು ತಿಳಿದುಕೊಳ್ಳಲು ಸಹಕಾರಿಯಾಯಿತು. ಸಮಾಜದಲ್ಲಿ ಕಂಡ ವ್ಯಕ್ತಿಗಳು, ಅವರ ನಾಟಕಗಳಲ್ಲಿ ಪಾತ್ರಗಳಾಗಿ ಮೂಡಿಬಂದ ರೀತಿ ಅವರ ಡೈರಿಯಿಂದ ತಿಳಿಯುತ್ತದೆ. ಹೀಗೆ ಅನೇಕ ಹೊಸ ವಿಷಯಗಳು ಅವರ ಡೈರಿಯಿಂದ ತಿಳಿದು ಬಂದಿದ್ದರಿಂದ ಅವುಗಳ ಹಿನ್ನಲೆಯಲ್ಲಿ ರಾಕೇಶರ ಸಮಗ್ರ ಸಾಹಿತ್ಯವನ್ನು ಮುಖ್ಯವಾಗಿ ನಾಟಕಗಳನ್ನು ಈ ಭಾಗದಲ್ಲಿ ವಿಶ್ಲೇಷಿಸಲಾಗಿದೆ.

ಈ ಪುಸ್ತಕವನ್ನು ಕುರಿತು ಡಾ. ಚಂದುಲಾಲ್‌ದುಬೆಯವರು ಬೆನ್ನುಡಿಯಲ್ಲಿ ಹೇಳಿರುವ ಮೆಚ್ಚುಗೆಯ ಮಾತುಗಳನ್ನು ಡಾ.ಜಿ. ಭಾಸ್ಕರಯ್ಯ ಹೀಗೆ ಉಲ್ಲೇಖಿಸಿದ್ದಾರೆ. ''ಡಾ. ಪಟ್ಟಣಶೆಟ್ಟಿಯವರು ಸುದೀರ್ಘ ಕಾಲದಿಂದ ಕನ್ನಡ ರಂಗಭೂಮಿಯಲ್ಲಿ ತೊಡಗಿಸಿಕೊಂಡವರು. ಸಂಶೋಧಕರಾಗಿ ಈ ಅನುಭವದ ಹಿನ್ನಲೆಯಲ್ಲಿ ಮೋಹನ್ ರಾಕೇಶರ ನಾಟಕಗಳ ಪ್ರದರ್ಶನಗಳ ಆಯಾಮಗಳನ್ನು ಸರಿಯಾದ ನೆಲೆಯಲ್ಲಿ ಗುರುತಿಸಿದ್ದಾರೆ. ಇಲ್ಲಿ ಕೇವಲ ಸೈದ್ಧಾಂತಿಕ ಜ್ಞಾನ ಮಾತ್ರವಲ್ಲ, ರಂಗಭೂಮಿಯ ಪ್ರತ್ಯಕ್ಷ ಅನುಭವಗಳಿಂದ ನಾಟಕವನ್ನು ವಿಮರ್ಶಿಸುವ ಪ್ರಯತ್ನ ಮಾಡಲಾಗಿದೆ. ಆದ್ದರಿಂದ ಈ ಗ್ರಂಥದ ಮಹತ್ವ ಇನ್ನೂ ಹೆಚ್ಚಿದೆ. ಡಾ. ಪಟ್ಟಣಶೆಟ್ಟಿಯವರು ಕವಿ, ಕಲಾವಿದ ಮತ್ತು ಸಂಶೋಧಕ ಗುಣಗಳ ತ್ರಿವೇಣಿ ಸಂಗಮ 'ಮೋಹನ್ ರಾಕೇಶ್ ಔರ್ ಉನ್‌ಕೆ ನಾಟಕ್' ಕೃತಿಯು ಶಿಲ್ಪ ಸಂರಚನೆಗೆ ಅತ್ಯಂತ ಮೆರುಗನ್ನು ನೀಡಿದೆ. ಮೋಹನ್ ರಾಕೇಶ್‌ರ ಸಾಹಿತ್ಯವನ್ನು ಕುರಿತು ಬರೆಯಲ್ಪಟ್ಟ ಗ್ರಂಥಗಳಲ್ಲಿ ಕನ್ನಡ ಭಾಷೆಯ ಈ ಸಂಶೋಧಕನ ಗ್ರಂಥವು ಒಂದು ವಿಶಿಷ್ಟ ಸ್ಥಾನವನ್ನು ಪಡೆಯುತ್ತದೆಂಬುದು ನನ್ನ ದೃಢವಾದ ನಂಬಿಕೆಯಾಗಿದೆ.''[೩]

### ೩.೨.೪. ಜೀವನ ಚರಿತ್ರೆ

#### ೧. ರಾಷ್ಟ್ರಕವಿ ಗೋವಿಂದಪೈ

ರಾಷ್ಟ್ರಕವಿ ಗೋವಿಂದಪೈ ಅವರ ಜೀವನ ಮತ್ತು ಕೃತಿಗಳನ್ನು ಕುರಿತು ಹಿಂದಿಯಲ್ಲಿ ಪ್ರಕಟಿಸಿರುವ ತೊಂಬತ್ತೆಂಟು ಪುಟಗಳ ಪುಸ್ತಕ ಅವರನ್ನು ಕುರಿತು ಕನ್ನಡೇತರ ಭಾಷೆಯಲ್ಲಿ ಪ್ರಕಟವಾದ ಮೊದಲ ಪುಸ್ತಕವಾಗಿದೆ. ಧಾರವಾಡದ ಕರ್ನಾಟಕ ಕಾಲೇಜಿನ ಹಿಂದೀ ವಿಭಾಗದಲ್ಲಿ ಕೆಲಸ ಮಾಡುತ್ತಿದ್ದ ನಾಲ್ಕು ಜನ ಹಿಂದೀ ಅಧ್ಯಾಪಕರಾದ ಪ್ರೊ.ಎಸ್.ಪಿ.

ಭಟ್ಟ, ಪ್ರೊ.ಎಸ್.ರಾಮಚಂದ್ರ, ಪ್ರೊ.ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ಡಾ.ಶಿವರಾಜ ಹಳಿಬೇಟೆ ಈ ನಾಲ್ವರು ಸೇರಿ ಕರ್ನಾಟಕ ಪ್ರಕಾಶನ ಸಂಸ್ಥೆಯನ್ನು ಹುಟ್ಟು ಹಾಕಿದರು. ಅದರ ಮೊದಲ ಪುಷ್ಪವಾಗಿ ಈ ಕೃತಿಯು ೧೯೬೯ರಲ್ಲಿ ಪ್ರಕಟವಾಗಿದೆ. ಈ ಕೃತಿಯಲ್ಲಿ ಏಳು ಅಧ್ಯಾಯಗಳಿದ್ದು ಮೊದಲ ಚರಿತ್ರೆಯಿದೆ. ಎರಡನೆಯ ಅಧ್ಯಾಯದಲ್ಲಿ ಪೈಯವರ ಇತರ ಪದ್ಯಗಳ ಪರಿಚಯವಿದೆ. ಮೂರನೆಯ ಅಧ್ಯಾಯದಲ್ಲಿ ಪೈ ಅವರು ರಚಿಸಿದ ಬಂಡಾಯ ಕಾವ್ಯಗಳಾದ ಏಸು ಕ್ರಿಸ್ತನನ್ನು ಕುರಿತಾಗಿರುವ 'ಗೋಲ್ಗೋಥಾ' ಮತ್ತು ಬುದ್ಧನನ್ನು ಕುರಿತಿರುವ ವೈಶಾಖಿ ಗಳ ರಸವತ್ತಾದ ವಿಮರ್ಶೆಯಿದೆ. ನಾಲ್ಕನೇ ಅಧ್ಯಾಯದಲ್ಲಿ ಪೈ ಅವರ ನಾಲ್ಕು ನಾಟಕಗಳನ್ನು ಚರ್ಚಿಸಲಾಗಿದೆ. ಮಹಾಭಾರತದ ಕಥೆಯಲ್ಲಿ ಬರುವ ಏಕಲವ್ಯನ ಬದುಕನ್ನು ಆಧರಿಸಿದ 'ಹೆಬ್ಬೆರಳು' ಮೊದಲ ನಾಟಕವಾಗಿದೆ. 'ಚಿತ್ರಭಾನು' ಅಥವಾ 'ಸನ್' ೧೯೪೨ ಎಂಬುದು ಎರಡನೆಯ ನಾಟಕ 'ಭಾರತಬಿಟ್ಟು ತೊಲಗಿ' ಎಂಬ ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯನ್ನಿಟ್ಟುಕೊಂಡು ರಚಿಸಿದ ನಾಟಕವಾಗಿದೆ. ಇಲ್ಲಿ ವೇಣುಗೋಪಾಲ ಎಂಬ ದೇಶಪ್ರೇಮಿ ಯುವಕನ ಪಾತ್ರದ ಮೂಲಕ ದೇಶ ಬಾಂಧವರನ್ನು ಜಾಗೃತಗೊಳಿಸುವ ಸುಂದರ ಕಥಾವಸ್ತುವನ್ನೊಳಗೊಂಡಿದೆ. 'ತಾಯಿ' ಮೂರನೆಯ ನಾಟಕವಾಗಿದ್ದು, ಮಲ್ಲಿಕಾ ಮತ್ತು ಚಂದ್ರಿ ಇಬ್ಬರು ಸಹೋದರಿಯರ ದುಃಖ ಪೂರ್ಣ ಬದುಕಿನ ಚಿತ್ರಣ ನೀಡುವ ಈ ಚಿಕ್ಕ ನಾಟಕದಲ್ಲಿ ಪ್ರತಿಯೊಬ್ಬ ಮಹಿಳೆಯ ಹೃದಯದಲ್ಲಿ ಹುದುಗಿರುವ ಪತ್ನಿತ್ವ ಮತ್ತು ಮಾತೃತ್ವದ ಭಾವನೆಗಳ ಪ್ರಭಾವಿ ಚಿತ್ರಣವಿದೆ. ನಾಲ್ಕನೆಯ ನಾಟಕ 'ಕಾಮಾಯೋ ಕೋಮಾಚಿ ಇದು ನೊ' (Noh) ಎಂಬ ಜಪಾನಿ ನಾಟಕದ ಅನುವಾದ ಕೋಮಾಚಿ ತನ್ನ ಪ್ರಿಯತಮ ಶೋನನ್ನು ಬೌದ್ಧ ಧರ್ಮದ ಕಡೆಗೆ ಸೆಳೆಯುವ ಸುಂದರ ನಾಟಕ ಇದು.

ಐದನೆಯ ಅಧ್ಯಾಯದಲ್ಲಿ ಗೋವಿಂದಪೈ ಅವರ ಸಂಶೋಧನಾ ಲೇಖನಗಳ ಸಂಕ್ಷಿಪ್ತ ಪರಿಚಯವಿದೆ. ಪೈ ಅವರು ಸಾಹಿತ್ಯ, ಸಂಸ್ಕೃತಿ, ಇತಿಹಾಸ, ಭಾಷಾವಿಜ್ಞಾನ, ಮುಂತಾದ ವಿಷಯಗಳನ್ನು ವಿಶ್ಲೇಷಣೆ ಮಾಡಿ ಹಲವಾರು ಲೇಖನಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಕರ್ನಾಟಕದಲ್ಲಿ ಜೈನಧರ್ಮದ ಆಗಮನ, ಶ್ರೀ ಮಧ್ವಾಚಾರ್ಯರ ಕಾಲ, ಬೌದ್ಧ ಮತ್ತು ಮಹಾವೀರರ ನಿರ್ಣಯದ ಕಾಲ, ಕನ್ನಡದ ಷಟ್ಪದಿಗಳು, ಗೊಮ್ಮಟೇಶ್ವರ ವ್ಯುತ್ಪತ್ತಿ, ಬಸವಣ್ಣನವರ ಕಾಲ, ಕೊಂಕಣಿಗರ ಮೂಲ ಮುಂತಾದ ಹದಿನೈದು ಲೇಖನಗಳ ಬಗ್ಗೆ ಈ ಅಧ್ಯಾಯದಲ್ಲಿ ಬರೆಯಲಾಗಿದೆ.

ಉಪಸಂಹಾರವೆಂಬ ಆರನೆಯ ಅಧ್ಯಾಯದಲ್ಲಿ ಸಂಕ್ಷಿಪ್ತವಾಗಿ ಪೈ ಅವರ ವಿನಯವಂತಿಕೆ, ವಿದ್ವತ್ತು ಹಾಗೂ ಕೊಡುಗೆಯನ್ನು ಪ್ರಶಂಸಿಸುತ್ತಾ ಕುವೆಂಪು ಅವರು ಪೈ ಅವರನ್ನು ಗೊಮ್ಮಟನ ಹಾಗೆ ಎತ್ತರದಂತೆ, ಮಹಾಕಾವ್ಯದಂತೆ ಇದ್ದಾರೆ ಎಂಬುದನ್ನು ಉಲ್ಲೇಖಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಪೈ ಅವರು ಬರೆದ ನಮ್ಮ ಪೂರ್ವಜರು ಎಂಬ ಲೇಖನದ ಅನುವಾದವಿದೆ.

**೨. ಮಹಾಮಾನವ್ ಬಸವೇಶ್ವರ್**

ಹನ್ನೆರಡನೆಯ ಶತಮಾನದ ವಚನಕಾರ ಸಮಾನತೆಯ ಹರಿಕಾರ, ಬಸವಣ್ಣನವರ ಜೀವನಸಾಧನೆ ವ್ಯಕ್ತಿತ್ವ ಮತ್ತು ವಚನಗಳನ್ನು ಕುರಿತು ಬರೆದ ಪುಸ್ತಕ ಇದಾಗಿದೆ. ೨೦೦೩ ರಲ್ಲಿ ವೀರಶೈವ ಅಧ್ಯಯನ ಸಂಸ್ಥೆ ಶ್ರೀ ಜಗದ್ಗುರು ತೋಂಟದಾರ್ಯ ಮಠ ಗದಗ ಇವರಿಂದ ಪ್ರಕಟಣೆಗೊಂಡಿದೆ.

ಉತ್ತರ ಭಾರತದಲ್ಲಿ ಜಾಟವ ಎನ್ನುವ ತೀರಾ ಹಿಂದುಳಿದ ಒಂದು ದಲಿತ ಪಂಗಡವಿದೆ. ಸಾಮಾಜಿಕವಾಗಿ, ಆರ್ಥಿಕವಾಗಿ ಬಹಳ ಹಿಂದುಳಿದ ಜಾತಿ ಇದು. ೨೦೦೩ ಅಕ್ಟೋಬರ್ ೧೯ರಂದು ದೆಹಲಿಯಲ್ಲಿ ಒಂದು ಸಾವಿರಕ್ಕಿಂತ ಹೆಚ್ಚು ಜನ ಜಾಟವ ಬಂಧುಗಳು ಗದುಗಿನ ಜಗದ್ಗುರು ತೋಂಟದಾರ್ಯ ಮಠದ ಶ್ರೀ ಸಿದ್ಧಲಿಂಗ ಸ್ವಾಮೀಜಿಯವರ ಸಾನ್ನಿಧ್ಯದಲ್ಲಿ ಲಿಂಗಾಯತ ಧರ್ಮವನ್ನು ಸ್ವೀಕರಿಸಿದರು. ಈಸಂದರ್ಭದಲ್ಲಿ ಲಿಂಗಾಯತ ಧರ್ಮ ಮತ್ತು ಬಸವಣ್ಣನವರ ಜಾತಿರಹಿತ, ಕಾಯಕಪ್ರಧಾನ, ಲಿಂಗಬೇಧರಹಿತ, ಸಾಮಾಜಿಕ ತತ್ವಗಳನ್ನು ಅವರಿಗೆ ಪರಿಚಯ ಮಾಡಿಕೊಡುವ ಸಲುವಾಗಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಈ ಪುಸ್ತಕವನ್ನು ರಚಿಸಿದರು.

ಅತ್ಯಂತ ಸರಳ ಹಿಂದೀ ಭಾಷೆಯಲ್ಲಿ ಬರೆದ ಈ ಪುಸ್ತಕ ಸಾಮಾನ್ಯರಿಗೂ ತಿಳಿಯುವಂತಿದೆ. ಬಸವೇಶ್ವರರ ಸಂಕ್ಷಿಪ್ತ ಜೀವನ ಚಿತ್ರಣ ನೋಡುವ ಪ್ರಯತ್ನ ಇಲ್ಲಿದೆ. ಆರೋಹ ಎಂಬ ಪೀಠಿಕಾ ಭಾಗದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಶಿವ ಶರಣರಿಂದ ರಚನೆಗೊಂಡ ಲಿಂಗಾಯಿತ ಧರ್ಮದ ಸಾರಾಂಶವಿದೆ. ಎರಡನೆಯ ಭಾಗದಲ್ಲಿ ಬಸವಣ್ಣನವರು ಧರ್ಮದ ತಳಹದಿಯ ಮೇಲೆ, ಕಟ್ಟಬಯಸಿದ ಸಮಾಜ, ರಾಜಕೀಯ ಮತ್ತು ಧಾರ್ಮಿಕ ವಿಷಯಗಳಿವೆ.

ಮೂರನೇಯ ಅಧ್ಯಾಯದಲ್ಲಿ ಬಸವಣ್ಣನವರು ಬಾಗೇವಾಡಿ ಅಗ್ರಹಾರದಲ್ಲಿ ಮಾದರಸ ಮತ್ತು ಮಾದಲಾಂಬಿಕೆಯರ ಗರ್ಭದಲ್ಲಿ ಜನಿಸಿದುದು ಮತ್ತು ನಂತರದ ಬೆಳವಣಿಗೆಗಳನ್ನು ತಿಳಿಸುತ್ತದೆ. ಇಲ್ಲಿ ಲೇಖಕರು ಮೂರು ಭಾಗಗಳನ್ನು ಮಾಡಿಕೊಂಡು ಬಸವಣ್ಣನವರ ಚರಿತ್ರೆಯನ್ನು ವಿವರಿಸಿದ್ದಾರೆ.

೧. ಬಾಗೇವಾಡಿ-ಕರ್ಮದಿಂದ ಧರ್ಮದೆಡೆಗೆ

೨. ಕೂಡಲಸಂಗಮ-ಅಂಗದಿಂದ ಲಿಂಗದೆಡೆಗೆ

೩. ಕಲ್ಯಾಣ-ಲಿಂಗದಿಂದ ಜಂಗಮದೆಡೆಗೆ

ನಾಲ್ಕನೆಯ ಅಧ್ಯಾಯದಲ್ಲಿ ಅನುಭವಿಗಳ ಅನುಭವ ಮಂಟಪದ ಚಿತ್ರಣವಿದೆ. ಐದನೆಯ ಅಧ್ಯಾಯದಲ್ಲಿ ಬಸವೇಶ್ವರರ ಜೀವನದ ಕೊನೆಗಾಲದ ಬಗ್ಗೆ ಮಾಹಿತಿಯಿದೆ. ಆರನೆಯ ಅಧ್ಯಾಯದಲ್ಲಿ ಸಮಾರೋಪವಿದೆ. ಏಳನೆಯ ಅಧ್ಯಾಯದಲ್ಲಿ ಬಸವೇಶ್ವರರ ಮೂವತ್ತೇಳು ವಚನಗಳ ಹಿಂದೀ ಅನುವಾದವಿದೆ. ಪುಸ್ತಕದುದ್ದಕ್ಕೂ ಸಾಮಾನ್ಯರಿಗೆ ಅರ್ಥವಾಗುವಂತಹ ಬಸವೇಶ್ವರರ ಬದುಕಿನ ಕೆಲವು ಸುಂದರ ರೇಖಾಚಿತ್ರಗಳು ಪುಸ್ತಕದ ಮೌಲ್ಯವನ್ನು ಹೆಚ್ಚಿಸಿವೆ.

**೩.೨.೫. ನಾಟಕ**

**೧. ಕಿನ್ನರಿಜೋಗಿ**

ಪ್ರಸಿದ್ಧ ನಾಟಕ ನಿರ್ದೇಶಕರಾದ ಬಿ.ವಿ.ಕಾರಂತ, ನೇಮಿಚಂದ್ರಜೈನ್ ಮತ್ತು ರಶ್ಮಿಜೈನ್ ಅವರುಗಳು ದಿಲ್ಲಿಯಲ್ಲಿರುವ ಮಕ್ಕಳ ನಾಟಕ ಅಕಾಡೆಮಿಗಾಗಿ ೧೯೭೬ರಲ್ಲಿ ಮೂರು ತಿಂಗಳ ಕಾಲ ಮಕ್ಕಳಿಗಾಗಿ ರಂಗ ಶಿಬಿರವನ್ನು ಏರ್ಪಡಿಸಿದ್ದರು. ಸಿದ್ಧಲಿಂಗ ಪಟ್ಟಣಶೆಟ್ಟರು ಕವಿ ಕುವೆಂಪು ಅವರ ಕಿಂದರಿಜೋಗಿ ಕಥನ ಕವನವನ್ನು ಆಯ್ದುಕೊಂಡು ರಸವತ್ತಾಗಿ ಕಿನ್ನರಿಜೋಗಿ ಎಂಬ ಹೆಸರಿನಲ್ಲಿ ಕಾವ್ಯ ನಾಟಕವನ್ನಾಗಿ ಅನವಾದ ಮಾಡಿಕೊಟ್ಟಿದ್ದಾರೆ. ಕಾರಂತರಿಗೆ

ಬಹುಪ್ರಿಯವಾದ ಮತ್ತು ಮೆಚ್ಚುಗೆಯಾದ ಈ ನಾಟಕದ ಶಿಬಿರದಲ್ಲಿಯ ಐವತ್ತಕ್ಕಿಂತ ಹೆಚ್ಚು ಮಕ್ಕಳು ಇದರಲ್ಲಿ ನಟಿಸಿದರು. ದೆಹಲಿ, ಕಲ್ಕತ್ತ, ಲಕ್ನೋ ಮುಂತಾದ ಕಡೆಗಳಲ್ಲಿ ಇದು ಪ್ರದರ್ಶನ ಗೊಂಡಿದೆ.

**೨. ಸೀಮಾಪಾರ್**

ಕನ್ನಡದ ಪ್ರಸಿದ್ಧ ನಾಟಕ ನಿರ್ದೇಶಕರಾದ ಪ್ರಸನ್ನ ಅವರು ಬರೆದ 'ಹದ್ದು ಮೀರಿದ ಹಾದಿ' ಎಂಬ ಕನ್ನಡ ನಾಟಕವನ್ನು ಶೆಟ್ಟರು, 'ಸೀಮಾಪಾರ್', ಹೆಸರಿನಿಂದ ಹಿಂದಿಗೆ ಅನುವಾದಿಸಿದ್ದಾರೆ. ಇದನ್ನು ದಿಲ್ಲಿಯ ವಾಣಿ ಪ್ರಕಾಶನದವರು ೨೦೦೩ರಲ್ಲಿ ಪ್ರಕಟಿಸಿದ್ದಾರೆ. ಈ ನಾಟಕವು ದೆಹಲಿಯಲ್ಲಿ ೨೦೦೩ ಏಪ್ರೀಲ್ ೯ ರಿಂದ ೧೩ನೇ ತಾರೀಖಿನವರೆಗೆ ಐದು ದಿನಗಳಕಾಲ ದಿನಕ್ಕೆ ಎರಡು ಪ್ರದರ್ಶನದಂತೆ ಪ್ರಯೋಗಗೊಂಡಿತು. ಹಿಂದಿಯ ಆರಂಭಕಾಲದ ಪ್ರಸಿದ್ಧ ನಾಟಕಕಾರ ಭಾರತೇಂದು ಹರಿಶ್ಚಂದ್ರರ ಅವರ ಬದುಕಿನ ವಿವರಗಳನ್ನು ಸಾಂಕೇತಿಕ ಹಿನ್ನೆಲೆಯಲ್ಲಿ ಬಳಸಿಕೊಂಡು ಸಾವನ್ನು ಪ್ರಮುಖ ಪಾತ್ರದ ರೂಪದಲ್ಲಿ ಚಿತ್ರಿಸಿದ ನಾಟಕ ಇದಾಗಿದೆ.

ಸಾವು ಜೀವನದ ಜೊತೆ ಅಂಟಿಬಂದ ಅನಿವಾರ್ಯ ಅಂಗ, ಸಾವು ಬದುಕಿನ ಚರ್ಚೆ ಅನೇಕ ನಾಟಕಗಳಲ್ಲಿ ಬಂದಿದೆ. ಆದರೆ ಸಾವೇ ಪ್ರಧಾನ ಪಾತ್ರವಾಗಿ ನಾಟಕಕಾರ ಕವಿ 'ಭಾರತೇಂದು ಹರಿಶ್ಚಂದ್ರ' ಅವರ ಜೊತೆ ಚರ್ಚೆ ಮಾಡುವ ಜೀವಂತ ನಾಟಕ ಇದಾಗಿದೆ. ಪಟ್ಟಣಶೆಟ್ಟರು 'ಭಾರತೇಂದು ಹರಿಶ್ಚಂದ್ರ'ರ ಎಲ್ಲಾ ಮೂಲ ನಾಟಕಗಳನ್ನು ಓದಿ ಅಂಥ ಭಾಷೆ ಮತ್ತು ವಾತಾವರಣವನ್ನು ಈ ಅನುವಾದದಲ್ಲಿ ಬರುವ ಭಾರತೇಂದು ಮಲ್ಲಿಕಾ, ವಿನಾಯಕ, ರಾಜಾಶಿವಪ್ರಸಾದ್, ಭೋಲಾ, ಗೋಸ್ವಾಮಿ, ಕಾಳಿಚರಣ ಲೀಲಾವತಿ ಮುಂತಾದವರ ಪಾತ್ರಗಳಲ್ಲಿ ತಂದಿದ್ದಾರೆ. ಮೃತ್ಯು ಪ್ರಧಾನವಾದ ಈ ನಾಟಕದಲ್ಲಿ ಅನೇಕ ಸಂಭಾಷಣೆಗಳು ಕಲ್ಪನೆ ಮತ್ತು ಕಾವ್ಯಾಂಶಗಳಿಂದ ಕೂಡಿದ್ದು, ಅದನ್ನು ಅತ್ಯಂತ ಸರಳವಾಗಿ ಹಿಂದಿಗೆ ಅನುವಾದ ಮಾಡಲಾಗಿದೆ. ಹಿಂದಿ ರಂಗಭೂಮಿಯ ಪ್ರೇಕ್ಷಕರು ಈ ಪ್ರಯೋಗವನ್ನು ನೋಡಿ ಮೆಚ್ಚಿದ್ದಾರೆ. ದೆಹಲಿ ನಾಟಕ ಶಾಲೆಯ ರೇಪರ್ಟರಿ-ರಂಗಮಂಡಲ ಸಂಸ್ಥೆಗಾಗಿ ಪ್ರಸನ್ನ ಅವರೇ ನಿರ್ದೇಶಿಸಿದ ಈ ನಾಟಕ ಅಲಹಾಬಾದ್, ಲಕ್ನೋ, ಕಲ್ಕತ್ತ, ಪಟ್ನಾ, ಭೂಪಾಲ್ ಮುಂತಾದಕಡೆ ರಂಗ ಪ್ರದರ್ಶನಗೊಂಡು ಹಿಂದಿ ಭಾಷಿಕರ, ನಾಟಕ ಪ್ರಿಯರ ಜನಮನಗೆದ್ದಿದೆ.

**೩.೨.೬. ಸಂಪಾದನೆ**

ಸಿದ್ಧಲಿಂಗ ಪಟ್ಟಣಶೆಟ್ಟರವರು ಬೇರೆ ಬೇರೆ ಸಂದರ್ಭದಲ್ಲಿ ವಿವಿಧ ವರ್ಗಗಳಿಗಾಗಿ ಸಂಪಾದಿಸಿದ ಮೂರ್‍ನಾಲ್ಕು ಹಿಂದಿ ಪಠ್ಯ ಪುಸ್ತಕಗಳಿವೆ. ಅದರಲ್ಲಿ 'ಹಿಂದಿ ಗದ್ಯ ಮಾಧುರಿ' ಎಂಬುದು ೧೯೬೬ರಲ್ಲಿ ಪ್ರಕಟವಾದ ಪಠ್ಯಪುಸ್ತಕ ವಿ.ರಾ.ಪುಂಗಾಂವಕರ್ ಎಂಬುವವರ ಜೊತೆ ಸೇರಿ ಪಟ್ಟಣಶೆಟ್ಟರು ಇದನ್ನು ಸಂಪಾದಿಸಿದ್ದಾರೆ. ಇದು ಕರ್ನಾಟಕ ವಿಶ್ವವಿದ್ಯಾಲಯದ ಮೊದಲ ಪಿ.ಯು.ಸಿ ವಿದ್ಯಾರ್ಥಿಗಳಿಗಾಗಿ ಐದುವರ್ಷಗಳ ಕಾಲ ಪಠ್ಯಪುಸ್ತಕವಾಗಿತ್ತು. ವಿದ್ಯಾರ್ಥಿಗಳಿಗೆ ಉಪಯುಕ್ತವಾಗುವ ಒಳ್ಳೆಯ ಲೇಖನಗಳ ಸಂಕಲನ ಇದಾಗಿದೆ.

'ಹಿಂದಿ ಮಂಜರಿ' ಎಂಬುದು ಮಾತೃಭಾಷೆ ಹಿಂದಿಯಾಗಿರುವಾಗ ೮ನೇ ತರಗತಿ ವಿದ್ಯಾರ್ಥಿಗಳಿಗಾಗಿ ಕರ್ನಾಟಕ ಸರ್ಕಾರ ಸಿದ್ಧಪಡಿಸಿದ ಪುಸ್ತಕವಾಗದೆ ೧೯೭೮ರಲ್ಲಿ ಇದು ಪ್ರಕಟಣೆಗೊಂಡಿದೆ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಅಧ್ಯಕ್ಷರಾಗಿದ್ದ ಸಮಿತಿಯಿಂದ ಈ ಪುಸ್ತಕ ಸಂಕಲಿಸಲಾಗಿದೆ. ಈ ಸಮಿತಿಯಲ್ಲಿ ಇನ್ನೂ ಇಬ್ಬರು ಸದಸ್ಯರಿದ್ದರು.

'ಸಾಹಿತ್ಯ ಮಾನಸ' ಎಂಬುದು ಕರ್ನಾಟಕ ಸರ್ಕಾರ ಪದವಿಪೂರ್ಣ ಶಿಕ್ಷಣ ಇಲಾಖೆ ಪ್ರಕಟಿಸಿದ ಪಠ್ಯಪುಸ್ತಕ. ೧೯೯೬ರಲ್ಲಿ ಪ್ರಕಟಗೊಂಡ ಈ ಪುಸ್ತಕವು ಆರು ವರ್ಷಗಳ ಕಾಲ ದ್ವಿತೀಯ ಪಿ.ಯು.ಸಿ ಪಠ್ಯವಾಗಿತ್ತು. ಇತರ ನಾಲ್ವರೊಂದಿಗೆ ಸೇರಿ ಪಟ್ಟಣ ಶೆಟ್ಟರು ಈ ಪುಸ್ತಕವನ್ನು ಸಂಪಾದಿಸಿದ್ದಾರೆ.

'ಹಿಂದಿ ಸರಿತಾ' ಎಂಬುದು ೨೦೦೪ರಲ್ಲಿ ಪ್ರಕಟವಾದ ಕರ್ನಾಟಕ ಸರ್ಕಾರದ ಪಠ್ಯಪುಸ್ತಕ ಹತ್ತನೆಯ ತರಗತಿಯ ತೃತೀಯ ಭಾಷೆ ತೆಗೆದುಕೊಂಡವರಿಗಾಗಿ ಇದನ್ನು ಸಿದ್ಧಪಡಿಸಲಾಗಿದೆ.

ಸಿದ್ಧಲಿಂಗ ಪಟ್ಟಣ ಶೆಟ್ಟಿಯವರು ನಾಟಕ ಅಕಾಡೆಮಿ ಸದಸ್ಯರಾಗಿ ಮಾಡಿದ ಮಹತ್ವಪೂರ್ಣ ಕಾರ್ಯಗಳಲ್ಲಿ ಎರಡು ಎದ್ದು ಕಾಣುವಂತಿವೆ. ರಂಗಭೂಮಿಯ ಪ್ರಯೋಗ ಪ್ರದರ್ಶನಗಳ ಜೊತೆ ರಂಗಭೂಮಿಯ ಪ್ರಖ್ಯಾತರನ್ನು ಕುರಿತು ಪುಸ್ತಕ ಬರೆಸಿದ್ದು ಒಂದಾದರೆ, ಇನ್ನೊಂದು ಕನ್ನಡದ ಐದು ನಾಟಕಗಳನ್ನು ಹಿಂದಿ ಭಾಷೆಗೆ ಅನುವಾದಿಸಿ ಪ್ರಕಟಿಸಿದ್ದು, ಹಿಂದಿ ಭಾಷೆಗೆ ಅನುವಾದಗೊಂಡ ನಾಟಕವನ್ನು ಬೇರೆ ಯಾವುದೇ ಭಾಷೆಗೆ ಅನುವಾದಿಸುವುದು ಸರಳವಾಗುತ್ತದೆ. ಈ ಕೆಲಸವನ್ನು ಇಂಗ್ಲೀಷ್‌ನಲ್ಲಿ ಮಾಡುವುದಕ್ಕಿಂತ ಭಾರತೀಯ ಇನ್ನೊಂದು ಸುಸಂಸ್ಕೃತ ಭಾಷೆಯಾದ ಹಿಂದಿಗೆ ಅನುವಾದ ಮಾಡುವುದರಿಂದ ನಾಟಕದ ಆತ್ಮ ಬಹಳ ಆಪ್ತವಾಗಿ ಅನುವಾದವಾಗುತ್ತದೆ. ನಾಟಕ ಅಕಾಡೆಮಿಯ ಸರ್ವಸದಸ್ಯರು ಒಮ್ಮತದಿಂದ ಐದು ನಾಟಕಗಳನ್ನು ಅನುವಾದಮಾಡಿಸುವ, ಸಂಪಾದಿಸುವ ಹೊಣೆಯನ್ನು ಪಟ್ಟಣಶೆಟ್ಟರೇ ವಹಿಸಿದ್ದರು. ಹೆಚ್.ಎಸ್.ಶಿವಪ್ರಕಾಶ್ ಅವರ 'ಸುಲ್ತಾನ್ ಟಿಪ್ಪೂ', ಟಿ.ಎನ್.ಸೀತಾರಾಮ್ ಅವರ 'ನಮ್ಮೊಳಗೊಬ್ಬ ನಾಜೂಕಯ್ಯ', ಹೂಲಿ ಶೇಖರ್ ಅವರ 'ಅರಗಿನ ಬೆಟ್ಟ', ಪಿ.ಲಂಕೇಶರ ಅವರ 'ಸಂಕ್ರಾಂತಿ', ದೇವನೂರು ಮಹಾದೇವ ಮತ್ತು ಸಿ.ಜಿ.ಕೆ. ಅವರ ಒಡಲಾಳ ನಾಟಕಗಳನ್ನು ಕ್ರಮವಾಗಿ ಬಾಲಚಂದ್ರ ಜಯಶೆಟ್ಟಿ, ಡಾ.ಮಂಗಲ್ ದೇಸಾಯಿ, ಕನಯ್ಯಲಾಲ್‌ಮಿಶ್ರ, ಬಿ.ಆರ್.ನಾರಾಯಣ ಮತ್ತು ಡಾ.ತಿಪ್ಪೇಸ್ವಾಮಿಯವರು ಅನುವಾದಿಸಿದ್ದಾರೆ. ಪಟ್ಟಣ ಶೆಟ್ಟಿಯವರು ೧೯೯೯ರಲ್ಲಿ ನಾಟಕಗಳನ್ನು ಪರಿಶೀಲಿಸಿ ಸಂಪಾದಿ ನಾಟಕ ಅಕಾಡೆಮಿಯ ಮೂಲಕ ಪ್ರಕಟಿಸಿದರು. ಕನ್ನಡ ನಾಟಕಕಾರರನ್ನು ಮತ್ತು ನಾಟಕಗಳನ್ನು ಹೀಗೆ ಹಿಂದಿ ಭಾಷೆಗೆ ತರುವುದರ ಮೂಲಕ ಕನ್ನಡಕ್ಕೆ ಸೇವೆ ಸಲ್ಲಿಸಿದ್ದಾರೆ.

**ಟಿಪ್ಪಣಿಗಳು**

೧. ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ಸನದಿ, ಶೈಲ್‌ಜಾರ್ ಸಾಗರ್, ಸ್ನೇಹ ಪ್ರಕಾಶನ, ಬೆಳಗಾವಿ, ೧೯೬೩, ಪು.ಸಂ.೫೧

೨. ಸಿದ್ಧಲಿಂಗ ಪಟ್ಟಣಶೆಟ್ಟಿ, ಆಧುನಿಕ ಹಿಂದಿ ಔರ್ ಕನ್ನಡ ಕಾವ್ಯ, ಗಿರಿಜಾ ಪ್ರಕಾಶನ ಧಾರವಾಡ, ಪು.ಸಂ.೭

೩. ಪ್ರ.ಸಂ.ದೇ.ಜ.ಗೌ, ಸಹೃದಯ, ವನಶ್ರೀ ಪ್ರಕಾಶ, ಮೈಸೂರು, ೨೦೦೪, ಪು.ಸಂ.೩೮೧

* * *

## ಭಾಗ-೩, ಅನುವಾದ ಕೃತಿಗಳು

**೩.೩.೧. ಕಾವ್ಯ ಸಂಕಲನ**

೧. ಕನುಪ್ರಿಯಾ

೨. ಮೀರಾವಾಣಿ

**೩.೩.೨. ನಾಟಕಗಳು**

೧. ಆಷಾಢದ ಒಂದು ದಿನ

೨. ಅಲೆಗಳಲ್ಲಿ ರಾಜಹಂಸಗಳು

೩. ಅಧೇ ಅಧೋರೇ

೪. ಅಂಧಯುಗ

೫. ಸೂರ್ಯಾಸ್ತಾದಿಂದ ಸೂರ್ಯೋದಯದವರೆಗೆ

೬. ಹಾಸಿಗೆ

೭. ಬೇರಿಲ್ಲದವರು

೮. ಅಂಜಿ

೯. ಮುದ್ರಾರಾಕ್ಷಸ

೧೦. ಕೋರ್ಟ್‌ಮಾರ್ಷಲ್

೧೧. ಶಸ್ತ್ರ ಸಂತಾನ

೧೨. ಚೋರ ಚರಣದಾಸ

**೩.೩.೩. ಕಾದಂಬರಿಗಳು**

೧. ಶೇಷಪ್ರಶ್ನೆ

೨. ಭಾರತಿ

**೩.೩.೪. ಜೀವನ ಚರಿತ್ರೆಗಳು**

೧. ಮೀರಾಬಾಯಿ

೨. ಜಯಶಂಕರ್ ಪ್ರಸಾದ್

**೩.೩.೫. ವಿಚಾರ ಪ್ರಬಂಧ**

೧. ಹೆಣ್ಣಿನ ಸ್ಥಾನಮಾನ

### ೩.೩.೧.ಕಾವ್ಯ ಸಂಕಲನ

### ೧. ಕನುಪ್ರಿಯಾ

ಅನುವಾದಗಳಲ್ಲಿ ಕಾವ್ಯಾನುವಾದ ತುಸು ಕಷ್ಟದ ಕೆಲಸವಾಗಿದೆ. ಏಕೆಂದರೆ, ಇಲ್ಲಿ ಭಾವಾನುವಾದವೂ ಆಗ ಬೇಕಾಗುತ್ತದೆ. ಸಿದ್ಧಲಿಂಗ ಪಟ್ಟಣಶೆಟ್ಟರು ಹಿಂದಿ ಮತ್ತು ಕನ್ನಡದಲ್ಲಿ ಕಾವ್ಯ ಕೃಷಿ ಮಾಡಿದ ಕಾರಣ ಕಾವ್ಯಾನುವಾದವನ್ನು ಯಶಸ್ವಿಯಾಗಿ ಮಾಡಿದ್ದಾರೆ. ಡಾ.ತಿಪ್ಪೇಸ್ವಾಮಿ ಯವರು ಹೇಳುವ ಹಾಗೆ ''ಕಾವ್ಯ ಪಟ್ಟಣ ಶೆಟ್ಟರಿಗೆ ಬಲು ಪ್ರಿಯವಾದ ಪ್ರಕಾರ ಕಾವ್ಯದ ಅನುವಾದವನ್ನು ಕಾವ್ಯ ರೂಪದಲ್ಲಿ ಮಾಡುವುದರಲ್ಲಿ ಯಶಸ್ವಿಯಾಗಿದ್ದಾರೆ. ಏಕೆಂದರೆ ಕಾವ್ಯಾನುವಾದದದಲ್ಲಿ ಎದುರಾಗುವ ಸಮಸ್ಯೆಗಳ ಅರಿವು ಇವರಿಗಿದೆ. ಕಾವ್ಯವನ್ನು ಕಾವ್ಯ ರೂಪದಲ್ಲಿ ಅನುವಾದಿಸಬೇಕೆ? ಗದ್ಯದಲ್ಲಿ ಅನುವಾದಿಸಬೇಕೆ? ಗದ್ಯದಲ್ಲಿ ಕಾವ್ಯ ಅನುವಾದವಾದಾಗ ಅದರ ಕಾವ್ಯಗುಣ ಮರೆಯಾಗುವುದಿಲ್ಲವೇ? ಕಾವ್ಯವನ್ನು ಕಾವ್ಯ ಮಾಡದೇ ಅನುವಾದಿಸಿದಾಗ 'ಕಾವ್ಯಾಂಶ' ಮರೆಯಾಗಿ ಉಳಿದದ್ದು ಅಂದರೆ ಅಸ್ಥಿಪಂಜರ ಮಾತ್ರ ಅನುವಾದದಲ್ಲಿರುತ್ತದೆ. ಎಂಬ ಟೀಕೆಯ ಅರಿವು ಹಾಗೂ ಒಂದು ಭಾಷೆಯ ಕಾವ್ಯ ಪರಿಕರಗಳು ಲಯ ಛಂದಸ್ಸು ಇತ್ಯಾದಿ. ಇನ್ನೊಂದು ಭಾಷೆಯಲ್ಲಿ ತರುವುದು ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಸಹಜಗುಣವಾಗಿದೆ. ಜೊತೆಗೆ ಕಾವ್ಯಾನುವಾದವನ್ನು ಕೈಗೊಂಡಿದ್ದಾರೆ. ಎಷ್ಟೋ ಕಾವ್ಯಾನುವಾದಗಳು ಬಂದಿದ್ದು ಈ ಪಂಕ್ತಿಗೆ ಪಟ್ಟಣಶೆಟ್ಟರ ಕಾವ್ಯಾನುವಾದಗಳು ಯಶಸ್ವೀ ಸೇರ್ಪಡೆಗಳಾಗಿವೆ''[೧] ಇವರು ಅನುವಾದಿಸಿರುವ ಕಾವ್ಯಾನುವಾದಗಳಲ್ಲಿ ಅತಿ ಮುಖ್ಯವಾದುದು 'ಕನುಪ್ರಿಯಾ' ಹಿಂದೀ ಸಾಹಿತ್ಯದ ಪ್ರಸಿದ್ಧ ಕವಿ, ಕಾದಂಬರಿಕಾರ, ಕಥೆಗಾರರಾದ ಧರ್ಮವೀರ ಭಾರತಿಯವರು ಕನುಪ್ರಿಯಾದ ಮೂಲ ಹಿಂದೀ ಕವಿಗಳಾಗಿದ್ದಾರೆ. ಈ ಕೃತಿಯು ೧೯೮೧ ರಲ್ಲಿ ಮೈಸೂರಿನ ಅನುವಾದ ಪ್ರಕಾಶನದಿಂದ ಪ್ರಕಟಣೆಗೊಂಡಿದೆ. ಈ ಕಾವ್ಯವು ಪೂರ್ವರಾಗ, ಮಂಜರೀ ಪರಿಣಯ, ಸೃಷ್ಟಿಸಂಕಲ್ಪ, ಇತಿಹಾಸ ಮತ್ತು ಸಮಾಪ್ತಿ ಎಂಬ ಐದು ಭಾಗಗಳಿಂದ ಕೂಡಿದೆ. ಪೂರ್ವರಾಗದಲ್ಲಿ ಐದು ಗೀತೆಗಳಿವೆ. ಮಂಜರೀ ಪರಿಣಯದಲ್ಲಿ, ಅಮ್ರುಮಂಜರಿಯ ಗೀತ, ಅಮ್ರುಮಂಜರಿಯ ಅರ್ಥ, ನೀಯಾರು ನನಗೆ? ಎನ್ನುವ ಮೂರು ಭಾಗಗಳಿವೆ. ಸೃಷ್ಟಿ ಸಂಕಲ್ಪವೆನ್ನುವ ಮೂರನೇ ಭಾಗದಲ್ಲಿ ಸೃಜನ ಸಂಗಿಣಿ, ಆದಿಭಯ, ಕೇಲಿಸಖಿ, ಎಂಬ ಶೀರ್ಷಿಕೆಯ ಪದ್ಯಗಳಿವೆ. ನಾಲ್ಕನೆಯ ಭಾಗವಾದ ಇತಿಹಾಸದಲ್ಲಿ ವಿಪ್ರಲಬ್ಧೆ, ಸೇತುವೆ, ಅದೇ ಮಾಮರದ ಕೆಳಗೆ,

ಅಮಂಗಲ ಛಾಯ, ಒಂದು ಪ್ರಶ್ನೆ, ಶಬ್ದ; ಅರ್ಥಹೀನ, ಸಮುದ್ರ ಸ್ವಪ್ನ ಎನ್ನುವ ಭಾಗಗಳಿವೆ. ಕೊನೆಯ ಭಾಗ ಸಮಾಪ್ತಿಯಲ್ಲಿ ಒಂದು ಪದ್ಯವಿದೆ.

ಹಿಂದೀ ಸಾಹಿತ್ಯದಲ್ಲಿ ಡಾ. ಧರ್ಮವೀರ ಭಾರತೀಯವರ 'ಕನುಪ್ರಿಯಾ' ಕಾವ್ಯ ಬಹುಚರ್ಚಿತ ಜನಪ್ರಿಯ ಕಾವ್ಯವಾಗಿದೆ. 'ಕನು' ಎಂದರೆ ಕೃಷ್ಣ, ಪ್ರಿಯಾ ಎಂದರೆ 'ರಾಧಾ'ಳ ವ್ಯಕ್ತಿನಾಮಗಳಾಗಿವೆ. ರಾಧಾಕೃಷ್ಣರ ಅಮರ ಪ್ರೇಮವೇ ಕಾವ್ಯದ ತಿರುಳಾಗಿದೆ. ರಾಧೆಯ ಕಣ್ಣಿನಿಂದ ಇತಿಹಾಸವನ್ನು ಅವಲೋಕಿಸುವ, ಇತಿಹಾಸದ ನಿರ್ಮಾಣದಲ್ಲಿ ಕೃಷ್ಣನ ಸಹಭಾಗಿಯಾಗಲೂ ಹಂಬಲಿಸುವ ರಾಧೆಯ ಉತ್ಕಟತೆಯೇ ಈ ಕಾವ್ಯದ ಪ್ರಮುಖ ಅಂಶವಾಗಿದೆ. ಈ ಕಾವ್ಯದಲ್ಲಿ ಶೃಂಗಾರದ ಮನೋಹರ ಭಾವನೆಗಳು, ಮೃದುತ್ವವನ್ನು ಪಡೆದುಕೊಂಡು ಮೈದಾಳಿವೆ. ಹಿಂದಿಯ 'ರೋಮ್ಯಾಂಟಿಕ್' ಕಾವ್ಯ ಪರಂಪರೆಯಲ್ಲಿ 'ಕನುಪ್ರಿಯಾ' ಕವನಕ್ಕೆ ಪ್ರತ್ಯೇಕವಾದ ಸ್ಥಾನವುಂಟು. ಹಿಂದೀಯ ಬಹುತೇಕ ಓದುಗರು ಈ ಕಾವ್ಯದ ಬಗ್ಗೆ ಮೆಚ್ಚುಗೆ ಸೂಚಿಸಿದ್ದಾರೆ. ಇಂತಹ ಅಪರೂಪದ ಕಾವ್ಯವನ್ನು ಒಳ್ಳೆಯ ರೀತಿಯಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಹಿಂದೀ ಭಾಷೆಯಲ್ಲಿ ಈ ಕಾವ್ಯವು ಮುಕ್ತ ಛಂದಸ್ಸಿನಲ್ಲಿದೆ. ಪಟ್ಟಣ ಶೆಟ್ಟರು ಕೂಡಾ ಮುಕ್ತ ಛಂದಸ್ಸಿನಲ್ಲಿಯೇ ಅನುವಾದಿಸಿದ್ದಾರೆ. ಮೂಲದಷ್ಟೇ ಸಹಜ ಸಂತೋಷದಿಂದ ಓದಿಸಿಕೊಂಡು ಹೋಗುವ ಈ ಕಾವ್ಯ ಮೂಲದ ಪುನರ್ ಸೃಷ್ಟಿಯಾಗಿದೆ. ಡಾ. ತಿಪ್ಪೇಸ್ವಾಮಿಯವರು ಅಭಿಪ್ರಾಯ ಪಟ್ಟಹಾಗೆ ''ಕನುಪ್ರಿಯಾ ಹಿಂದಿಯ ಪ್ರಣಯ ಕಾವ್ಯವಾಗಿದ್ದರೂ ಬದುಕಿನ ಸಮಗ್ರತೆಯನ್ನು ರಾಧೆಯ ಕಣ್ಣಿನಿಂದ ಸಮ್ಯಕ್ ವಿಶ್ವದರ್ಶನ ಮಾಡಿಸುವ ಭಾಗವತ್‌ಶಕ್ತಿ ಕಾವ್ಯ. ಮೂಲದಷ್ಟೇ ರಮ್ಯವಾಗಿ ಸಶಕ್ತವಾಗಿ ಸುಂದರವಾಗಿ ಕನು ಪ್ರಿಯಾ ಪ್ರಣಯವನ್ನು ಕನ್ನಡಿಸಿ ನುಡಿಸಿದ ಮಿತ್ರ ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಈ ಸೃಷ್ಟಿ ಕನ್ನಡಕ್ಕೆ ಕಾವ್ಯಾನುವಾದದಲ್ಲಿ ಕಾವ್ಯಾಂಶ ಮತ್ತು ಭಾವಾಂಶಗಳ ಅನುವಾದ ಕೂಡ ಶ್ರೇಷ್ಠ ಮಟ್ಟದಲ್ಲಿ ಆಗಬೇಕಾಗುತ್ತದೆ. ಇದನ್ನು ಪಟ್ಟಣಶೆಟ್ಟರು ಯಶಸ್ವಿಯಾಗಿ ನಿರ್ವಹಿಸಿದ್ದಾರೆ.''[೧] ಅನುವಾದದ ಒಂದೆರೆಡು ಮಾದರಿಗಳು ಈ ರೀತಿಯಾಗಿವೆ.

ಓ ಫಥ್ ಕೇ ಕಿನಾರೆ ಖಡೆ

ಛಾಯಾದಾರ್ ಪಾವನ್ ಅಶೋಕ್ ವೃಕ್ಷ್

ತುಮ್ ಯಹ್ ಕ್ಯೋಂ ಕಹತೇ ಹೋಕಿ

ತುಮ್ ಮೇರೇ ಚರಗೋಂಕೆ ಸ್ಪರ್ಶ್‌ಕಿ ಪ್ರತೀಕ್ಷಾ ಮೇ

ಜನ್ಮೋಂನೆ ಪುಷ್ಪ್ ಹೀನ್ ಖಡೇ ಥೆ

ತುಮ್ ಕೋ ಕ್ಯಾ ಮಾಲಮ್ ಕಿ

ಮೈ ಕಿತನೀ ಬಾರ್ ಕೇವಲ್ ತುಮ್ಹಾರೇ ಲಿವ

ಧೂಲ್ ಮೇ ಮಿಲಿ ಹೂಂ

ಧರತೀ ಮೇ ಗಹರೇ ಉತರ್

ಜಡೋಂ ಕೆ ಸಹಾರೆ

ತುಮ್ಹಾರೆ ಕಠೋರ್ ತನೇ ಕೆ ರೇಶೋಂ ಮೇ

ಕಲಿಯೊ ಬನ್, ಕೋಂಪಲ್‌ಬನ್, ಸೌರಭ್ ಬನ್

ಚುಪ್ಕೇ ಸೆ ಸೋ ಗಹೀ ಹೂಂ

ಕೀ ಕಬ್ ಮಧುಮಾಸ್ ಆಯೇಔರ್ ತುಮ್‌ಕಬ್ ಮೇರೆ

ಪ್ರಸ್ಫುಟನ್ ಸೇ ಛಾ ಜಾಓ!

ದಾರಿಯಂಚಿಗೆ ನಿಂತು

ನೆರಳ ಹೊಮ್ಮಿಸಿದ ಪಾವನ ಅಶೋಕವೆ,

ಜನ್ಮಜನ್ಮಾಂತರಗಳಿಂದ

ನನ್ನ ಚರಣ ಸ್ಪರ್ಶಕ್ಕಾಗಿಯೇ ಕಾಯುತ್ತ

ಪುಷ್ಪ ರಹಿತವಾಗಿ ನಿಂತಿದ್ದೀಯೆಂದು

ಹೀಗೆ ಯಾಕೆ ಹೇಳುತ್ತೀ......

ಗೊತ್ತೇ ನಿನಗೆ

ನಾನು ಎಷ್ಟೋಬಾರಿ ನಿನಗಾಗಿ ಮಾತ್ರ

ಮಣ್ಣಾಗಿ ನೆಲದ ಆಳಕ್ಕಿಳಿದು ಬೇರುಗಳ ತಟ್ಟಿ

ನಿನ್ನ ಕಠಿಣ ಕಾಂಡದ ಎಳೆಎಳೆಯ ಸೇರಿ

ಚಿಗುರಾಗಿ ಮೊಗ್ಗಾಗಿ ಮಧುವಾಗಿ ಕೆಂಪಾಗಿ

ಯಾವಾಗ ಆಗಮಿಸಬಹುದು ಋತುರಾಜ

ನೀ

ನನ್ನ ಪ್ರಸ್ಪಟದಿಂದೆದ್ದು ಪುಟದು

ಎಂದು ಪಸರಿಸಬಹುದು

ಎಂದು ಕಾಯುತ್ತ

ಸುಮ್ಮನೆ ನಿದ್ರಿಸಿದೆ ಗೊತ್ತೆ

ನಿನಗೆ,

ಅಂತ್ ಮೇ ತುಮ್ ಹಾರ್‌ಕರ್, ಲಾಟ್‌ಕರ್, ಥಕ್‌ಕರ್

ಮೇರೆ ವಕ್ಷ್ ಕೆ ಗಹರಾವ್ ಮೇ

ಅಪನಾ ಚೌಡಾ ಮಾಥ್ ರಖ್‌ಕರ್

ಔರ್ ಮೇರೆ ವಕ್ಷ್ ಕಾ ಗಹರಾವ್

ಸಮುದ್ರ್ ಮೇ ಬಹತಾ ಹುವಾ ಬಡಾತಾಜಾಕ್ಕಾರಂ ಮುಲಾಯಂ

ಜಿಸ್‌ಪರ್ ಛೋಟಿಸೇ ಛೌನೆಕಿ ಭಾಂತಿ ಗುಲಾಬಿ ವಟಪತ್ರ ಬನ್‌ಗಯಾ ಹೈ

ಲಹರೊಂ ಕೆ ಪಾಲ್‌ನೇ ಮೇ ಮಹಾಪ್ರಿಲಯ್ ಕೇ

ಬಾದ್‌ಸೋ ರಹೇ ಹೋ!

ಕೊನೆಯಲ್ಲಿ ನೀ ಸೋತು, ಮರಳಿ ದಣಿದು

ನನ್ನೆದೆಯ ಆಳದಲ್ಲಿ ಹರವಾದ ಹಣೆಯಿಟ್ಟು

ದೀರ್ಘ ನಿದ್ರೆಯಲ್ಲಿ ಮಲಗಿಬಿಟ್ಟಿರುವಿ.....

ಈಗ ನನ್ನೆದೆಯಾಳ

ಸಾಗರದಿ ತೇಲುತಿಹ

ದೊಡ್ಡ ಶುದ್ಧ ಕೌಮಾರ್ಯಭರಿತ ಕೋಮಲ

ಗುಲಾಬಿ ವಟಪತ್ರ

ನೀನಿದರ ಮೇಲೆ ಚಿಕ್ಕ ಮಗುವಿನ ಹಾಗೆ

ತರಂಗ ತೊಟ್ಟಿಲಲಿ ಮಲಗಿರುವಿ

ಮಹಾಪ್ರಳಯ ಕಳೆದಾದ ಮೇಲೆ!

ಹೀಗೆ 'ಕನುಪ್ರಿಯಾ' ಮೂಲಕ್ಕೆ ನಿಷ್ಠೆಯಿಂದ ಕೂಡಿದ ಯಶಸ್ವಿ ಅನುವಾದವಾಗಿದೆ. ಕನ್ನಡದ ಸ್ವತಂತ್ರ ರಚನೆಯೆ ಆಗಿದೆಯೇನೋ ಅನ್ನುವಷ್ಟು ಗೀತಾತ್ಮಕವಾಗಿದೆ. ಕನ್ನಡಕ್ಕೆ ಅನುವಾದಗೊಂಡ ಅತ್ಯುತ್ತಮ ಪ್ರೇಮ ಕಾವ್ಯಗಳಲ್ಲಿ ಒಂದಾಗಿದೆ.

೨. ಮೀರಾವಾಣಿ

ಮೀರಾಬಾಯಿ ಭಾರತದ ಮಧ್ಯಕಾಲೀನ ಇತಿಹಾಸದಲ್ಲಿ ಬದುಕಿದ್ದಳು. ಈಕೆಯ ರಚನೆಗಳೆಲ್ಲಾ ಭಕ್ತಿ ಗೀತೆಗಳೇ ಆಗಿವೆ. ಇವುಗಳ ಆಯ್ದ ಅನುವಾದವೇ ಮೀರಾವಾಣಿಯಾಗಿದೆ. ಸಂಪಾದನೆ ಮತ್ತು ಅನುವಾದಕರು ಸಿದ್ಧಲಿಂಗ ಪಟ್ಟಣಶೆಟ್ಟಿಯವರು ೧೯೮೭ರಲ್ಲಿ ಮುದ್ರಣಗೊಂಡ ಇದು ಅನನ್ಯ ಪ್ರಕಾಶನ ಧಾರವಾಡದಿಂದ ಪ್ರಕಟಣೆಗೊಂಡಿದೆ. ಮೂವತ್ತು ಗೀತೆಗಳ ಅನುವಾದ ಇಲ್ಲಿದೆ. ಮೊದಲು ಹಿಂದಿಗೀತೆಗಳನ್ನು ಹೇಳಲಾಗಿದೆ. ನಂತರ ಅದರ ಅನುವಾದ ಮಾಡಲಾಗಿದೆ.

ಉತ್ತರ ಭಾರತದ ಮಧ್ಯಕಾಲೀನ ಇತಿಹಾಸ ಮುಸ್ಲಿಂ ದಾಳಿಗಳಿಂದ ಒಂದು ರಣರಂಗವಾಗಿತ್ತು. ದಕ್ಷಿಣ ಭಾರತದಲ್ಲಿ ಹುಟ್ಟಿದ ಭಕ್ತಿ ಪಂಥ ಉತ್ತರದ ಕಡೆ ಸರಾಗವಾಗಿ ಹರಿಯಲಿಲ್ಲ, ರಾಜಸ್ಥಾನವು ಉತ್ತರ ಭಾರತಕ್ಕಿಂತ ಭಿನ್ನವಾಗಿರಲಿಲ್ಲ. ಅದು ಕೂಡ ಯುದ್ಧಗಳು ಗೃಹಕಲಹಗಳಿಂದಲೇ ತುಂಬಿತ್ತು. ಇದರಿಂದ ಬೇಸತ್ತಿದ್ದ ಜನತೆಗೆ ಮೀರಾಬಾಯಿ ತನ್ನ ಧರ್ಮ, ಭಕ್ತಿ, ಸಂಗೀತದಿಂದ ಜನರಿಗೆ ಸಮಾಧಾನ ಶಾಂತಿಯ ಅಮೃತವನ್ನು ನೀಡಿದಳು. ಮೀರಾ ಬಹುಬೇಗನೆ ಜನಪ್ರಿಯತೆ ಗಳಿಸಿದಳು. ಉತ್ತರದಲ್ಲಿ ಭಕ್ತಿಚಳುವಳಿಗೆ ಚಾಲನೆ ನೀಡಿದ ಕಬೀರ್‌ದಾಸ, ಜಾಯ್‌ಸೀ, ಸೂರ್‌ದಾಸ್, ತುಲಸೀದಾಸರಂತೆ ಇವಳ ಕೊಡುಗೆಯೂ ಅಪಾರ. ಇವರೆಲ್ಲಾ ಸ್ವಲ್ಪ ಹಿಂದೆ ಮುಂದೆ ಮೀರಾಳ ಸಮಕಾಲೀನರು.

ಕ್ರಿ.ಶ. ೧೫೦೩ ರಲ್ಲಿ (ವಿಕ್ರಮ ಸಂವತ್ಸರ ೧೫೬೦) ರಾಜಸ್ಥಾನದ ಮೇತಾಡದ ಹತ್ತಿರ ಕುಡಕೀ ಎಂಬಲ್ಲಿ ಮೀರಾಳ ಜನನವಾಯಿತು. ಚಿತ್ತಾಡದ ರಾಣಾ ಸಾಂಗನ ಹಿರಿಯ ಮಗ ಭೋಜರಾಜನನ್ನು ಮದುವೆಯಾದಳು. ಬಹುಬೇಗ ವಿಧವೆಯಾಗಿ ಗಂಡನ ಮನೆಯವರ ಕಿರುಕುಳ ತಾಳಲಾರದೇ ಅಲೆಮಾರಿ ಜೀವನ ನೆಡೆಸಿದಳು. ಭಕ್ತಿ ಕವಿಯತ್ರಿ ಈಕೆ ತನ್ನ ಆರಾಧ್ಯ ದೈವವಾದ ಕೃಷ್ಣನನ್ನು ಕುರಿತು ಹಾಡಿದ್ದಾಳೆ. ಅನುಸಂಧಾನ ಮಾಡಿಕೊಂಡಿದ್ದಾಳೆ. ಅನುವಾದಕ ಹೇಳುವಹಾಗೆ ''ಸಂಗೀತ, ನೃತ್ಯ, ಕಾವ್ಯಗಳ ಅಂಗಳಗಳಲ್ಲಿ ಏಕಕಾಲಕ್ಕೆ ಯಶಸ್ವಿಯಾಗುವ ಮೀರಾ ಗೀತೆಗಳಲ್ಲಿ ಅಸಂಖ್ಯ ರಾಗ ರಾಗಿಣಿಗಳಿವೆ. ಅಲ್ಲಿ ಭಕ್ತ ಹೃದಯದ ಭಜನೆಗಳ ಸ್ವರೂಪವಿದೆ. ಸಾಹಿತ್ಯಕವಾಗಿ ಗೀತಕಾವ್ಯದ ಉದ್ಗಾರಗಳು ಮಿಡಿದಿವೆ. ಜೀವನಸತ್ಯ ಮತ್ತು ಕಾವ್ಯ ಸಾಧನೆಗಳನ್ನು ಏಕೀಭವಿಸಿ ವ್ಯಕ್ತಿ ನಿಃಸೃತ ವ್ಯಕ್ತಿತ್ವ ಹಾಗೂ ಕೃತಿತ್ವಗಳನ್ನು ಒಂದಾಗಿಸಿ ಯಶಸ್ವಿಯಾದ ಮೀರಾಳ ಸಮರ್ಪಿತ ಕಾವ್ಯಕ್ಕೆ ಭಾವುಕರು, ವೈಚಾರಿಕರು ಕೂಡಿಯೇ ಸಮರ್ಪಿತರಾಗುತ್ತಾರೆ. ಅಧ್ಯಾತ್ಮಿಕ ಅನುಭೂತಿಯನ್ನು ಸಿದ್ಧಿಸಿಕೊಂಡು ಲೌಕಿಕ ಅನುಭವವನ್ನು ಸಾಧಿಸಿಕೊಂಡವರಿಗಿಂತ ಸ್ಪಷ್ಟವಾಗಿ ಚೊಕ್ಕಟವಾಗಿ ಬರೆದದ್ದು ಮೀರಾಳ ಘನ ಪ್ರತಿಭೆಗೆ ಸಾಕ್ಷಿ''[೨] ಕೌಟುಂಬಿಕ ಜೀವನದಿಂದ ವಿಮುಖಳಾದ ಮೀರಾಳ ಭಕ್ತಿ, ಅನುರಾಗ ಕೃಷ್ಣನಲ್ಲಿ ಕೇಂದ್ರೀಕೃತಗೊಂಡಿದೆ. ಅನ್ಯಲೋಕವನ್ನು ಸೃಷ್ಟಿಸಿದೆ. ಮೀರಾಳದು ಅನಾಸ್ಥೆಯ ಕಾವ್ಯವಲ್ಲ ಆದರೆ ಇದನ್ನು ಆಶಯ, ಆಸ್ಥೆಯ ಕಾವ್ಯ ಎಂದೂ ಕರೆಯಲಾಗದು. ಲಿಂಗ ಬೇಧವಿಲ್ಲದೆ ಪ್ರತಿ ವ್ಯಕ್ತಿಯನ್ನು, ಆಳುವ, ತಟ್ಟುವ, ಕಲಕುವ ವರ್ಣಾನಾತೀತ ಅತೃಪ್ತಿಯ ಮೊನಚಿನಿಂದ ಪುಟಿದೇಳುವ ಅಲೋಕ ಭಾವಗಳ ತುಡಿತಗಳನ್ನು ಅತ್ಯಂತ ತೀವ್ರವಾಗಿ ಮೂರ್ತೀಕರಿಸುವುದರಿಂದ ಮೀರಾ ಕಾವ್ಯ ಅಮರವಾಗುತ್ತದೆ. ಸಿದ್ಧಲಿಂಗ ಪಟ್ಟಣ ಶೆಟ್ಟರು ತಮಗೆ ಇಷ್ಟವಾದ ಮೀರಾಳ ಕಾವ್ಯಗಳನ್ನು ಇಲ್ಲಿ ಅನುವಾದಿಸಿದ್ದಾರೆ. ಅವರೇ ಹೇಳುವಂತೆ ''ಮೀರಾಳ ಅತ್ಯಧಿಕ ಪ್ರಚಲಿತವಿರುವ ಗೀತೆಗಳ ಪ್ರಚಲಿತವಿರುವ ಭಾಷೆ ಸ್ವರೂಪಗಳನ್ನು ಅವಳ ಬದುಕಿನ ಏರುಪೇರುಗಳಿಗೆ ಹೊಂದುವಂತೆ ಆಯ್ದು ಸಂಕಲಿಸಿ ಅವುಗಳ ನಿರ್ದಿಷ್ಟ, ನೇರ ಗದ್ಯಾರ್ಥ ನೀಡಲು ಈ ಸಂಗ್ರಹದಲ್ಲಿ ಯತ್ನಿಸಿರುವೆ. ಮೀರಾ ಕಾವ್ಯದ ಮೂಲ ರಾಜಸ್ಥಾನೀ ಸ್ವರೂಪವನ್ನು ನಾನು ತೆಗೆದುಕೊಂಡಿಲ್ಲ, ಸಂಶೋಧನೆ, ಭಾಷಾಶಾಸ್ತ್ರ ಇತ್ಯಾದಿ ದೃಷ್ಟಿಗಳನ್ನು ಬದಿಗಿಟ್ಟು, ಭಕ್ತರನ್ನು, ಭಾವುಕರನ್ನು, ಮೀರಾಳ ಪ್ರಶಂಸಕರನ್ನು ಹಿಂದೀ ಭಾಷೇಯ ಬಗ್ಗೆ ತಿಳಿಯ ಬಯಸುವವರನ್ನು ಹಾಗೂ ಸಂಗೀತಗಾರರನ್ನು ಮನಸ್ಸಿನಲ್ಲಿಟ್ಟುಕೊಂಡು ಈ ಗೀತ ರೂಪಗಳನ್ನು ಕಲೆ ಹಾಕಿದ್ದೇನೆ. ಹಾಡುವವರು ಅನೇಕ ಸಲ ಅರ್ಥಗಳನ್ನು ಭಾವಿಸಿದೆ. ಅವಿಷ್ಕರಿಸಲಾಗದೇ ಸ್ವರ, ಲಯಗಳಿಗೆ ಮಾತ್ರ ಬದ್ಧರಾಗಿ ರಾಗಿಸುವುದರಿಂದ ಮೀರಾ ಪದಗಳ ಅರ್ಥವಲಯಗಳು ಬೆಳಕು ಚಿಮ್ಮದೇ ಉಳಿದು

ಬಿಡುವುದನ್ನು ಬಹಳ ಕಡೆ ಗಮನಿಸಿದ್ದೇನೆ. ಅರ್ಥಗಳ ಆಂತರ್ಯಗಳನ್ನು ತಿಳಿದಾಗ ಹಾಡುವ ಗಾಯಕನ ಧ್ವನಿಯನ್ನು ಮೀರಾಳ ಆಕ್ರಂದನವು ಹೆಚ್ಚು ಸ್ಪಂದಿಸುವುದು ಶಕ್ಯ ಎಂದು ನನಗನಿಸಿದೆ''[೪] ಮಾದರಿಗಳು ಈ ಈರೀತಿಯಾಗಿವೆ.

''ಬಸೋ ಮೋರೇ ನೈನನ ಮ್ಹೇ ನಂದಲಾಲ|

ಮೋಹನಿ ಮೂರತಿ ಸಾಂವರಿ ಸೂರತಿ ನೈನಾ ಬನೇ ವಿಸಾಲ|

ಅಧರ ಸುಧಾರಸ ಮುರಲೀ ರಾಜತಿ ಉರ ವೈಜಂತೀ ಮಾಲ||

ಛುದ್ರಘಂಟಿಕಾ ಕಟಿತಟ ಸೋಭಿತ ನೂಪುರ ಸಬದ ರಸಾಲ|

ಮೀರಾ ಪ್ರಭು ಸಂತನ ಸುಖದಾ ಈ ಭಕ್ತ ಬಛಲ ಗೋಪಾಲ||

ಹೇ ನಂದ ಪುತ್ರ ಕೃಷ್ಣ, ನೀನು ನನ್ನ ಕಣ್ಣುಗಳಲ್ಲಿ ವಾಸಿಸು ನಿನ್ನದು ಮೋಹಕ ಮೂರ್ತಿ, ದೇಹದ ಸುರತಿ ಶ್ಯಾಮ ಶೋಭೆಯಿಂದ ಕೂಡಿದೆ. ನಿನ್ನ ಕಣ್ಣು ವಿಶಾಲವಾಗಿದೆ. ತುಟಿಗಳ ಮೇಲೆ ಅಮೃತ ರಸದಂತೆ ಜೀವನ ನೀಡುವ ಕೊಳಲು ರಾರಾಜಿಸುತ್ತದೆ. ಎದೆಯ ಮೇಲೆ ವೈಜಯಂತಿಯ ಮಾಲೆಯಿದೆ. ಕಟಿ ತಟ ನಡದಲ್ಲಿ ಚಿಕ್ಕ ಚಿಕ್ಕ ಗಂಟೆಗಳು ಶೋಭಿಸುತ್ತಿವೆ. ನೂಪುರದ ಧ್ವನಿ ಇಂಪಾಗಿದೆ. ಮೀರಾ ಹೇಳುತ್ತಾಳೆ. ಪ್ರಭು ಕೃಷ್ಣನು ಯಾವಾಗಲೂ ಸಂತರಿಗೆ ಸುಖ ನೀಡುವಂಥವನು. ಅದಕ್ಕೆಂದೇ ಅವನಿಗೆ ಭಕ್ತ-ವತ್ಸಲ ಎಂದು ಕರೆಯಲಾಗುತ್ತದೆ''[೫]

''ಪಗ ಘುಂಘುರು ಬಾಂಧ ಮೀರಾ ನಾಚಿರೇ||

ಮ್ಹೈ ತೋ ಮೇರೆ ನಾಯಣ ಕಿ ಆಪಹಿ ಹೋ ಗಇ ದಾಸೀರೇ|

ಲೋಗ ಕಹ್ಯೆ ಮೀರಾ ಭಇ ಬಾವರೀ, ನ್ಯಾಟ ಕಹ್ಯೆ ಕುಲನಾಸೀರೇ||

ವಿಷ ಕಾ ಪ್ಯಾಲಾ ರಾಣಾಜಿ ಭೇಜ್ಯಾ, ಪೀವತ ಮೀರಾ ಹ್ನಾಸೀರೇ|

ಮೀರಾ ಕೇ ಪ್ರಭು ಗಿರಿಧರ ನಾಗರ, ಸಹಜ ಮಿಲೇ ಅವಿನಾಸೀರೇ||

ಕಾಲುಗಳಲ್ಲಿ ಗೆಜ್ಜೆ ಕಟ್ಟಿಕೊಂಡು ನಾನು ಕುಣಿಯ ತೊಡಗಿದ್ದೇನೆ. ಈಗ ನಾನಾಗಿಯೇ ನನ್ನ ನಾರಾಯಣ ಕೃಷ್ಣನಿಗೆ ಸಮರ್ಪಿತಳಾಗಿದ್ದೇನೆ. ಅವನ ದಾಸಿಯಾಗಿದ್ದೇನೆ. ನನ್ನ ಈ ಪ್ರೀತಿಪೂರ್ಣ ನೃತ್ಯವನ್ನು ನೋಡಿ, ನಾನು ಮತಿಭ್ರಮಿತಳಾಗಿದ್ದೇನೆ. ಹುಚ್ಚಿಯಾಗಿದ್ದೇನೆ ಎಂದು ಜನರು ಹೇಳುತ್ತಿದ್ದಾರೆ. ಮನೆತನದ ಕುಲದ ಮರ್ಯಾದೆ ಘನತೆಯನ್ನು ನಾಶಪಡಿಸಿದವಳು ಎಂದು ಸಂಬಂಧಿಕರು ನನ್ನನ್ನು ಹಳಿಯುತ್ತಿದ್ದಾರೆ. ನನ್ನನ್ನು ಕೊಲ್ಲಲೆಂದು ರಾಣಾ ಕಳಿಸಿದ್ದ ವಿಷ ಪಾತ್ರೆಯನ್ನು ನಾನು ನಗುನಗುತ್ತಲೇ ಕುಡಿದು ಬಿಟ್ಟೆ, ಮೀರಾ ಹೇಳುತ್ತಾಳೆ. ನನ್ನ ಪ್ರಭು ಕೃಷ್ಣ ಗಿರಿಧರ, ರಸಿಕ, ಅವಿನಾಶಿಯಾದ ಅವನು ನನಗೆ ಸಹಜವಾಗಿ ಲಭಿಸಿದ್ದಾನೆ''[೬]

''ನೀಂದ ನಹ್ನೀ ಆವೇ ಜೀ ಸಾರಿ ರಾತ||

ಕರವಟ ಲೇಕರ ಸೇಜ ಟಟೋಲ್ಯೋ, ಪಿಯಾ ನಹ್ನೀ ಮೋರೇ ಸಾಥ|

ಸಗರೀ ರೈನ ಮೋಹೇ ತರಫತ ಬೀತೀ, ಸೋಚ ಸೋಚ ಜಿಯಾ ಜಾತ|

ಮೀರಾ ಕೆ ಪ್ರಭು ಗಿರಿಧರ ನಾಗರ, ಆಜ ಭಯೋ ಪರಭಾತ||

ಕೃಷ್ಣನಿಲ್ಲದ ನನಗೆ ರಾತ್ರಿಯಲ್ಲ ನಿದ್ರೆ ಬರುವುದಿಲ್ಲ ನನ್ನ ಜೊತೆಗೆ ನನ್ನ ಪ್ರಿಯತಮನಿಲ್ಲ, ಹೀಗಾಗಿ ರಾತ್ರಿಯಿಡೀ ಮಗ್ಗಲು ಹೊರಳಿಸುತ್ತಾ ಹಾಸಿಗೆಯನ್ನು ತಬ್ಬುತ್ತಿರುತ್ತೇನೆ. ಪೂರ್ಣರಾತ್ರಿ ನೋವಿನಲ್ಲಿ, ದುಃಖದಲ್ಲಿಯೇ ಕಳೆಯುತ್ತದೆ. ಮಿಲನದ ಪ್ರಸಂಗಗಳನ್ನು ನೆನೆನೆನೆದು, ಯೋಚಿಸುತ್ತಾ ಜೀವವೇ ಪ್ರಾಣವೇ ಹೋದ ಹಾಗಾಗುತ್ತದೆ. ಮೀರಾ ಹೇಳುತ್ತಾಳೆ. ನನ್ನ ಪ್ರಭು ಗಿರಿಧರ ರಸಿಕ ಕೃಷ್ಣ, ಇಂದು ಸಹ ಅವನನ್ನು ನೆನೆನೆನೆಯುತ್ತಾ ಎಚ್ಚರವಾಗಿದ್ದು ಬೆಳಗಾಗಿಬಿಟ್ಟಿದೆ"[೬]

ಈ ಅನುವಾದವು ಕಾವ್ಯಾಂಶದಿಂದ ಕೂಡಿಲ್ಲ. ಮೀರಾಳ ಕವಿತಾ ಛಂದಸ್ಸಿನಲ್ಲಿ ರೂಪಾಂತರ ಗೊಂಡಿಲ್ಲದಿದ್ದರೂ ಚಿಂತನೆ ಮತ್ತು ಭಾವನೆಗಳು ಸುಂದರವಾಗಿ ಬಂದಿವೆ.

**೩.೩.೨. ನಾಟಕಗಳು**

**೧. ಆಷಾಡದ ಒಂದು ದಿನ**

ಈ ನಾಟಕವು ಪ್ರಸಿದ್ಧ ಹಿಂದೀ ನಾಟಕಕಾರರಾದ ಮೋಹನರಾಕೇಶರ ಜನಪ್ರಿಯ ನಾಟಕವಾಗಿದೆ. ೧೯೭೩ ರಲ್ಲಿ ಪಟ್ಟಣಶೆಟ್ಟರು ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಈ ಕೃತಿಯು ೧೯೭೮ ರಲ್ಲಿ ದ್ವಿತೀಯ ಮತ್ತು ೧೯೮೮ ರಲ್ಲಿ ತೃತೀಯ ಮುದ್ರಣವನ್ನು ಕಂಡಿದೆ. ಧಾರವಾಡದ ಅನನ್ಯ ಪ್ರಕಾಶನದಿಂದ ಇದು ಪ್ರಕಟಣೆಗೊಂಡಿದೆ.

ಕವಿ ಪಟ್ಟಣ ಶೆಟ್ಟರು ನಾಟಕವನ್ನು ಕಾವ್ಯಾತ್ಮಕ, ಸಂಭಾಷಣೆಗಳಿಂದ ಅನುವಾದ ಮಾಡಿದ್ದಾಳೆ. ಸ್ವತಂತ್ರ ನಾಟಕವಿದು ಎಂದು ಪರಿಗಣಿಸಬಹುದಾದ ನಾಟಕವಿದು ಅಂದರೆ ಮೋಹನ ರಾಕೇಶರನ್ನು ಮರೆಸುವ ಅನುವಾದ ಇಲ್ಲಿ ಶ್ರೇಷ್ಠ ಮಟ್ಟದ್ದಾಗಿದೆ. ಕಾಳಿದಾಸನ ಬದುಕಿನ ಹೊಸ ಮುಖಗಳನ್ನು ಈ ನಾಟಕ ತಿಳಿಸುತ್ತದೆ. ಕಾಳಿದಾಸನಿಂದ ದೂರವಾದ ನಾಯಕಿ ಮಲ್ಲಿಕಾ ಇವರಿಬ್ಬರ ನಡುವೆ ಬರುವ ರಾಣಿ ಪ್ರಿಯಂಗುಮಂಜರಿ, ಮಲ್ಲಿಕಾಳ ತಾಯಿ ಅಂಬಿಕಾ, ಖಳನಾಯಕನ ಛಾಯೆ ಹೊತ್ತು ವಿಲೋಮ, ಕವಿ ಕಾಳಿದಾಸ ಇವರೆಲ್ಲರ ನಡುವೆ ಹಾದು ಹೋಗುವ ಆಷಾಡ ಮಾಸದ ಸಮೀಕರಣ ಸುಂದರವಾಗಿ ಮೂಡಿಬಂದಿದೆ.

ಈ ಮೂರಂಕದ ನಾಟಕವು ಆರಂಭವಾಗುವುದೇ ಚೇತೋಹಾರಿಯಾದ ಆಷಾಡದ ಪ್ರಕೃತಿಯ ವರ್ಣನೆಯಿಂದ ಕಾಳಿದಾಸ ಮತ್ತು ಮಲ್ಲಿಕಾಳ ನಡುವಿನದು ಪವಿತ್ರವಾದ ಭಾವನಾತ್ಮಕ ಸಂಬಂಧ, ಆದರೆ ತಾಯಿ ಅಂಬಿಕಾ ಸಂಪ್ರದಾಯಸ್ಥೆ, ನೀನು ಕಾಳಿದಾಸನೊಂದಿಗೆ ಮದುವೆಯಾಗಬೇಕೆಂದು ಬಯಸುತ್ತಾಳೆ. ಆದರೆ ಅದು ಸಾಧ್ಯವಾಗಲಾರದ ಕಾರಣ ತಾಯಿಗೆ ಮಗಳ ಮೇಲೆ ಕೋಪ ತಾಯಿ ಯಾವಾಗಲೂ ಒಗಟಿನಿಂದ ಕೂಡಿದ ಕೊಂಕು ಮಾತುಗಳನ್ನಾಡುತ್ತಾಳೆ. ಈ ನಡುವೆ ಆಕಸ್ಮಿಕವಾಗಿ ಉಜ್ಜಯಿನಿಯ ಆಚಾರ್ಯರು ರಾಜಭಟರೊಂದಿಗೆ ಬರುತ್ತಾರೆ. ಅವರು ಕಾಳಿದಾಸನಿಗೆ ಋತುಸಂಹಾರ ಕೃತಿಯನ್ನು ಮೆಚ್ಚಿ ರಾಜ ಕವಿ ಎಂಬ ಬಿರುದು ನೀಡುವುದಾಗಿ ತಿಳಿಸುತ್ತಾರೆ. ಆಗ ಅಲ್ಲಿನ ಜನಗಳು ನಮ್ಮ ನಡುವೆ ಬೆಳೆದ ಕಾಳಿದಾಸನಿಗೆ ಗೌರವ ದೊರಕಿತೆಂದು ಸಂತೋಷ ಪಡುತ್ತಾರೆ. ಕಾಳಿದಾಸನಿಗೆ ಉಜ್ಜಯಿನಿಗೆ ಬರಲು ಆಹ್ವಾನ ನೀಡಲಾಗುತ್ತದೆ. ಆದರೆ ಕಾಳಿದಾಸ ತಾನು ಹುಟ್ಟಿ ಬೆಳೆದು ನಾಡು, ನೆಡೆದಾಡಿದ ನೆಲ, ಪ್ರೀತಿಸಿದ ಪ್ರಕೃತಿ, ಒಡನಾಡಿ ಜನಗಳನ್ನು ಬಿಟ್ಟು ಹೋಗಲು ಸಾಧ್ಯವಿಲ್ಲ. ನನ್ನದು ಇಲ್ಲಿನ ಪ್ರತಿಯೊಂದು ವಸ್ತು,

ಜೀವಿಗಳೊಂದಿಗೆ ಬಿಡಿಸಲಾರದ ಅವಿನಾಭಾವ ಸಂಬಂಧವಿದೆ. ನನಗೆ ರಾಜಕವಿ ಬಿರುದುಗಿಂತ, ಇದರೊಂದಿಗೆ ಸಾಗಿಸುವ ಬದುಕೇ ದೊಡ್ಡದೆಂದು ಭಾವಿಸುತ್ತಾನೆ. ವಿಲೋಮ, ಅಂಬಿಕ, ಕಾಳಿದಾಸನಿಗೆ ಸೊಕ್ಕು ಅದಕ್ಕೆ ಅವನು ಈ ರೀತಿಯಾಗಿ ಮಾತನಾಡುತ್ತಾನೆ ಎಂದು ಹೇಳುತ್ತಾರೆ. ಆದರೆ ಮಲ್ಲಿಕಾ ರಾಜ ಮರ್ಯಾದೆಯೆಂದು ಸಂತೋಷ ಪಡುತ್ತಾಳೆ. ಕಾಳಿದಾಸನಲ್ಲಿಗೆ ಬಂದು ಉಜ್ಜಯನಿಯ ಹೊಸನೆಲ. ಹೊಸಗಾಳಿ, ಹೊಸಪ್ರಕೃತಿ, ಇನ್ನಷ್ಟು ಹೊಸ ಕೃತಿಗಳನ್ನು ರಚಿಸಲು ಸ್ಫೂರ್ತಿದಾಯಕವಾಗಬಹುದು. ನೀವು ಖಂಡಿತವಾಗಿಯೂ ಅಲ್ಲಿಗೆ ಹೋಗಬೇಕೆಂದು ಒತ್ತಾಯಪಡಿಸಿ ಕಳಿಸಿಕೊಡುತ್ತಾಳೆ.

ಎರಡನೆಯ ಅಂಕದಲ್ಲಿ ಇದಾದ ಕೆಲ ವರುಷಗಳ ನಂತರ ಕಾಳಿದಾಸ ತಾನು ಮದುವೆಯಾದ ಗುಪ್ತರಾಜಕುಮಾರಿ ಪ್ರಿಯೆಂಗು ಮಂಜರಿಯ ಜೊತೆಗೆ ತಾನು ಹುಟ್ಟಿ ಬೆಳೆದ ಸ್ಥಳಕ್ಕೆ ಬರುತ್ತಾನೆ. ಆದರೆ ಅವನು ಮಲ್ಲಿಕಾಳನ್ನು ಮಾತ್ರ ಮಾತನಾಡಿಸುವುದಿಲ್ಲ. ಪ್ರಿಯಂಗು ರಾಜಕುಮಾರಿ ಮಲ್ಲಿಕಾಳ ಮನೆಗೆ ಬರುತ್ತಾಳೆ. ಕಾಳಿದಾಸನ ಕಾವ್ಯಗಳಿಗೆ ಪ್ರೇರಣೆ ನೀಡಿದ ಪ್ರಕೃತಿಯನ್ನು, ಮಲ್ಲಿಕಾಳನ್ನು ನೋಡುತ್ತಾಳೆ. ಬಹಳ ಅನಾದಾರವಾಗಿ ಮಾತನಾಡುತ್ತಾಳೆ. ಆದರೆ ಮಲ್ಲಿಕಾಳದು ಸಮಚಿತ್ತದ ಭಾವ, ಕಾಳಿದಾಸನಿಗೆ ಮದುವೆಯಾದ ವಿಷಯ ತಿಳಿದರೂ ವ್ಯಥೆಪಡುವುದಿಲ್ಲ. ಸಂತೋಷ ಪಡುತ್ತಾಳೆ. ಅವನು ಇನ್ನಷ್ಟು ಕಾವ್ಯಗಳನ್ನು ರಚಿಸಿ ಖ್ಯಾತಿ ಹೊಂದಬೇಕೆಂಬುದು ಆಕೆಯ ಬಯಕೆಯಾಗಿರುತ್ತದೆ. ಕಾಳಿದಾಸ ಈಗ ಕೇವಲ ಕವಿಮಾತ್ರ ಆಗಿರದೇ ಕಾಶ್ಮೀರದ ರಾಜನೆಂದು ತಿಳಿದು ಹೆಮ್ಮೆಪಡುತ್ತಾಳೆ. ಸ್ವಲ್ಪ ದಿನಗಳ ಕಾಲ ಇದ್ದು ಆಡಳಿತ ನೆಡೆಸುವ ಸಲುವಾಗಿ ಕಾಳಿದಾಸ ಪ್ರಿಯಂಗುಮಂಜರಿ, ರಾಜ ಪರಿವಾರ ಎಲ್ಲವೂ ಕಾಶ್ಮೀರಕ್ಕೆ ಹೊರಟು ಹೋಗುತ್ತಾರೆ.

ಮೂರನೇ ಅಂಕದಲ್ಲಿ ಮಲ್ಲಿಕಾ ಕಾಶ್ಮೀರದಿಂದ ಬರುವ ವ್ಯಾಪಾರಿಗಳಿಂದ ಕಾಳಿದಾಸನ ಮೇಘದೂತ, ರಘುವಂಶ ಕಾವ್ಯಗಳನ್ನು ತರಿಸಿ ಓದ ತೊಡಗುತ್ತಾಳೆ. ಕೆಲ ವರುಷಗಳ ನಂತರ ಕಾಳಿದಾಸ ಮಲ್ಲಿಕಾಳ ಹತ್ತಿರ ಬರುತ್ತಾನೆ. ಅವಳು ಆತನ ಕೃತಿಗಳನ್ನು ಹೊಗಳುತ್ತಾಳೆ. ಅಲ್ಲದೆ ಬರೆಯಲು ಒಂದು ಪುಸ್ತಕ ತಯಾರಿಸಿರುವುದಾಗಿ ಹೇಳಿ ತಂದು ಕೊಡುತ್ತಾಳೆ. ಆಗ ಕಾಳಿದಾಸ ಮಲ್ಲಿಕಾ ನಾನು ನಿನ್ನಿಂದ ಈ ಪ್ರಕೃತಿಯಿಂದ ದೈಹಿಕವಾಗಿ ಮಾತ್ರ ದೂರವಾದೆ ಬೇಡವಾದ ಒತ್ತಡದ ಬದುಕು ಸಾಗಿಸಿದೆ. ನನ್ನ ಕಾವ್ಯದಲ್ಲಿ ಬರುವ ವಿರಹ ವೇದನೆ ನನ್ನ ನಿನ್ನ ನಡುವಿನದೇ ಆಗಿದೆ. ನೀನೇ ನನ್ನ ಕಾವ್ಯದ ಜೀವಾಳ, ನಿನ್ನ ನಿಷ್ಕಾಮ ಪ್ರೀತಿ ನನ್ನ ಕಾವ್ಯಕ್ಕಿಂತ ದೊಡ್ಡದು; ನೀನು ತಯಾರಿಸಿದ ಈ ಪುಸ್ತಕದ ಹಾಳೆಗಳ ಮೇಲಿನ ಆನಂದ ಬಾಷ್ಪಗಳು ಅದ್ಭುತ ಕಲೆಯಾಗಿದೆ ಎಂದು ಹೇಳುತ್ತಾನೆ. ಅಷ್ಟರಲ್ಲಿ ಮಲ್ಲಿಕಾಳ ಮಗುವಿನ ಅಳುವ ಧ್ವನಿ ಕೇಳುತ್ತದೆ. ಮಲ್ಲಿಕಾ ಇಷ್ಟವಿಲ್ಲದಿದ್ದರೂ, ಒತ್ತಡಗಳಿಗೆ ಒಳಗಾಗಿ ವಿಲೋಮನನ್ನು ಮದುವೆಯಾಗಿರುತ್ತಾಳೆ. ಆಗ ಕಾಳಿದಾಸ ಸುರಿವ ಅಷಾಢದ ಮಳೆಯಲ್ಲಿ ಹೊರಗೆ ಹೋಗುತ್ತಾನೆ.

ಈನಾಟಕವನ್ನು ಮತ್ತು ಅನುವಾದವನ್ನು ಕುರಿತು ಬನ್ನಂಜೆ ಗೋವಿಂದಾಚಾರ್ಯರು ಈ ರೀತಿ ಹೇಳಿದ್ದಾರೆ. "ಕಾಳಿದಾಸನ ಬದುಕಿನಲ್ಲಿ ಕವಿಯ ಮುಕ್ಕಣ್ಣು ನೋಟ ಕಂಡ ಒಂದು ಮುಖ ಆಷಾಢದ ಒಂದು ದಿನ. ಮೂರು ಅಂಕಗಳ ಈ ನಾಟಕ ಮಹಾಕವಿ ಕಾಳಿದಾಸನ ಜೀವನದ ರೋಮಾಂಚಕ ಹಿನ್ನೆಲೆಯನ್ನು, ಕಾವ್ಯ ಸ್ಫೂರ್ತಿಯ ಸೆಲೆಯನ್ನು ಅರಸ ಹೊರಟ ಒಂದು ಪ್ರಯತ್ನ, ಬರಿಯ ಪ್ರಯತ್ನ ಅಲ್ಲ, ಯಶಸ್ವೀ ಪ್ರಯತ್ನ ಹಿಂದಿಯಲ್ಲಿದ್ದ ಈ ರಮ್ಯ

ನಿರ್ಮಿತಿಯನ್ನು ಕನ್ನಡಿಗರು ಓದುವುದು, ನೋಡುವುದು ಅವಶ್ಯವಿತ್ತು. ಈ ಕೆಲಸವನ್ನು ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಚೊಕ್ಕವಾಗಿ ಮಾಡಿದ್ದಾರೆ.”[೮]

### ೨. ಅಲೆಗಳಲ್ಲಿ ರಾಜ ಹಂಸಗಳು

ಹಿಂದೀ ನಾಟಕಕಾರರಾದ ಮೋಹನ್ ರಾಕೇಶರ ಅನುವಾದ ನಾಟಕ ಇದಾಗಿದೆ. ಸಿದ್ಧಲಿಂಗ ಪಟ್ಟಣಶೆಟ್ಟರು ೧೯೫೦ರಲ್ಲಿ ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅನನ್ಯ ಪ್ರಕಾಶನ ಧಾರವಾಡದಿಂದ ಇದು ಪ್ರಕಟಗೊಂಡಿದೆ. ಮೂರು ಅಂಕಗಳಿರುವ ಈ ನಾಟಕವು ೧೯೮೮ ರಲ್ಲಿ ಎರಡನೆಯ ಮುದ್ರಣ ಕಂಡಿದೆ.

ಗೌತಮಬುದ್ಧ ಮತ್ತು ಯಶೋಧರ ಭಿಕ್ಷುಗಳಾಗಿ ದಮ್ಮ ಪ್ರಸಾರಕ್ಕೆ ಹೊರಟನಂತರ ಮಲತಮ್ಮನಾದ ನಂದ ಮತ್ತು ಆತನ ಹೆಂಡತಿಯಾದ ಸುಂದರಿಯ ಸಂಭಾಷಣೆಯ ಮೂಲಕ ನಾಟಕ ಆರಂಭವಾಗಿ ಅಂತ್ಯಗೊಳ್ಳುತ್ತದೆ.

ನಂದನರಾಣಿ ಅಪ್ರತಿಮ ಸುಂದರಿ, ಅವಳು ಒಂದು ಸಲ ಕಾಮೋತ್ಸವವನ್ನು ಆಚರಿಸುತ್ತಾಳೆ. ನಗರದ ಎಲ್ಲಾ ಪ್ರಮುಖರನ್ನೂ ಅಹ್ವಾನಿಸುತ್ತಾಳೆ. ಆದರೆ ಯಾರೂ ಬರುವುದಿಲ್ಲ ಈ ಮೊದಲು ತನ್ನ ಕಾಮೋತ್ಸವದ ಸಡಗರದ ಸಂಭ್ರಮದಲ್ಲಿ ದಾಸಿಯಾದ ಅಲಕಳೊಂದಿಗೆ ಮಾತನಾಡುತ್ತಿರುವಾಗ ಮಾತು ಸಿದ್ಧಾರ್ಥರ ಕಡೆಗೆ ಹೊರಳುತ್ತದೆ. ಸಿದ್ಧಾರ್ಥ ಎಲ್ಲವನ್ನೂ ಬಿಟ್ಟ ಬುದ್ಧನಾದ ಆದರೆ ಸುಂದರಿ ಭೌತಿಕ ಸುಖ ಸಂಪತ್ತಿನಲ್ಲಿಯೇ ಮಾನವ ಜನ್ಮದ ಸಾರ್ಥಕತೆಯಿದೆಯೆಂದು ತಿಳಿದು ಕೊಂಡವಳು. ಅದಕ್ಕಾಗಿ ಅವಳು ಬುದ್ಧ ಮತ್ತು ಯಶೋಧರಳನ್ನು ಕುರಿತು ಬಹು ಮುಖ್ಯವಾದ ಪ್ರಶ್ನೆಗಳನ್ನು ಎತ್ತುತ್ತಾಳೆ. ರಾಜಕುಮಾರ, ಸಿದ್ಧಾರ್ಥರು ಇಂದು ಗೌತಮ ಬುದ್ಧರಾಗಿದ್ದರೆ ಅದರ ಶ್ರೇಯಸ್ಸು ಯಶೋಧರಾದೇವಿಗೆ ಸಲ್ಲಬೇಕು. ಏಕೆಂದರೆ ‘‘ಯಶೋಧರಾ ದೇವಿಯ ಆಕರ್ಷಣೆ ರಾಜಕುಮಾರ ಸಿದ್ಧಾರ್ಥರನ್ನು ತನ್ನ ಹತ್ತಿರ ಹಿಡಿದಿಡಲು ಸಾಧ್ಯವಾಗಿದ್ದರೆ ಇಂದು ಅವರು ಸಿದ್ಧಾರ್ಥರಾಗಿಯೇ ಉಳಿಯುತ್ತಿದ್ದರು. ಹೆಣ್ಣಿನ ಆಕರ್ಷಣೆ ಪುರುಷನನ್ನು ಪುರುಷನನ್ನಾಗಿಸಿದರೆ ಅವಳ ವಿಕರ್ಷಣೆ ಅವನನ್ನು ಗೌತಮ ಬುದ್ಧನನ್ನಾಗಿಸಿದೆ.”[೯] ಎಂದು ಹೇಳುತ್ತಾಳೆ.

‘ಆಸೆಯೇ ದುಃಖಕ್ಕೆ ಮೂಲ’ ಎಂದು ಹೇಳಿದ ಗೌತಮ ಬುದ್ಧರ ಬೋಧನೆ ಮತ್ತು ಅವರ ನಡವಳಿಕೆಯನ್ನು ಕುರಿತು “ಗೌತಮ ಬುದ್ಧರು ಜ್ಞಾನಿಯಾಗಿದ್ದಾರೆ. ಇಚ್ಛೆಕಾಮನೆಗಳನ್ನು ಗೆದ್ದಿದ್ದಾರೆ ಎಂದು ಜನ ಹೇಳುತ್ತಾರೆ. ಆದರೆ ನಾನು ಕೇಳುತ್ತೇನೆ. ಇಚ್ಛೆಗಳನ್ನು ಗೆಲ್ಲಬೇಕೆಂಬುದೂ ಮನಸ್ಸಿನ ಒಂದು ಇಚ್ಛೆ ಅಲ್ಲವೇ. ಅಲ್ಲದೆ ಇಂಥ ಇಚ್ಛೆ ಮನಸ್ಸಿನಲ್ಲಿ ಏಕೆ ಹುಟ್ಟುತ್ತದೆ”[೯] ಎಂದು ಪ್ರಶ್ನಿಸುತ್ತಾಳೆ.

ಸುಂದರಿ ತನ್ನ ಗಂಡನಾದ ನಂದ ಯಾವಾಗಲೂ ತನ್ನಂತೆಯೇ ಲೌಕಿಕ ಬದುಕಿನಲ್ಲಿ ಆಸಕ್ತಿಯಾಗಿರಬೇಕು ಎಂಬ ಬಯಕೆಯುಳ್ಳವಳು. ಒಂದು ಸಲ ನಂದ ಕಾಡಿನಲ್ಲಿ ಪ್ರಾಣಿಯೊಂದರೊಡನೆ ಹೋರಾಡಿ ವಿಕಾರವಾಗಿ ಬರುತ್ತಾನೆ. ದೇಹದ ಸೌಂದರ್ಯ ಅಲಂಕಾರಗಳಲ್ಲಿ ವಿಶೇಷ ವ್ಯಾಮೋಹ ಹೊಂದಿದ್ದ ಸುಂದರಿ, ಪತಿಯ ಕುರೂಪತೆಯನ್ನು ಕಂಡು ಹೆದರುತ್ತಾಳೆ. ಬುದ್ಧನ ಶಿಷ್ಯನಾದ ಆನಂದ ನಂದನಿಗೆ ಬುದ್ಧ ದಮ್ಮದ ದೀಕ್ಷೆಕೊಡಲು ಯತ್ನಿಸಿದರೂ ನಂದ ಅದಕ್ಕೆ ಒಪ್ಪುವುದಿಲ್ಲ. ಬೌದ್ಧ ಧರ್ಮ ಹೇಳುವುದು ಮನುಷ್ಯರೆಲ್ಲರೂ ಶಾಂತಿಯರಮನೆಯ ಕಡೆಗೆ

ನಡೆಯಬೇಕು. ಕಣ್ಣುಗಳಲ್ಲಿ ಪ್ರೀತಿಯ ಕಡಲುಗಳನ್ನು ತುಂಬಿಕೊಂಡಿರಬೇಕು. ನೊಂದ ಹೃದಯಗಳಿಗೆ ಪ್ರೇಮದ ಸಿಂಚನ ಮಾಡಿಸಬೇಕೆಂಬುದಾಗಿದೆ. ಆದರೆ ಮಲತಮ್ಮ ನಂದ ಮತ್ತು ನಂದನ ಪತ್ನಿ ಸುಂದರಿ ಇದನ್ನು ಒಪ್ಪುವುದಿಲ್ಲ. ವಿಲಾಸಿ ಜೀವನ ನಡೆಸಬೇಕು ಹೆಚ್ಚು ಸುಖಸಂತೋಷಗಳನ್ನು ಈ ಜನ್ಮದಲ್ಲಿಯೇ ಅನುಭವಿಸಬೇಕೆಂಬುದಾಗಿರುತ್ತದೆ.

ಸುಖ ಎಂಬುದು ನಿಜವಾಗಿಯೂ ಸುಖವೇ ಅಲ್ಲ, ಅದು ಹಾಂವಸೆಯ ಮೇಲೆ ಜಾರುತ್ತಿರುವ ಕಾಲುಗಳ ಬಿಂದು, ಅನಿಸಿಕೆ ಮಾತ್ರ. ಅದು ಉಸುಕಿನಲ್ಲಿ ಇಂಗುತ್ತಿರುವ ನೀರಹನಿಯೊಂದಿರ ನರಳಾಟದ ಹಾಗೆ, ಆದರೆ ಆ ಅನಿಸಿಕೆ ನರಳಾಟವೇ ಬದುಕಿನ ಸಂಪೂರ್ಣ ಅರ್ಥವಲ್ಲವೆ? ಅದು ಈವರೆಗೆ ಬದುಕಿದ್ದರ ಪೂರ್ಣ ಪುರಸ್ಕಾರ ವಲ್ಲವೇ? ಎಂಬ ಜಿಜ್ಞಾಸೆಯನ್ನು ಈ ನಾಟಕ ಪ್ರೇಕ್ಷಕರಲ್ಲಿ ಹುಟ್ಟಿಸುವಲ್ಲಿ ಯಶಸ್ವಿಯಾಗುತ್ತದೆ. ಇಲ್ಲಿಯ ಸಂಭಾಷಣೆ ಗ್ರಂಥಸ್ತವಾಗಿದ್ದರೂ ಕಾವ್ಯಮಯವಾಗಿದೆ.

**೩. ಅಧೇ ಅಧೂರೇ**

ಈ ನಾಟಕದ ಮೂಲ ಲೇಖಕರು ಮೋಹನ್‌ರಾಕೇಶರೇ ಆಗಿದ್ದಾರೆ. ಈ ಹಿಂದೀ ನಾಟಕದ ಅನುವಾದವನ್ನು ಪಟ್ಟಣಶೆಟ್ಟರು ಅನುವಾದಿಸಿದ್ದಾರೆ. ೧೯೭೭ರಲ್ಲಿ ಮೊದಲ ಮುದ್ರಣ ಕಂಡ ಈ ನಾಟಕ ೧೯೮೯ ರಲ್ಲಿ ಎರಡನೆ ಮುದ್ರಣ ಕಂಡಿದೆ. ಧಾರವಾಡದ ಅನನ್ಯ ಪ್ರಕಾಶನದಿಂದ ಈ ನಾಟಕ ಪ್ರಕಟಣೆಗೊಂಡಿದೆ. ಪಟ್ಟಣ ಶೆಟ್ಟರು ಈ ನಾಟಕವನ್ನು ಅನುವಾದಿಸುವಾಗ ಬಳಸಿದ ಧಾರವಾಡದ ಪ್ರಾದೇಶಿಕ ಭಾಷೆ ಈ ನಾಟಕದ ವೈಶಿಷ್ಯವಾಗಿದೆ. ಅಧೇ ಆಧೂರೇ ಎಂದರೆ ಅಪೂರ್ಣರು ಎಂದರ್ಥ. ಒಂದರ್ಥದಲ್ಲಿ ಎಲ್ಲರೂ ಅಪೂರ್ಣರೇ, ಸಮಕಾಲೀನ ಬದುಕಿನ ವಾಸ್ತವತೆಯನ್ನು, ನಮ್ಮ ಸುತ್ತ ಮುತ್ತಲಿನ ಜೀವನದ ಹಲವಾರು ಮಹತ್ವದ ಮಗ್ಗಲುಗಳನ್ನು ವಿಡಂಬನಾತ್ಮಕವಾಗಿ ಚಿತ್ರಿಸುತ್ತಾರೆ. ಈ ನಾಟಕದಲ್ಲಿ ಬರುವ ಪಾತ್ರಗಳು, ಪರಿಸ್ಥಿತಿಗಳು, ಮನಸ್ಥಿತಿಗಳು ನಮ್ಮ ಸಮಾಜದಲ್ಲಿ ಹೇರಳವಾಗಿ ಕಾಣಸಿಗುವಂಥವುಗಳಾಗಿವೆ. ಈನಾಟಕವು ಐದು ವಿಭಿನ್ನ ಪಾತ್ರಗಳನ್ನು ನಿರ್ವಹಿಸುವ, ಒಬ್ಬವ್ಯಕ್ತಿಯ ಹಾಗೂ ಓರ್ವ ಸ್ತ್ರೀಯೊಂದಿಗಿನ ಸಂಬಂಧಗಳ, ಅಸಂಗತ ಎನ್ನಿಸಬಹುದಾದ ಆದರೆ ಸುಸಂಗತವಾದ ಬದುಕಿನ ಕತೆಯನ್ನು ಒಳಗೊಂಡಿದೆ. ಹಿಂದೀ ಲೇಖಕರಾದ ಓಮ್ ಶಿವಪುರಿ ಅವರು ಹೇಳುವಂತೆ ''ಇದು ಅನೇಕ ದೃಷ್ಟಿಯಿಂದ ಅರ್ಥಪೂರ್ಣವಾದ ನಾಟಕ. ಇಲ್ಲಿ ಹೆಣ್ಣು ಗಂಡಿನ ಮಧ್ಯೆ ಉಂಟಾಗುವ ಆಕರ್ಷಣೆ, ವಿಕರ್ಷಣೆಗಳ, ಜೀವಂತ ವರ್ಣನೆಯಿದೆ ಕೌಟುಂಬಿಕ ಜೀವನ ವಿಚ್ಛಿದ್ರಗೊಳ್ಳುವ ಕಥೆಯಿದೆ. ಮನುಷ್ಯನ ಸಂತೋಷದ ಅಪೂರ್ಣತೆಯ ಚಿತ್ರಣವಿದೆ. ಮತ್ತು ವ್ಯಕ್ತಿ ವ್ಯಕ್ತಿಗಳ ಮಧ್ಯ ಅಂತರವಿದ್ದರೂ ಮಾನವೀಯ ಅನುಭವ ಸಮಾನವಾಗಿರುತ್ತದೆಂಬುದು ಸ್ಪಷ್ಟಗೊಳ್ಳುತ್ತದೆ. ಇದಕ್ಕಾಗಿ ಒಬ್ಬನೇ ನಟ ಐದು ಬೇರೆ ಬೇರೆ ಪಾತ್ರಗಳನ್ನು ನಿರ್ವಹಿಸುವ, ಆಕರ್ಷಕ ರಂಗ ಸಂಯೋಜನೆಯನ್ನು ಮೋಹನ್ ರಾಕೇಶ್ ಆಶ್ರಯಿಸಿದ್ದಾರೆ.''[೧೧]

**೪. ಅಂಧಯುಗ**

ಅಂಧಯುಗ ಮಹಾಭಾರತದ ಕಥಾವಸ್ತುವುಳ್ಳ ನಾಟಕ. ಇದರ ಮೂಲ ಹಿಂದೀ ಲೇಖಕರು ಧರ್ಮವೀರ ಭಾರತಿಯವರು. ಸಿದ್ದಲಿಂಗಪಟ್ಟಣಶೆಟ್ಟಿ ಮತ್ತು ತಿಪ್ಪೇಸ್ವಾಮಿ ಇಬ್ಬರು ಸೇರಿ ಈ ನಾಟಕವನ್ನು ಕನ್ನಡಕ್ಕೆ

ಅನುವಾದಿಸಿದ್ದಾರೆ. ೧೯೭೭ರಲ್ಲಿ ಪ್ರಥಮ ಮುದ್ರಣ ಕಂಡ ಇದು ೧೯೯೦ ರಲ್ಲಿ ದ್ವಿತೀಯ ಮುದ್ರಣ ಕಂಡಿದೆ. ಅನನ್ಯ ಪ್ರಕಾಶನ ಧಾರವಾಡದಿಂದ ಪ್ರಕಟಣೆಗೊಂಡಿದೆ.

ಧರ್ಮವೀರ ಭಾರತೀಯವರ ಹಿಂದಿ ನಾಟಕ ಕಾವ್ಯಾತ್ಮಕ ಭಾಷೆಯಿಂದ ಕೂಡಿದೆ. ಗ್ರಾಂಥಿಕ ಕನ್ನಡದ ಕಾವ್ಯ ಭಾಷೆಯಲ್ಲಿಯೇ ಇದನ್ನು ಅನುವಾದಿಸಲಾಗಿದೆ. ಮಹಾಭಾರತಕದ ಕುರುಕ್ಷೇತ್ರದ ಯುದ್ಧದ ಹದಿನೇಳನೆಯ ದಿನದ ಸಾಯಂಕಾಲದಿಂದಹಿಡಿದು, ಪ್ರಭಾಸ ತೀರ್ಥದಲ್ಲಿ ಕೃಷ್ಣನ ಮರಣದವರೆಗಿನ ಕಾಲಘಟನೆಯನ್ನು ಈ ನಾಟಕ ಒಳಗೊಂಡಿದೆ. ಐದಂಕದ ನಾಟಕವಾದ ಇದು ಅಂಧಯುಗ, ಕೌರವನಗರ, ಪಶು ಉದ್ಭವ, ಅಶ್ವತ್ಥಾಮನ ಅರ್ಧ ಸತ್ಯ, ರೆಕ್ಕೆಗಳು, ಚಕ್ರಗಳು, ಪಟ್ಟಿಗಳು, ಗಾಂಧಾರಿಯ ಶಾಪ, ವಿಜಯ ಒಂದು ನಿರಂತರ ಆತ್ಮಹತ್ಯೆ ಮತ್ತು ಪ್ರಭುವಿನ ಸಾವು ಎಂಬ ಭಾಗಗಳಿಂದಕೂಡಿದೆ.

ಕುರುಕ್ಷೇತ್ರ ಯುದ್ಧದ ಮರುವ್ಯಾಖ್ಯಾನಕ್ಕೆ ನೀಡಿದ ಕಾವ್ಯಮಯ ಭಾಷೆಯೇ ಈ ಅನುವಾದ ನಾಟಕದ ವಿಶೇಷತೆಯಾಗಿದೆ. ವಿಚಿತ್ರವಾದ ಈಯುದ್ಧದಲ್ಲಿ ಯಾರಿಗೂ ಜಯವಿಲ್ಲ, ಎರಡು ಕಡೆಗೂ ಜೀವಹಾನಿ ಸಂಭವಿಸಿದೆ. ಪ್ರತಿಷ್ಠೆ ನಾಶಗೊಂಡು ಬಯಲಾಗಿದೆ. ಇದಕ್ಕೆ ಪಾಂಡವರು ಸ್ವಲ್ಪ ಮಟ್ಟಿಗೆ ಕಾರಣರಾದರೆ ಕೌರವರು ಹೆಚ್ಚು ಕಾರಣರಾಗಿದ್ದಾರೆ. ಈ ಯುದ್ಧದಲ್ಲಿ ಸೋಲು ಕಂಡಿದ್ದು ಬರಿ ವಿವೇಕ ಮಾತ್ರ. ಗೆದ್ದದ್ದು ಅಂಧತ್ವ, ಭಯದ ಅಂಧತ್ವ, ಮಮತೆಯ ಅಂಧತ್ವ, ಅಧಿಕಾರದ ಗದ್ದುಗೆಯಲಿ ಗೆದ್ದದ್ದೂ ಅಂಧತ್ವ, ಸುಕುಮಾರವಾದದ್ದು, ಶುಭವಾದದ್ದು ಸುಕೋಮಲವಾದದ್ದು ಇಲ್ಲಿ ಸೋತುಹೋಗಿದೆ.

ಪುತ್ರ ಶೋಕದಲ್ಲಿ ತತ್ತರಿಸಿದ ಗಾಂಧಾರಿ ಆವೇಶಕ್ಕೆ ಒಳಗಾದರೂ ಅವಳು ಮಾತುಗಳು ಸತ್ಯವನ್ನೇ ಹೇಳುತ್ತವೆ. ಮಗ ದುರ್ಯೋಧನನಿಗೆ ಧರ್ಮ ಇದ್ದ ಕಡೆಗೆ ಜಯ ಎಂದು ಹೇಳಿದ್ದೆ, ಆದರೆ ಧರ್ಮ ಯಾವ ಕಡೆಗೂ ಇರಲಿಲ್ಲ ಆದರೂ ಏಕೆ ಹೀಗಾಯಿತು. ಕುರುವಂಶದ ನಾಶಕ್ಕೆ ಕಾರಣವಾದ ಯುದ್ಧಕ್ಕೆ ತನ್ನದೇ ಆದ ಕಾರಣಕೊಡುವ ಗಾಂಧಾರಿ ವಿವೇಕ ಹೇಳುತ್ತಾಳೆ. ನಾನು ನಿಜವಾಗಿಯೂ ಅಂಧಳಲ್ಲ, ಈ ಬಾಹ್ಯ ವಸ್ತು ಜಗತ್ತವನ್ನು ಚೆನ್ನಾಗಿ ತಿಳಿದಿದ್ದೆ, ಧರ್ಮ, ನೀತಿ, ಪ್ರತಿಷ್ಠೆ ಬರಿಯ ಅಡಂಬರದಂತೆ ಕಂಡವು. ನಿರ್ಣಯದ ಕ್ಷಣದಲ್ಲಿ ವಿವೇಕ ವ್ಯರ್ಥವಾಗುತ್ತ ಬಂತು, ನಮ್ಮೆಲ್ಲರ ಮನಸ್ಸಿನೊಳಗೆ ಒಂದು ಅಂಧಗವ್ಹರವಿದೆ ಅಲ್ಲಿ ನೀಚ ಪಶುಗಳು ವಾಸಿಸುತ್ತವೆ. ಅವೆ ನಮ್ಮನ್ನೆಲ್ಲಾ ಅವನತಿಯತ್ತಾ ತಳ್ಳುತ್ತೇವೆ ಎನ್ನುತ್ತಾಳೆ. ಮಕ್ಕಳೆಲ್ಲಾ ಮರಣ ಹೊಂದಿದಾಗ ಅಪಾರ ನೋವು ಅನುಭವಿಸುತ್ತಾಳೆ. ವಿದುರ ಶಾಂತಳಾಗು ತಾಯಿ ಎಂದಾಗ ಗಾಂಧಾರಿ ದುಃಖ ದಿಂದ

''ತಾಯಿ ಎನ್ನದಿರನಗೆ

ಕಾದ ಕಬ್ಬಿಣದ ಸಲಾಖೆಯ ಹಾಗೆ ಈ ಶಬ್ದ

ನನ್ನ ಕರುಳನ್ನು ಕೊರೆಯುತ್ತಿದೆ

ಹದಿನೇಳು ದಿನಗಳಲ್ಲಿ ಒಬ್ಬಬ್ಬರಾಗಿ

ಸಾವನಪ್ಪಿದರು ನನ್ನೆಲ್ಲಾ ಮಕ್ಕಳು

ಈ ನನ್ನ ಕೈಯಿಂದಲೇ

ಆ ಕುಸುಮ ಬಾಲೆಯರ ಕೈಬಳೆಗಳನ್ನು ಬಿಚ್ಚಿರುವೆ

ನನ್ನಯ ಈಸೆರಗಿನಿಂದಲೇ

ಅಳಿಸಿರುವೆ ಆ ಕುಂಕುಮ ರೇಖೆ'' [೧೨]

ಎಂದು ಹಲಬುತ್ತಾಳೆ. ಧೃತರಾಷ್ಟ್ರ, ವಿದುರರು, ಗಾಂಧಾರಿಯನ್ನು ಸಮಾಧಾನಪಡಿಸುತ್ತಾರೆ.

ದ್ರೋಣಾಚಾರ್ಯರ ಸಾವಿನಿಂದ, ಕುರುಕುಲದ ನಾಶದಿಂದ ಕೃದ್ಧಗೊಂಡ ಅಶ್ವತ್ಥಾಮನನ್ನು ಕೃಪಾಚಾರ್ಯ ನಿಯಂತ್ರಿಸಲು ಯತ್ನಿಸುತ್ತಾರೆ. ಆದರೂ ಅವನು ಅವೇಶದಲ್ಲಿ ಹಿಂಸೆಗೆ ಮುಂದಾಗುತ್ತಾನೆ. ನಮ್ಮ ಪಕ್ಷದಲ್ಲಿ ಇರುವವರರನ್ನು ಬಿಟ್ಟು ಉಳಿದವರೆಲ್ಲರೂ ಶತ್ರುಗಳೆಂದೇ ಭಾವಿಸುತ್ತಾನೆ. ಅನಾಥರನ್ನು, ಅಸಹಾಯಕ-ಮುದುಕರನ್ನು ಕೊಲ್ಲುತ್ತಾನೆ. ರಣಭೂಮಿಯಲ್ಲಿ ಹೆಣದಂತೆ ನಿಸ್ಸಾಹಾಯಕನಾಗಿ ಬಿದ್ದ ಧುರ್ಯೋಧನನಿಂದ, ಸೇನಾಪತಿಯ ಪಟ್ಟವನ್ನು ಕಟ್ಟಿಸಿಕೊಂಡು ಪಾಂಡವರ ಸಂಹಾರಕ್ಕೆ ಮುಂದಾಗುತ್ತಾನೆ. ಕೊನೆಗೆ ರಾತ್ರಿಯ ವೇಳೆ ಎಲ್ಲರೂ ಮಲಗಿರುವರೆಂದು ತಿಳಿದು ಸಮಯವಲ್ಲದ ಸಮಯದಲ್ಲಿ ದಾಳಿಗೆ ಮುಂದಾಗುತ್ತಾನೆ. ಪಾಂಡವರ ಮೇಲೆ ಬ್ರಹ್ಮಾಸ್ತ್ರವನ್ನು ಉಪಯೋಗಿಸುತ್ತಾನೆ. ಆಗ ವ್ಯಾಸರು ಅಶ್ವತ್ಥಾಮ 'ನೀನೊಬ್ಬ ನರಾಧಮ' ಇದೇನು ಮಾಡಿದೆ ನೀನು ಎಂದು ಹೇಳುವ ಮಾತುಗಳು ಯುದ್ಧದಿಂದ ಉಂಟಾಗುವ ಭೀಕರತೆಯನ್ನು ಹೇಳುತ್ತವೆ.

''ಗೊತ್ತೇ ನಿನಗೆ ಬ್ರಹ್ಮಾಸ್ತ್ರ

ಏನು ಪರಿಣಾಮ ಬೀರುವದು ಎಂದು?

ಓ ನರ ಪಶು

ಇದರ ಉದ್ದೇಶ ಸಫಲಗೊಂಡರೆ ಒಮ್ಮೆ

ಮುಂಬರುವ ನೂರಾರು ಶತಮಾನಗಳ ವರೆಗೆ

ಪೃಥ್ವಿಯಲಿ ಬೆಳೆಯುವದಿಲ್ಲ ರಸಮಯ ವನಸ್ಪತಿ

ಹುಟ್ಟುವ ಮಕ್ಕಳೆಲ್ಲಾ

ವಿಕಲಾಂಗರಾಗುವರು ಕುಷ್ಠ ಗ್ರಸ್ಥರಾಗುವುದು

ಸಂಪೂರ್ಣ ಮಾನವ ಜಾತಿ ಕುಬ್ಜವಾಗುವುದು.

ಸತ್ಯಯಯುಗ ತೇತ್ರಾ ದ್ವಾಪರದ ಕಾಲದಲಿ

ಮಾನವನು ಸಂಚಯಿಸಿರುವ ಸಂಪೂರ್ಣ ಜ್ಞಾನ

ಇಲ್ಲವಾಗುವುದು ಎಂದೆಂದಿಗೂ.

ಗೋಧಿಯ ತೆನೆಗಳಲಿ ಬುಸುಗುಟ್ಟುವವು ಸರ್ಪ

ನದಿಗಳಲಿ ನೀರಾಗಿ ಹರಿಯುವುದು ಬೆಂಕಿ''[೧೩]

ಧುರ್ಯೋಧನನ ಮರಣದ ನಂತರ ಗಾಂಧಾರಿ ಕೃಷ್ಣನಿಗೆ ಶಾಪ ನೀಡುತ್ತಾಳೆ. ಕುರುವಂಶದ ನಾಶಕ್ಕೆ ಪಾಂಡವರು ನಿಮಿತ್ತ ಮಾತ್ರರು ಅದಕ್ಕೆಲ್ಲಾ ಮೂಲ ಕಾರಣ ಶ್ರೀಕೃಷ್ಣನೇ ಎಂಬುದೇ ಅವಳ ತಿಳುವಳಿಕೆ. ಕೃಷ್ಣನು ಅವಳು ನೀಡಿದ ಶಾಪವನ್ನು ಸಂತೋಷದಿಂದಲೇ ಸ್ವೀಕರಿಸುತ್ತಾನೆ. ಅದನ್ನು ಸ್ವೀಕರಿಸುವ ಪರಿಯೂ ವಿಶೇಷವಾಗಿದೆ.

''ಗಾಂಧಾರಿ:- ಇದನ್ನೆಲ್ಲಾ ಮಾಡಿದವ ನೀನೆ ಕೃಷ್ಣ

ಕೇಳು, ಸರಿಯಾಗಿ ಕೇಳು, ನಾ ತಪಸ್ವಿನಿ ಗಾಂಧಾರಿ.

ನನ್ನ ಸಂಪೂರ್ಣ ಜೀವನದ ಪುಣ್ಯದ ಜೊತೆಗೆ

ಎಲ್ಲ ಪೂರ್ವಜನ್ಮಗಳ ಪುಣ್ಯಗಳ

ಬಲಹೊತ್ತು ಹೇಳುತ್ತೇನೆ ಕೇಳು ಕೃಷ್ಣ

ನೀನು ಬಯಸಿದ್ದರೆ ಈ ಯುದ್ಧ ನಿಲ್ಲಬಹುದಿತ್ತು

ಗರ್ಭದಲಿ ಹೊತ್ತು ಆ ಅಸ್ಥಿಪಂಜರಗಳನ್ನು ನಾನು ಹಡೆದಿರಲಿಲ್ಲ.

ನಿನ್ನ ಇಂಗಿತದಂತೆಯೇ ಭೀಮ ಅಧರ್ಮ ಮಾಡಿದ

ನಿರಪರಾಧಿ ಅಶ್ವಾತ್ಥಾಮನಿಗೆ ನೀಡಿದಂತಹ ಶಾಪ

ನೀನೇಕೆ ಕೊಡಲಿಲ್ಲ ಆಗ ಭೀಮನಿಗೆ

ಪ್ರಭುತ್ವದ ದುರುಪಯೋಗ ಮಾಡಿದ್ದೇ ನೀನು,

ನನ್ನ ಭಕ್ತಿ ಸೇವೆಯಲಿ ಬಲ, ಸಂಚಿತ ತಪಸ್ವಿನಲಿ ಧರ್ಮವಿದ್ದುದೇ ಆದರೆ

ಕೇಳು ಕೃಷ್ಣ

ಪ್ರಭುವಾಗಿರು, ಪರಾತ್ಪರನಾಗಿರು, ಏನೇ ಆಗಿರು,

ನಿನ್ನ ಇಡೀ ವಂಶ ಹೀಗೆಯೇ

ಹುಚ್ಚು ನಾಯಿಗಳಂತೆ ಕಚ್ಚಾಡಿ ತಿನ್ನುವುದು ಒಂದು ಇನ್ನೊಂದನ್ನು

ಸ್ವತಃ ನೀನೆ ಅವೆಲ್ಲವನ್ನು ನಾಶಗೊಳಿಸಿ

ವರ್ಷ ವರ್ಷಗಳ ನಂತರ

ಯಾವುದಾದರೂ ಒಂದುಘೋರ ಅರಣ್ಯದಲಿ

ಸಾಧಾರಣ ವ್ಯಾಧನೊಬ್ಬನ ಕೈಗೆ ಸಿಕ್ಕು ಸತ್ತುಹೋಗುವಿ

ಪ್ರಭುವಾಗಿದ್ದರೂ ನೀನು ಸಾಯುವಿ

ಪಶುಗಳಂತೆ.

ಕೃಷ್ಣ:- ತಾಯಿ, ಪ್ರಭುವಾಗಿರಬಹುದು ಪರಾತ್ಪರನಾಗಿರಬಹುದು,

ಆದರೂ ನಿನ್ನ ಮಗನಲ್ಲವೇ?

ನೀ ನನ್ನ ತಾಯಿ

ನಿನ್ನ ಎಲ್ಲಪಾಪ-ಪುಣ್ಯ ಕರ್ಮಗಳ ಯೋಗಕ್ಷೇಮ ನನ್ನ ಹೆಗಲ ಮೇಲೆ ಹೋರುತ್ತೇನೆ.

ಎಂದು ಹೇಳಿದ್ದೆ ಅರ್ಜುನನಿಗೆ,

ಹದಿನೆಂಟು ದಿನಗಳ ಈ ಭೀಷಣ ಸಂಗ್ರಮದಲ್ಲಿ

ಕೋಟಿ ಕೋಟಿ ಸಲ ಬೇರೆ ಯಾರುಅಲ್ಲ, ನಾನೇ ಸತ್ತಿದ್ದೇನೆ. ಒಂದೊಂದು ಸಲವೂ ಒಬ್ಬಬ್ಬ ಸೈನಿಕ

ಸತ್ತು ನೆಲ ತಬ್ಬಿದಾಗ

ಬೇರೆ ಯಾರೂ ಅಲ್ಲ

ನಾನೇ ಸತ್ತಿದ್ದೇನೆ.

ನೋವಾಗಿ ಗಾಯವಾಗಿ ರಣಭೂಮಿಯಲ್ಲಿ ಪ್ರತಿಯೊಂದು ಸಲವೂ

ನಾನೇ ಬಿದ್ದಿದ್ದೇನೆ

ಅಶ್ವತ್ಥಾಮನ ಅಂಗಾಂಗಗಳಿಂದ

ಯುಗಯುಗಾಂತರ ತನಕ

ರಕ್ತ ಕೀವ ಬೆಮರಾಗಿ ಹರಿಯುವೆನು.

ನಾನೇ ಜೀವನ

ಮರಣವೂ ನಾನೆ ತಾಯಿ!

ನಿನ್ನ ಶಾಪ

ಸ್ವೀಕರಿಸಿದ್ದೇನೆ”[೧೪]

ಕೊನೆಗೆ ಗಾಂಧಾರಿಯ ಶಾಪದಿಂದ ಯದುಕುಲವೆಲ್ಲಾ ನಾಶಹೊಂದುತ್ತದೆ. ಯುದ್ಧವೆಂದರೆ ನಿರಂತರವಾಗಿ ನಡೆಯುವ ಆತ್ಮಹತ್ಯೆ ಎಂದು ನಾಟಕ ಹೇಳುತ್ತದೆ.

ಈ ನಾಟಕದಲ್ಲಿ ಬರುವ ಅಶ್ವತ್ಥಾಮ, ಗಾಂಧಾರಿ, ವಿದುರ, ಕೃಷ್ಣ ಮುಂತಾದ ಪಾತ್ರಗಳು ಕನ್ನಡನಾಟಕಗಳಲ್ಲೇ ಶ್ರೇಷ್ಠವಾಗಿವೆ. ಪ್ರಸಿದ್ಧ ಗ್ರೀಕ್ ಕ್ಲಾಸಿಕ್ ನಾಟಕಗಳ ಸಾಲಿಗೆ ಈ ನಾಟಕ ಸೇರುವಂತಿದೆ. ಅಂಧಯುಗ ನಾಟಕವು ಕರ್ನಾಟಕದ ಹಲವಾರು ಕಡೆ ಯಶಸ್ವೀ ಪ್ರಯೋಗ ಕಂಡಿದೆ. ಇದಕ್ಕೆ ಸೊಗಸಾದ ಅನುವಾದವೇ ಪ್ರಮುಖ ಕಾರಣವಾಗಿದೆ.

೫. ಸೂರ್ಯಾಸ್ತದಿಂದ ಸೂರ್ಯೋದಯದವರೆಗೆ

ಈ ನಾಟಕದ ಮೂಲ ಹಿಂದೀ ಲೇಖಕರು ಸುರೇಂದ್ರ ವರ್ಮಾ. ೧೯೭೭ರಲ್ಲಿ ಪಟ್ಟಣಶೆಟ್ಟರು ಕನ್ನಡಕ್ಕೆ ಅನುವಾದಿಸಿದ್ದಾರೆ. ಅನನ್ಯ ಪ್ರಕಾಶನದಿಂದ ಇದು ಪ್ರಕಟಣೆಗೊಂಡಿದೆ.

ಈ ನಾಟಕದ ಮೂಲವಸ್ತು ಮನುಷ್ಯ ಸಹಜವಾದ ಲೈಂಗಿಕತೆಯೇ ಆಗಿದೆ. ಜೀವನದ ಸಫಲತೆಯ ಒಳದಾರಿಗಳು ಹೆದ್ದಾರಿಗಳಾಗಬೇಕೆ? ಹೆಣ್ಣಿನ ಸಾರ್ಥಕತೆ, ಪುರುಷನ ಜೊತೆ ಒಂದಾಗುವುದಲ್ಲಿ ಇದೆಯೇ? ಆಹಾರ ವಸತಿ ಭದ್ರತೆಗಷ್ಟೇ ಅಲ್ಲದೇ ಹೆಣ್ಣಿಗೆ ಮುಖ್ಯವಾಗಿ ಲೈಂಗಿಕ ತೃಪ್ತಿಯೂ ಬೇಕೆ ಬೇಕು ಎನ್ನುವ ವಾಸ್ತವ ಮತ್ತು ಎದೆಗಾರಿಕೆಯ ವರ್ತನೆಗೆ ಪುರುಷ ಸಮಾಜದ ತಲ್ಲಣಗಳ ಸ್ವರೂಪ ಹೇಗಿರುತ್ತದೆ? ಮುಂತಾದ ಜೀವನದ ಬಹುಮುಖ್ಯ ಪ್ರಶ್ನೆಗಳಿಗೆ ಮುಖಾಮುಖಿಯಾಗುತ್ತಾ ಸಾಗುವ ಈ ನಾಟಕ ಪರಿಣಾಮಕಾರಿ ಮತ್ತು ಸ್ವಚ್ಛಂದ ಸಂಭಾಷಣೆಗಳಿಂದ ಕೂಡಿದೆ. ೧೯೮೦ ರಲ್ಲಿ ಈ ನಾಟಕವು ಎರಡನೆಯ ಮುದ್ರಣ ಕಂಡಿದೆ.

ಮಲ್ಲಿ ರಾಜ್ಯದ ರಾಜ. ಒಕ್ಕಾಕ ಈತನ ರಾಣಿ ಶೀಲಾವತಿ ರಾಜನಿಗೆ ಪುರುಷತ್ವವೇ ಇಲ್ಲ. ಆತನಿಗೆ ಪಟ್ಟಾಭಿಷೇಕ ಮಾಡುವ ಸಂದರ್ಭ ಬಂದಾಗ ಮುಗ್ಧವಾದ ಒಕ್ಕಾಕ ಯಾವುದೇ ಹಿಂಜರಿಕೆಯಿಲ್ಲದೇ ನನಗೆ ನಗ್ನಳಾದ ಹೆಣ್ಣನ್ನು ನೋಡಿದರೂ ಮನದಲ್ಲಿ ಯಾವುದೇ ಕಾಮನೆಗಳು ಹುಟ್ಟುವದಿಲ್ಲವೆಂದು ರಾಜ್ಯವೈದ್ಯರ ಹತ್ತಿರ ಹೇಳುತ್ತಾನೆ. ಅವರು ಮುಂದೆ ಎಲ್ಲವೂ ಸರಿಹೋಗುತ್ತದೆ ಎಂದು ಹೇಳಿ ಸುಮ್ಮನಾಗಿಸಿ ಬಿಡುತ್ತಾರೆ. ರಾಣಿ ಶೀಲಾವತಿ ಐದು ವರ್ಷಗಳಿಂದ ತನ್ನೆಲ್ಲಾ ಆಸೆಗಳನ್ನು ಹತ್ತಿಕ್ಕಿಕೊಂಡು ರಾಜಮರ್ಯಾದೆಗಂಜಿ ಬದುಕತೊಡಗುತ್ತಾಳೆ. ಮದುವೆಯಾಗಿ ಬಹಳ ದಿನವಾದರೂ ಮಕ್ಕಾಳಗದೇ ಇದ್ದಾಗ ಮಂತ್ರಿ, ಸೇನಾಪತಿ, ಪುರೋಹಿತರಿಂದ ಕೂಡಿದ ಅಮಾತ್ಯ ಪರಿಷತ್ತು ಸಂತಾನ ಪ್ರಾಪ್ತಿಗಾಗಿ ರಾಜ್ಯಕ್ಕೆ ರಾಜಕುವರನ ಅವಶ್ಯಕತೆ ಇರುವುದರಿಂದ ನಿಯೋಗ ಪದ್ಧತಿಯ ಮೂಲಕ ರಾಣಿ ಗರ್ಭಧರಿಸಲಿ ಎಂದು ಹೇಳುತ್ತಾರೆ. ಆದರೆ ತನ್ನ ನಿರ್ವೀರ್ಯತೆಯನ್ನು ಒಪ್ಪಿಕೊಳ್ಳದ ರಾಜ ಇದಕ್ಕೆ ವಿರೋಧಿಸುತ್ತಾನೆ. ನಂತರ ಒಪ್ಪಿದರೂ, ಧರ್ಮನಟಿಯಾಗಿ ಹೋಗಲು ಪುರುಷನೊಂದಿಗೆ ಸೂರ್ಯಾಸ್ತದಿಂದ ಸೂರ್ಯೋದಯದವರೆಗೆ ಕಾಲ ಕಳೆಯಲು ರಾಣಿಯ ಮನಸ್ಸು ಹಿಂಜರಿಯುತ್ತದೆ. ಅಮಾತ್ಯ ಪರಿಷತ್ತಿನ ಒತ್ತಾಯದ ಮೇರೆಗೆ ತನ್ನ ಬಾಲ್ಯದ ಯೌವನದ ಗೆಳೆಯ ಮತ್ತು ಪ್ರೇಮಿಯಾಗಿದ್ದ ವ್ಯಾಪಾರಿ ಪತ್ರೋಷನೊಂದಿಗೆ ರಾತ್ರಿಯಲ್ಲಾ ಕಳೆಯುತ್ತಾಳೆ. ಉತ್ಸವ ಪಲ್ಲಂಗದಲ್ಲಿ ಹೊಸ ಅನುಭವವನ್ನು ಪಡೆದು ಸಂತಸದ ಹೊಳೆಯಲ್ಲಿ ತೇಲಿಬಿಡುತ್ತಾಳೆ. ಇತ್ತ ರಾಜ ಒಕ್ಕಾಕ ತನ್ನ ದಾಸಿ ಮಹಂತರಿಕೆಯ ಎದುರಿನಲ್ಲಿ ತನ್ನ ಪುರುಷತ್ವದ ಸೋಲುಗಳನ್ನು ಹೇಳುತ್ತಾ, ಗೋಳಿಡುತ್ತಾನೆ.

ಆ ರಾತ್ರಿ ಕಳೆದು ಮರಳಿದ ರಾಣಿ ಶೀಲಾವತಿಯ ಮಾತು ಮನಸ್ಸುಗಳು ಇಲ್ಲಿಯವರೆಗೆ ಸಿಗದೇ ಇದ್ದ ಪುರುಷ ಸುಖ ಈ ದಿನ ಸಿಕ್ಕಿತು ಎನ್ನುವ ಸಂತೃಪ್ತಿಯಲ್ಲಿ ತೆರೆದ ಮನಸ್ಸಿನಿಂದ ಧೈರ್ಯವಾಗಿ ಮಾತನಾಡತೊಡಗುತ್ತಾಳೆ. ನಂತರ ರಾಜ ರಾಣಿಯರ ನಡುವೆ ನಡುವೆ ನಡೆದ ಸಂಭಾಷಣೆ, ಮಾನವ ಬಯಕೆಯ ಸಹಜ ಸತ್ಯಗಳನ್ನು ಹೇಳುತ್ತವೆ.

ಧರ್ಮನಟಿಯಾಗಿ ಹೋದವಳು ಕಾಮನಟಿಯಾಗಿ ಬಂದೆ ಎಂದು ಹಿಯಾಳಿಸುವ ರಾಜ ಒಕ್ಕಾಕನಿಗೆ ರಾಣಿ ಶೀಲಾವತಿ ಸಾಮರ್ಥ್ಯವಿಲ್ಲದಿದ್ದರೂ ಮದುವೆಯಾಗಿದ್ದೀರಿ, ನೀವು ಹೇಯ ಪಾಪಿಗಳು? ನಾನು ತುಂಬಿದ ಕೊಡದಂತೆ ತುಳುಕುತ್ತಲಿದ್ದೇನೆ. ಕಳೆದ ರಾತ್ರಿಯ ಸುಖ, ಕಂಪನ, ರೋಮಾಂಚನ ನನ್ನ ಜೀವನದಲ್ಲಿ ದೊಡ್ಡ ಕ್ರಾಂತಿಯಾಗಿದೆ.

ನನ್ನ ತನು ಮನಗಳ ಇತಿಹಾಸವೇ ಬದಲಾಗಿದೆ. ಆವೇಶ, ಮಧುರಯಾತನೆ, ಉತ್ತೇಜನೆ, ಉನ್ಮಾದ, ನಿಟ್ಟುಸಿರು, ಉಚ್ವಾಸಗಳು ಇಡೀ ದೇಹದ ತುಂಬ ಸಂಚರಿಸುತ್ತಿರುವ ವಿದ್ಯುತ್ ಪ್ರವಾಹದಂತಹ ತೃಪ್ತಿಯೊಂದಿಗೆ ಮುಂಬರುವ ಆ ಸಂತಾನದ ಬಗ್ಗೆ ಯೋಚಿಸದೇ ಇರುವ ಹೆಣ್ಣು ಯಾವ ಪ್ರಪಂಚದಲ್ಲಿದ್ದಾಳೆ. ಹೆಣ್ಣಿನ ಸಾರ್ಥಕತೆ ಇರುವುದು ತಾಯಿಯಾಗುವುದರಲ್ಲಿ ಇಲ್ಲ. ಪುರುಷನೊಂದಿಗೆ ಒಂದಾಗುವ ಸುಖದಲ್ಲಿದೆ. ಮಾತೃತ್ವ ಕೇವಲ ಒಂದು ಗೌಣ ಉತ್ಪಾದನೆ ಮಾತ್ರ. ವ್ಯಕ್ತಿಗತ ಸುಖದ ಹುಡುಕಾಟವೆ ಜೀವನದ ಗುರಿ ಎನ್ನುತ್ತಾಳೆ. ನಾಟಕ ಮತ್ತೇ ಅದೇ ಸುಖಬೇಕೆನ್ನುವ ಆಶಯದೊಂದಿಗೆ ಮುಗಿಯುತ್ತದೆ.

ಮಹಿಳೆ ಇಂದು ಬದಲಾಗಿದ್ದಾಳೆ. ತನ್ನ ಬೇಕು ಬೇಡಗಳನ್ನು ಯಾವ ಮುಲಾಜಿಗೆ ಒಳಗಾಗದೇ ವ್ಯಕ್ತಪಡಿಸುತ್ತಾಳೆ. ಆಕೆಗೆ ರೋಮಾಂಚನ ಇರದ ದಾಂಪತ್ಯ ಜೀವನ ಬೇಡವಾಗಿದೆ ಎಂದು ನಾಟಕ ಹೇಳುತ್ತದೆ.

**೬. ಹಾಸಿಗೆ**

ಈ ನಾಟಕದ ಮೂಲ ಹಿಂದೀ ಲೇಖಕರು ರತ್ನಾಕರ ಮತಕರಿ. ಪಟ್ಟಣಶೆಟ್ಟರು ೧೯೮೧ ರಲ್ಲಿ ಕನ್ನಡಕ್ಕೆ ಅನುವಾದಿಸಿದ್ದಾರೆ. ಧಾರವಾಡದ ಚಂದ್ರನಾಥ ಪ್ರಕಾಶನದಿಂದ ಇದು ಪ್ರಕಟಣೆಗೊಂಡಿದೆ.

ಈ ನಾಟಕದಲ್ಲಿ ಅವನು ಮತ್ತು ಅವಳು ಎರಡು ಪಾತ್ರಗಳಿವೆ. ಒಂದು ದಿನ ರಾತ್ರಿ ಹಾಸಿಗೆಯ ಮೇಲಿನ ಸಂಭಾಷಣೆಯೇ ನಾಟಕರೂಪ ತಾಳಿದೆ. ಅವರಿಬ್ಬರ ನಡವಿನ ಜೀವನದ ಹಲವು ಮುಗ್ಗಲುಗಳ ಬಗ್ಗೆ ಚರ್ಚೆ ನಡೆಯುತ್ತದೆ.

ಈ ನಾಟಕದ ನಾಯಕ ಹೆಸರಾಂತ ಚಲನಚಿತ್ರ ಕಲಾವಿದನಾಗಿರುತ್ತಾನೆ. ಅವನ ಜೊತೆ ರಾತ್ರಿ ಹಾಸಿಗೆಯ ಮೇಲೆ ಕಾಲ ಕಳೆದ ಅವಳು ಚಲನಚಿತ್ರದಲ್ಲಿ ಅವಕಾಶ ಬಯಸಿ ಬಂದ ಹೊಸ ಹುಡುಗಿ. ಕಲಾವಿದನ ಜೀವನದಲ್ಲಿ ಹಿಂದೆ ಜರುಗಿದ ಕಹಿಘಟನೆಯೊಂದರ ಪರಿಣಾಮದಿಂದ ಅಲ್ಲೋಲ ಕಲ್ಲೋಲವಾಗಿದೆ. ಆದರೂ ಅವನು ನಾನು ಸಹಿತ ಎಲ್ಲರಂತೆ ಎಲ್ಲಾ ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುತ್ತಾ ಬದುಕುತ್ತಿದ್ದೇನೆ ಎಂದು ತೋರಿಕೆಯ ಜೀವನ ನಡೆಸುತ್ತಾನೆ. ಕಥಾನಾಯಕ ತನ್ನ ಹೆಂಡತಿಯನ್ನು ಬಹಳ ಪ್ರೀತಿಸುತ್ತಿರುತ್ತಾನೆ. ಅವಳೂ ಅಷ್ಟೆ, ಇಬ್ಬರದೂ ಬಹಳ ಅನ್ಯೋನ್ಯವಾದ ಜೀವನವಾಗಿರುತ್ತದೆ. ಆದರೆ ಒಂದು ದಿನ ಹೆಂಡತಿ ಹೇಳದೆ ಕೇಳದೆ ಇವನಿಂದ ಬಿಡುಗಡೆಯನ್ನು ಬಯಸುತ್ತಾಳೆ. ಮತ್ತೆ ಹತ್ತಿರ ಬರಲಾರದಷ್ಟು ದೂರ ಅವಳ ಹೋಗಿ ಬಿಡುತ್ತಾಳೆ. ಇದರಿಂದ ಅವನಿಗೆ ಬಹಳ ಅಘಾತವಾಗಿ ಬಿಡುತ್ತದೆ. ಇದರಿಂದ ಅವನು ಹೊರಬರುವುದು ಕಷ್ಟವಾಗುತ್ತದೆ. ಆದರೂ ಅವನು ಹೊರಬಂದು ಸಹಜ ರೀತಿಯಲ್ಲಿ ಇರುವವನಂತೆ ವರ್ತಿಸುತ್ತಾನೆ. ಏಕೆಂದರೆ ಅವನು ತನ್ನ ಕ್ಷೇತ್ರದಲ್ಲಿ ಹೆಸರಾಂತ ವ್ಯಕ್ತಿಯಾಗಿರುತ್ತಾನೆ. ಅಲ್ಲಿ ಅವನಿಗೆ ಗೌರಾವಾದರಗಳಿವೆ ಆದರೂ ಅವನ್ನು ಕುರಿತು ಸುತ್ತಲಿನ ಜನ ಏನೇನು ಮಾತುಗಳನ್ನು ಆಡಿಕೊಳ್ಳುತ್ತಾರೆ. ಅವನಿಗೆ ಮಕ್ಕಳಾಗದೇ ಇರುವ ಕಾರಣ ಅವನ ಹೆಂಡತಿ ಅವನನ್ನು ಬಿಟ್ಟು ಹೋಗಲು ಇದೇ ಕಾರಣವೆಂದು ಜನ ತೀರ್ಮಾನಕ್ಕೆ ಬರುತ್ತಾರೆ. ಈಗ ಕಥಾನಾಯಕ ಪ್ರೀತಿಯ ಹೆಂಡತಿಯಿಂದ ದೂರವಾಗಿ ಕುಡಿತದ ದಾಸನಾಗಿದ್ದಾನೆ. ಅನ್ಯ ಹೆಣ್ಣುಗಳೊಂದಿಗೆ ರಾತ್ರಿಯಿಡೀ ಕಾಲಕಳೆಯುತ್ತಾನೆ. ಅವಳನ್ನು ನೀನು

ನನ್ನನ್ನೂ ನಿಜವಾಗಿಯೂ ಮದುವೆಯಾಗಲೂ ಸಿದ್ಧಳಾಗಿದ್ದಾಯೇ? ಎಂದು ಕೇಳುತ್ತಾನೆ. ಕೈಕೊಟ್ಟು ಹೋದ ಹೆಂಡತಿಯ ವೇದನೆಯಿಂದ ನರಳಿ ಅವನ ಜೀವನದಲ್ಲಿ ಈ ರೀತಿ ಏರುಪೇರುಗಳುಂಟಾಗಿವೆ. ಒಬ್ಬ ಒಳ್ಳೆಯ ಕಲಾವಿದ ಈ ದಿನ ಕುಡಿತದ ದಾಸನಾಗಿ, ಹೆಣ್ಣುಗಳ ಚಟಕ್ಕೆ ಬಿದ್ದ ವ್ಯಕ್ತಿ ಎಂದು ಸಮಾಜದಲ್ಲಿ ಗೌರವ ಕಳೆದುಕೊಂಡ ವ್ಯಕ್ತಿಯಾಗಿ ಬದುಕುತ್ತಾನೆ. ಕೊನೆಗೆ ಅವನು ಯಾವುದೇ ತೀರ್ಮಾನಕ್ಕೆ ಬರಲಾರದೆ ಹೋದಾಗ, ನೆನಪು ಮರುಕಳಿಸಿದಾಗ, ಸಂಕಟ ಬಂದಾಗ, ಅತಿಯಾದ ಕೋಪ ಬಂದಾಗ ಕುಡಿಯತೊಡಗುತ್ತಾನೆ.

ಈ ನಾಟಕವು ಮಾಧ್ಯಮದ ಜನಗಳಲ್ಲಿರುವ ಯೋಚನೆ. ತೆಳುವಾದ ಸಂಬಂಧಗಳನ್ನು, ಅವಕಾಶಕ್ಕಾಗಿ ಹಾತೊರೆದು ಬಂದ ಹುಡುಗಿಯರು ಹಾಳಾಗುವದನ್ನು, ಕಲಾವಿದರ ದೌರ್ಬಲ್ಯಗಳನ್ನು ಕುರಿತು ಹೇಳುತ್ತದೆ.

**೭. ಬೇರಿಲ್ಲದವರು**

ಈ ನಾಟಕದ ಮೂಲ ಹಿಂದೀ ಲೇಖಕರು ಅನಿಲ್ ಠಕ್ಕರ್‌ರವರು. ಇದು ಒಂದು ಚಿಕ್ಕನಾಟಕವಾಗಿದ್ದು ಪಟ್ಟಣ ಶೆಟ್ಟರು ೧೯೮೮ ರಲ್ಲಿ ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಚಂದ್ರನಾಥ ಪ್ರಕಾಶನ ಧಾರವಾಡದಿಂದ ಪ್ರಕಟಗೊಂಡಿದೆ.

ಈ ನಾಟಕದಲ್ಲಿ ಆರು ಪಾತ್ರಗಳಿದ್ದು ತಂದೆ, ತಾಯಿ, ಮಗಳು ರೀಟಾ, ಮಗ ಸುರೇಶ ಮತ್ತು ಹೀರಲಾಲ್ ಮತ್ತು ತನ್‌ಸುಖ್ ಎನ್ನುವ ಪಾತ್ರಗಳು ಬರುತ್ತವೆ. ನಾಟಕದ ಶಿರ್ಷಿಕೆಯೇ ಹೇಳುವ ಹಾಗೆ ಇಲ್ಲಿ ಬರುವ ಮೂರು ಪ್ರಧಾನ ಪಾತ್ರಗಳಾದ ತಂದೆ, ತಾಯಿ, ಮಗ, ಮಗಳು ಯಾರೊಬ್ಬರೂ ಸಹಿತ ಕುಟುಂಬದಲ್ಲಿ ತಮ್ಮ ಸ್ಥಾನವನ್ನು ಜವಾಬ್ದಾರಿಯಿಂದ ಅರಿತು ನಡೆಯುವವರಲ್ಲ. ಅವರಿಗೆ ಜೀವನದಲ್ಲಿ ನೈತಿಕ ನೆಲೆಗಟ್ಟು ಎಂಬುದೇ ಇಲ್ಲ. ಎಲ್ಲರೂ ತಮಗೆ ತಿಳಿದಂತೆ ಸ್ವೇಚ್ಛಾಚಾರದ ಮಾರ್ಗದಲ್ಲಿ ನಡೆದು ಸಾಗುತ್ತಾರೆ. ಅದು ಒಂದು ಕುಟುಂಬವಾದರೂ ಅವರ ನಡುವಿನ ಸಂಬಂಧಗಳು ಬಹಳ ದುರ್ಬಲವಾಗಿವೆ.

ತಂದೆ ಒಬ್ಬ ಇಂಜಿನಿಯರ್ ಆಗಿದ್ದು, ಯಾವತ್ತು ಮನೆಯ ಯಜಮಾನಂತೆ ವರ್ತಿಸುವದಿಲ್ಲ. ಸದಾಕಾಲ ಕ್ಲಬ್‌ಗಳಲ್ಲಿ ತನ್ನ ಕಾಲ ಕಳೆಯುತ್ತಾನೆ. ಲಂಚಕೋರನಾದ ಈತನಿಗೆ ತನ್ನದೇ ಆದ ಸಂಸಾರದ ಮೇಲೆ ಎಳ್ಳಷ್ಟು ಹಿಡಿತವಿಲ್ಲ, ಹೆಂಡತಿ ಒಬ್ಬ ಶಾಲಾ ಶಿಕ್ಷಕಿಯಾಗಿದ್ದು, ಮೌನವೇದನೆ ಅನುಭವಿಸುತ್ತಾ ತನ್ನ ಕರ್ತವ್ಯದಲ್ಲಿ ನಿರತಳಾಗಿರುತ್ತಾಳೆ. ಸಂಸಾರದಲ್ಲಿ ಯಾಂತ್ರಿಕ ಪಾತ್ರದಂತೆ ಇರುತ್ತಾಳೆ. ಮಗಳು ಮತ್ತು ಮಗ ಅತೀ ಆಧುನಿಕತೆಯ ಅಡ್ಡದಾರಿ ಹಿಡಿದು ಕುಡಿತ, ಗಾಂಜಾ, ಕ್ಲಬ್ ಮೇಜುಗಳಲ್ಲಿ ಕಾಲ ಕಳೆಯುತ್ತಿರುತ್ತಾರೆ. ಇಲ್ಲಿ ಯಾರನ್ನು ಯಾರೂ ಏಕೆ ಎಂದು ಕೇಳುವವರೇ ಇಲ್ಲ. ಇದೊಂದು ಭದ್ರತೆಯಿಲ್ಲದ ಕುಟುಂಬವಾಗಿದೆ.

ಮಗನಾದ ಸುರೇಶ ತನ್ನ ಅಕ್ಕಳಾದ ರೀಟಾಳಿಗೆ ಗಾಂಜಾ ಸೇದುವುದು ರಾತ್ರಿ ತಡವಾಗಿ ಮನೆಗೆ ಬರುವುದು, ಮತ್ತಿನಲಿ ಪರ ಪುರುಷನ ತೆಕ್ಕೆಯಲ್ಲಿ ಕಳೆಯುವುದು ಸರಿಯಲ್ಲವೆಂದು ಹೇಳುತ್ತಾನೆ. ಆಗ ಅವಳು ನೀನು ಮಾತ್ರ ಕುಡಿಯಬೇಕು. ನಿನ್ನ ಸಂಗಡ ಮಾತ್ರ ಹೆಣ್ಣಗಳಿರಬೇಕು. ಆದರೆ ಆ ಹೆಣ್ಣುಗಳು ಸಹಿತ ನಿನ್ನಂತಹ ಪುರುಷರ ಅಕ್ಕ ತಂಗಿಯರು ಆಗಿರುತ್ತಾರೆ ಎನ್ನುವ ಅರಿವು ನಿನಗಿರುವದಿಲ್ಲ. ಈ ಸಮಾಜದಲ್ಲಿನ ಪುರುಷರೇ ಹೀಗೆ. ತಮ್ಮ ಮನೆಯ ಹೆಣ್ಣುಮಕ್ಕಳು ಗೌರಿಯಂತೆ ಸುಸಂಸ್ಕೃತಳೂ, ಸಂಪನ್ನೆಯರೂ ಆಗಿರಬೇಕೆಂದು ಬಯಸುತ್ತಾರೆ. ಆದರೆ ತಮ್ಮ

ಮೋಜಿಗೆ ಮಾತ್ರ ಬೇರೆ ಮನೆಯವರ ಹೆಣ್ಣುಮಕ್ಕಳನ್ನು ಬಯಸುತ್ತಾರೆ. ಇದು ಯಾವ ನ್ಯಾಯ ಎಂದು ಪುರುಷ ಸಮಾಜದ ದ್ವಂದ್ವ ನಿಲುವನ್ನು ಪ್ರಶ್ನಿಸುತ್ತಾಳೆ.

ಒಮ್ಮೆ ಮನೆಯಲ್ಲಿ ಮಕ್ಕಳಾಗದೆ ಇರಲು ತೆಗೆದು ಕೊಳ್ಳುವ ಮಾತ್ರೆಗಳು ಸಿಕ್ಕಾಗ ತಂದೆ ತನ್ನ ಹೆಂಡತಿಯ ಮೇಲೆ ಅನುಮಾನ ವ್ಯಕ್ತಪಡಿಸಿ ಆಕೆಯನ್ನು ಹೀಯಾಳಿಸುತ್ತಾನೆ, ಹಿಂಸಿಸುತ್ತಾನೆ. ಆಕೆ ಪರಿಪರಿಯಾಗಿ ಅವು ನನ್ನವಲ್ಲ ಎಂದು ಹೇಳಿದರೂ ಕೇಳುವದಿಲ್ಲ. ಕೊನೆಗೂ ತಾಳ್ಮೆಯ ಕಟ್ಟೆ ಹೊಡೆದು ಹಿಂದೆ ತನ್ನ ಗಂಡನಿಂದಾಗಿ ನೆಡೆದ ತಪ್ಪನ್ನು ನೆನಪಿಸಿಕೊಡುತ್ತಾಳೆ. ಒಂದು ಸಲ ತಂದೆ ನೀನು ಯಾರ ಮಗನೋ ಏನೋ, ನಿನ್ನ ಅಮ್ಮನನ್ನೇ ಕೇಳು ಎಂದಾಗ ತಾಯಿ ನೀನು ಒಬ್ಬ ಸಾಮಾನ್ಯ ಜೂನಿಯರ್ ಇಂಜಿನಿಯರ್ ಆಗಿದ್ದೆ. ಆದರೆ ಬಡ್ತಿ ಹೊಂದುವ ಸಲುವಾಗಿ ನನ್ನನ್ನು ಬೇರೆಯವರ ಹತ್ತಿರ ಕಳುಹಿಸಿದೆ. ಮೂರು ದಿನಗಳ ಕಾಲ ಒಬ್ಬೊಬ್ಬ ಪುರುಷನ ಹತ್ತಿರ ಕಾಲಕಳೆದು ಬಂದೆ, ಅದು ನಿಮ್ಮ ಪ್ರಮೋಷನ್ ಸಲುವಾಗಿ, ನಿಮ್ಮ ಸಂಸಾರಕ್ಕಾಗಿ ನನ್ನನ್ನು ನಾನು ಕಳೆದುಕೊಂಡಿದ್ದೇನೆ ಎಂದು ರೋಧಿಸುವದರೊಂದಿಗೆ ಸತ್ಯವನ್ನು ಬಿಚ್ಚಿಡುತ್ತಾಳೆ. ಮಕ್ಕಳಾಗದೇ ಇರುವ ಹಾಗೆ ತೆಗೆದುಕೊಳ್ಳುವ ಮಾತ್ರೆ ಮಗಳೂ ರೀಟಾಳವೆಂದು ಗೊತ್ತಾಗುತ್ತವೆ. ಇದಕ್ಕೆ ತಲೆ ಕೆಡಿಸಿಕೊಳ್ಳದ ತಂದೆ ತನ್ನ ಲಂಚಕೋರತನದ ಕೆಲಸದಲ್ಲಿ ನಿರತನಾಗುತ್ತಾನೆ.

ಹೀಗೆ ನಾಟಕವು ಸ್ಥಿತಿವಂತರ ಮನೆತನಗಳು ಪಾಶ್ಚಾತ್ಯರೀತಿಯ ಶೈಲಿಯಲ್ಲಿರುತ್ತವೆ. ಇಂತಹ ಸಂಸಾರಗಳಲ್ಲಿ ಪರಸ್ಪರ ಆತ್ಮೀಯತೆ ಸಂಬಂಧಗಳು ಬಹಳ ಸಡಿಲವಾಗಿರುತ್ತವೆ. ಅವರ ವರ್ತನೆಗಳು ಕ್ಷಣಿಕ ಆನಂದಕ್ಕಾಗಿ ಅಡ್ಡದಾರಿ ಹಿಡಿದು ಹಾಳಾಗುವದನ್ನು ಬಹಳ ಚೆನ್ನಾಗಿ ನಿರೂಪಿಸುತ್ತದೆ ಈ ನಾಟಕ.

**೮. ಅಂಜಿ**

ಮರಾಠಿ ಭಾಷೆಯ ವಿಜಯತೆಂಡೋಲ್ಕರ್ ಅವರ ಮೂಲ ನಾಟಕವನ್ನು ಸಿದ್ಧಲಿಂಗಪಟ್ಟಣಶೆಟ್ಟರು ಕನ್ನಡಕ್ಕೆ ಅನುವಾದಿಸಿದ್ದಾರೆ. ೧೯೮೩ರಲ್ಲಿ ಧಾರವಾಡದ ಅನನ್ಯ ಪ್ರಕಾಶನದಿಂದ ಪ್ರಕಟಗೊಂಡಿದೆ. ಇದು ಎರಡಂಕದ ನಾಟಕವಾಗಿದೆ.

ನೀಚ ಸ್ವಾರ್ಥ, ಲಾಲಾಸೆಗಳಿಂದ ತುಂಬಿದ ಭ್ರಷ್ಟ ಸಮಾಜ, ಮೋಸಗಾರರಿಂದ ಕೂಡಿದ ಪರಿಸರದಲ್ಲಿ ಮುಗ್ಧ ಮತ್ತು ಸಭ್ಯ ತರುಣಿಯೊಳಬ್ಬಳ ದುರಂತ ಜೀವನದ ಚಿತ್ರಣ ಈ ನಾಟಕದ ಕಥಾವಸ್ತುವಾಗಿದೆ.

ನಾಟಕದ ನಾಯಕಿ ಅಂಜಿ, ಮಧ್ಯಮವರ್ಗಕ್ಕೆ ಸೇರಿದ ಕುಟುಂಬದವಳು. ಇವಳ ಅಕ್ಕ ಮತ್ತು ತಂಗಿಯರಿಗೆ ಈಗಾಗಲೇ ಮದುವೆಯಾಗಿದೆ. ತಂದೆ ನಿವೃತ್ತಿ ಹೊಂದಿ ಯಾವುದೇ ಚಿಂತೆಲ್ಲದೇ ಮನೆಯಲ್ಲಿದ್ದಾರೆ. ಹೊಟ್ಟೆಪಾಡಿಗಾಗಿ ಅಂಜಿ ನೌಕರಿ ಮಾಡುತ್ತಲಿದ್ದಾಳೆ. ಕೈಗೈ ಬಂದ ಮಗಳು ನೌಕರಿ ಮಾಡುವ ಮಗಳು ಮನೆಯಲ್ಲಿದ್ದರೂ, ಆಕೆಗೆ ಉತ್ತಮ ವರನನ್ನು ಹುಡುಕಿ ಮದುವೆ ಮಾಡುವ ಜವಬ್ದಾರಿ ತಂದೆ ತಾಯಿಯರಿಗೆ ಇಲ್ಲ. ಅವರು ತಮ್ಮದೆ ಆದ ಲೋಕದಲ್ಲಿ ಮುಳುಗಿ ಕಾಲ ಕಳೆಯುತ್ತಲಿದ್ದಾರೆ. ಅಂಜಿ ತನಗೆ ತಾನೇ ವರಾನ್ವೇಷಣೆಯಲ್ಲಿ ತೊಡಗುತ್ತಾಳೆ. ಜಾತಿ ಬ್ರಾಹ್ಮಣವಾಗಿದ್ದರೂ ಅದರಲ್ಲಿರುವ ಒಳಪಂಗಡ ಬೇರೆಯಾಗಿದ್ದರೂ ಮದುವೆ ಮಾಡಿಕೊಳ್ಳಲು ಸಿದ್ಧಳಾಗಿದ್ದಾಳೆ.

ವರಾನ್ವೇಷಣೆಗಾಗಿ ದೂರದ ಊರಿಗೆ ಹೋಗುವಾಗ ರೈಲಿನಲ್ಲಿ ಆಗಂತುಕನೊಬ್ಬನ ಪರಿಚಯವಾಗುತ್ತದೆ. ಅವನು ಬ್ರಾಹ್ಮಣ ಜಾತಿಗೆ ಸೇರಿದ್ದು ಅಮೇರಿಕಾದಲ್ಲಿ ಕೆಲಸ ಮಾಡುತ್ತಿರುತ್ತಾನೆ. ಅವನ ಮೇಲೆ ಈಕೆಗೆ ಮನಸ್ಸು ಆಗುತ್ತದೆ. ಅವನು ಸಭ್ಯಸ್ಥನಂತೆ ವರ್ತಿಸುತ್ತಾನೆ. ಆದರೆ ಅವನನ್ನು ದಕ್ಕಿಸಿಕೊಳ್ಳುವುದು ಇವಳಿಗೆ ಸಾಧ್ಯವಾಗುವದಿಲ್ಲ. ಈ ಸಂದರ್ಭದಲ್ಲಿ ಅವಳು ಬಹಳ ಗೊಂದಲಕ್ಕೆ ಒಳಗಾಗುತ್ತಾಳೆ. ವಾಸ್ತವತನ ಮರೆಯಾಗುತ್ತದೆ. ಸಹಜವಾಗಿ ಬಾವಜೀವಿಯಂತೆ ಅಂಜಿ ವರ್ತಿಸುತ್ತಾಳೆ. ಹಲವಾರು ರೀತಿಯ ಯೋಚನೆಗಳು ಅವಳ ತಲೆಯಲ್ಲಿ ಬಂದುಹೋಗುತ್ತವೆ.

ತಾನು ಕೆಲಸ ಮಾಡುವ ಕಛೇರಿಯಲ್ಲಿ ಪ್ರಭುಣೆ ಎನ್ನುವ ಸಹೋದ್ಯೋಗಿಯೊಬ್ಬ ಇವಳನ್ನು ಆಸೆಯ ಕಂಗಳಿಂದ ನೋಡುತ್ತಾನೆ. ಅಂಜಿಯನ್ನು ಇವನು ಹಲವಾರು ಸಲ ಸಿನಿಮಾಕ್ಕೆ, ಹೋಟೆಲ್‌ಗೆ, ಬಾರ್‌ಗೆ ಆಹ್ವಾನಿಸುತ್ತಾನೆ. ಆದರೆ ಅಂಜಿ ಮರ್ಯಾದಸ್ಥ ಮಧ್ಯಮ ವರ್ಗದಿಂದ ಬಂದ ಹೆಣ್ಣಾದ ಕಾರಣ ಅವನ ಯಾವುದೇ ಬಲೆಗೆ ಆಕೆ ಬೀಳುವದಿಲ್ಲ. ಆದರೆ ಆಕೆಯ ದುರಂತವೆಂದರೆ ಬೇಜವಬ್ದಾರಿ ತಂದೆ ತಾಯಿಗಳಿಂದಾಗಿ, ತಾನು ಕೈಗೊಂಡ ವರಾನ್ವೇಷಣೆಯು ಯಶಸ್ವಿಯಾಗದೆ, ಕೊನೆಗೆ ಬಹಳ ದಿನಗಳಾದರೂ ಆಕೆಗೆ ಗಂಡು ಸಿಗುವದಿಲ್ಲ. ನಾಟಕದ ಕೊನೆಗೆ ಅಂಜಿ ಪ್ರಭುಣೆ ಬಲೆಗೆ ಬಿದ್ದು ದಾರಿ ತಪ್ಪುವ ಸ್ಥಿತಿ ಬರುತ್ತದೆ. ಹೀಗೆ ಅಂಜಿಯ ಬಾಳು ಸರಿದಾರಿಯಲ್ಲಿ ನಡೆಯಲಾರದೆ ಕೆಟ್ಟ ದಾರಿ ಹಿಡಿಯುತ್ತದೆ.

ಈ ನಾಟಕದಲ್ಲಿ ಸೂತ್ರದಾರ ಪಾತ್ರವು ಸಹವರ್ತಿಯಾಗಿ ನಟಿಸುತ್ತಾ ಅರ್ಥಪೂರ್ಣ ವಿವರಣೆಯನ್ನು ನೀಡುತ್ತದೆ. ಪಾತ್ರಗಳಿಗೆ ಒದಗಿದ ಸಂದರ್ಭ ಸನ್ನಿವೇಷಗಳನ್ನು ಜೊತೆಗೆ ನಾಯಕಿಗೆ ಸಲಹೆಯನ್ನು ನೀಡುತ್ತಾ ಹೋಗುತ್ತದೆ.

ಈ ನಾಟಕದಲ್ಲಿ ಅನೈತಿಕತೆ ಕೊನೆಗೆ ಯಶಸ್ವಿಯಾದಂತೆ ಕಂಡರೂ, ಅಂಜಿ ಮತ್ತು ಪ್ರಭುಣೆ ಬಹಳ ದಿನ ಸುಖವಾಗಿ ಬಾಳಿದರೂ ಸಹ ಸರಿಯಾದ ಮಾರ್ಗವಲ್ಲ ಎಂದು ಸೂತ್ರದಾರ ಹೇಳುತ್ತಾನೆ. ಸಮಾಜದ ಮುಂದೆ ಅನೈತಿಕತೆಯ ಆದರ್ಶವನ್ನು ಇಡಲಾಗದು. ಅವರು ಸುಖದಿಂದ ಬದುಕಿದರೂ ಅದು ಒಳ್ಳೆಯ ಬದುಕಲ್ಲ. ಒಂದು ವೇಳೆ ಅವರು ಬದುಕಿದರೂ ನಾವು ಅವರ ಕಡೆಗೆ ಗಮನ ಹರಿಸಬಾರದು. ನಿಜವಾದ ಜೀವನದಲ್ಲಿ ಇರದೇ ಹೋದರೂ ನಾಟಕದಲ್ಲಾದರೂ ನೈತಿಕತೆಯ ಧ್ವಜ ಯಾವಾಗಲೂ ಮೇಲೆ ಹಾರುತ್ತಿರಬೇಕು ಎಂಬ ಉಪದೇಶ ನೀಡುತ್ತಾನೆ.

ಒಟ್ಟಾರೆಯಾಗಿ ನಾಟಕ ನಮ್ಮ ಆಧುನಿಕ ಸಮಾಜದ ಅನೈತಿಕತೆಯ ಅಂಶವನ್ನು, ಕಬಳಿಸಲು ಕಾತರರಾಗಿರುವ ಕಾಮುಕ ವ್ಯವಸ್ಥೆಯನ್ನು, ಸರಿಯಾಗಿ ಸಂಸ್ಕಾರ ನೀಡದ ಜವಬ್ದಾರಿ ಹೋರದ ತಂದೆ ತಾಯಂದಿರಗಳ ವರ್ತನೆಗಳನ್ನು, ಇವೆಲ್ಲವುಗಳ ಮಧ್ಯೆ ಅಂಜಿಯಂತಹ ಅಸಾಹಯಕ ಹೆಣ್ಣೊಬ್ಬಳ ಸ್ವಪ್ರಯತ್ನದ ವಿಫಲತೆಗಳನ್ನು, ದಾರಿ ತಪ್ಪುವದನ್ನು ನಾಟಕ ಸುಂದರವಾಗಿ ವಿವರಿಸುತ್ತದೆ.

**೯. ಮುದ್ರಾರಾಕ್ಷಸ**

ಮುದ್ರಾರಾಕ್ಷಸ ಐತಿಹಾಸಿಕ ಕಥಾವಸ್ತುವುಳ್ಳ ನಾಟಕವಾಗಿದೆ. ಸಂಸ್ಕೃತ ನಾಟಕಕಾರ ವಿಶಾಖದತ್ತನ 'ಮುದ್ರಾರಾಕ್ಷಸ' ನಾಟಕವನ್ನು ೧೮೭೮ ರಲ್ಲಿ ಭಾರತೇಂದು ಹರಿಶ್ಚಂದ್ರರು ಹಿಂದಿ ಅನುವಾದ ಮಾಡಿದ್ದರು. ಈ ಎರಡು ನಾಟಕಗಳನ್ನು ಮುಂದಿಟ್ಟುಕೊಂಡು ಪಟ್ಟಣಶೆಟ್ಟರು ಮುದ್ರಾರಾಕ್ಷಸ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಮೈಸೂರು ಒಡೆಯರ

ಆಸ್ಥಾನದಲ್ಲಿದ್ದ ಕೆಂಪುನಾರಾಯಣ ಕವಿಯು ಈ ಕಥೆಯನ್ನುಳ್ಳ ಮುದ್ರಾಮಂಜೂಷವೆಂಬ ಕೃತಿಯನ್ನು ಈ ಮೊದಲೇ ಕನ್ನಡಕ್ಕೆ ತಂದಿದ್ದಾರೆ. ಭಾರತೇಂದು ಹರಿಶ್ಚಂದ್ರರು ನಾಟಕಕಾರರಾದ ಕಾರಣ ಅವರು ಅನುಕೂಲಕ್ಕೆ ತಕ್ಕಂತೆ ಅನುವಾದದಲ್ಲಿ ಬದಲಾವಣೆಗಳನ್ನು ಮಾಡಿಕೊಂಡಿದ್ದಾರೆ. ಆದರೆ ಪಟ್ಟಣಶೆಟ್ಟರು ಸಂಸ್ಕೃತದ ವಿಶಾಖದತ್ತನ ಮೂಲನಾಟಕಕ್ಕೆ ಧಕ್ಕೆ ಬಾರದಂತೆ ಅನುವಾದಿಸಿದ್ದಾರೆ. ೧೯೮೬ ರಲ್ಲಿ ಅನನ್ಯ ಪ್ರಕಾಶನ ಧಾರವಾಡದಿಂದ ಈ ನಾಟಕ ಪ್ರಕಟಣೆಗೊಂಡಿದೆ.

ಈ ನಾಟಕವು ಏಳು ಅಂಕಗಳನ್ನು ಒಳಗೊಂಡಿದ್ದು ಮುದ್ರಲಾಭ, ರಾಕ್ಷಸ ವಿಚಾರ, ಕೃತಕ ಕಲಹ, ರಾಕ್ಷಸೋದ್ಯೋಗ, ಕೂಟಲೇಖ, ಕಪಟನಾಶ ನಿರ್ವಹಣೆ ಎಂಬ ಅಂಕಗಳಿಂದ ಕೂಡಿದೆ.

ಪಾಟಲಿಪುತ್ರದ ರಾಜ ಸರ್ವಾರ್ಥಸಿದ್ಧಿ. ಮೊದಲ ಹೆಂಡತಿ ಮುರಾದೇವಿ, ಎರಡನೆ ಹೆಂಡತಿ ಸುನಂದಾ ದೇವಿ, ಮುರಾದೇವಿಯಲ್ಲಿ ಹುಟ್ಟಿದ ಮಕ್ಕಳು ಮೌರ್ಯರು, ಸುನಂದಾ ದೇವಿಯಲ್ಲಿ ಹುಟ್ಟಿದ ಒಂಭತ್ತು ಜನಮಕ್ಕಳು ನವನಂದರು. ಮೌರ್ಯರು ಕೆಡುಕನ್ನು ಉಂಟು ಮಾಡುವರೆಂದು ಬಗೆದು ನವನಂದರು ಅವರನ್ನು ಕೊಲ್ಲುತ್ತಾರೆ. ದೈವಾನುಗ್ರಹದಿಂದ ಚಂದ್ರಗುಪ್ತ ಮೌರ್ಯನು ಬದುಕಿ ಉಳಿಯುತ್ತಾನೆ. ಪರ್ವತರಾಜನ ಕಪಟ ಶಿಲ್ಪದ ನಿಮಿತ್ತ ಸೆರೆಮನೆಯಿಂದ ಬಿಡುಗಡೆಗೊಳ್ಳುತ್ತಾನೆ. ರಾಜನೀತಿಜ್ಞನು, ಬುದ್ಧಿವಂತನೂ ಆದ ಚಾಣಕ್ಯನನ್ನು ಸಂಧಿಸುತ್ತಾನೆ. ಚಾಣಕ್ಯನ ತಂತ್ರಗಾರಿಕೆಯ ಸಹಾಯದಿಂದ ನಂದರ ವಂಶವನ್ನು ನಿರ್ನಾಮ ಮಾಡುತ್ತಾನೆ. ಆದರೆ ಮಹಾಬಲ ಶಾಲಿಯಾದ ನಂದರ ಪ್ರಧಾನ ಮಂತ್ರಿ ಅಮಾತ್ಯ ರಾಕ್ಷಸನು ಯುದ್ಧದಲ್ಲಿ ಬದುಕಿ ಉಳಿಯುತ್ತಾನೆ. ಇವನು ಚಂದ್ರಗುಪ್ತ ಮೌರ್ಯ ಮತ್ತು ಚಾಣಕ್ಯನ ಸಂಹಾರಕ್ಕಾಗಿ ಪಣತೊಡುತ್ತಾನೆ. ಆಗ ಚಾಣಕ್ಯನು ತನ್ನ ಬುದ್ಧಿವಂತಿಕೆಯಿಂದ ಅಮಾತ್ಯ ರಾಕ್ಷಸನನ್ನು ಪರಿವರ್ತನೆ ಮಾಡಿ ಅವನನ್ನು ಚಂದ್ರಗುಪ್ತ ಮೌರ್ಯನ ಪ್ರಧಾನ ಮಂತ್ರಿಯನ್ನಾಗಿ ಮಾಡುವುದೇ ನಾಟಕದ ಕಥಾವಸ್ತುವಾಗಿದೆ.

ನವನಂದರು ನಿರ್ನಾಮಗೊಂಡು ಅವರ ಮಂತ್ರಿಯಾಗಿದ್ದ ಅಮಾತ್ಯ ರಾಕ್ಷಸನು ದೇಶಭ್ರಷ್ಟನಾಗುತ್ತಾನೆ. ಅವನು ತನ್ನ ಹೆಂಡತಿ ಮಕ್ಕಳು ತನ್ನ ಆಪ್ತಮಿತ್ರನಾದ ವ್ಯಾಪಾರಿ ಚಂದದಾಸನ ಮನೆಯಲ್ಲಿ ಬಿಡುತ್ತಾನೆ. ತಾನು ಪರ್ವತ ರಾಜನ ಮಗನಾದ ಮಲಯ ಕೇತುವಿನಲ್ಲಿ ಆಶ್ರಯ ಪಡೆಯುತ್ತಾನೆ. ಇತ್ತ ಚಾಣಕ್ಯನ ಬೇಹುಗಾರಿಕೆಯಿಂದ ಅಮಾತ್ಯ ರಾಕ್ಷಸನ ಹೆಂಡತಿ ಮಕ್ಕಳು ಚಂದದಾಸನ ಮನೆಯಲ್ಲಿರುವ ವಿಷಯ ತಿಳಿಯುತ್ತದೆ. ಅವನನ್ನು ಕರೆಯಿಸಿ, ವಿನಯಪೂರ್ವಕವಾಗಿ ವಿಚಾರಿಸಿದರೂ, ಹೆದರಿಸಿ ಕೇಳಿ ನೋಡಿದರೂ ಅವನು ತನ್ನಲ್ಲಿರುವ ವಿಷಯವನ್ನು ಬಾಯಿ ಬಿಡುವುದಿಲ್ಲ. ತನ್ನ ಮಿತ್ರನಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲು ಅಪಾಯಕ್ಕೆ ಒಳಗಾಗುತ್ತಾನೆ. ಚಾಣಕ್ಯನ ಅಣತಿಯಂತೆ ಚಂದನ ದಾಸನನ್ನು ಸೆರೆಮನೆಗೆ ಕಳುಹಿಸಲಾಗುತ್ತದೆ.

ಅತ್ತ ಅಮಾತ್ಯ ರಾಕ್ಷಸನು ಸುಮ್ಮನೆ ಕೂಡುವದಿಲ್ಲ. ಅನೇಕ ಜನರನ್ನು ಹೇಗಾದರೂ ಮಾಡಿ ಕಪಟತನದಿಂದ ಚಂದ್ರಗುಪ್ತ ಮೌರ್ಯನನ್ನು ಕೊಲ್ಲಲು ಕಳುಹಿಸುತ್ತಾನೆ. ಚಾಣಕ್ಯನ ಮುಂದಾಲೋಚನೆಯಿಂದ, ಬುದ್ಧಿವಂತಿಕೆಯಿಂದ ಚಂದ್ರಗುಪ್ತನು ಎಲ್ಲಾ ಅಪಾಯಗಳಿಂದ ಪಾರಾಗುತ್ತಾನೆ. ಅಮಾತ್ಯ ರಾಕ್ಷಸನು ಮಾಡಿದ ಯಾವ ಯೋಜನೆಗಳು ಫಲ ನೀಡುವದಿಲ್ಲ. ತನ್ನ ತಂತ್ರಗಾರಿಕೆಯ ಬಗ್ಗೆ ತನಗೆ ಅನುಮಾನ ಬರುವಂತೆ ಮಾಡುತ್ತಾನೆ ಚಾಣಕ್ಯ.

ಅಮಾತ್ಯ ರಾಕ್ಷಸನು ಮಿತ್ರನಾದ ಚಂದದಾಸನಿಗೆ ಅಪಾಯ ಉಂಟಾಗಿದೆ ಎಂಬುದನ್ನು ತಿಳಿಯುತ್ತಾನೆ. ಸತ್ಯಾಸತ್ಯತೆಯನ್ನು ತಿಳಿದು ಸಮಸ್ಯೆ ಪರಿಹರಿಸಲು ಕುಸುಮಪುರದ ಹೊರವಲಯದ ವನವೊಂದರಲ್ಲಿ ರಾಕ್ಷಸನು ಬೀಡು ಬಿಡುತ್ತಾನೆ. ಆ ವನದಲ್ಲಿ ನೇಣು ಹಾಕಿಕೊಂಡು ಸಾಯಲು ಸಿದ್ಧನಾಗಿರುವ ಒಬ್ಬ ವ್ಯಕ್ತಿಯನ್ನು ಕಾಣುತ್ತಾನೆ. ವಿಷಯ ಏನೆಂದು ಕೇಳಿದಾಗ, ಅವನು ನನ್ನ ಮಿತ್ರನಾದ ವಿಷ್ಣುದಾಸನಿಗೆ ಬುದ್ಧಿಪೂರ್ವಕ ಮರಣ ಉಂಟಾಗಿದೆ. ನನ್ನ ಮಿತ್ರನ ಸಾವನ್ನು ಸಹಿಸಲಾರದೆ ನಾನು ಸಾಯುತ್ತಿಲಿದ್ದೇನೆ ಎಂದು ಹೇಳುತ್ತಾನೆ. ಆಗ ಅಮಾತ್ಯ ರಾಕ್ಷಸನು ಇವನು ನನ್ನ ಹಾಗೆಯೇ ಮಿತ್ರನಿಗೆ ಉಂಟಾದ ತೊಂದರೆಯಿಂದ ಬಳಲುವ ವ್ಯಕ್ತಿಯಾಗಿದ್ದಾನೆ ಎಂದು ತಿಳಿಯುತ್ತಾನೆ. ಅವನಿಂದ ವೃತ್ತಾಂತವನ್ನು ಬಯಸುತ್ತಾನೆ. ಆಗ ಅವನು ನನ್ನ ಮಿತ್ರನಾದ ವಿಷ್ಣುದಾಸನು ಇಂದು ತನ್ನೆಲ್ಲಾ ಸಂಪತ್ತನ್ನು ಬಡಬಗ್ಗರಿಗೆ ದಾನ ಮಾಡಿ, ಚಿತೆಯೇರಿ ಬುದ್ಧಿ ಪೂರ್ವಕವಾಗಿ ಪ್ರಾಣಾರ್ಪಣೆ ಮಾಡಿಕೊಳ್ಳುತ್ತಿದ್ದಾನೆ. ಏಕೆಂದರೆ ಆತನ ಆಪ್ತಮಿತ್ರನಾದ ಚಂದನದಾಸನಿಗೆ ಮರಣದಂಡನೆ ಜಾರಿಯಾಗಿದ್ದು ಅವನು ಸಾಯುವುದೊರಳಗಾಗಿ ತಾನು ಸಾಯಬೇಕೆಂದು ಬಯಸಿದ್ದಾನೆ. ಆದ್ದರಿಂದ ನಾನು ಸಾಯುತ್ತಿದ್ದೇನೆ ಎಂದು ಹೇಳುತ್ತಾನೆ. ಆಗ ರಾಕ್ಷಸನು ನೀನು ಅತ್ಮಹತ್ಯೆ ಮಾಡಿಕೊಳ್ಳುವದು ಬೇಡ, ನಾನು ಚಂದನದಾಸನನ್ನು ಬದುಕಿಸುತ್ತೇನೆಂದು ಖಡ್ಗದಾರಿಯಾಗಿ ಹೊರಡುತ್ತಾನೆ. ಆಗ ಆ ವ್ಯಕ್ತಿ ತಡೆದು, ಖಡ್ಗಪಾಣಿಯಾಗಿ ಹೋಗುವುದು ಅಪಾಯಕಾರಿಯೆಂದು ತಿಳಿಸಿ ನಿಶ್ಯಸ್ತ್ರಧರನಾಗಿ ಮಧ್ಯಸ್ಥಾನಕ್ಕೆ ಕಳುಹಿಸುತ್ತಾನೆ. ಅಲ್ಲಿ ಚಾಣಕ್ಯ ಚಂದ್ರಗುಪ್ತನು ಅಮಾತ್ಯರಾಕ್ಷಸನನ್ನು ಹಿಡಿದು ಅವನೊಂದಿಗೆ ಗೌರವಯುತರಾಗಿ ವರ್ತಿಸುತ್ತಾರೆ. ನೀವೇ ಚಂದ್ರಗುಪ್ತ ಮೌರ್ಯನ ಪ್ರಧಾನಮಂತ್ರಿಯಾಗಬೇಕೆಂದು ಚಾಣಕ್ಯನು ವಿನಂತಿಸಿಕೊಳ್ಳುತ್ತಾನೆ. ಅವರ ವಿನಯಕ್ಕೆ ಮನಸೋತ ಅಮಾತ್ಯ ರಾಕ್ಷಸನು ಚಂದ್ರಗುಪ್ತನನ್ನು ಸಾಯಿಸುವ ವಿಚಾರವನ್ನು ತೆಗೆದು ಹಾಕಿ. ಚಂದ್ರಗುಪ್ತನ ಮತ್ತು ಅವನ ಸಾಮ್ರಾಜ್ಯದ ರಕ್ಷಣೆಗೆ ಮುಂದಾಗುತ್ತಾನೆ. ಅಮಾತ್ಯ ರಾಕ್ಷಸನು ಚಂದ್ರಗುಪ್ತ ಪ್ರಧಾನಮಂತ್ರಿಯಾಗುತ್ತಾನೆ. ಇದು ಸಹಿತ ಚಾಣುಕ್ಯನ ತಂತ್ರಗಾರಿಕೆಯೇ ಆಗಿದೆ.

ಈ ನಾಟಕದಲ್ಲಿ ಬಂದಿರುವ ಹಾಡುಗಳು ಚಾರಿತ್ರಿಕ ವಸ್ತುವಿಗೆ ಅನುಗುಣವಾಗಿಯೇ ಇವೆ. ಪ್ರತಿ ಹಾಡಿನ ಆದಿಪ್ರಾಸ ಹಾಗೂ ಅಂತ್ಯಪ್ರಾಸಗಳು ದ್ವಿರುಕ್ತಿಗಳು ಕೇಳುಗರಿಗೆ ಅನಂದವನ್ನುಂಟು ಮಾಡುವಂತಿದೆ, ಪುರಾತನವಾದ ಕಥಾವಸ್ತುವಿಗೆ ಇಲ್ಲಿ ಬಳಸಿದ ಭಾಷೆ ಸೂಕ್ತವಾಗಿದೆ.

### ೧೦. ಕೋರ್ಟ್ ಮಾರ್ಶಲ್

"ಕೋರ್ಟ್‌ಮಾರ್ಶಲ್" ನಾಟಕದ ಮೂಲ ಹಿಂದೀ ಲೇಖಕರು ಸ್ವದೇಶ್ ದೀಪಕ್ ಅವರು ೨೦೦೧ ರಲ್ಲಿ ಡಾ.ಸಿದ್ಧಲಿಂಗ ಪಟ್ಟಣಶೆಟ್ಟರು ಈ ನಾಟಕವನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅನನ್ಯ ಪ್ರಕಾಶನ ಧಾರವಾಡದಿಂದ ಈ ಕೃತಿ ಪ್ರಕಟಣೆಗೊಂಡಿದೆ.

ಮೂಲನಾಟಕವು ಹಿಂದಿಯಲ್ಲಿ ಬಹಳ ಪ್ರಸಿದ್ಧಿಯನ್ನು ಗಳಿಸಿದೆ. ದಿಲ್ಲಿಯ ಸಾಹಿತ್ಯ ಕಲಾ ಪರಿಷತ್ತು, ಪಶ್ಚಿಮ ಬಂಗಾಲದ ಸರಕಾರ, ಮಧ್ಯ ಪ್ರದೇಶದ ಸಾಹಿತ್ಯ ಪರಿಷತ್ತಿನ ಶ್ರೇಷ್ಠ ನಾಟಕ ಪ್ರಶಸ್ತಿಯನ್ನು ಈ ನಾಟಕ ಗಳಿಸಿದೆ. ಹಿಂದಿಯ ಪ್ರಸಿದ್ಧ ನಿರ್ದೇಶಕರಾದ ರಂಜೀತ್ ಕಪೂರ್, ಗಂಗೂಲಿ, ಅರವಿಂದ ಗೌರ್, ನಾದಿರಾ ಬಬ್ಬರ್ ಮುಂತಾದವರಿಂದ ರಂಗ ಪ್ರಯೋಗಗೊಂಡಿದೆ. ೨೦೦೦ನೇ ಇಸ್ವಿಯಲ್ಲಿ ಈ ನಾಟಕ ಚಲನಚಿತ್ರವಾಗಿ

ನಿರ್ಮಾಣವಾಗಿದೆ. ನಾಸಿರುದ್ದೀನ್ ಷಾ, ಓಂಪುರಿ, ಮನೋಜ್ ವಾಜಪೇಯಿ, ಅಶುತೋಷರಾಜಾ, ಅಶೀಷ್ ವಿದ್ಯಾರ್ಥಿ ಮುಂತಾದವರು ಈ ಚಿತ್ರದಲ್ಲಿ ಅಭಿನಯಿಸಿದ್ದಾರೆ.

ನಮ್ಮ ಸಮಾಜದಲ್ಲಿ ಪ್ರಬಲ ವ್ಯಕ್ತಿಗಳು ಮಾಡುವ ಪ್ರತಿಭಟನೆಗೆ ರಾಜಕೀಯ ಪ್ರತಿಭಟನೆ ಎಂದು ಕರೆಯುತ್ತಾರೆ. ಇದು ಅವರನ್ನು ಒಂದೇ ಒಂದು ನೆಗೆತದಲ್ಲಿ ಅಧಿಕಾರಕ್ಕೆ ಅತ್ಯಂತ ಸಮೀಪದಲ್ಲಿರುವ ಆಸನಗಳಲ್ಲಿ ಕುಳ್ಳಿರಿಸಿ ಬಿಡುತ್ತದೆ. ಆದರೆ ಇದನ್ನೇ ದುರ್ಬಲ ವ್ಯಕ್ತಿಗಳು ಮಾಡಿದರೆ ಅದು ಪ್ರತಿಭಟನೆಯಲ್ಲ. ಅದಕ್ಕೆ ಧಂಗೆ ಎಂದು ಹೆಸರು. ಇದು ಅವರನ್ನು ಒಂದೇ ಒಂದು ನೆಗೆತದಲ್ಲಿ ಗಲ್ಲುಗಂಬಕ್ಕೆ ಏರಿಸಿ ಬಿಡುತ್ತದೆ. ಕಾನೂನು ಮತ್ತು ಸಂವಿಧಾನಗಳು ಎಲ್ಲರಿಗೂ ಸಮಾನ ಸ್ಥಾನಮಾನವನ್ನು ನೀಡಿವೆ. ಆದರೆ ದೊಡ್ಡ ವ್ಯಕ್ತಿ ಸಣ್ಣ ವ್ಯಕ್ತಿಗೆ, ಮೇಲಿನ ವ್ಯಕ್ತಿ ಕೆಳಗಿನ ವ್ಯಕ್ತಿಗೆ ಈ ಅಧಿಕಾರಿಯನ್ನು ಕೊಡಲಿಲ್ಲ. ಯಾವ ಸಮಾಜ ಜಾತಿ ಭೇದದ ಆಧಾರದ ಮೇಲೆ ನಡೆಯುತ್ತದೆಯೋ ಅದರ ಆಯುಷ್ಯ ಅಲ್ಪಾವಧಿಯದ್ದಾಗಿರುತ್ತದೆ; ಎನ್ನುವದನ್ನು ಕುರಿತು ಈ ನಾಟಕ ಹೇಳುತ್ತದೆ.

ಈ ನಾಟಕ ಎರಡಂಕದ್ದಾಗಿದೆ. ಪ್ರಪಂಚದ ಎಲ್ಲಾ ನಾಗರೀಕ ದೇಶಗಳ ಸೈನ್ಯದಲ್ಲಿ ಯಾವುದಾದರೂ ಅಪರಾಧ ನಡೆದಾಗ ಕೋರ್ಟ್ ಮಾರ್ಶಲ್ ಮಾಡಲಾಗುತ್ತದೆ. ಈ ಕೋರ್ಟಿನ ತೀರ್ಪನ್ನು ಯಾವುದೇ ಸಿವಿಲ್ ನ್ಯಾಯಾಲಯಗಳಲ್ಲಿ ಪ್ರಶ್ನಿಸುವಂತಿಲ್ಲ. ಇಲ್ಲಿ ನ್ಯಾಯವಾದಿಗಳು ನ್ಯಾಯ ತೀರ್ಮಾನಿಸುವವರು ಸೈನ್ಯಕ್ಕೆ ಸಂಬಂಧಿಸಿದವರೇ ಆಗಿರುತ್ತಾರೆ. ಕೋರ್ಟ್ ಮಾರ್ಶಲ್‌ನಲ್ಲಿ ನಡೆಯುವ ಒಂದು ಅಪರಾಧದ ಕುರಿತಾದ ವಾದ ವಿವಾದಗಳು ಈ ನಾಟಕದಲ್ಲಿವೆ.

ರಾಮಚಂದರ್ ಎನ್ನುವ ಆರೋಪಿ ಸೈನ್ಯದಲ್ಲಿ ಜವಾನನಾಗಿ ಕೆಲಸಮಾಡುತ್ತಿರುತ್ತಾನೆ. ಈತನು ಒಂದು ದಿನ ರಾತ್ರಿ ತನ್ನ ಮೇಲಾಧಿಕಾರಿಗಳಾದ ಕ್ಯಾಪ್ಟನ್ ಬಿ.ಡಿ. ಕಪೂರ್ ಮತ್ತು ಕ್ಯಾಪ್ಟನ್ ವರ್ಮಾ ಅವರ ಮೇಲೆ ಗುಂಡು ಹಾರಿಸುತ್ತಾರೆ. ಕ್ಯಾಪ್ಟನ್ ವರ್ಮಾ ಸ್ಥಳದಲ್ಲಿ ಮರಣ ಹೊಂದುತ್ತಾನೆ. ನ್ಯಾಯಾಲಯದಲ್ಲಿ ಜವಾನ ರಾಮಚಂದರ್‌ನ ಪರವಾಗಿ ಕ್ಯಾಪ್ಟನ್ ಬಿಕಾಶ್ ರಾಯ್ ವಾದಿಸುತ್ತಾರೆ. ಜೀವನ ಮತ್ತು ಮರಣದ ತೀರ್ಪು ತಾಂತ್ರಿಕತೆಯ ಆಧಾರದ ಮೇಲೆ ಆಗುವದಿಲ್ಲ; ಸತ್ಯದ ಆಧಾರದ ಮೇಲೆಯೇ ಆಗಬೇಕು. ಸತ್ಯ ಯಾವಾಗಲೂ ತಾನಾಗಿಯೇ ಮಾತನಾಡುತ್ತದೆ. ಸುಳ್ಳುಗಳು ಸುತ್ತಾಡುವ ಗಲ್ಲಿಗಳಲ್ಲಿ ಸತ್ಯ ಎಂದಿಗೂ ಸುಳಿಯುವದಿಲ್ಲ. ನಾನು ಆತ್ಮದ ಅಖೇಟಿಕ ಎನ್ನುವ ಬಿಕಾಶ್ ರಾಯ್‌ನ ವಾದ ಸರಣಿ ರಾಮಚಂದರ್ ನನ್ನು  ಸಾವಿನಿಂದ ಪಾರು ಮಾಡುವುದು ಆಗಿರದೇ, ಘಟನೆಯ ಹಿಂದಿನ ಸತ್ಯಾಸತ್ಯತೆಗಳನ್ನು ಬಯಲುಗೊಳಿಸುವದೇ ಆಗಿರುತ್ತದೆ. ಕ್ಯಾಪ್ಟನ್ ಬಿ.ಡಿ. ಕಪೂರ್ ಮತ್ತು ಅವರ ವಕೀಲ ಮೇಜರ್ ಅಜಯ್‌ಪುರಿ ಅಭಿಪ್ರಾಯದಂತೆ ರಾಮಚಂದರ್ ನಿಜವಾದ ಆರೋಪಿ. ಆದರೆ ಆತ ಆರೋಪಿ ಸ್ಥಾನದಲ್ಲಿ ನಿಲ್ಲಲು ಕಾರಣವಾದ ಸಂಗತಿಗಳನ್ನು ಬಿಕಾಶ್ ರಾಯ್ ಬಯಲಿಗೆಳೆಯುತ್ತಾರೆ. ಸೈನ್ಯದ ಓಟದ ಸ್ಪರ್ಧೆಯಲ್ಲಿ ತನ್ನ ಮೇಲಾಧಿಕಾರಿಯಿಂದ ಕ್ಯಾಪ್ಟನ್ ಕಪೂರ್ ನನ್ನು ರಾಮಚಂದರ್ ಸೋಲಿಸುವುದು. ನಂತರ ಕಪೂರ್‌ನಿಂದ ರಾಮಚಂದರ್ ಜಾತಿ ನಿಂದನೆಗೆ ಒಳಗಾಗುವುದು. ಒಂದು ಸಲ ಪಾರ್ಟಿಯಲ್ಲಿ ಮಕ್ಕಳು ಮಾಡಿದ ಮಲವನ್ನು ತೆಗೆದುಹಾಕಲು ರಾಮ್‌ಚಂದರನಿಗೆ ಹೇಳುವುದು. ಮೇಲಿಂದ ಮೇಲೆ ಮಾನಸಿಕ ಹಿಂಸೆಯನ್ನು ಕೊಡುವುದು. ಅಲ್ಲದೆ ಕಪೂರ್ ತನ್ನ ಹೆಂಡತಿಯೊಂದಿಗೆ ಆಡಿದ ಜಗಳವನ್ನು ರಾಮಚಂದರ್ ನೋಡಿದ ಕಾರಣ ಅವನನ್ನು ಬೈಯುವುದು ಮುಂತಾದ ಕಾರಣಗಳಿಂದ ಕೋಪಗೊಂಡು ರಾಮಚಂದರ್ ಅವರ ಮೇಲೆ ಗುಂಡು ಹಾರಿಸುತ್ತಾನೆ. ಆದರೆ ಈ

ಮೊದಲು ಜವಾನ ರಾಮಚಂದರ್ ಪ್ರಾಮಾಣಿಕ ವ್ಯಕ್ತಿಯಾಗಿರುತ್ತಾನೆ. ಸಂದರ್ಭ ಅವನನ್ನು ಈ ರೀತಿಯಾಗಿ ಮಾಡಿಸಿದೆ. ಕ್ಯಾಪ್ಟನ್‌ಕಪೂರ್ ತನ್ನ ತಪ್ಪುಗಳನ್ನು ನ್ಯಾಯಾಲಯದಲ್ಲಿ ಒಂದೊಂದೇ ಬಯಲಾದಾಗ ಮಾನಸಿಕ ಸ್ವಾಸ್ಥ್ಯ ಕಳೆದುಕೊಂಡು ಕೋಪದಿಂದ ವರ್ತಿಸುತ್ತಾನೆ. ರಾಮಚಂದರ್ ಪ್ರಾಮಾಣಿಕನೆಂದು ತಿಳಿದ ನ್ಯಾಯಾಧೀಶ ಕರ್ನಲ್ ಸೂರತ್‌ಸಿಂಗ್ ತೀರ್ಪು ನೀಡುವ ಮುಂಚೆ ಆರೋಪಿ ಸ್ಥಾನದಲ್ಲಿ ನಿಂತಿರುವ ರಾಮಚಂದರ್‌ನನ್ನು ಪಾರ್ಟಿಗೆ ಅಹ್ವಾನಿಸುತ್ತಾನೆ. ಅವನ ಜೊತೆ ಸಂತೋಷ ಹಂಚಿಕೊಂಡು ನಾಳೆ ನಿನಗೆ ಮರಣ ದಂಡನೆಯ ಶಿಕ್ಷೆ ಕೊಡುವದಾಗಿ ತಿಳಿಸುತ್ತಾನೆ. ಅವನ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾನೆ. ಅಷ್ಟರಲ್ಲಿ ಹೊರಗಡೆ ಗುಂಡಿನ ಸದ್ದು ಕೇಳುತ್ತದೆ. ಕ್ಯಾಪ್ಟನ್ ನ್ಯಾಯಾಲಯದಲ್ಲಿ ಒಮ್ಮೊಮ್ಮೆ ನ್ಯಾಯ ಸಿಗದೇ ಹೋಗಬಹುದು. ಆದರೇ ಆ ಮೇಲಿನ ದೇವರು ಸರಿಯಾದ ತೀರ್ಮಾನವನ್ನೇ ಕೊಡುತ್ತಾನೆ ಎಂದು ಹೇಳುತ್ತಾನೆ. ಸತ್ಯ, ಮನುಷ್ಯನ ಪ್ರಾಣಕ್ಕಿಂತ ದೊಡ್ಡದು. ಎಲ್ಲರಿಗೂ ತಿಳಿಯಬೇಕಾದದ್ದು ಸತ್ಯ ಎಂಬುದೇ ಬಿಕಾಶ್‌ರಾಯ್‌ನ ವಾದ. ಒಟ್ಟಾರೆ ನಾಟಕ ರಂಗ ಪ್ರಯೋಗಕ್ಕೆ ಹೊಸ ವಸ್ತುವನ್ನು ಕೊಡುತ್ತದೆ. ಕ್ಷಣ ಕ್ಷಣಕ್ಕೂ ಕುತೂಹಲವನ್ನು ಉಳಿಸಿಕೊಂಡು ಹೋಗುವಲ್ಲಿ ಯಶಸ್ವಿಯಾಗಿದೆ.

### ೧೧. ಶಸ್ತ್ರ ಸಂತಾನ

ಪಟ್ಟಣಶೆಟ್ಟರ ಯಶಸ್ವೀ ಅನುವಾದ ನಾಟಕಗಳಲ್ಲಿ ಶಸ್ತ್ರ ಸಂತಾನವೂ ಒಂದು. ಇದರ ಮೂಲ ಹಿಂದೀ ಲೇಖಿಕರು ಕವಿ ಮತ್ತು ನಾಟಕಕಾರರೆಂದು ಖ್ಯಾತನಾಗಿರುವ ರಾಮೇಶ್ವರ ಪ್ರೇಮ್ ಅವರು. ೨೦೦೨ ಡಿಸೆಂಬರ್‌ನಲ್ಲಿ ಪಟ್ಟಣಶೆಟ್ಟರು ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಧಾರವಾಡದ ಅನನ್ಯ ಪ್ರಕಾಶನದಿಂದ ಇದು ಪ್ರಕಟಣೆಗೊಂಡಿದೆ.

ಈ ನಾಟಕವು ಮಹಾಭಾರತದ ಕುರುಕ್ಷೇತ್ರದ ಭೀಕರ ಯುದ್ಧದ ಹಳೆಯ ವ್ಯಥೆಯ ಕಥೆಗೆ ಸಮಕಾಲೀನ ಸಂದರ್ಭಗಳ ಅರ್ಥವಂತಿಕೆಯನ್ನು ಕೊಡುತ್ತದೆ. ಯುದ್ದದ ದಿನಗಳಲ್ಲಿನ ಹಗಲು ರಾತ್ರಿಗಳ ವ್ಯತಿರಿಕ್ತತೆಗಳನ್ನು ಈ ನಾಟಕ ಹೇಳುತ್ತದೆ. ಸಮಕಾಲೀನ ಅರ್ಥವಂತಿಕೆಯಿಂದ ಕೂಡಿದ ಈ ನಾಟಕ ಪ್ರಬಲ ರಾಷ್ಟ್ರಗಳು ಸಮಸ್ತ ವಿಶ್ವಕ್ಕೆ ಶಸ್ತ್ರಗಳನ್ನು ನೀಡಿ ಯುದ್ಧಗಳನ್ನು ನಡೆಸುತ್ತಾ, ತಮ್ಮ ಬುದ್ಧಿಶಕ್ತಿಯ ಮೇಲಾಟಗೈಯುತ್ತ, ಅಧಿಕಾರ ಲೋಲುಪತೆ, ಅಹಂಕಾರಗಳಿಂದ ಮೆರೆಯುತ್ತಿರುವ, ಮನುಷತ್ವವನ್ನು ಮರೆತ ಪ್ರಬಲ ದೇಶಗಳಿಗೆ ಎಚ್ಚರಿಕೆ ನೀಡುತ್ತದೆ.

ಶಸ್ತ್ರಸಂಗ್ರಾಹಕರು ಶವವಾಹಕರ ದಶ್ಯದೊಂದಿಗೆ ನಾಟಕ ಆರಂಭವಾಗುತ್ತದೆ. ಅವರಾಡುವ ಮಾತುಗಳು ಯುದ್ಧದ ವಾಸ್ತವ ಸತ್ಯಗಳನ್ನು ತೆರೆದಿಡುತ್ತದೆ. ಯುದ್ಧದಲ್ಲಿ ಪಾಲ್ಗೊಳ್ಳುವ ಎಲ್ಲರೂ ಮನುಷ್ಯರಾಗಿರದೆ ಯಾರದೊ ಹಠಮಾರಿತನ, ಸ್ವಾಭಿಮಾನ ವೀರತೆಗಳಿಗಾಗಿ ಶಸ್ತ್ರಗಳಾಗುತ್ತಾರೆ, ಸಾಯಿಸುತ್ತಾರೆ. ಸಮಸ್ತ ಸಂಚಿತ ಪಾಪ ಪುಣ್ಯ, ಧರ್ಮ-ಕರ್ಮ, ಭೂತ ವರ್ತಮಾನ, ಭವಿಷ್ಯತ್ತಿನ ಆಯೋಜಕರಾಗುತ್ತಾರೆ. ಈ ಯುದ್ಧದಲ್ಲಿ ಯಾರಾದರೂ ಬದುಕಿ ಉಳಿದಿದ್ದರೆ ಅವನು ಮನುಷ್ಯನಾಗಿರಲಾರ, ಕೇವಲ ಪ್ರತಿರೂಪಿ ಇಲ್ಲವೇ ಬಹುರೂಪಿಯಾಗಿರುತ್ತಾನೆ. ಗುರುಗಳಿಂದ ಯುದ್ಧ ವಿದ್ಯೆಯನ್ನು ಕಲಿಯುವ ಮೊದಲೇ ನಮ್ಮನ್ನು ತಾಯಿಯ ಗರ್ಭದಲ್ಲಿಯೇ ಅಸ್ತ್ರ ಶಸ್ತ್ರಗಳಿಂದ ಸಜ್ಜತಗೊಳಿಸು ಎಂದು ಭಗವಂತನಲ್ಲಿ ಪ್ರಾರ್ಥಿಸೋಣ ಎಂದು ಶವವಾಹಕರು ಮಾತಾನಾಡಿಕೊಳ್ಳುತ್ತಾರೆ.

ಇಂದ್ರ ಕುಂತಿಯಲ್ಲಿಗೆ ಬಂದು ಕರ್ಣನಿಗೆ ಅಮೋಘ ಅಸ್ತ್ರ ನೀಡಿರುವ ವಿಷಯ ತಿಳಿಸುತ್ತಾನೆ. ನಾವು ದೇವತೆಗಳು ಅಸ್ತ್ರಗಳನ್ನು ಮಾನವರ ಕೈಗೈ ಕೊಟ್ಟು ಯುದ್ಧ ಮಾಡಿ ನಾಶ ಹೊಂದುವಂತೆ ಮಾಡುತ್ತೇವೆ ಎನ್ನುತ್ತಾರೆ. ಅಲ್ಲದೆ ದೈವತ್ವವನ್ನೇ ಕಳೆದುಕೊಳ್ಳುತ್ತಾನೆ. ಕುಂತಿ ತಾನು ದುರ್ವಾಸ, ಸೂರ್ಯ, ಇಂದ್ರ, ಪವನ, ಧರ್ಮ, ಅಶ್ವಿನಿಕುಮಾರರಿಗೆ ಬಲಿಯಾದುದನ್ನು ದುಃಖದಿಂದ ಹೇಳಿಕೊಳ್ಳುತ್ತಾಳೆ.

ಸಂಜಯ ದುರ್ಯೋಧನನ ಸೋಲಿನ ಬಗ್ಗೆ ಧೃತರಾಷ್ಟ್ರನಿಗೆ ಹೇಳುವಾಗ, ಗಾಂಧಾರಿ ಅವನ ದೇಹವನ್ನು ವಜ್ರಮಯವಾಗಿಸಿದ್ದಳು. ಆದರೂ ಅವನು ಅಜೇಯವಾಗಿ ಉಳಿದಿಲ್ಲವೆಂದರೆ ಗಾಂಧಾರಿಯ ಶೀಲ ಸರಿಯಾಗಿರಲಾರದೆಂದು ಸಂದೇಹಪಡುತ್ತಾನೆ. ಸಂದೇಹ, ಸಂಶಯ, ಶಂಕೆ, ಭ್ರಮೆಯು ಫಲಗಳು ಎನ್ನುವ ಸಂಜಯನ ಮಾತುಗಳು ಮಾರ್ಮಿಕವಾಗಿವೆ.

ಧೃತರಾಷ್ಟ್ರನಿಗೆ ಸಂತಾನವಾಗುವದೆಂದು ತಿಳಿದು ಪಾಂಡುರಾಜನು ತನ್ನ ಹೆಂಡಂದಿರಾದ ಕುಂತಿ ಮತ್ತು ಮಾದ್ರಿಯರನ್ನು ಸ್ವತಃ ದೇವತೆಗಳಿಗೆ ಅರ್ಪಿಸಲು ಮುಂದಾಗುತ್ತಾನೆ.

ದುಶ್ಯಲೆಯ ಗಂಡನಾದ ಜಯದ್ರಥ ಯುದ್ಧದ ವ್ಯಾಖ್ಯಾನವನ್ನು ಈ ರೀತಿಯಾಗಿ ಮಾಡುತ್ತಾನೆ. ಯುದ್ಧದಿಂದ ಪ್ರಭುಗಳಿಗೆ ಲಾಭಗಳೆ ಹೆಚ್ಚು. ಆಹಾರ ಸಾಮಾಗ್ರಿಗಳು ಉಳಿಯುತ್ತವೆ. ಜನಸಂಖ್ಯೆ ಹತೋಟಿಯಲ್ಲಿರುತ್ತದೆ. ರಾಜ್ಯಕೋಶಗಳು ತುಂಬುತ್ತವೆ. ಮಿತ್ರರು-ಶತ್ರುಗಳು ಯಾರೆಂದು ತಿಳಿಯುತ್ತದೆ. ಕೆಲವರಿಗೆ ತಮ್ಮ ಯೋಗ್ಯತೆಯನ್ನು ಪ್ರದರ್ಶಿಸಲು ಯುದ್ಧ ಒಳ್ಳೆಯ ಅವಕಾಶ, ಆದರೆ ನನಗೆ ಅಧರ್ಮದ ಯುದ್ಧವೆ ಸರಿ ಎನ್ನಿಸುತ್ತದೆ. ಆದ್ದರಿಂದ ಯುದ್ಧದಲ್ಲಿ ಪ್ರಬಲವಾದ ಒಂದು ಆಯುಧವೆಂದರೆ ಬಲತ್ಕಾರ ಅಥವಾ ಅತ್ಯಚಾರ. ನಾನು ದ್ರೌಪದಿಯನ್ನು ಅತ್ಯಾಚಾರ ಮಾಡುವುದರಿಂದ ಪಾಂಡವರು ಅಪಮಾನಕ್ಕೊಳ್ಳಗಾಗಿ ಯುದ್ಧದಲ್ಲಿ ಅಪಜಯ ಹೊಂದುತ್ತಾರೆ ಎಂದು ಯೋಚಿಸುತ್ತಾನೆ. ದುಶ್ಯಲೆ ಬೇಡವೆಂದರೂ ಕೇಳದೆ ಪ್ರಯತ್ನಿಸುತ್ತಾನೆ. ಪ್ರಯತ್ನ ವಿಫಲವಾಗುತ್ತದೆ. ಇದಕ್ಕೆ ವಿರುದ್ಧವಾಗಿ ದುಶ್ಯಲೆ ಸೈನಿಕರಿಂದ ಅತ್ಯಚಾರಕ್ಕೆ ಒಳಗಾಗುತ್ತಾಳೆ. ಕರ್ಣನಲ್ಲಿರುವ ಅಮೋಘಾಸ್ತ್ರಕ್ಕೆ ಹಿಡಿಂಬೆಯ ಮಗನಾದ ಘಟೋತ್ಕಜನನ್ನು ಬಲಿಕೊಡಲಾಗುತ್ತದೆ. ಇದಕ್ಕೆ ಕಪಟನಾಟಕ ಸೂತ್ರದಾರ ಕೃಷ್ಣನೇ ಕಾರಣನಾಗಿರುತ್ತಾನೆ. ಅದರ ಕರ್ಮ ನನಗೆ ಎಂದು ಕೃಷ್ಣ ಹೇಳುತ್ತಾನೆ. ಒಟ್ಟಾರೆಯಾಗಿ ಈ ನಾಟಕ ಯುದ್ಧದಲ್ಲಿನ ಕುತಂತ್ರಗಳು ಘೋರ ಮುಖಗಳನ್ನು ಪರಿಚಯಿಸುತ್ತಾ ಯುದ್ಧದಲ್ಲಿ ಪಾಲ್ಗೊಳ್ಳುವ ಎಲ್ಲರೂ ಮನುಷ್ಯರಾಗಿರದೆ ಒಂದೊಂದು ಅಸ್ತ್ರಗಳಾಗಿ ಪಾಲ್ಗೊಂಡು ವಿನಾಶದ ಪ್ರಕ್ರಿಯೆಯಲ್ಲಿ ಭಾಗಿಗಳಾಗುತ್ತಾರೆ. ಬುದ್ಧಿವಂತ ಕುಹಕಿಗಳು ಪ್ರಬಲವಾದ ಕುಟಿಲರು ಮಾತ್ರ ಯುದ್ಧದ ಲಾಭ ಪಡೆಯುತ್ತಾರೆ ಎಂದು ನಾಟಕ ಹೇಳುತ್ತದೆ.

**೧೨. ಚೋರ ಚರಣದಾಸ**

ಚೋರ ಚರಣದಾಸ ಭಾರತದ ಹಲವಾರು ಭಾಷೆಗಳಲ್ಲಿ ಜನಪ್ರಿಯವಾಗಿರುವ ನಾಟಕ. ಇದರ ಮೂಲ ಹಿಂದೀ ಲೇಖಕರು ಭಾರತೀಯ ರಂಗಭೂಮಿಯ ಪ್ರಸಿದ್ಧ ನಿರ್ದೇಶಕರಾದ ಹಬೀಬ್‌ತನ್‌ವೀರ್ ಅವರು, ೨೦೦೪ರಲ್ಲಿ ಪಟ್ಟಣಶೆಟ್ಟರು ಇದನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಅನನ್ಯ ಪ್ರಕಾಶನ ಧಾರವಾಡದಿಂದ ಇದು ಪ್ರಕಟಣೆಗೊಂಡಿದೆ.

ಹಬೀಬ್ ತನ್ ವೀರ್ ಅವರು ರಾಜಸ್ಥಾನದ ಪ್ರಖ್ಯಾತ ಜಾನಪದ ಕತೆಗಾರ ವಿಜಯ್ ದಾನ್‌ದೇಥಾ ಅವರ ಬಾಯಿಂದ ಕೇಳಿದ ರಾಜಸ್ಥಾನದ ಜನಪ್ರಿಯ ಕತೆಯನ್ನು ಆಧರಿಸಿ ರಚಿಸಿದ ನಾಟಕ ಚರಣದಾಸ್ ಚೋರ್ ಈ ಕತೆಯಲ್ಲಿ ಕಳ್ಳನೊಬ್ಬ ಸಹಜವಾಗಿ ಮಾತನಾಡುತ್ತಾ ತನ್ನ ಗುರುವಿನಲ್ಲಿ ತಾನೆಂದೂ ಸುಳ್ಳು ಹೇಳುವದಿಲ್ಲವೆಂದು ವಚನ ಕೊಡುತ್ತಾನೆ. ನಂತರ ಕೊನೆಯವರಿಗೂ ಆ ವಚನವನನು ಚಾಚೂ ತಪ್ಪದೆ ಪಾಲಿಸುತ್ತಾನೆ. ಈ ಕತೆಯನ್ನು ಆಧಾರವಾಗಿಟ್ಟುಕೊಂಡು ತನ್‌ವೀರ್ ಅವರು ಮಧ್ಯಪ್ರದೇಶದ ಛತ್ತೀಸ್‌ಘಡದ ಜನಪದ ಕಲಾವಿದರೊಂದಿಗೆ 'ನಯಾ ಥೇಟರ್' ಸಂಸ್ಥೆಯಲ್ಲಿ ನಾಟಕವನ್ನಾಗಿ ಆಡಿಸಲು ಪ್ರಯತ್ನಿಸಿದರು. ಓದು ಬರಹ ತಿಳಿಯದ ಹುಟ್ಟು ಕಲಾವಿದರಾದ ತಮ್ಮ ತಂಡದವರೊಂದಿಗೆ ನಾಟಕ ತಾನೆ ತಾನಾಗಿ ರೂಪುಗೊಂಡಿತು. ಮೊದಲಬಾರಿಗೆ ೧೯೭೪ರಲ್ಲಿ ಚೋರ್‌ಚೋರ್ ಹೆಸರಿನಿಂದ ಪ್ರದರ್ಶನ ಗೊಂಡಿತು. ನಂತರ ಚರಣ ದಾಸ್ ಚೋರ್ ಎಂದು ಹೆಸರಿಸಲಾಯಿತು.

ಈ ನಾಟಕವು ಕೇವಲ ಭಾರತದಲ್ಲಿ ಮಾತ್ರವಲ್ಲದೆ ದೇಶ ವಿದೇಶಗಳಲ್ಲಿ ಹಲವಾರು ಪ್ರಯೋಗಗಳನ್ನು ಕಂಡಿದೆ. ಮೂವತ್ತು ವರ್ಷಗಳಿಂದ ಪ್ರಯೋಗಗೊಳ್ಳುತ್ತಲೇ ಇದೆ. ಇದು ಹಲವಾರು ಜನಪ್ರಿಯ ನಟನಟಿಯರನ್ನು ರಂಗಭೂಮಿಗೆ ಪರಿಚಯಿಸಿದೆ. ಚಲನಚಿತ್ರವಾಗಿಯೂ ಪ್ರಸಿದ್ಧಗೊಂಡಿದೆ.

ಕಠೋರ ಸತ್ಯಪಾಲನೆಯ ಹಿರಿಮೆಯ ಬಗ್ಗೆ ಮತ್ತು ಸತ್ಯವನ್ನೇ ಮಾತನಾಡುವನೆಂದು ಪ್ರತಿಜ್ಞೆ ಮಾಡಿ ಹಾಗೆ ನಡೆದುಕೊಂಡು ಒಬ್ಬ ಕಳ್ಳನ ಬಗ್ಗೆ ಈ ನಾಟಕವಿದೆ. ಮಧ್ಯಪ್ರದೇಶ ಹಾಗೂ ಛತ್ತೀಸ್ ಘಡದಲ್ಲಿ ಪ್ರಚಲಿತವಿರುವ 'ಸತ್ಯನಾಮ' ಎಂಬ ಧಾರ್ಮಿಕ ಪರಂಪರೆಯನ್ನು ಹಬೀಬ್ ತನ್ವಿರ್ ನಾಟಕದಲ್ಲಿ ಜೋಡಿಸಿಕೊಂಡಿದ್ದಾರೆ. ಈ ನಾಟಕದ ನಾಯಕ ಚೋರಚರಣದಾಸನನ್ನು ಗುರುಘಾಸಿರಾಮರ ಸತ್ಯನಾಮ ಪಂಥದ ಕಟ್ಟಾ ಅನುಯಾಯಿಯಾಗಿ ಚಿತ್ರಿಸಲಾಗಿದೆ.

ಕನ್ನಡಕ್ಕೆ ಹಲವಾರು ಜನ ಇದನ್ನು ಅನುವಾದಿಸಿದ್ದರೂ ನಿನಾಸಂನ ಕೆ.ವಿ. ಸುಬ್ಬಣ್ಣ ಮತ್ತು ಕೆ.ವಿ. ಅಕ್ಷರ ಅವರ ಒತ್ತಾಸೆಯ ಮೇರೆಗೆ ಪಟ್ಟಣಶೆಟ್ಟರು ನೀನಾಸಂನ ತಿರುಗಾಟದ ಸಲುವಾಗಿಯೇ ಇದನ್ನು ಅನುವಾದಿಸಿ ಕೊಟ್ಟಿದ್ದಾರೆ.

ಎರಡಂಕದ ನಾಟಕವಾದ ಇದು ಹಾಡಿನೊಂದಿಗೆ ಪ್ರಾರಂಭವಾಗುತ್ತದೆ. ಶ್ರೀಮಂತನ ಮನೆಯಿಂದ ಬಂಗಾರದ ತಟ್ಟೆಯೊಂದು ಕಳುವಾಗಿದೆ. ಅದನ್ನು ಹುಡುಕಲು ಹವಲ್ದಾರ ಪ್ರಯತ್ನಿಸುತ್ತಾನೆ. ಚರಣದಾಸ ಕೈಗೆ ಸಿಕ್ಕರೂ ಸತ್ಯ ಹೇಳುತ್ತಲೇ ಹವಲ್ದಾರನಿಂದ ಪಾರಾಗುತ್ತಾನೆ. ಅದೇ ರೀತಿ ಹಾದಿಯಲ್ಲಿ ಸಿಕ್ಕ ಅಮಾಯಕ ರೈತನಿಂದ ಊಟದ ಬುತ್ತಿಯನ್ನು ಕದ್ದು ಉಣ್ಣುತ್ತಾನೆ. ನಂತರ ಶ್ರೀಮಂತ ಮಹಿಳೆಯಿಂದ ಬಂಗಾರದ ಆಭರಣಗಳನ್ನು ಅಪಹರಿಸುತ್ತಾನೆ. ಮತ್ತೆ ಹೆಣ್ಣುಮಕ್ಕಳ ಆಭರಣಗಳನ್ನು ಕಳ್ಳತನ ಮಾಡುವುದು ತಪ್ಪೆಂದು ಭಾವಿಸಿ ಅವನ್ನು ಆ ಹೆಂಗಸಿಗೆ ಮರಳಿಕೊಡುತ್ತಾನೆ.

ಕುಡುಕ, ಜೂಜುಗಾರ, ಗಾಂಜಬಡಕರ ಶಿಷ್ಯರೊಂದಿಗೆ ಇರುವ ಗುರುವನ್ನು ಚರಣದಾಸ ಭೇಟಿಯಾಗುತ್ತಾನೆ. ತಾನು ಕಳ್ಳತನ ಮಾಡಿಯೇ ಜೀವನ ಸಾಗಿಸಿವುದು, ಜಗತ್ತಿನಲ್ಲಿ ಕಳ್ಳತನ ಮಾಡದವರು ಯಾರೂ ಇಲ್ಲ ಎಂದಾಗ ನನ್ನ ಶಿಷ್ಯನಾಗಬೇಕಾದರೆ ನೀ ಕಳ್ಳತನ ಮಾಡೋದು ಬಿಡಬೇಕು ಎಂದು ಹೇಳುತ್ತಾನೆ. ಅದಕ್ಕೆ ಚರಣದಾಸ ನಾನು

ಬಂಗಾರದ ತಟ್ಟೆಯೊಳಗೆ ಊಟ ಮಾಡುವದನ್ನು, ಆನೆ ಮೇಲೆ ಕುಳಿತು ಮೆರವಣಿಗೆ ಮಾಡಿಸಿಕೊಳ್ಳುವದನ್ನು, ಮತ್ತೆ ಯಾರಾದರೂ ರಾಣಿ ಬಂದು ನನ್ನನ್ನು ಮದುವೆ ಮಾಡಿಕೋ ಎಂದು ಬೇಡಿಕೊಂಡರೂ, ಈ ದೇಶದ ಜನರೆಲ್ಲಾ ಬಂದು ನೀನೆ ನಮ್ಮ ರಾಜನಾಗಬೇಕು. ಸಿಂಹಾಸನದ ಮೇಲೆ ಕೂಡಬೇಕು ಎಂದು ವಿನಂತಿಸಿದರೂ ಈ ನಾಲ್ಕನ್ನು ನಾನು ಮಾಡುವದಿಲ್ಲ ಎಂದು ವಚನ ಕೊಡುತ್ತೇನೆ ಎಂದು ಹೇಳಿದಾಗ ಗುರು ಇದೆಲ್ಲಾ ನಿನ್ನ ಭ್ರಮೆ, ಎಲ್ಲವುದಕ್ಕೂ ಸಿದ್ದೌಷಧವೆಂದದರೆ ಸುಳ್ಳು ಹೇಳುವದನ್ನು ನಿಲ್ಲಿಸಿಬಿಡು ಎಂದು ಹೇಳಿದಾಗ ಚರಣದಾಸ ಒಪ್ಪಿ ವಚನ ಕೊಡುತ್ತಾನೆ.

ನಾಡಿಗೆಲ್ಲಾ ಬರಗಾಲ ಬಂದು ಜನ ಸಂಕಷ್ಟದಲ್ಲಿ ಬದುಕು ನಡೆಸುವಾಗ ಊರಿನ ಸಾಹುಕಾರನೊಬ್ಬ ತನ್ನ ಉಗ್ರಾಣದಲ್ಲಿ ಅಪಾರ ಆಹಾರ ಧಾನ್ಯಗಳನ್ನು ಸಂಗ್ರಹಿಸಿ, ಕಾವಲುಗಾರನನ್ನು ನೇಮಿಸಿರುತ್ತಾನೆ. ಚರಣದಾಸ ಬಂದು ಜನಗಳಿಗೆ ಧಾನ್ಯಗಳನ್ನು ನೀಡಿ ಸಹಾಯ ಮಾಡಬೇಕೆಂದು ಕೇಳಿಕೊಂಡರೂ ಅವನು ಕಿವಿಗೊಡುವದಿಲ್ಲ. ಆಗ ಸಾಹುಕಾರನಿಗೆ ತಿಳಿಯದ ರೀತಿಯಲ್ಲಿ ಅನೇಕ ಜನರಿರುವ ತಂಡದೊಂದಿಗೆ ಹಾಡುಗಳನ್ನು ಹಾಡುತ್ತಾ ಆಹಾರ ಧಾನ್ಯಗಳನ್ನು ಕಳವು ಮಾಡುತ್ತಾನೆ. ನಂತರ ತನ್ನ ಗುರುಗಳ ಸಮಕ್ಷಮದಲ್ಲಿ ವಿಚಾರಣೆಗಾಗಿ ರಾಣಿಯ ಹತ್ತಿರ ಬಂದು ಸತ್ಯವನ್ನು ಹೇಳುತ್ತಾನೆ. ಐದು ನಾಣ್ಯಗಳು ಕಾರಕೂನನಿಂದ ಕಳುವಾದ ವಿಷಯ ತಿಳಿಯುತ್ತದೆ. ರಾಣಿ ಚರಣದಾಸ ಕಳ್ಳನಾದರೂ ಸುಳ್ಳನಲ್ಲ ಎಂದು ಮೆಚ್ಚುಗೆ ವ್ಯಕ್ತಪಡಿಸುತ್ತಾಳೆ. ಅವನನ್ನು ಮರ್ಯಾದೆಯಿಂದ ಕರೆತರಲು ಹೇಳುತ್ತಾಳೆ. ಆಗ ಮೊದಲ ತನ್ನ ಗುರುವಿನ ಮುಂದೆ ನಾಲ್ಕನ್ನು ಮಾಡುವದಿಲ್ಲ ಎಂದು ಹೇಳಿದ ಸಂದರ್ಭಗಳು ಈಗ ಒದಗಿಬರುತ್ತದೆ. ಚರಣದಾಸನ ಸತ್ಯಕ್ಕಾಗಿ ಸನ್ಮಾನಿಸಲು, ಕರೆತರಲು ಹೋದಾಗ ಅವನು ನಿರಾಕರಿಸುತ್ತೇನೆ. ಆಗ ಬಂಧಿಯಾಗುತ್ತಾನೆ. ಬಂಗಾರದ ತಟ್ಟೆಯಲ್ಲಿ ಊಟ ನೀಡಿದರೂ ನಿರಾಕರಿಸುತ್ತಾರೆ. ಮನದಲ್ಲೇ ಅವನನ್ನು ವರಿಸಬೇಕೆಂದು ಬಯಸಿದ ರಾಣಿ ಅವನನ್ನು ರಾತ್ರಿ ಕರೆತರಲು ಹೇಳಿದಾಗ ಅವನು ಬಂದು ನಾನು ಈವರೆಗೆ ಕೇವಲ ಭೌತಿಕ ವಸ್ತುಗಳನ್ನು ಮಾತ್ರ ಕದಿಯುತ್ತಿದ್ದೆ. ಈಗ ರಾಣಿಯ ಹೃದಯವನ್ನೇ ಕದ್ದಿದ್ದೇನೆ ಎಂದು ಹೇಳುತ್ತಾನೆ; ರಾಣಿಯನ್ನು ಮದುವೆಯಾಗಲು ನಿರಾಕರಿಸುತ್ತೇನೆ. ಅವನು ರಾಣಿಯನ್ನು ಮದುವೆಯಾಗಿ ದೇಶದ ರಾಜನಾಗುವ ಅವಕಾಶವಿದ್ದರೂ ಅದನ್ನು ನಿರಾಕರಿಸುತ್ತಾ ಕೊನೆಗೆ ಕೋಪಗೊಂಡ ರಾಣಿ ಅವನನ್ನು ಕೊಲ್ಲುವಂತೆ ಅಜ್ಞಾಪಿಸುತ್ತಾಳೆ. ಚರಣದಾಸ ಚೋರನಾದರೂ ಸತ್ಯಸಂಧ ಗುರುಳಿಗೆ ಸುಳ್ಳು ಹೇಳುವುದಿಲ್ಲವೆಂದು ಹೇಳಿ ಸಾಯುವವರೆಗೂ ಸತ್ಯವನ್ನೇ ನುಡಿಯುತ್ತಾನೆ. ವಚನ ಭ್ರಷ್ಟನಾಗಲಾರದೇ ಒದಗಿಬಂದ ಸುವರ್ಣ ಅವಕಾಶಗಳನ್ನು ನಿರಾಕರಿಸುತ್ತೇನೆ. ವಚನೆಪಾಲನೆಗಾಗಿ, ಸತ್ಯಕ್ಕಾಗಿ ತನ್ನ ದುರ್ಮರಣಕ್ಕೆ ತಾನೆ ಕಾರಣನಾಗುತ್ತಾನೆ. ಏಕೆಂದರೆ ಚೋರ ಚರಣದಾಸನಿಗೆ ಸತ್ಯವೇ ದೇವರು.

ಈ ನಾಟಕದಲ್ಲಿ ಬರುವ ಹಾಡುಗಳು ಸುಲಲಿತವಾಗಿದ್ದು ಪಟ್ಟಣಶೆಟ್ಟಿಯವರು ಆಡು ಭಾಷೆಯಲ್ಲಿ ಅನುವಾದ ಮಾಡಿದ್ದು, ಬಹುಜನ ಪ್ರೇಕ್ಷಕರಿಗೆ ಬಹುಬೇಗನೆ ಅರ್ಥವಾಗುವಂತಿದೆ. ಅರ್ಥ ಸಂವಹನ ಸುಲಭವಾಗುವಂತಹ ಅನುವಾದ ಈ ನಾಟಕದಲ್ಲಿದೆ.

೨೦೦೨ರ ನೀನಾಸಂ ತಿರುಗಾಟದ ತಂಡಕ್ಕೆ ಸುರೇಶ ಅನಗಳ್ಳಿ ಅವರು ಯಶಸ್ವಿಯಾಗಿ ನಿರ್ದೇಶಿಸಿದ್ದಾರೆ. ಚರಣದಾಸ ಪಾತ್ರದಲ್ಲಿ ಜಹಂಗೀರ್ ಅಭಿನಯಿಸಿ ಪ್ರಸಿದ್ಧಿಪಡೆದರು.

### ೩.೩.೩. ಕಾದಂಬರಿ

#### ೧. ಶೇಷಪ್ರಶ್ನೆ

ಬಂಗಾಳದ ಶ್ರೇಷ್ಠ ಕಾದಂಬರಿಕಾರರಾದ ಶರಶ್ಚಂದ್ರ ಚಟ್ಟೋಪಾಧ್ಯಾಯರು ಈ ಕಾದಂಬರಿಯ ಮೂಲ ಲೇಖಕರು. ಪಟ್ಟಣಶೆಟ್ಟರು ೧೯೬೪ರಲ್ಲಿ ಕನ್ನಡಕ್ಕೆ ಇದನ್ನು ಅನುವಾದಿಸಿದರು. ಧಾರವಾಡದ ಸಮಾಜ ಪುಸ್ತಕಾಲಯದಿಂದ ಈ ಕೃತಿ ಪ್ರಕಟಣೆ ಗೊಂಡಿದೆ. ಅನಂತರ ೧೯೭೦ ಮತ್ತು ೧೯೮೬ ರಲ್ಲಿ ಮರುಮುದ್ರಣಗಳನ್ನು ಕಂಡಿದೆ. ಮಾನವನ ಇತಿಹಾಸ ಆರಂಭವಾದಾಗಿನಿಂದಲೂ ಹಳೆಯ ಮತ್ತು ಹೊಸದರ ಮಧ್ಯ ಸಂಘರ್ಷ ಏರ್ಪಡುತ್ತಾ ಬಂದಿದೆ. ಈ ಸಂಘರ್ಷದಲ್ಲಿ ಅಳಿಯುವುದು. ಉಳಿಯುವುದು, ಯಾವುದು? ಈ ಪ್ರಶ್ನೆಯೇ ಶ್ರೇಷ್ಠ ಪ್ರಶ್ನೆಯಾಗಿದೆ. ಈ ಕಾದಂಬರಿಯ ನಾಯಕಿಯಾದ ಕಮಲೆ, ಸಮಾಜ, ಸಂಸ್ಕೃತಿ ಧರ್ಮಗಳ, ಪ್ರತಿಕೂಲ ವಾತಾವರಣದಲ್ಲಿ ಧೈರ್ಯದಿಂದ ಮುನ್ನುಗ್ಗುವ ವ್ಯಕ್ತಿತ್ವ ಉಳ್ಳವಳು. ಇವಳು 'ಶಿವನಾಥ' ಎನ್ನುವ ಅಪ್ರತಿಮ ಸಂಗೀತಗಾರನನ್ನು ಮದುವೆಯಾಗಿರುತ್ತಾಳೆ. ಈ ಕಾದಂಬರಿಯಲ್ಲಿ ಬರುವ, 'ಅಕ್ಷಯಬಾಬು', 'ಅವಿನಾಶಬಾಬು', 'ಮನೋರಮ', ಹರೇಂದ್ರ ಬಾಬು, ಮುಂತಾದವರು ಭಾರತೀಯ ಸಂಸ್ಕೃತಿ ಸನಾತನ ಧರ್ಮದ ವಕ್ತರರಾಗಿದ್ದಾರೆ. ಆದರೆ ಕಮಲೆ, ತತ್ವಜ್ಞಾನಿಯಂತೆ ಹೇಳುವ ಮಾತುಗಳು, ಕೇಳುವ ಪ್ರಶ್ನೆಗಳು, ತರ್ಕ ಬದ್ಧವಾಗಿ ಮೂಡಿಬಂದಿವೆ. ಯೂರೋಪಿನ ಸಂಪರ್ಕದಿಂದ ಸಾಕಷ್ಟು ಒಳ್ಳೆಯದಾದರೂ, ಅನುಕರಣೆ ಹೆಚ್ಚಾಗಿದೆ. ಸಂಸ್ಕೃತಿ ನಾಶವಾಗುತ್ತದೆ ಎನ್ನುವ ಮಾತು ಬಂದಾಗ, ಭಾರತದ ವೈಶಿಷ್ಟ್ಯ ಹಾಳಾಗುತ್ತದೆ ಎಂದಾಗ ಕಮಲೆ ಹೀಗೆ ಹೇಳುತ್ತಾಳೆ. ಅನುಕರಣೆ ಬಾಹ್ಯದಲ್ಲಾದರೆ ಅದು ಮೋಸ ಅದು ಅನುಕರಣವೇ ಅಲ್ಲ. ಅದು ಆಕೃತಿಯಲ್ಲಿ ಒಂದಾದರೇ ಪ್ರಕೃತಿಯಲ್ಲಿ ಬೇರೆಯಾಗುವುದು, ಆದರೆ ಎಲ್ಲಾ ರೀತಿಯಿಂದ ಒಳಹೊರಗೂ ಮಿಲನವಾದರೆ ಆಗ ಅನುಕರಣ ನೋಡುವುದು ಲಜ್ಜಾಸ್ಪದವಲ್ಲ''[೧೬]

"ಭಾರತದ ವೈಶಿಷ್ಟ್ಯ ಯುರೋಪದ ವೈಶಿಷ್ಟ್ಯದಲ್ಲಿ ಬಹಳ ಅಂತರವಿದೆ. ಮನುಷ್ಯ ಯಾವದೇಶದ ವೈಶಿಷ್ಟ್ಯಕ್ಕಾಗಿಯೂ ಇಲ್ಲ, ಮನುಷ್ಯನಿಗಾಗಿಯೇ ಆ ವೈಶಿಷ್ಟ್ಯಗಳ ಆಧಾರವಿದೆ. ಈ ಕಾಲದಲ್ಲಿ ವೈಶಿಷ್ಟ್ಯ ಮನುಷ್ಯನಿಗೆ ಕಲ್ಯಾಣಕರವೇ, ಅಲ್ಲವೇ ಎಂಬುದೇ ಈಗಿರುವ ಪ್ರಶ್ನೆ ಇದೊಂದನ್ನು ಬಿಟ್ಟು ಉಳಿದದ್ದೆಲ್ಲಾ ಅಂಧಶ್ರದ್ಧೆ ಮಾತ್ರ''[೧೭]

ಮೋಹದ ಬಗ್ಗೆ ಚರ್ಚೆ ಬಂದಾಗ ಕಮಲೆ, ಹೀಗೆ ಹೇಳುತ್ತಾಳೆ. "ಮಂಜು ಸೃಷ್ಟಿಯಾದ ಕಾಲದಿಂದಲೂ ಒಂದೇ ರೀತಿಯಲ್ಲಿದೆ. ಅದು ಸೂರ್ಯನನ್ನು ಅನೇಕ ಸಲ ಮುಚ್ಚಿದೆ, ಮುಚ್ಚುತ್ತದೆ. ಸೂರ್ಯ ಧ್ರುವ ಸತ್ಯ, ಹೌದೋ ಅಲ್ಲವೋ ಗೊತ್ತಿಲ್ಲ. ಆದರೆ ಮಂಜು ಅಸತ್ಯವೆಂದು ಸಿದ್ಧವಾಗಿಲ್ಲ. ಎರಡೂ ನಶ್ವರ ಅಥವಾ ಎರೆಡೂ ಸತ್ಯವಿರಬಹುದು ಹಾಗೇ ಮೋಹ ಕ್ಷಣಿಕವಾಗಿರಬಹುದು ಆದರೆ ಆ ಕ್ಷಣ ಸುಳ್ಳಲ್ಲ, ಆ ಕ್ಷಣಿಕವಾದ ಸತ್ಯತೆಯನ್ನು ಪಡೆದೇ ಅದು ಮತ್ತೆ ಮತ್ತೆ ಬರುತ್ತದೆ''[೧೮]

ಆದರ್ಶ ಮತ್ತು ಸನ್ಯಾಸತ್ವದ ಬಗ್ಗೆ ಮಾತು ಬಂದಾಗ "ನಮ್ಮ ಗುರಿ ಸಂಸಾರ ತ್ಯಾಗ ಮತ್ತು ವೈರಾಗ್ಯ ಸಾಧನೆಯಲ್ಲಿ, ಈ ಜಗತ್ತಿನ ಎಲ್ಲ ಐಶ್ವರ್ಯ, ಸೌಂದರ್ಯ ಮತ್ತು ಸಂಪೂರ್ಣ ಜೀವನವನ್ನು ಹೊಂದಿ ಬದುಕುವುದೇ ನಮ್ಮ ಗುರಿಯೆಂದು ಹೇಳಿದಿರಿ. ಅದರ ಶಿಕ್ಷಣ ಇದೆಯೇ? ಮೈಮೇಲೇ ಬಟ್ಟೆಯಿಲ್ಲ, ಬರಿಗಾಲು, ಒಣಗಿದ ಕೂದಲು, ಅರೆಹೊಟ್ಟೆ

ಊಟ, ಇದರಲ್ಲಿ ಆನಂದದ ಚಿನ್ಹಗಳೇ ಇಲ್ಲ. ದೇಶದ ಲಕ್ಷ್ಮಿ ಇವರ ಕೈಯಲ್ಲಿ ತನ್ನ ಭಂಡಾರದ ಬೀಗದ ಕೈಯನ್ನು ಕೊಡಲಾರಳು. ಹರೇಂದ್ರಬಾಬು, ಒಮ್ಮೆ ಪ್ರಪಂಚದ ಕಡೆಗೆ ಕಣ್ಣೆತ್ತಿ ನೋಡಿರಿ. ಯಾರಿಗೆ ಹೆಚ್ಚು ಸಿಕ್ಕಿದೆಯೋ ಅವರೇ ಹೆಚ್ಚು ಸಂತೋಷದಿಂದ ತ್ಯಾಗ ಮಾಡಿದ್ದಾರೆ. ದಾರಿದ್ರ್ಯದ ಕಾಲೇಜಿನಲ್ಲಿ ತ್ಯಾಗದ ಗ್ರ್ಯಾಜುಯೇಟ್‌ರನ್ನಾಗಿ ಯಾರೂ ಮಾಡಲಿಲ್ಲ”[೧೮]

ಹೀಗೆ ತರ್ಕಾವಿತರ್ಕಗಳಿಂದ ಸಾಗುವ ಈ ಕಾದಂಬರಿ ಕುತೂಹಲಕಾರಿಯಾಗಿ ಓದಿಸಿಕೊಂಡು ಹೋಗುತ್ತಿದೆ.

**೨.ಭಾರತಿ**

ಶರಚ್ಚಂದ್ರರ ಮತ್ತೊಂದು ಕಾದಂಬರಿ ಪಥೇರ್ ದಾಬಿಯ ಹಿಂದೀ ಅನುವಾದ ಇದಾಗಿದೆ. ‘ಭಾರತಿ’ಯನ್ನು ತಲೆಬರಹ ದಡಿಯಲ್ಲಿ ಪಟ್ಟಣಶೆಟ್ಟರು ಇದನ್ನು ಅನುವಾದಿಸಿದ್ದಾರೆ. ೧೯೬೫ ರಲ್ಲಿ ಧಾರವಾಡದ ಸಮಾಜ ಪುಸ್ತಾಕಾಲಯದಿಂದ ಪ್ರಕಟಣೆಗೊಂಡಿದೆ ನಂತರ, ೧೯೭೦, ಮತ್ತು ೧೯೮೬ರಲ್ಲಿ ಮರುಮುದ್ರಣಗಳನ್ನು ಕಂಡಿದೆ. ಸ್ವಾತಂತ್ರ್ಯಕ್ಕಾಗಿ ಹೋರಾಟ ನೆಡೆಸುವ ಕ್ರಾಂತಿಕಾರದ ಕಥೆ ಇಲ್ಲಿ ಪರಿಣಾಮ ಕಾರಿಯಾಗಿ ಮೂಡಿ ಬಂದಿದೆ. ಬರ್ಮಾದೇಶವೂ ಕೂಡ ಬ್ರಿಟೀಷರ ಆಳ್ವಿಕೆಗೆ ಒಳಪಟ್ಟಿತ್ತು. ಅಲ್ಲಿ ಬಂಗಾಳಿ ಜನರ ಸಂಖ್ಯೆ ಹೆಚ್ಚಾಗಿತ್ತು ಕ್ರಾಂತಿಕಾರಿ ಮನೋಭಾವದ ಬಂಗಾಳಿಗಳು ನೆಡೆಸಿದ ಹೋರಾಟ ಈ ಕಾದಂಬರಿಯಲ್ಲಿದೆ.

ಈ ಕಾದಂಬರಿಯಲ್ಲಿ ಬರುವ ಅಪೂರ್ವಬಾಬು ಕೆಲಸದ ನಿಮಿತ್ತ ಬರ್ಮಾಕ್ಕೆ ಹೋಗುತ್ತಾನೆ ಈತ. ಮುಗ್ಧ ಸ್ವಭಾವದವ, ಭಾರತಿ, ಡಾಕ್ಟರ್ ತಲವದ್‌ಕರ್, ಸುಮಿತ್ರ, ನವತಾರ, ಶಶಿ, ಎಲ್ಲರೂ ಕ್ರಾಂತಿಕಾರಿಗಳೇ ಇವರಿಗಾಗಿ ಬ್ರಿಟೀಷರು ಹುಡುಕಾಟ ನೆಡೆಸುತ್ತಿರುತ್ತಾರೆ. ಆದರೆ ಇವರು ಗುಪ್ತವಾಗಿ ಸಭೆ ಸೇರಿ ಹೋರಾಟದ ರೂಪರೇಶಗಳನ್ನು ಸಿದ್ಧಪಡಿಸಿ ಅವರಿಗೆ ಗೊತ್ತಾಗದಂತೆ, ತಮ್ಮ ಚಟುವಟಿಕೆ ನೆಡೆಸುತ್ತಾರೆ. ಆಕಸ್ಮಿಕವಾಗಿ ಅಪೂರ್ವಬಾಬು ಇವರಲ್ಲಿ ಸೇರಿ ಕೊಳ್ಳುತ್ತಾನೆ. ಈತನಿಂದ ಇವರಿಗೆ ತೊಂದರೆಯಾದರೂ, ಸಹಿಸಿಕೊಂಡು ಮುಂದುವರೆಯುತ್ತಿದೆ. ಹೋರಾಟವನ್ನು ಚುರುಕುಗೊಳಿಸುತ್ತದೆ. ದೇಶಪ್ರೇಮವನ್ನು ಮರೆಯುತ್ತಾರೆ. ಅದಕ್ಕಾಗಿ ತಮ್ಮ ವೈಯಕ್ತಿಕ ಜೀವನವನ್ನು ತ್ಯಾಗ ಮಾಡುತ್ತಾರೆ. ಇವರಿಗೆ ತಮ್ಮ ಜೀವನಕ್ಕಿಂತ ದೇಶದ ಸ್ವಾತಂತ್ರ್ಯವೇ ಮುಖ್ಯವಾಗಿರುತ್ತದೆ.

ಶರಶ್ಚಂದ್ರರ ಈ ಕ್ರಾಂತಿಕಾರಿ ಕಾದಂಬರಿಯನ್ನು ಬ್ರಿಟಿಷ ಸರ್ಕಾರದವರು ೧೯೪೭ ರವರೆಗೆ ಬಹಿಷ್ಕರಿಸಿದ್ದರು.

**೩.೩.೪. ಜೀವನ ಚರಿತ್ರೆಗಳು**

**೧. ಮೀರಾಬಾಯಿ**

ಮೀರಾಬಾಯಿ ೧೬ನೇ ಶತಮಾನದಲ್ಲಿ ಬಾಳಿ ಬದುಕಿದ ರಾಜಸ್ಥಾನದ ಸಂತ ಕವಯತ್ರಿ. ಕೃಷ್ಣನ ಅನನ್ಯ ಆರಾಧಕಳಾಗಿದ್ದ ಈಕೆಯ ಕವಿತೆಗಳೆಲ್ಲಾ ಭಕ್ತಿರಸದಿಂದ ತುಂಬಿವೆ. ಈಕೆಯ ಜೀವನ ಚರಿತ್ರೆಯನ್ನು ಸಿದ್ಧಲಿಂಗ ಪಟ್ಟಣಶೆಟ್ಟರು ಕನ್ನಡಕ್ಕೆ ಅನುವಾದಿಸಿದ್ದಾರೆ. ಇದರ ಮೂಲ ಇಂಗ್ಲಿಷ ಲೇಖಕಿ ಡಾ.ಶ್ರೀಮತಿ ಉಷಾ ವಿಲ್ಸನ್, ಕೇಂದ್ರಸಾಹಿತ್ಯ ಅಕಾಡೆಮಿಯ ‘ಭಾರತೀಯ ಸಾಹಿತ್ಯ ನಿರ್ಮಾಪಕರು ಮಾಲಿಕೆಯ’ ಅಡಿಯಲ್ಲಿ ೧೯೭೨ ಮತ್ತು ೧೯೯೦ರಲ್ಲಿ ಎರೆಡು ಬಾರಿ ಮುದ್ರಣಗೊಂಡಿದೆ.

ಈ ಕೃತಿಯಲ್ಲಿ ಒಟ್ಟು೯ ಅಧ್ಯಾಯಗಳಿದ್ದು, ಮೀರಾಬಾಯಿಯ ಕಾಲ, ಜೀವನ, ವಿವಾಹ, ಅವಳು ಅನುಭವಿಸಿದ ತೊಂದರೆಗಳು, ಅವಳ ಕಾವ್ಯ ಸೃಷ್ಟಿ ಅವಳ ಬಗೆಗಿನ ದಂತ ಕತೆಗಳು ಮುಂತಾದ ವಿಷಯಗಳನ್ನು ವಿವರಿಸಲಾಗಿದೆ. ಮೀರಾಬಾಯಿ ೧೪೯೮ರಲ್ಲಿ ರಾಜಸ್ಥಾನದ ಮೇತಾಡದಲ್ಲಿ ಜನ್ಮ ತಾಳಿದಳು. ಆ ಕಾಲ ಹಿಂದೀ ಸಾಹಿತ್ಯದ ಸುವರ್ಣ ಯುಗವಾಗಿತ್ತು. ಹಿಂದೀಯ ಹೆಸರಾಂತ ಕವಿಗಳಾದ ಕಬೀರ, ಸೂರದಾಸ, ಮಲಿಕ ಮಹಮದ್ ಜಾಯಿಸಿ, ತುಳಿಸಿದಾಸ ಇವಳ ಸಮಕಾಲೀನರು, ಬಾಲ್ಯದಲ್ಲಿಯೇ ತಾಯಿಯನ್ನು ಕಳೆದುಕೊಂಡ ಮೀರಾ ಅಜ್ಜ-ಅಜ್ಜಿಯರ ಆಶ್ರದಲ್ಲಿ ಬೆಳೆದಳು. ಅಜ್ಜ ರಾವ ದೂದಜಿ ಸಮರ್ಥ ಆಡಳಿತಗಾರ. ಮೇಲಾಗಿ ವಿಷ್ಣುವಿನ ಪರಮ ಭಕ್ತನಾಗಿದ್ದ ಹೀಗಾಗಿ ಬಾಲ್ಯದಿಂದಲೇ ದೈವಭಕ್ತಿ ಮೀರಾಳ ಬಾಳಿನಲ್ಲಿ ಸುಳಿಯಿತು. ಮನೆಯಲ್ಲಿಯೇ ಶಿಕ್ಷಣ ಪಡೆಯುತ್ತಿದ್ದ ಈಕೆ ಸಂಗೀತ ಶಾಸ್ತ್ರದಲ್ಲಿ ಒಳ್ಳೆಯ ಪರಿಣತಿ ಪಡೆದಳು. ಚಿತ್ತಾಡದ ರಾಜನಾದ ರಾಣಾ ಸಾಂಗನ ಹಿರಿಯ ಮಗನಾದ ಯುವರಾಜ ಭೋಜರಾಜನೊಂದಿಗೆ ೧೫೧೬ರಲ್ಲಿ ಮೀರಾಬಾಯಿಯ ಮದುವೆಯಾಯಿತು. ಈತನ ೧೫೨೧ರಲ್ಲಿ ಬಹುಶಃ ಯುದ್ಧದ ಗಾಯಗಳಿಂದ ಮಡಿದನು. ನಂತರ ಬಂದ ರಾಜರು ಈಕೆಯನ್ನು ಒಳ್ಳೆಯ ಭಾವದಿಂದ ಕಾಣದೇ ತೊಂದರೆಗಳನ್ನು ನೀಡಿದರು. ಪತಿಯನ್ನು ಕಳೆದುಕೊಂಡ ಮೀರಾಬಾಯಿಯಲ್ಲಿ ಧರ್ಮ ಶ್ರದ್ಧೆ ಉತ್ಕಟವಾಯಿತು. ಕೃಷ್ಣನನ್ನೇ ತನ್ನ ದೈವ, ತನ್ನ ಪ್ರಿಯಕರ, ತನ್ನ ನಿಜವಾದ ಪತಿಯೆಂದು ಬಗೆದು ಭಕ್ತಿಯಲ್ಲಿ ತಲ್ಲೀನಳಾದಳು. ಇದರಿಂದ ಇಡೀ ರಾಜಮನೆತನ ಈಕೆಗೆ ಕಿರುಕುಳ ನೀಡಿದರು. ಮೀರಾಬಾಯಿಯ ಕಾವ್ಯಗಳಿಂದ ಇದನ್ನು ತಿಳಿಯಬಹುದಾಗಿದೆ.

ಸಾಧು ಸಂತರ ಸಂಗ ನಾ ಮಾಡಿದೆ
ಸಂಪ್ರದಾಯದ ಲಜ್ಜೆ ಕಳೆದುಕೊಂಡೆ.

. . . . .

ಮನೆತನದ ಮರ್ಯಾದೆ ಮಣ್ಣುಗೂಡಿಸಿದೆ
ಎನ್ನುತ್ತಾಳೆ ಅತ್ತೆ.

. . . . .

ಹರಿ ಮಹಿಮೆ ಹಾಡಿದಳು
ಮೈಮರೆತು ಮೀರೆ
ಸರ್ಪ-ಪೆಟ್ಟಿಗೆ ಕಳಿಸಿ ರಾಜ
ಮೀರಾಳ ಕೈಗಿಟ್ಟ
ಮೈತೊಳೆದು, ಕೈತೊಳೆದು ಪೆಟ್ಟಿಗೆಯ ಮುಟ್ಟಿದರೆ
ಅಲ್ಲಿ ಸಾಲಿಗ್ರಾಮ.
ವಿಷಯ ಬಟ್ಟಲವನ್ನು ರಾಜ ಕಳಿಸಿದ್ದ

ಕುಡಿದಾಗ ಅಮೃತವದು

ಮೈತೊಳೆದು ಕೈತೊಳೆದು ಅದನು ಗುಟುಕರಿಸಿದರೆ

ಅಮರತ್ವ ಹೊಂದಿದಳು

ಮುಳ್ಳು ಹಾಸಿಗೆ ಕಳಿಸಿ

ಮಲಗೆಂದು ರಾಜ ಆಜ್ಞಾಪಿಸಿದ

ಹೊತ್ತು ಮುಳುಗಿದ ಮೇಲೆ ಮೀರಾ ಮಲಗಿದಳು

ಹೂವ ಹಾಸಿಗೆ ಮೇಲೆ ಮಲಗಿದಂತೆ

ನಿತ್ಯ ರಕ್ಷಕ ಕೃಷ್ಣ ಮೀರಾಳ ಒಡೆಯ

ಕಷ್ಟ ಪರಿಹಾರಕನು

ಪ್ರೀತಿ - ಪದಗಳ ಭಾವಗಳ ಮದಿಕೆ ಕುಡಿದು

ತನ್ನನರ್ಪಿಸಿದಳು ಗಿರಿಧರನಿಗೆ.

ಇಷ್ಟೆಲ್ಲಾ ಗಂಡಾಂತರಗಳಿಂದ ತಾನು ಬದುಕಿ ಉಳಿದದ್ದು ಕೃಷ್ಣನ ಮಹಿಮೆಯಿಂದಲೇ ಎಂಬ ಭಾವನೆ ಮೀರಾಬಾಯಿಯದಾಗಿತ್ತು. ಚಿತ್ತಾಡ ಮತ್ತು ಮೇತಾಡಗಳಲ್ಲಿ ಶಾಂತಿ ದೊರೆಯದ ಕಾರಣ ದ್ವಾರಕೆಗೆ ಬಂದು ಮುಂದಿನ ಜೀವನ ನಡೆಸಿದಳು ೧೫೪೭ರಲ್ಲಿ ಮರಣ ಹೊಂದಿದಳು.

ಮೀರಾಬಾಯಿಗೆ ಮಾರವಾಡಿ, ಗುಜರಾತಿ, ಬ್ರಜಭಾಷೆಯ ಸಂಪರ್ಕವಿತ್ತು. ಆಗ ಉತ್ತರ ಭಾರತದ ಸಾಹಿತ್ಯ ಮಾದ್ಯಮ ಬ್ರಜಭಾಷೆಯಾಗಿತ್ತು. ಇದು ಕೃಷ್ಣ ಸಾಹಿತ್ಯದ ಭಾಷೆಯೂ ಹೌದು. ಮೀರಾಬಾಯಿಯ ಪದಗಳಲ್ಲಿ ಬ್ರಜಭಾಷೆ ಮತ್ತು ಮಾರವಾಡಿಗಳ ಸಮ್ಮಿಶ್ರಣವಿದೆ. ಮೀರಾಬಾಯಿಯ ಕೃತಿಗಳ ಬಗ್ಗೆ ಭಿನ್ನಭಿಪ್ರಾಯಗಳಿವೆ. ಅವಳು ಪ್ರಸಿದ್ಧವಾದದ್ದು ಭಜನೆಗಳ ಮೂಲಕ ಮೀರಾಬಾಯಿ ಬರೆದಳೆಂದು ಹೇಳುವ ಕೃತಿಗಳು ಇಂತಿವೆ. 'ಗೀತಗೋವಿಂದ್ ಕೀ ಟೀಕಾ' 'ನರಸೀಜೀ ರೋ ಮಾಹೆರೋ' 'ಪದ್' 'ಸೋರಠ್ ಕೇ ಪದ್' 'ಮೀರಾಬಾಯಿ ಕಾ ಮಲಾರ್' 'ರಾಗ ಗೋವಿಂದ್' 'ಸತಭಾಮಾನು ರುಸನ್' 'ಮಿರಾನಿ ಗರಬೀ' 'ರುಕಮನೀ ಮಂಗಲ್' 'ನರಸೀ ಮೆಹತಾನೀ ಹುಂದೀ' 'ಚರಿತ್'

ಮೀರಾಬಾಯಿ ಒಬ್ಬ ಭಕ್ತಿ ಕವಯತ್ರಿ, ತಾನೊಬ್ಬ ಗೋಪಿಕಾ ಸ್ತ್ರೀ ಎಂದು ಬಗೆದು ಕೊಂಡಿದ್ದಳು. ಅವಳ ಭಕ್ತಿ ನಿಸ್ವಾರ್ಥ ಪ್ರೇಮ ಉತ್ಕಟವಾದುದಾಗಿತ್ತು, ಉಚ್ಚಮಟ್ಟದಾಗಿತ್ತು. ಭಕ್ತಿಯ ಎಲ್ಲ ಸ್ತರಗಳನ್ನು ಬಾಳಿನುದ್ದಕ್ಕೂ ಪಾಲಿಸಿದಳು. ಅನೇಕ ಭಕ್ತರಿಗಿರುವಂತೆ ಜನ್ಮ ಪುನರ್ಜನ್ಮಗಳ ಚಕ್ರದಿಂದ ಪಾರಾಗಿ ಪರಮಾತ್ಮನಲ್ಲಿ ವಿಲಾನವಾಗುವುದೇ ಅವಳ ಪರಮ ಗುರಿಯಾಗಿತ್ತು ಮತ್ತು ಅವಳ ಪಾಲಿಗೆ ಶ್ರೀ ಕೃಷ್ಣನೆ ಪರಮಾತ್ಮನಲ್ಲಿ ಮಾನವೀಯ ವೈಯಕ್ತಿಕ, ಕೃಪಾನಿಧಾನ ಹಾಗೂ ಆನಂದದಾಯಕ ರೂಪದ ಪ್ರತೀಕವಾಗಿದ್ದನು. ಮೀರಾಬಾಯಿಯ ಪಾಲಿಗೆ ಕೃಷ್ಣ

ಮಹಾಭಾರತದ ಕಪಟನಾಟಕ ಸೂತ್ರಧಾರನಾಗಿರದೇ ಭಾಗವತ ಪುರಾಣದ ಕಿಡಿಗೇಡಿ ಬಾಲಕನಾಗಿದ್ದ, ಪ್ರೇಮಿಯಾಗಿದ್ದ ಮಹಾಮಹಿಮನಾಗಿದ್ದ, ಧರ್ಮರಕ್ಷಕನಾಗಿದ್ದ.

ಮೀರಾಬಾಯಿಯ ಪದಗಳನ್ನು ಎರಡು ವಿಧವಾಗಿ ವಿಂಗಡಿಸಬಹುದು.

೧. ವಿನಯ ಮತ್ತು ವಂದನಾ ಪದಗಳು

೨. ಪ್ರೇಮ ಮತ್ತು ಅದಕ್ಕೆ ಸಂಬಂಧಿಸಿದ ಅನುಭವದ ಪದಗಳು

ಪದ್ಯಾನುವಾದಗಳು ಎಂಬ ಕೊನೆಯ ಅಧ್ಯಾಯದಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟರು ಮೀರಾಬಾಯಿಯ ೫೦ ಕವನಗಳು ಅನುವಾದಿಸಿಕೊಟ್ಟಿದ್ದಾರೆ.

**೨. ಜಯಶಂಕರ್ ಪ್ರಸಾದ್**

ಜಯಶಂಕರ ಪ್ರಸಾದ್ ಹಿಂದೀ ಭಾಷೆಯ ಅತಿದೊಡ್ಡ ಸಾಹಿತಿ. ಕವಿಗಳಾಗಿ, ನಾಟಕಕಾರರಾಗಿ, ಕತೆಗಾರರಾಗಿ ಕಾದಂಬರಿಕಾರರಾಗಿ ಪ್ರಸಿದ್ಧಿ ಹೊಂದಿದ್ದಾರೆ. ಇವರ ಜೀವನ ಚರಿತ್ರೆಯನ್ನು ಸಿದ್ಧಲಿಂಗ ಪಟ್ಟಣಶೆಟ್ಟರು ಇಂಗ್ಲಿಷನಿಂದ ಕನ್ನಡಕ್ಕೆ ಅನುವಾದಿಸಿದ್ದಾರೆ. ಇದರ ಮೂಲ ಲೇಖಕರು ರಮೇಶ್‌ಚಂದ್ರ ಷಾ, ಕೇಂದ್ರ ಸಾಹಿತ್ಯ ಅಕಾಡೆಮಿಯ 'ಭಾರತೀಯ ಸಾಹಿತ್ಯ ನಿರ್ಮಾಪಕರು' ಎಂಬ ಮಾಲಿಕೆಯಡಿಯಲ್ಲಿ ೧೯೯೦ರಲ್ಲಿ ಪ್ರಕಟಗೊಂಡಿದೆ.

ಈ ಕೃತಿಯಲ್ಲಿ ಒಟ್ಟು ೧೧ ಅಧ್ಯಾಯಗಳಿದ್ದು, ಜಯಶಂಕರರ ಜೀವನ, ಸಾಹಿತ್ಯ ಅವರ ವ್ಯಕ್ತಿತ್ವಗಳನ್ನು ಕುರಿತು ಹೇಳುತ್ತವೆ. ಜಯಶಂಕರ ಪ್ರಸಾದರ ಜೀವನಾವಧಿ ೧೮೮೯ ರಿಂದ ೧೯೩೭ರ ವರೆಗೆ ಆಗಿದ್ದು. ಈ ಕಾಲ ಅನೇಕ ದೃಷ್ಟಿಗಳಿಂದ ಆಧುನಿಕ ಭಾರತ ಇತಿಹಾಸದ ಗೌರವಪೂರ್ಣ ಅಧ್ಯಾಯವಾಗಿದೆ. ಆಧ್ಯಾತ್ಮಿಕ, ನೈತಿಕ ಹಾಗೂ ಸಾಮಾಜಿಕ, ರಾಜಕೀಯ ಘಟನೆಗಳು ಸಮೃದ್ಧವಾಗಿದ್ದ ಕಾಲದಲ್ಲಿ ಪ್ರಸಾದರು ೧೯೪೬ನೇ ವಿಕ್ರಮ ಸವಂತ್ಸರ (ಕ್ರಿ.ಶ.೧೮೮೯) ಮಾಘ ಶುದ್ಧ ದಶಮಿಯಂದು ಕಾಶೀಯ ಗೌರವಾನ್ವಿತ ಕುಟುಂಬವೊಂದರಲ್ಲಿ ಜನಿಸಿದರು. ಕಾಶೀರಾಜರ ನಂತರ ಹೆಚ್ಚಿನ ಗೌರವ ಕೀರ್ತಿ ಇವರ ಮನೆತನಕ್ಕಿತ್ತು. ಕಾಶ್ಮೀರಿ ಶೈವಾಗಮ, ಸಗುಣಾತ್ಮಕ ಅದ್ವೈತ ಈ ಕುಟುಂಬದ ಸ್ವೀಕೃತ ಧಾರ್ಮಿಕ ನಂಬಿಕೆಯಾಗಿತ್ತು. ಆಗ ಕಾಶೀ ವಿದ್ವಜ್ಜನರ ನೆಲೆಯಾಗಿತ್ತು. ಪ್ರಸಾದರ ಅಜ್ಜ ಮತ್ತು ತಂದೆ ಇಬ್ಬರೂ ಪಾಂಡಿತ್ಯ ಪೂರ್ಣವಾದವಿವಾದಗಳಲ್ಲಿ ಭಾಗವಹಿಸುತ್ತಿದ್ದರು. ಪ್ರಸಾದರಿಗೆ ೧೬ವರ್ಷಗಳಿದ್ದಾಗ ತಂದೆ ಮತ್ತು ಅಣ್ಣನವರ ನಿಧನದಿಂದಾಗಿ ಮನೆಯ ಜವಾಬ್ದಾರಿ ಹೊರಬೇಕಾಯಿತು. ಈ ಕಾಲದಲ್ಲಿ ಪ್ರಸಾದರು ಅನೇಕ ಕಷ್ಟಗಳನ್ನು ಎದುರಿಸಬೇಕಾಯಿತು. ಪರಿಸ್ಥಿತಿಯೊಂದಿಗೆ ಹೋರಾಡಿ ಯಶಸ್ವಿಯಾದರು. ಹಿಂದೀ ಸಾಹಿತಿ ಡಾ.ಶರ್ಮಾ ಹೇಳುವ ಪ್ರಸಾದರಲ್ಲಿ ವ್ಯವಹಾರಿಕ ಬುದ್ಧಿಮತ್ತೆ, ಮಾಧುರ್ಯಪೂರ್ಣ ಸ್ನೇಹಮಯತೆ, ಗಾಂಭೀರ್ಯ ಮತ್ತು ವಿನೋದ ಪ್ರವೃತ್ತಿಗಳಿದ್ದವು. ಜೀವನದ ಕಷ್ಟಮಯ ಪರಿಸ್ಥಿಯಲ್ಲಿಯೂ ಪ್ರಸಾದರು ಸಾಹಿತ್ಯ ರಚನೆಯಲ್ಲಿ ತೊಡುಗುತ್ತಿದ್ದರು. ಭಾರತೀಯ ಚರಿತ್ರೆ ಹಾಗೂ ಪುರಾಣಗಳಿಂದ ಪ್ರಸಾದರು ಸ್ಫೂರ್ತಿ ಪಡೆದಿದ್ದರು. ''ಪ್ರಸಾದರ ಆಂತರಿಕ ವ್ಯಕ್ತಿತ್ವ ಕೃಷ್ಣನ ಆದರ್ಶದಿಂದ ಪ್ರೇರಿತವಾದದ್ದು ಮತ್ತು ಅದರ ಬಾಹ್ಯ ಸಾಮಾಜಿಕ ವ್ಯಕ್ತಿತ್ವ ಮರ್ಯಾದ ಪುರುಷೋತ್ತಮ ರಾಮನ ಆದರ್ಶವನ್ನು ಸ್ವೀಕರಿಸಿತ್ತು''.[೧೫]

ಆನಂದವಾದ ಅಥವಾ ಅಸ್ತಿತ್ವದ ಮೂಲ ತತ್ವದಂತೆ ಸ್ವೀಕೃತವಾದ ಆನಂದ ದರ್ಶನ ಅವರಿಗೆ ಕೇವಲ ಪರಂಪರಾಗತವಾಗಿ ಬಂದುದಲ್ಲ. ಜೀವನದ ಕಷ್ಟಮಯ ಪರಿಸ್ಥಿತಿಯಲ್ಲಿ ಅಪಾರ ಬೌದ್ಧಿಕ, ಮಾನಸಿಕ ಕ್ಷೋಭೆಯ ಮಾಲಿಕ ಸಂಪಾದಿಸಿದ್ದರು. ದುಃಖದಿಂದ ಆರಂಭಗೊಂಡ ಅವರ ಬದುಕು ದುಃಖದಲ್ಲಿಯೇ ಕೊನೆಗೊಂಡಿತು. ತಮ್ಮ ಸೃಜನಾತ್ಮಕ ಅಭಿವ್ಯಕ್ತಿಯ ಶಿಖರವೇರಿದಾಗಲೇ ೪೭ನೇ ವಯಸ್ಸಿನಲ್ಲಿ ಮಾರಣಾಂತಿಕ ರೋಗ ತಗುಲಿತು. ಪ್ರಸಾದರು ನಾಸ್ತಿಕ ಲೇಖಕರಾಗಿದ್ದರು. ನಂಬದಿರುವ ಪ್ರವೃತ್ತಿ ಅವರಲ್ಲಿ ಪ್ರಧಾನವಾಗಿತ್ತು. ನಿಷೇಧಾತ್ಮಕ ತತ್ವ ಚಿಂತನೆಗಳನ್ನು ಅವರು ಪ್ರಯತ್ನ ಪೂರ್ವಕವಾಗಿ ನಿರಾಕರಿಸಿದ್ದರು. ಬದುಕಿನ ಬಗ್ಗೆ ಅಪವಾದ ರಹಿತ ಸ್ವೀಕೃತಿಯನ್ನು ಸೃಷ್ಟಿಸುವ ತಾತ್ವಿಕತೆಯನ್ನು ಅವರು ಒಪ್ಪಿದರು.

ಪ್ರಸಾದರ ಕಾವ್ಯಗಳಲ್ಲಿ 'ಕಾನನ್ ಕುಸುಮ್' ಮತ್ತು 'ಝುರನಾ' ಪ್ರಮುಖವಾಗಿವೆ. ಪ್ರಸಾದರ ಕಾವ್ಯ ಆರಂಭದಲ್ಲಿ ಭಾರತೀಯ ಕಾಲದ ಭಾವನಾತ್ಮಕ ಸ್ಫೂರ್ತಿಯಿಂದ ಪ್ರೇರಣೆ ಪಡೆದಿತ್ತು. ಕಾನನ್ ಕುಸುಮ್ ಸಂಕಲನವು ವಸ್ತು ಹಾಗೂ ಛಂದಸ್ಸುಗಳ ವೈವಿಧ್ಯತೆಯಿಂದ ಕೂಡಿದೆ. ಇಲ್ಲಿಯ ಕೆಲವು ಕವಿತೆಗಳು ಆಡುಮಾತಿನ ನುಡಿಗಟ್ಟಿಗೆ ಹತ್ತಿರವಾಗಿರುವುದನ್ನು ಕಾಣಬಹುದು. ಈ ಸಂಕಲನದಲ್ಲಿನ ಹೆಚ್ಚಿನ ಪದ್ಯಗಳು ಗದ್ಯಮಯವಾಗಿವೆ. ಝುರ್‌ನಾ ಹೆಚ್ಚು ಏಕಾಗ್ರವಾದ ವೈಯಕ್ತಿಕವಾದ ಬಹು ಮಟ್ಟಿಗೆ ಒಂದು ನಿಶ್ಚಿತ ಗಡಿಯಲ್ಲಿ ಸಾಗಿದ ಪ್ರಸಾರದ ಬದುಕಿನ ಅಭಿವ್ಯಕ್ತಿಯಾಗಿದೆ.

ಹಿಂದೀ ಕಾವ್ಯದಲ್ಲಿ ಸಂಪೂರ್ಣವಾಗಿ ನವ್ಯಧ್ವನಿ ಹಾಗೂ ನವ್ಯ ಭಾವ ಸಂವೇದನೆಯ ಹೊಸ ಘಟ್ಟವನ್ನು ಪ್ರಸಾದರೇ 'ಝುರ್‌ನಾ' ಕವಿತೆಯ ಮೂಲಕ ಆರಂಭಿಸಿದರು. ಸಾಹಿತ್ಯ ವಿದ್ವಾಂಸರು ಇದನ್ನು ಛಾಯಾವಾದ್ ಎಂದು ಕರೆದರು. ಪ್ರಸಾದ, ನಿರಾಲಾ ಮತ್ತು ಪಂತರು ಛಾಯಾವಾದದ ಪ್ರಮುಖ ಕವಿಗಳಾಗಿದ್ದಾರೆ.

ಅ.ಸೂ.ಪ್ರಸಾದರ ದೀರ್ಘ ಕವಿತೆಯಾಗಿದೆ. ಬಹಳ ಜನಪ್ರಿಯವಾದ ಇದು ನಂತರದ ಕವಿಗಳ ಮಿತಿ, ಆಳವಾದ ಪ್ರಭಾವ ಬೀರಿದೆ. ತಮ್ಮ ಬದುಕಿನ ಆಳವಾದ ನೋವೊಂದನ್ನು ಇಲ್ಲಿ ಅಭಿವ್ಯಕ್ತಿಗೊಳಿಸಲಾಗಿದೆ. ಇದು ಏಕಕಾಲಕ್ಕೆ ಭಾವಗೀತೆಯೂ, ಕಥನ ಕಾವ್ಯವೂ, ಶೋಕಗೀತೆಯೂ ಆಗುತ್ತದೆ. ಯಾವುದೇ ಒಬ್ಬ ವ್ಯಕ್ತಿಗೆ ಮಾತ್ರವಲ್ಲ ಇಡೀ ಪ್ರಪಂಚಕ್ಕೆ ಸಹಾನುಭೂತಿ ಹಾಗೂ ಸಕ್ರಿಯ ಪ್ರೇಮಭಾವದ ಅಗತ್ಯವಿದೆ ಎಂಬುದು ಈ ಕಾವ್ಯದ ಸಂದೇಶ.

ಪ್ರಸಾದರು ಕರುಣಾಲಯಮ್, ಅಜಾತಶತ್ರು. ರಾಜ್ಯಶ್ರೀ ಸ್ಕಂದಗುಪ್ತ, ಚಂದ್ರಗುಪ್ತ ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ಇವರ ಬಹುತೇಕ ನಾಟಕಗಳು ಇತಿಹಾಸದ ಉಜ್ವಲ ಹೋರಾಟದ ಭಾಗಗಳನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಪ್ರಸಾದರು ತಮ್ಮ ಕಾಲದ ರಾಷ್ಟ್ರೀಯ ಭಾವನೆಗಳನ್ನು ಪ್ರತಿಬಿಂಬಿಸುತ್ತಿದ್ದರು. ಆದರೆ ಅವರ ಇತಿಹಾಸದ ದೃಷ್ಟಿ ಭಾವನಾತ್ಮಕವಾಗಿರಲಿಲ್ಲ. ಭಾರತೀಯ ಚರಿತ್ರೆಯನ್ನು ಅವರು ಆಳವಾಗಿ ತಿಳಿದಿದ್ದರು. ಮೋಹರಹಿತವಾಗಿ ಸತ್ಯಶೋಧಕ ದೃಷ್ಟಿಯಿಂದ ಯೋಚಿಸಿ ತಮ್ಮ ಸ್ವತಂತ್ರ ನಿರ್ಣಯಗಳಿಗೆ ತಲುಪುತಿದ್ದರು. ಅವರ ನಾಟಗಳಲ್ಲಿ ಚರಿತ್ರೆಯ ಗೌರವವಷ್ಟೆ ಅಲ್ಲ. ಪತನ, ನೋವು ಅಸಡ್ಡೆಗಳು ಸಹಚಿತ್ರವಾಗಿವೆ. ಹರ್ಷವರ್ಧನ, ಚಂದ್ರಗುಪ್ತ, ಗೌತಮಬುದ್ಧ, ಸ್ಕಂದಗುಪ್ತ, ಚಾಣಕ್ಯ, ದ್ರಾವ ಸ್ವಾಮಿನಿ, ಅಜಾತಶತ್ರು ಮುಂತಾದವರು. ಪ್ರಸಾದರು ನಾಟಕಗಳಿಂದ ಗೌರವಾನ್ವಿತ ಪ್ರಮುಖ ವ್ಯಕ್ತಿಗಳಾಗಿದ್ದಾರೆ.

ಪ್ರಸಾದರು 'ಕಂಕಾಲ್' ತಿತಲೀ, ಐರಾವತಿ ಎನ್ನುವ ಕಾದಂಬರಿಗಳನ್ನು ರಚಿಸಿದ್ದಾರೆ. 'ಕಂಕಾಲ್' ಕಾದಂಬರಿ ತಮ್ಮ ಸಮಕಾಲೀನ ಸಮಾಜದ ದಾರುಣ ಚಿತ್ರಗಳನ್ನು ಚಿತ್ರಿಸಿದ್ದಾರೆ. ಒಂದು ಸಮಾಜದ ನೈತಿಕ ಆಧ್ಯಾತ್ಮಿಕ ವಿನಾಶದ ಚಿತ್ರಣ ಇಲ್ಲಿದೆ. ವಿವಾಹದ ಪವಿತ್ರ ಬಂಧನ ಸಡಿಲಗೊಳ್ಳುವುದು. ವ್ಯಕ್ತಿ ಸ್ವಾತಂತ್ರ್ಯದ ಹುಡುಕಾಟ, ಜಾತಿ ಮತ್ತು ಧರ್ಮಗಳು ಸಮಾಜವನ್ನು ಒಡೆಯುವುದನ್ನು ಇಲ್ಲಿ ಖಂಡಿಸಲಾಗಿದೆ. ಹಿಂದೂ, ಕ್ರಿಶ್ಚಿಯನ್ ಧರ್ಮಗಳು ಮನುಷ್ಯನ ದೃಷ್ಟಿ ಭಾವನೆಗಳನ್ನು ಉದ್ರೇಕಿಸುವ ಸಾಧನಗಳಾಗಿ ಚಿತ್ರಿಸಲಾಗಿದೆ. ಕಾಮ ಕೂಡ ಸಂಪತ್ತನ್ನು ಅನುಸರಿಸುತ್ತದೆ. ಹಣದ ಮಾಯೆ ಎಲ್ಲಾ ಮನುಷ್ಯನ ಸಂಬಂಧಿಗಳನ್ನು ವಿಕೃತಗೊಳಿಸುತ್ತದೆ. ತತಲಿ ಕಾದಂಬರಿ ಹಳ್ಳಿಯ ಹಿನ್ನೆಲೆಯಲ್ಲಿ ಮೂಡಿಬಂದಿದೆ. ಗ್ರಾಮೋದ್ಧಾರದ ಕನಸುಗಳು ಇಲ್ಲಿವೆ. ವಿದ್ಯಾವಂತರಾದ ಯುವಕರು ನಗರದ ವ್ಯಾಮೋಹವನ್ನು ಬಿಟ್ಟು ಹಳ್ಳಿಗಳಲ್ಲಿ ವಾಸವಾಗಿ ಗ್ರಾಮೋದ್ಧಾರದ ಕಾರ್ಯದಲ್ಲಿ ಸಕ್ರೀಯವಾಗಿ ಭಾಗವಹಿಸಬೇಕೆಂಬ ಸಂದೇಶ ನೀಡುತ್ತದೆ. 'ಐರಾವತಿ' ಪ್ರಸಾದರ ಅಪೂರ್ಣ ಕಾದಂಬರಿಯಾಗಿದೆ. ಪ್ರಸಾದರ ಕಥೆಗಳು ತಮ್ಮ ಸುತ್ತಲಿನ ವಾತಾವರಣವನ್ನು ದೇಶದ ಭೂತ ವರ್ತಮಾನ-ಭವಿಷ್ಯತ್ತನ್ನು ಕುರಿತು ಯೋಚಿಸುತ್ತವೆ. ಸಮಸ್ಯೆಗಳನ್ನು ಬಿಡಿಸಲು ಯತ್ನಿಸುತ್ತವೆ.

'ಕಾಮಾಯಾನಿ' ಪ್ರಸಾದರ ಮಹಾಕಾವ್ಯವಾಗಿದೆ. ಇದರಲ್ಲಿ ಎಲ್ಲ ಸೃಷ್ಟಿ ಕಥೆಗಳ ಶ್ರೇಷ್ಠ ಅಂಶಗಳು ಒಳಗೊಂಡಿದ್ದು ಮನೋವಿಜ್ಞಾನ, ಇತಿಹಾಸ ಆದಿತತ್ವಗಳು, ಆಧುನಿಕತೆ, ಧಾರ್ಮಿಕತೆ ಧರ್ಮನಿರಪೇಕ್ಷತೆ ಎಲ್ಲವೂ ಏಕೀಕರಗೊಂಡಿವೆ. ಆರ್ಯ ಸಾಹಿತ್ಯದಲ್ಲಿ ಮಾನವರ ಮೂಲ ಪುರುಷ ಮನುವಿನ ಚರಿತ್ರೆ ವೇದಗಳಿಂದ ಹಿಡಿದು ಪುರಾಣ ಮತ್ತು ಇತಿಹಾಸಗಳಲ್ಲಿ ವ್ಯಾಪಿಸಿದೆ. ಎನ್ನುವ ಪ್ರಸಾದರು ಅದನ್ನಿಲ್ಲಿ ಒಪ್ಪಿದ್ದಾರೆ. ಪ್ರಸಾದರಿಗೆ ದರ್ಶನ-ತಾತ್ವಿಕತೆ ಕೇವಲ ಬೌದ್ಧಿಕ ವಿಲಾಸವಾಗಿದೆ. ಮನುಷ್ಯನೇ ಆತ್ಮದಲ್ಲಿ ವಿಹಿತವಾಗಿರುವ ಸಹಜ ಬುದ್ಧಿ ಮತ್ತು ಅಂತರ್ ದೃಷ್ಟಿಗಳ ಪ್ರಕಾಶವೇ ಆಗಿದೆ. ಈ ಸಹಜ ವಿವೇಕದಿಂದಲೇ ಅವರು ಮನುಷ್ಯನ ಪುರಾಣ ಕಥೆಯನ್ನು ತಮ್ಮ ಪ್ರಖರ ಇತಿಹಾಸ ಪ್ರಜ್ಞೆಯೊಂದಿಗೆ ಹೊಂದಿಸಿಕೊಂಡು ಈ ಕಾವ್ಯ ರಚಿಸಿದ್ದಾರೆ. ಕೊನೆಯ ಅನುಬಂಧದಲ್ಲಿ ಪ್ರಸಾದರ ಪ್ರಕಟಿತ ಸಾಹಿತ್ಯವನ್ನು ಕೊಡಲಾಗಿದೆ. ಪ್ರಸಾದರು ಕೆಲವು ಕವಿತೆಗಳ ಸಾಲುಗಳನ್ನು ಸಾಂದರ್ಭಿಕವಾಗಿ ಅಲ್ಲಲ್ಲಿ ಅನುವಾದ ಮಾಡಲಾಗಿದೆ.

ಓ ನನ್ನ ಜೀವನದ ಧ್ರುವನಕ್ಷತ್ರ
ಗಗನ ಮಂಡಲದ ನೀಲ ಶರಧಿಯ ತುಂಬ ನಿನ್ನ ಕರುಣೆ
ಚಲಿಸಲಿ ಚಂಚಲಗ್ರಹ ಕ್ರಮಿಸಲಿ ಶೂನ್ಯ ಪಥ ಸಾಗರ
ನಿನ್ನ ಮಧುರ ಜ್ಯೋತಿಯ ಧಾರೆಪಡೆದು ಮುನ್ನಡೆಯಲಿ
ನನ್ನ ಬದುಕಿನದೋಣಿ (ಪಾಲ್ಗುಣ-೧೯೮೪)
ಮೊರೆಯುವುದಿಲ್ಲ ಚೈತನ್ಯದ ಅಲೆ
ಸ್ಥಿರಗೊಳ್ಳುವುದು ಜೀವನ ಸಮುದ್ರ

ಪ್ರಳಯದ ಸಂಜೆ ಇಲ್ಲಿ ಬದುಕಿನ ಭಾಗ
ವಿರಹಮಿಲನಗಳು ನಿತ್ಯ ಬಲು ಭದ್ರ

(ಆಞಸೊ-೧೯೨೬)

ನನಗೆ ಉಪಕಾರಿಯಾಗಿದ್ದವನೆ
ಈಗೆನ್ನ ಅಪರಾಧಿ
ಎಲ್ಲರಿಗೆ ಗುಣನಿಧಿಯಾಗಿದ್ದವನು
ಈಗ ದೋಷಗಳನ್ನೆಸೆಗಿದ್ದಾನೆ.

ಯೋಚಿಸುತ್ತಿದ್ದೆ ಬದುಕು ಸುಖವೇ
ಅಲ್ಲ, ಇದು, ಬಿಡಿಸಲಾಗದ ಪ್ರಶ್ನೆ
ಓಡಿಬಿಡು ಓಮನು ಬರಿಯ ಕಾಮನ ಬಿಲ್ಲು
ಗಳಿಂದ ಎಷ್ಟೊಂದು ನೋವು ಸಹಿಸಿದಿ ನೀನು

(ಕಾಮಾಯಾನಿ)

**೩.೩.೫. ವಿಚಾರ ಪ್ರಬಂಧ**

**೧. ಹೆಣ್ಣಿನ ಸ್ಥಾನಮಾನ**

ಈ ಕೃತಿಯ ಮೂಲ ಲೇಖಕರು ಬಂಗಾಳಿಯ ಶರಚ್ಚಂದ್ರ ಚಟ್ಟೋಪಾಧ್ಯರು. ೧೯೬೬ರಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟರು ಕನ್ನಡಕ್ಕೆ ಇದನ್ನು ಅನುವಾದಿಸಿದ್ದಾರೆ. ೧೯೭೧ರಲ್ಲಿ ಇದು ಎರಡನೆಯ ಮುದ್ರಣವನ್ನು ಕಂಡಿದೆ. ಧಾರವಾಡದ ಸಮಾಜ ಪುಸ್ತಕಾಲಯದಿಂದ ಪ್ರಕಟಣೆಗೊಂಡಿದೆ.

ಹೆಣ್ಣಿನ ಸ್ಥಾನಮಾನ ದೀರ್ಘವಾದ ವಿಚಾರ ಪೂರ್ಣ ಕೃತಿಯಾಗಿದೆ. ಈ ಪುಸ್ತಕದ ಶೀರ್ಷಿಕೆಯೇ ಹೇಳುವಂತೆ ಭಾರತ ಮತ್ತು ಜಗತ್ತಿನ ವಿವಿಧ ಭಾಗಗಳಲ್ಲಿ ಜನರು ಹೆಣ್ಣಿಗೆ ನೀಡಿರುವ ಸ್ಥಾನ ಅಂತಹದು. ಜಗತ್ತಿನ ಎಲ್ಲಾ ಜನಾಂಗಗಳು, ಧರ್ಮಗಳು, ಹೆಣ್ಣನ್ನು ಏಕೆ ಎರಡನೆಯ ದರ್ಜೆ ಪ್ರಜೆಯನ್ನಾಗಿ ನಡೆಸಿಕೊಂಡವು ಕೆಲವು ಅನಾಗರಿಕ ಜನಾಂಗಗಳು ಹೆಣ್ಣಿಗಾಗಿ ಯಾವರೀತಿಯಲ್ಲಿ ಕಾದಾಡುತ್ತಿದ್ದರು. ಹೆಣ್ಣನ್ನು ಪಶು ಪ್ರಾಣಿಗಳಂತೆ ಗುಲಾಮರಂತೆ ಕೊಂಡುಕೊಳ್ಳುತ್ತಿದ್ದರು. ಮಾರಾಟ ಮಾಡುತ್ತಿದ್ದರು. ಮುಂತಾದ ಮಹತ್ವದ ವಿಷಯಗಳನ್ನು ನೀಡುತ್ತಾರೆ. ಆಫ್ರಿಕಾದ ಕೆಲವು ಅನಾಗರೀಕ ಜನಾಂಗಗಳು ಹೆಣ್ಣನ್ನು ಬೋಗದ ವಸ್ತುವನ್ನಾಗಿ ಉಪಯೋಗಿಸಿ ಅವಳನ್ನು ಕೊಂದು ತಿನ್ನುವ ವಿಚಾರ ಹೇಸಿಗೆ ಹುಟ್ಟಿಸುತ್ತದೆ. ಅದೇ ರೀತಿ ಭಾರತೀಯರು ಹೆಣ್ಣಿಗೆ ದೇವರ ಸ್ಥಾನಮಾನ ನೀಡಿದರು. ಸತಿಸಹಗಮನ ಪದ್ಧತಿ ಒಂದು ಕಪ್ಪು ಚುಕ್ಕೆಯಾಗಿತ್ತು. ಗಂಡ ಸತ್ತಾಗ ಹೆಂಡತಿಗೆ ಗಾಂಜ ಮತ್ತು ಮೈಲು ತುತ್ತಿನ ಮಿಶ್ರಣ ಮಾಡಿ

ಕುಡಿಸಿ ಅವಳನ್ನು ಬಿದಿರುಗಳಿಂದ ಕಟ್ಟಿ, ಚಿತೆಯೇರಿಸುವ ಕ್ರೂರತನ ಸಾಧುವಾದುದಲ್ಲ ಎಂದು ಹೇಳುತ್ತಾರೆ. ಲೇಖಕರು ಇವೆಲ್ಲಾ ಅನಾಗರೀಕ ವರ್ತನೆಗಳಾಗಿವೆ. ಇನ್ನು ಮುಂದಾದರೂ ಹೆಣ್ಣನ್ನು ಒಳ್ಳೆಯ ರೀತಿಯಲ್ಲಿ ನಡೆಸಿಕೊಳ್ಳಲಿ ಎಲ್ಲಾ ಜನಾಂಗಗಳ, ಧರ್ಮಗಳ, ಧೋರಣೆಗಳಂತು ಧನಾತ್ಮಕವಾಗಿರಲಿ, ಹೆಣ್ಣಿಗೆ ಒಳ್ಳೆಯ ಸ್ಥಾನಸಿಗಲಿ ಎಂದು ಆಶಯ ವ್ಯಕ್ತಪಡಿಸುತ್ತಾರೆ.

**ಟಿಪ್ಪಣಿಗಳು**

೧. ಪ್ರೊ.ದೇ.ಜವರೇಗೌಡ ಪ್ರ.ಸಂ, ಸಹೃದಯ, ವನಶ್ರೀ ಪ್ರಕಾಶನ, ಮೈಸೂರು, ೨೦೦೪, ಪು.೩೬೨

೨. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಕನುಪ್ರಿಯಾ, ಅನುವಾದ ಪ್ರಕಾಶನ, ಮೈಸೂರು, ೧೯೮೧, ಬೆನ್ನುಡಿ.

೩. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಮೀರಾವಾಣಿ, ಅನನ್ಯ ಪ್ರಕಾಶನ, ಧಾರವಾಡ, ೧೯೮೭, ಬೆನ್ನುಡಿ.

೪. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಮೀರಾವಾಣಿ, ಅನನ್ಯ ಪ್ರಕಾಶನ, ಧಾರವಾಡ, ೧೯೮೭, ಮುನ್ನುಡಿ. ಪು.ಸಂ.೯,೧೦

೫. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಮೀರಾವಾಣಿ, ಅನನ್ಯ ಪ್ರಕಾಶನ ಧಾರವಾಡ ೧೯೮೭ ಮುನ್ನುಡಿ. ಪು.ಸಂ. ೧೩

೬. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಮೀರಾವಾಣಿ, ಅನನ್ಯ ಪ್ರಕಾಶನ, ಧಾರವಾಡ, ೧೯೮೭, ಮುನ್ನುಡಿ. ಪು.ಸಂ.೨೦.

೭. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಮೀರಾವಾಣಿ, ಅನನ್ಯ ಪ್ರಕಾಶನ, ಧಾರವಾಡ, ೧೯೮೭, ಮುನ್ನುಡಿ. ಪು.೨೨

೮. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಆಡದ ಒಂದು ದಿನ, ಅನನ್ಯ ಪ್ರಕಾಶನ, ಧಾರವಾಡ, ಬೆನ್ನುಡಿ.

೯. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಅಲೆಗಳಲ್ಲಿ ರಾಜಹಂಸಗಳು, ಅನನ್ಯ ಪ್ರಕಾಶನ, ಧಾರವಾಡ, ೧೯೮೦, ಪು.೮

೧೦. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಅಲೆಗಳಲ್ಲಿ ರಾಜಹಂಸಗಳು, ಅನನ್ಯ ಪ್ರಕಾಶನ, ಧಾರವಾಡ, ೧೯೮೦, ಪು.೯

೧೧. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಅದೇ ಅಧೋರೇ, ಅನನ್ಯ ಪ್ರಕಾಶನ, ಧಾರವಾಡ, ೧೯೮೯, ಬೆನ್ನುಡಿ.

೧೨. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ತಿಪ್ಪೇಸ್ವಾಮಿ, ಅಂಧಯುಗ ಅನನ್ಯ ಪ್ರಕಾಶನ, ಧಾರವಾಡ, ಪು.೨೫.

೧೩. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ತಿಪ್ಪೇಸ್ವಾಮಿ, ಅಂಧಯುಗ, ಅನನ್ಯ ಪ್ರಕಾಶನ, ಧಾರವಾಡ, ಪು.೧೦೫

೧೪. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ತಿಪ್ಪೇಸ್ವಾಮಿ, ಅಂಧಯುಗ, ಅನನ್ಯ ಪ್ರಕಾಶನ, ಧಾರವಾಡ, ಪು.ಸಂ.೧೧೩, ೧೧೪.

೧೫. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ ಜಯಶಂಕರ್ ಪ್ರಸಾದ್, ಕೇಂದ್ರ ಸಾಹಿತ್ಯ ಅಕಾಡೆಮಿ, ಪು.೨೧

೧೬. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಶೇಷಪ್ರಶ್ನೆ, ಸಮಾಜ ಪುಸ್ತಕಾಲಯ, ೧೯೮೯, ಪು.೫೫

೧೭. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಶೇಷಪ್ರಶ್ನೆ, ಸಮಾಜ ಪುಸ್ತಕಾಲಯ, ೧೯೮೯, ಪು.೫೫

೧೮. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಶೇಷಪ್ರಶ್ನೆ, ಸಮಾಜ ಪುಸ್ತಕಾಲಯ, ೧೯೮೯, ಪು.೫೬

೧೯. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಶೇಷಪ್ರಶ್ನೆ, ಸಮಾಜ ಪುಸ್ತಕಾಲಯ, ೧೯೮೯, ಪು.೭೬

* * *

## ಭಾಗ-೪, ಅಂಕಣ ಸಾಹಿತ್ಯ

೩.೪.೧. ಚಹಾದ ಜೋಡಿ ಚೂಡಾದ್ಹಾಂಗ ಭಾಗ-೧

೩.೪.೨. ಚಹಾದ ಜೋಡಿ ಚೂಡಾದ್ಹಾಂಗ ಭಾಗ-೨

೩.೪.೩. ಚಹಾದ ಜೋಡಿ ಚೂಡಾದ್ಹಾಂಗ ಭಾಗ-೩

೩.೪.೪. ಚಹಾದ ಜೋಡಿ ಚೂಡಾದ್ಹಾಂಗ ಭಾಗ-೪

೩.೪.೫. ಚಹಾದ ಜೋಡಿ ಚೂಡಾದ್ಹಾಂಗ ಭಾಗ-೫

೩.೪.೬. ಕಡೀಪುಟ

೩.೪.೭. ಒನ್ನೇಪುಟ

## ಭಾಗ-೪, ಅಂಕಣ ಸಾಹಿತ್ಯ

ಕನ್ನಡದಲ್ಲಿ ಅಂಕಣ ಸಾಹಿತ್ಯವನ್ನು ಒಂದು ಪ್ರಕಾರವಾಗಿ ಬಹು ದಿನಗಳ ಕಾಲ ಪರಿಗಣಿಸಿದ್ದಿಲ್ಲ. ಅದು ಸಾಹಿತ್ಯ ಗುಣಕ್ಕೆ ಸಂಬಂಧಿಸಿದ ಹೆಸರೂ ಆಗಿರಲಿಲ್ಲ ಪತ್ರಿಕೆಯ ನಿರ್ದಿಷ್ಟ ಸ್ಥಳ ವಿನ್ಯಾಸಕ್ಕೆ ಸಂಬಂಧಪಟ್ಟ ಹೆಸರು ಇಂಗ್ಲೀಷ್‌ನ Column ಎಂಬುದಕ್ಕೆ ಸಂವಾದಿಯಾಗಿ ಕನ್ನಡದಲ್ಲಿ 'ಅಂಕಣ' ಪದ ಬಳಕೆಗೆ ಬಂದಿದೆ. ಅದೇನೇ ಇದ್ದರೂ ಅಂಕಣದಲ್ಲಿ ಸ್ಪರ್ಶಿಸಿದ, ಸ್ಪಂದಿಸಿದ ವಸ್ತು ವಿಷಯವೇ ಇಲ್ಲವೆನ್ನಬಹುದು. ಪ್ರಪಂಚದ ಆಗು ಹೋಗುಗಳು ಸುತ್ತಲಿನ ಸಾಹಿತ್ಯ ಸಾಂಸ್ಕೃತಿಕ ಚಟುವಟಿಕೆಗಳು ರಾಜಕೀಯ, ಆರ್ಥಿಕ ವಿದ್ಯಮಾನಗಳು ಮುಂತಾದ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಅಂಕಣ ಇಂದು ಸಾಹಿತ್ಯ ಪ್ರಕಾರವಾಗಿ ಹೆಸರು ಮಾಡಿದೆ. ಇಲ್ಲಿ ವರದಿ ಕೇಂದ್ರಿತ, ಪ್ರಾದೇಶಿಕ ಸಂಗತಿ, ಜಾಗತಿಕ ವಿದ್ಯಮಾನ ರಾಜಕೀಯ ವಿಶ್ಲೇಷಣೆ ವ್ಯಕ್ತಿ ಚಿತ್ರಣ, ವಿನೋದ, ವಿಡಂಬನೆ, ಹರಟೆ, ಮನೋವೈಜ್ಞಾನಿಕ ಇತ್ಯಾದಿ ವಸ್ತುವೈವಿಧ್ಯತೆಗಳಿಂದ ಅಂಕಣ ಸಾಹಿತ್ಯ ನಳನಳಿಸುತ್ತಿದೆ. ಕನ್ನಡಕ್ಕೆ ಅಂಕಣ ಬರಹ ಹೊಸತೇನು ಅಲ್ಲ. ೧೮೪೩ರಲ್ಲಿ ಆರಂಭವಾದ ಕನ್ನಡದ ಮೊದಲ ಪತ್ರಿಕೆ ಮಂಗಳೂರು ಸಮಾಚಾರಕ್ಕೆ ಹರ್ಮನ್ ಮೋಗ್ಲಿಂಗ್ ಅವರು ಸಂಪಾದಕರಾಗಿದ್ದರು. ಈ ಪತ್ರಿಕೆಯಲ್ಲಿ 'ನೈತಿಕ ವಿಚಾರಗಳು' ಎನ್ನುವ ಅಂಕಣವನ್ನು ಸಂಪಾದಕರು ತಪ್ಪದೇ ಬರೆಯುತ್ತಿದ್ದರು. ೧೯೬೮ರಲ್ಲಿ ಸಾಹಿತಿ ನಿರಂಜನರು ಪ್ರಜಾವಾಣಿಯಲ್ಲಿ 'ಬೇವುಬೆಲ್ಲ' ಅಂಕಣವನ್ನು ಬರೆದರು. ೧೯೯೦ರಲ್ಲಿ ಹಾ.ಮಾ. ನಾಯಕರು 'ಸಂಪ್ರತಿ' ಅಂಕಣವನ್ನು ಬರೆದರು. ಇದಕ್ಕೆ ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಬಂದಾಗ ಅಂಕಣಬರಹ ಸಾಹಿತ್ಯದ ಒಂದು ಪ್ರಕಾರವಾಯಿತು. ಅಂಕಣ ಬರಹಗಳಿಗೆ ಹೊಸ ಚಾಲನೆ, ಭರವಸೆಗಳು ಸಿಕ್ಕವು; ಅಂಕಣ ಬರಹಕ್ಕಾಗಿ ರಾಷ್ಟ್ರ ಮಟ್ಟದಲ್ಲಿ ಪಡೆದ ಮೊದಲ ಪ್ರಶಸ್ತಿ ಇದಾಗಿದೆ. ನಂತರ ಕನ್ನಡದ ಶ್ರೇಷ್ಠ ವಿಮರ್ಶಕರಾದ ಕೀರ್ತಿನಾಥ ಕುರ್ತುಕೋಟಿಯವರು ಪ್ರಜಾವಾಣಿಯಲ್ಲಿ 'ಸಮ್ಮುಖ' ಅಂಕಣ ಬರಹ ಬರೆದರು. ಹೀಗೆ ಕನ್ನಡದಲ್ಲಿ ವಿ.ಎಂ. ಇನಾಂದಾರ್ ಕು.ಶಿ. ಹರಿದಾಸ ಭಟ್ಟ, ಪಾಟೀಲ ಪುಟ್ಟಪ್ಪನಂತಹ ಹಿರಿಯ ತಲೆಮಾರಿನವರಲ್ಲದೆ ಬಿ.ವಿ. ವೈಕುಂಠರಾಜು, ಬಿ.ಎ. ವಿವೇಕ ರೈ, ಈಶ್ವರ ದೈತೋಟ, ಲಂಕೇಶ, ರವಿಬೆಳೆಗೆರೆ, ಈ ಕ್ಷೇತ್ರದ ಬೆಳವಣಿಗೆಗೆ ಕಾರಣವಾಗಿದ್ದಾರೆ. ವಿಶೇಷವಾಗಿ ಡಾ. ವೀರಣ್ಣ ದಂಡೆಯವರ 'ಕಲಬುರ್ಗಿ ಕಲರವ', ನಾ. ದಾಮೋದರ ಶೆಟ್ಟಿಯವರ 'ತೆಂಗಣ ಸುಳಿಗಾಳಿ' ಮತ್ತು ಸಿದ್ಧಲಿಂಗ ಪಟ್ಟಣಶೆಟ್ಟಿಯವರ 'ಚಹಾದ ಜೋಡಿ

ಚೂಡಾದ್ಹಾಂಗ' ಇವು ಮೂರು ಪ್ರಜಾವಾಣಿಯ ಒಂದೇ ಪುಟದಲ್ಲಿ ಪ್ರಕಟವಾಗುತ್ತಿದ್ದ ಅಂಕಣಗಳು. ಪಟ್ಟಣಶೆಟ್ಟಿಯವರ ಅಂಕಣದ ವಿಶೇಷತೆಯೆಂದರೆ ಧಾರವಾಡ ಪ್ರದೇಶದ ಭಾಷೆಯ ಬಳಕೆ, ಅಲ್ಲಿ ಬಳಕೆಯಲ್ಲಿರುವ ಚಹಾ ಮತ್ತು ಚೂಡಾಗಳ ಶೀರ್ಷಿಕೆ ಇದರಿಂದ ಪ್ರಾದೇಶಿಕತೆ ಕಸುವು ಅವರ ಅಂಕಣದಲ್ಲಿ ಕಾಣಬಹುದು.

'ಚಹಾದ ಜೋಡಿ ಚೂಡಾದ್ಹಾಂಗ' ಎಂಬ ಅಂಕಣ ಬರಹಗಳು ಐದು ಸಂಪುಟಗಳಲ್ಲಿ ಪ್ರಕಟಗೊಂಡಿವೆ. ಸಂಕಲನ ಪತ್ರಿಕೆಯಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಪತ್ರಿಕೆಯ ಮೊದಲ ಪುಟವನ್ನು 'ಒನ್ನೇಪುಟ' ಮತ್ತು ಕೊನೆಯ ಪುಟವನ್ನು 'ಕಡೀಪುಟ' ಎಂಬ ಅಂಕಣಕ್ಕೆ ಮೀಸಲಿರಿಸಿದ್ದಾರೆ. ಈ ಎಲ್ಲಾ ಸಾಹಿತ್ಯವನ್ನು ಇಲ್ಲಿ ಪರಾಮರ್ಶಿಸಲಾಗಿದೆ.

**೧. ಚಹಾದ ಜೋಡಿ ಚೂಡಾದ್ಹಾಂಗ ೧**

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಪ್ರಜಾವಾಣಿ ದಿನಪತ್ರಿಕೆಯ ಸಂಪಾದಕರಾದ ಜಿ.ಎನ್. ರಂಗನಾಥರಾವ್ ಅವರ ಒತ್ತಾಸೆಯ ಮೇರೆಗೆ ಅಂಕಣ ಬರಹವನ್ನು ಆರಂಭಿಸಿದರು. ದ.ರಾ. ಬೇಂದ್ರೆಯವರ ಪ್ರಸಿದ್ಧ ಲಾವಣಿಯ ಸಾಲಾದ 'ಚಹಾದ ಜೋಡಿ ಚೂಡಾದ್ಹಾಂಗ' ಅಂಕಣದ ಶೀರ್ಷಿಕೆಯಾಯಿತು. ೧೯೯೪ಳರಲ್ಲಿ ಪ್ರಜಾವಾಣಿಯು ಹುಬ್ಬಳ್ಳಿ-ಧಾರವಾಡ ಆವೃತ್ತಿಯನ್ನು ಆರಂಭಿಸಿತು. ಮುಂಜಾನೆಯ ಚಹಾವೇಳೆಗೆ ಪ್ರಜಾವಾಣಿ ಎಂದು ಜಾಹಿರಾತು ಬಂದ ಕಾಲವದು. ಹುಬ್ಬಳ್ಳಿ ಆವೃತ್ತಿ ಆರಂಭಿಸಿದ ನಂತರ ಆ ಭಾಗದ ಅಥವಾ ಉತ್ತರ ಕರ್ನಾಟಕದ ವಿಶೇಷ ವರದಿಗಳು ಪ್ರಜಾವಾಣಿ ಪತ್ರಿಕೆಗೆ ಬೇಕಾಗಿದ್ದವು. ಆಗಿನ ಸಂಪಾದಕ ಜಿ.ಎನ್, ರಂಗನಾಥರಾವ್ ಅವರು ಈ ಭಾಗದ ಸಾಂಸ್ಕೃತಿಕ ವರದಿಗಳಿಗೆ ಒಂದು ಅಂಕಣವನ್ನು ಮೀಸಲಿರಿಸಿ ಅದನ್ನು ಸಿದ್ಧಲಿಂಗಪಟ್ಟಣಶೆಟ್ಟಿಯವರಿಗೆ ವಹಿಸಿದರು. ಅಂದಿನಿಂದ ಕವಿ ಅನುವಾದಕರಾಗಿದ್ದ ಪಟ್ಟಣಶೆಟ್ಟರು ಅಂಕಣ ಬರಹಗಾರಾದರು. ೧೯೯೪ಳ ಸೆಪ್ಟೆಂಬರ್, ೪ನೇ ತಾರೀಖು ಹುಬ್ಬಳ್ಳಿ-ಧಾರವಾಡ ಆವೃತ್ತಿಯೊಳಗೆ ಇವರ ಅಂಕಣ ಬರಹ ಮೊದಲೇ ನಿರ್ಧರಿಸಿದಂತೆ ಪ್ರಕಟವಾಗಬೇಕಿತ್ತು. ಆದರೆ ಸಂಪಾದಕರು ಅದನ್ನು ಪ್ರಜಾವಾಣಿಯ ಎಲ್ಲಾ ಆವೃತ್ತಿಗಳಲ್ಲಿ ಪ್ರಕಟಿಸಿದ್ದರು. ಪಟ್ಟಣಶೆಟ್ಟರಿಗೆ ಅಂಕಣ ಬರಹ ಹೊಸತಾದರೂ ಅಲ್ಲಿ ಹೊಸತನವಿತ್ತು; ಅದನ್ನು ರಾಜ್ಯದ ಜನ ಓದಿ ಆನಂದಿಸಿದರು. ಒಂದು ಪ್ರದೇಶದ ಒಂದು ಕಾಲಮಾನದ ಸಾಹಿತ್ಯಕ ಮತ್ತು ಸಾಂಸ್ಕೃತಿಕ ದಾಖಲೆಗಳನ್ನು ಇವರ ಅಂಕಣ ಬರಹಗಳಲ್ಲಿ ಕಾಣಬಹುದಾಗಿದೆ.

೧೯೯೪ಳ ಸೆಪ್ಟೆಂಬರ್ ೪ ರಿಂದ ೧೯೯೫ ಆಗಸ್ಟ್ ೨೭ರ ವರೆಗಿನ 'ಚಹಾದ ಜೋಡಿ ಚೂಡಾದ್ಹಾಂಗ' ಅಂಕಣದ ಒಟ್ಟು ಐವತ್ತೆರೆಡು ಲೇಖನಗಳು ಅದೇ ತಲೆಬರಹದಡಿಯಲ್ಲಿ ಪುಸ್ತಕ ರೂಪದಲ್ಲಿ ಹೊರಬಂದಿವೆ. ಧಾರವಾಡದ 'ಅನನ್ಯ' ಪ್ರಕಾಶನದಿಂದ ಈ ಪುಸ್ತಕ ಪ್ರಕಟಗೊಂಡಿದೆ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಆಸಕ್ತಿ ಬಹುಮುಖವಾದುದು; ಅಂಕಣ ಬರಹದ ಸ್ಥಾಯಿ 'ಗುಣಗ್ರಹಿಕೆ'ಯಾಗಿದೆ. ಇದನ್ನು ಶೆಟ್ಟರ ಅಂಕಣ ಬರಹಗಳಲ್ಲಿ ಧಾರಾಳವಾಗಿ ಕಾಣಬಹುದು. ಜಾನಪದ, ವ್ಯಕ್ತಿ, ಸಾಹಿತ್ಯ ಸಂಗೀತ, ಸಂಘಸಂಸ್ಥೆ, ಚಿತ್ರಕಲೆ, ಧಾರ್ಮಿಕ ಕಾರ್ಯ, ರಂಗಭೂಮಿ, ಕನ್ನಡ ಕಟ್ಟುವ ಕೆಲಸ ಹೀಗೆ ಮುಂತಾದ ಹಲವಾರು ವೈವಿಧ್ಯಮಯವಾದ ವಿಷಯಗಳು ಇಲ್ಲಿನ ಬರಹದ ವಸ್ತುಗಳಾಗಿವೆ. ಈ ಬರಹ ಕುರಿತು ಡಾ. ನರಹಳ್ಳಿ ಬಾಲಸುಬ್ರಮಣ್ಯಂ ಹೇಳುವ ಹಾಗೆ. ''ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಲೇಖನಗಳ ಹಿಂದೆ ಪ್ರಧಾನವಾಗಿ ಎದ್ದು ಕಾಣುವ ಅಂಶ ಜನಸಂಸ್ಕೃತಿಯನ್ನು ಎತ್ತಿ ಹಿಡಿಯುವ

ಕಾಳಜಿ ಸುತ್ತಮುತ್ತಲಿನ ಪರಿಸರದ ಬಗ್ಗೆ ಗಾಢಪ್ರೀತಿ, ಸೂಕ್ಷ್ಮ ವಿಡಂಬನೆ, ನವಿರಾದ ಹಾಸ್ಯ, ಎಚ್ಚರಿಸುವ ದನಿ, ವಿಶಿಷ್ಟತೆಯನ್ನು ಗುರುತಿಸಿ ಹೇಳುವ ಆಸಕ್ತಿ, ಈ ಎಲ್ಲವೂ ಒಂದು ವಿಶಿಷ್ಟ ಹದದಲ್ಲಿ ಪಾಕಗೊಂಡು 'ಚಹಾದ ಜೋಡಿ' ಆಪ್ತ ವಾತಾವರಣವನ್ನು ನಿರ್ಮಾಣ ಮಾಡುತ್ತದೆ. ಉತ್ತರ ಕರ್ನಾಟಕದ ಸಹಜ ಲಯದ ಭಾಷೆಯ ಸೊಗಸು ನಮ್ಮ ಅಂತರಂಗವನ್ನು ನೇರ ಮುಟ್ಟುತ್ತದೆ. ಇಂತಹ ಬರವಣಿಗೆ ಸುಲಭವಲ್ಲ; ಜನಪರ ಸಂಸ್ಕೃತಿಯ ಬಗ್ಗೆ ಪ್ರೀತಿಯಿರುವ ಮನಸು ಮಾತ್ರ ಇಂಥ ಕೆಲಸ ಮಾಡಲು ಸಾಧ್ಯ. ಪಟ್ಟಣಶೆಟ್ಟರು ತಮ್ಮ ಪ್ರತಿಭೆ, ಶ್ರಮ, ಸಮಯ ಎಲ್ಲವನ್ನು ಇಂಥ ಸಮುದಾಯದ ಚಟುವಟಿಕೆಯಲ್ಲಿ ತೊಡಗಿಸಿಕೊಂಡು ಕನ್ನಡಿಗರ ಪ್ರೀತಿ ಕೃತಜ್ಞತೆಗಳಿಗೆ ಪಾತ್ರರಾಗಿದ್ದಾರೆ.''[೧] ಪಟ್ಟಣಶೆಟ್ಟರು ವಾರಕ್ಕೊಮ್ಮೆ ಬರೆಯುವ ಈ ಅಂಕಣದಲ್ಲಿ ವ್ಯಕ್ತಿ, ಸಂಘ, ಕಾರ್ಯಕ್ರಮ ಕುರಿತು ಬರೆಯುವಾಗ ಪ್ರತ್ಯೇಕವಾದ ಪರಿಚ್ಛೇದಗಳಲ್ಲಿ ಬರೆಯುತ್ತಾರೆ. ಯಾವುದೇ ವ್ಯಕ್ತಿಯ ಬಗ್ಗೆ ಬರೆಯುವಾಗ ಅದು ಕೇವಲ ವರದಿಯಾಗಿರುವುದಿಲ್ಲ. ಓದುಗರಿಗೆ ಗೊತ್ತಿಲ್ಲದ ಎಷ್ಟೋ ಮುಖ್ಯವಾದ ವಿಚಾರಗಳನ್ನು ಕುರಿತು ಹೇಳುತ್ತಾರೆ. ಸಿತಾರರತ್ನ ರಹಮತ್‌ಖಾನರ ಬಗ್ಗೆ ಬರೆಯುತ್ತಾರೆ. ''ರಹಮತ್‌ಖಾನರು ಭಾವನಗರದ ರಾಜ ಆಸ್ಥಾನದೊಳಗೆ ಸಂಗೀತಗಾರರಾಗಿದ್ದ ಗುಲಾಂ ಹುಸೇನ್‌ಖಾನರ ಮಗ, ಅವರು ಇಂದೂರು ರತ್‌ಲಾಂ ಮುಂತಾದ ದರಬಾರಗಳಲ್ಲಿ ಆರಾಮಾಗಿ ಇರಬಹುದಿತ್ತು. ಆದರೆ ಧಾರವಾಡದ ಭಾಗ್ಯ ಅವರನ್ನ ಇಲ್ಲಿ ಉಳಕೊಂಡ ತಮ್ಮ ಅಬ್ಬಾಜಾನರಿಂದ ಗ್ವಾಲಿಯರ್ ಘರಾಣದ ಗಾಯಕೀ ಮತ್ತು ಸೋದರ ಮಾವನಿಂದ ಸಿತಾರ್‌ವಾದನ ಕಲಿತ ರಹಮತ್ ಸಾಹೇಬರು ಹಜೀಬ್‌ಖಾನರಿಂದ ಬೀನ್, ಸಿತಾರ ಕಲಿತರು. ಲಿಬಂಡಿ ರಾಜರ ಆಸ್ಥಾನದೊಳಗೆ ಒಮ್ಮೆ ಎರಡೂ ವಾದ್ಯ ಬಾರಿಸಿ ತಮ್ಮ ಗುರುಗಳ ಪ್ರೀತಿಗೆ ಪಾತ್ರರಾದರು. ಆಮ್ಯಾಲೆ ಅನೇಕ ಕಡೆ ಕಛೇರಿ ನಡೆಸಿದರು. ಇಂದೂರು ರಾಜರ ಆಸ್ಥಾನ ಸೇರಿ ಬಂದೇ ಅಲಿಖಾನರ ಶಿಷ್ಯರಾದರು. ಮುಂದೆ ಅವರ ಸಲಹೆ ಪ್ರಕಾರ ಸಿತಾರದ ಕಡೇನ ಲಕ್ಷ್ಯ ಹಾಕಿ ತಮ್ಮದರ ಕೂಡ ಆದರೆ ನಸೀಬ ಬದಲಿಸಿ ಬಿಟ್ಟರು. ಹಿಂಗಾಗಿ ಮೊದಲಿನ ಕುಬ್ಜ ಸಿತಾರಕ್ಕೆ ಗುರುತ್ವ ಬಂದು ಬಿಟ್ಟಿತು. ಮುಂಬೈದಾಗ ಪಲುಸ್ಕರ್, ಭರತ್‌ಖಂಡೆಯವರ ಸಂಪರ್ಕದಿಂದ ಮತ್ತಷ್ಟು ಮುಂದೆ ಬಂದರು. ಅಷ್ಟ ಸತ್ತಮ್ಯಾಲ ಪುಣೆದಾಗ ನೆಲೆಸಿದರು. 'ಭಾರತ ಗಾಯನ ಸಮಾಜ' ಸ್ಥಾಪಿಸಿ ಸಾಮಾನ್ಯರಿಗೆ ಸೈತ ಸಿತಾರ ಕಲಿಸಿದರು. ಅದರ ಸಾಲ್ಯಾಗ ಭಾಸ್ಕರಬುವಾ ಬಾಖಲೆ ಸಂಗೀತ ಕಲಿಸುತ್ತಿದ್ದರು. ೧೯೧೧ರೊಳಗೆ ಮೈಸೂರಿನ ಆನೇ ಕೃಷ್ಣರಾಜ ಒಡೆಯರ ಮತ್ತು ವೀಣೆ ಶೇಷಣ್ಣನವರ ಮನಸ್ಸು ಗೆದ್ದರು. ಆದರೆ ಆಸ್ಥಾನದೊಳಗೆ ಇರಾಕ ಒಪ್ಪಲಿಲ್ಲ. ದಾರ್‍ಯಾಗ ನೋಡಿದ ಧಾರವಾಡ ಅವರ ಮನಸ್ಸು ಹಿಡಿದಿತ್ತು. ೧೯೧೨ ರಿಂದ ಖಾನ್ ಸಾಹೇಬರು ಇಲ್ಲೆ ಝುಂಡಾ ಹಾಕಿದರು.''[೨] ಇದೇ ರೀತಿಯಾಗಿ ''ಪ್ರೇಕ್ಷಕರನ್ನು ಎಂಟು ಶತಮಾನದ ಹಿಂದಕ್ಕೆ ಕರೆದೊಯ್ವ ವೀರಣ್ಣ' ಎನ್ನುವ ತಲೆ ಬರಹದಡಿ ಜಾನಪದ ಕಲಾವಿದರಾದ ಬೆಳಗಲ್ಲು ವೀರಣ್ಣನವರ ತೊಗಲು ಗೊಂಬೆಯಾಟದ ಹಿರಿಮೆಯನ್ನು ರಂಗಭೂಮಿಯ ಕೊಡುಗೆಯನ್ನು ಕುರಿತು ಅಮೂಲ್ಯವಾದ ಮಾಹಿತಿ ನೀಡುತ್ತಾರೆ. ''ಬಳ್ಳಾರಿ ಹತ್ತಿರದ ಬೆಳಗಲ್ಲಿನ ಕಿಳ್ಳೀಕ್ಯಾತರ ಮನೆತನದ ದೊಡ್ಡ ಹನುಮಂತಪ್ಪನ ಮಗ ವೀರಣ್ಣಗೆ ಈಗ ೬೦ ವರ್ಷ ಇವರು ಬಾಲ್ಯದಿಂದಲೇ ಬಯಲಾಟಗಳಲ್ಲಿ ಬಾಲಪಾತ್ರ, ಸ್ತ್ರೀಪಾತ್ರ, ಹಾಸ್ಯಪಾತ್ರಗಳನ್ನು ಮಾಡುತ್ತಿದ್ದರು. ಅಪ್ಪ ಬಯಲಾಟದ ಮಾಸ್ತರ್ ಅವರ ಆಶೀರ್ವಾದ, ಮಾವ ಹೂಲೆಪ್ಪನವರು ಕೊಟ್ಟ ತೊಗಲು ಗೊಂಬೆಗಳ ಬಂಡವಾಳ ಇಟಗೊಂಡು ಬೆಂಗಳೂರಿನ ಕಲಾಕ್ಷೇತ್ರದೊಳಗೆ ಆಡಿಸಿದ ಪಂಚವಟಿ ಗೊಂಬೆಯಾಟದಿಂದ ಉತ್ತಾಹಿತರಾದ ವೀರಣ್ಣ ಹಿಮ್ಮೇಳದಿಂದ ಮುಮ್ಮೇಳಕ್ಕೆ ಬಂದರು.

ಆಗ ಇವರಿಗೆ ಆರ್ಥಿಕ ಮತ್ತು ನೈತಿಕ ಬಲ ನೀಡಿದವರು ಕಮಲಾದೇವಿ ಚಟ್ಟೋಪಾಧ್ಯಾಯ. ಅವರು ಮುಂದ ನಾಗಪುರದ ರಾಷ್ಟ್ರೀಯ ಕಲಾಉತ್ಸವ, ದಿಲ್ಲಿಯ ಅಪ್‌ನಾ ಉತ್ಸವದೊಳಗ ವೀರಣ್ಣನ ತೊಗಲು ಗೊಂಬೆಗಳ ಆಟ ಆಗಿ ದೇಶದ ತುಂಬ ಹೆಸರು, ಜೋಳದರಾಶಿ ದೊಡ್ಡನಗೌಡರು, ಟಿ. ರಾಘುವಾಚಾರ್, ವಾಯ್.ಎಂ. ಚಂದ್ರಯ್ಯಸ್ವಾಮಿ, ಮುಂತಾದವರಲ್ಲಿ ಪಡೆದ ನಾಟ್ಯಶಿಕ್ಷಣದ ಬಲದಿಂದ ಸ್ವಾತಂತ್ರ್ಯ ಸಂಗ್ರಾಮ ಗಾಂಧೀ ಇತ್ಯಾದಿ ತಯಾರಿಸಿ ಪರಂಪರೆಗೆ ಹೊಸ ಆಯಾಮ ನೀಡಿದರು. ಸಾಲಿ ಕಟ್ಟೆಯನ್ನೇ ಹತ್ತಿರದಿದ್ದ ವೀರಣ್ಣ ಅನೇಕ ಹಳಗನ್ನಡ ಕಾವ್ಯಗಳನ್ನ ಬಾಯಿಪಾಠ ಹೇಳ್ತಾರೆ. ಭಾಷಾಶುಟ್ಟಿ, ಅರ್ಥಧಾರಿತ್ವ ಸಂಗೀತ ಜ್ಞಾನ ತುಂಬಿದ ಕಂಚಿನಕಂಠದ ಧಣಿ ಈತ.[೩] ಇಂತಹ ವರದಿಗಳ ಹಿಂದೆ ಪಟ್ಟಣಶೆಟ್ಟಿಯವರ ಶ್ರಮ, ಸಂಶೋಧನಾ ಪ್ರವೃತ್ತಿಗಳು ಇರುವುದು ಕಂಡುಬರುತ್ತದೆ. ಇದೇ ರೀತಿಯಾಗಿ ಪಂಚಾಕ್ಷರಿ ಗವಾಯಿಗಳು, ಪುಟ್ಟರಾಜ ಗವಾಯಿಗಳು, ಮೇಧಾಪಾಟ್ಕರ್, ನರಸಿಂಹಲು ವಡವಾಟ, ಬೆಟ್ಟದೂರು ಶಂಕರಗೌಡರು ಮುಂತಾದವರನ್ನು ಕುರಿತು ಒಳ್ಳೆಯ ಮಾಹಿತಿಯನ್ನು ಈ ಅಂಕಣದಲ್ಲಿ ನೀಡಿದ್ದಾರೆ.

ಉತ್ತರ ಕರ್ನಾಟಕದ ಸಾಂಸ್ಕೃತಿಕ ಆಗುಹೋಗುಗಳೇ ಈ ಅಂಕಣ ಬರಹಗಳ ಮೂಲವಸ್ತುವಾಗಿದ್ದರೂ ಪಟ್ಟಣಶೆಟ್ಟರು ಬೇರೆ ಕಡೆ ಹೋದಾಗಿನ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ದಾಖಲಿಸುತ್ತಾರೆ. ಶಿವಮೊಗ್ಗ, ಬೆಂಗಳೂರು, ಮೈಸೂರು, ದೆಹಲಿಯ ಅನುಭವಗಳನ್ನು ಕುರಿತು ಹೇಳುತ್ತಾರೆ. ಪ್ರತಿಭೆಯುಳ್ಳ ವ್ಯಕ್ತಿಗಳು ತಮ್ಮ ಕ್ಷೇತ್ರದಲ್ಲಿ ಮುಂದೆ ಬರದೆ ಕಾರಣಾಂತರಗಳಿಂದ ಹಿಂದೆ ಉಳಿಯುವುದನ್ನು ಕಂಡು ಖೇದ ವ್ಯಕ್ತಪಡಿಸುತ್ತಾರೆ. 'ಕುಂಚ ಬಿಟ್ಟು ರಂಟೀ ಹೊಡೆಯುವ ಶಂಕರಗೌಡ' ಎನ್ನುವ ಶೀರ್ಷಿಕೆಯ ಅಡಿಯಲ್ಲಿ ಚಿತ್ರಕಲಾವಿದರಾದ ಬೆಟ್ಟದೂರು, ಶಂಕರಗೌಡರನ್ನು ಕುರಿತು ಹೆಳುತ್ತಾರೆ. ''ಈಗ ಚಿತ್ರಮಾಡಲಾದ ವಿಚಿತ್ರ ವಿಧಿಗೆ ತುತ್ತಾದ ಶ್ರೀಮಂತ ಕಲಾಕ್ಷೇತ್ರಕ್ಕೆ ಕಳೆದುಹೋದ ಈ ಪ್ರತಿಭಾವಂತನ ಕಲೆಯನ್ನು ಪ್ರತಿನಿತ್ಯ ಸಾವಿರಾರು ಜನ ದಿಲ್ಲಿಯ ಬಿರ್ಲಾ ಭವನದೊಳಗೆ ನೋಡತಾರ, ಮೆಚ್ಚುತಾರ, ಈತ ಮಾತ್ರ ಕ್ಯಾನ್‌ವಾಸ್ ಮ್ಯಾಲ ಕುಂಚ ಆಡಿಸೋದು ಬಿಟ್ಟು. ಬೆಟ್ಟದೂರು ಹೊಲದಾಗ ರೆಂಟೀ ಹೊಡ್ಯಾಕ್ಹತ್ತಾರ. ಒಂದು ರೀತಿಲೆ ಇದೂ ನೆಲೆದ ಕಲಾ ಅಂತ ನೀವೂ ಕಲಾಬಿಲಾ ಮಾಡಬಹುದು. ಆದರೆ ಅದನ್ನ ಹ್ಯಾಂಗ ಒಪ್ಪೋದುರಿ?''[೪] ಎಂದು ಪ್ರಶ್ನಿಸುತ್ತಾರೆ. ರಜಕಾರರ ವಿರುದ್ಧ ಹೋರಾಡದ ಗೌಡರು ಶಾಂತರಸರ ಸಲಹೆಯಂತೆ ರವೀಂದ್ರನಾಥ ಟ್ಯಾಗೋರರ ಶಾಂತಿನಿಕೇತನಕ್ಕೆ ಹೋಗಿ ಪ್ರಸಿದ್ಧ ಚಿತ್ರಕಲಾವಿದ ನಂದಲಾಲರ ಶಿಷ್ಯರಾಗಿ ವಿದ್ಯಾ ಕಲಿತರು. ಭಾರತೀಯ ಚಿತ್ರಶೈಲಿ ಬಂಗಾಲಿ ಜಾನಪದ ಕಲಾ ಮತ್ತು ನವ್ಯಶೈಲಿಯಲ್ಲಿ ಪರಿಣಿತಿ ಪಡೆದವರು ಖ್ಯಾತ ಚಿತ್ರಕಲಾವಿದರಾದ ಕೃಪಾಲ್‌ಸಿಂಗ ಜೊತೆಗೆ ೧೯೫೫ ರಿಂದ ೧೯೫೮ರ ವರೆಗೆ ಮೂರು ವರ್ಷಗಳ ಕಾಲ ದೆಹಲಿಯ ಬಿರ್ಲಾ ಭವನದೊಳಗೆ ಗಾಂಧೀ ಜೀವನ ಚಿತ್ರಿಸಿದರು. ಹುಟ್ಟು ಶ್ರೀಮಂತರಾದ ಗೌಡರಿಗೆ ಕಲೆಯ ಹಸಿವಿತ್ತು. ಆದರೆ ತಂದೆಯವರ ಒತ್ತಾಯಕ್ಕೆ ಕಟ್ಟಿಬಿದ್ದು ಕೃಷಿಗೆ ನಿಂತರು. ಇದು ಕಲಾಕ್ಷೇತ್ರಕ್ಕೆ ಆದ ಅನ್ಯಾಯ ಎಂದು ಪಟ್ಟಣಶೆಟ್ಟರು ಹೇಳುತ್ತಾರೆ.

ಎಲೆಮರೆಯ ಕಾಯಿಯಂತೆ ಬಾಳಿದ ಕಲಾ ಜೀವಗಳಾದ ಗೀಗಿಪದದ ಗಾಯಕಿ ಫಕೀರವ್ವ ಗುಡಿಸಾಗರ, ರಾಯಚೂರಿನ ಗಜಲ್ ಗುಂಡಮ್ಮ, ಕಮತಗಿಯ ಜಂಪಣ್ಣವಂದನೂರು ಮುಂತಾದವರ ಕಲೆಯನ್ನ ಕುರಿತು

ಬರೆಯುತ್ತಾರೆ. ಜಂಪಣ್ಣ ವಂದಗನೂರು ಹುಟ್ಟುಗುರುಡನಾದರೂ ಅದ್ಭುತ ಕಲಾವಿದ. ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಡೆದ ರಂಗಗೀತೆಗಳ ಕಾರ್ಯಕ್ರಮದಲ್ಲಿ ಜಂಪಣ್ಣ ಹಾರ್ಮೋನಿಯಂ ಉಲ್ಟಾ ಇಟ್ಟು ಬಾರಿಸಿದ. ಎಲ್ಲಾ ಬೆರಳುಗಳನ್ನು ಮಡಿಚಿ ಮುಟಗೀಲೆನ್ ರಾಗ ನುಡಿಸಿದ. ಎಂಥಾ ಕೈಚಳಕ ಈತ ಹಾರ್ಮೋನಿಯಂ ನುಡಿಸುವುದೆಂದರೆ ರೇಶಿಮ ಎಳೀ ತಗದ್ಹಾಂಗ. ಇಳಕಲ್ಲ ಸೀರೆ ನೋಡ್ಹಾಂಗ ಎಂದು ಮೆಚ್ಚುಗೆ ವ್ಯಕ್ತಪಡಿಸುತ್ತಾರೆ. ಹೆಬ್ಬಾಳದ ಗುಡಿಸಾಗರ ಫಕ್ಕೀರವ್ವ ಆರು ವರ್ಷದಾಗ ಇದ್ದಾಗಿನಿಂದ ಗೀಗಿಪದ ಹಾಡಿಕೊಂತ ಬಂದಾಕಿ. ದೇವದಾಸಿ ಮನೆತನದಿಂದ ಬಂದ ಫಕ್ಕೀರವ್ವ ಹರದೇಸಿ-ನಾಗೇಸಿ ಹಾಡಿದರ ಆಕಿನ್ನ ಮೀರಿಸುವವರು ಯಾರೂ ಇಲ್ಲ ಎನ್ನುವ ಹಾಗೆ ಹಾಡುತ್ತಾಳೆ. ''ನಾನು ಬಡತನದಿಂದ ಬಂದಾಕಿ ಒಂದು ಹೊತ್ತಿನ ಕೂಳು ಸಿಗೋದು ತ್ರಾಸಿತ್ತು. ಸರಕಾರ ಪ್ರಶಸ್ತಿ ಸಹಾಯ ಮಾಡಬಹುದು ಅಂತನಾ ಹಾಡುವಾಕಿ ಅಲ್ಲ. ನನ್ನ ಮನ ಸಂತೋಷಕ್ಕಾಗಿ ನಾ ಹುಡುತ್ತೇನೆ.''[೫] ಎಂದು ಆಕೆಯ ಅಭಿಪ್ರಾಯ ದಾಖಲಿಸಿ ನಿಜವಾದ ಕಲಾವಿದ ಅಂದ್ರೆ ತನ್ನದೇ ಆದ ಗುಂಗಿನಾಗ ಇರಬೇಕು ಎಂದು ಹೇಳುತ್ತಾರೆ.

ರಾಯಚೂರಿನ ಹಾಡುವ ಹಕ್ಕಿ ಗಜಲ್ ಗುಂಡಮ್ಮ ಅನಕ್ಷರಸ್ಥೆ ಮಾತನಾಡುವುದು ಕನ್ನಡ ಹಾಡುವುದು ಉರ್ದು ಐದಾರು ವರ್ಷವಿದ್ದಾಗ ಗಾಂಧೀಜಿಯ ಕೈ ಹಿಡಿದು ಗುಲಬುರ್ಗದ ಶರಣಬಸವೇಶ್ವರರ ಗುಡಿಗೆ ಹೋಗಿದ್ದಳಂತೆ ಹಾರ್ಮೋನಿಯಂ ಸ್ವತಃ ಬಾರಿಸುತ್ತಾ ಸುಮಾರು ಎರೆಡುವರೆ ತಾಸು ಹಾಡುತ್ತಾಳೆ. ಕೇಳುಗರನ್ನು ನಾದಲೋಕಕ್ಕೆ ಕರೆದೊಯ್ಯುಯುತ್ತಾಳೆ. ಆದರೆ ಆಕೆಯದು ದುರಂತ ಜೀವನ ಕುಡಿಯಲಾರದೆ ನಿದ್ದೆ ಮಾಡಲಾರಳು ತುಂಬು ಬಡತನದೊಳಗೆ ಶ್ರೀಮಂತ ಗಾಯನವಿದೆ. ಹೈದರಾಬಾದ್ ನವಾಬೀ ಸಂಸ್ಕೃತಿಯ ಸಂಗೀತದ ಸ್ವಚ್ಛರುಚಿ ಈಕೆಯ ಗಂಟಲಿನಲ್ಲಿ ಹರಿಯುತ್ತಾ ಇದೆ. ಸಾಂತರಸರು ಈ ಗಾಯಕಿಯನ್ನು ಕನ್ನಡಿಗರಿಗೆ ಪರಿಚಯ ಮಾಡಿಸಿದ್ದಾರೆ. ಅದು ನಮ್ಮೆಲ್ಲರ ಭಾಗ್ಯ ಎಂದು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಒಬ್ಬ ಸೃಜನಶೀಲ ಬರಹಗಾರರು. ಅಂಕಣ ಬರಹ ಅಥವಾ ವರದಿ ಸೃಜನ ಶೀಲತೆಯನ್ನೆ ಬಯಸುವುದಿಲ್ಲವೆಂಬ ಸಾಮಾನ್ಯ ಮಾತು ಚಾಲ್ತಿಯಲ್ಲಿದೆ. ಇದು ತಪ್ಪು ಜಿ.ಎನ್. ರಂಗನಾಥರಾವ್ ಅವರು ಹೇಳುವಂತೆ ''ಉಳಿದೆಲ್ಲಾ ಸಾಹಿತ್ಯ ಪ್ರಕಾರಗಳಂತೆ ಅಂಕಣಸಾಹಿತ್ಯ ಬರಹಗಾರನ ಸೃಜನಶೀಲ ಪ್ರತಿಭೆಯನ್ನು ಬೇಡುವಂತದ್ದು ಕತೆ. ಕಾವ್ಯ ನಾಟಕಗಳ ರಚನೆಯಂತೆ ಅಂಕಣ ಗೊತ್ತಾದ ವೇಳೆ ಅದು ಸಂಪಾದಕನ ಮೇಜಿನ ಮೇಲಿರಬೇಕು ಹಾಗೆಂದು ಈ ಪ್ರಕಾರ ಲೇಖಗಳಿಗೆ ಮುಲಾಜನ್ನೇನೂ ತೋರುವುದಿಲ್ಲ. ಲೇಖಕನ ಸೃಜನಶೀಲ ಪ್ರತಿಭೆಯನ್ನು ಸಂಪೂರ್ಣವಾಗಿ ದುಡಿಸಿಕೊಂಡು ಮೈಪಡೆಯುತ್ತದೆ.''[೬] ಅನೇಕ ಸಲ ಶೆಟ್ಟರ ಅಂಕಣ ಬರಹದ ಶೈಲಿ ಕಾವ್ಯಮಯತೆಯನ್ನು ಪಡೆಯುತ್ತದೆ. 'ಚಹಾದ ಜೋಡಿ ಚೂಡಾದ್ಹಾಂಗ, ಬೇಂದ್ರೆ ಮೋಡಿಮಾಡಿದ್ಹಾಂಗ.' ಪದಗಳ ಕೂಡ ಆಟಆಡಿ, ಎದುರಿಗೆ ಬಂದರೆ ಮಾಟಮಾಡಿ ಪಂಡಿತ ಬಸವರಾಜ ಅವರ ಹಾಡುಗಾರಿಕೆಯೆಂದರೆ ಶುದ್ಧ ಪೂಜೆ ಇದ್ದಹಾಗೆ. ಭಾವಸುದ್ದಿ, ಚೊಕ್ಕ ಸಾಹಿತ್ಯ, ಸ್ಪಷ್ಟಸ್ವರ ಪ್ರಯೋಗ ಪರಿಣಿತಿ ತೋರಿದ ಬಸವರಾದ ಸ್ವರಾಧಿಪತಿ, ಶಂಕರಾಚಾರ್ಯರ ಶ್ಲೋಕ. ಸೂರದಾಸರ ಪದಗಳನ್ನ ಹಾಡಿದಾಗ ಅವರ ಒಂದೊಂದು ಶಬ್ದಾನೂ ಮಗನ ಬಾಯಾಗ ತಾಯಿ ತುತ್ತು ಉಣಿಸಿದ್ಹಾಂಗ ಅನಸತಿತ್ತು. ಗಂಗೂಬಾಯಿ ಹಾನಗಲ್ಲರು ಕನಕಪುರಂದರ ಪ್ರಶಸ್ತಿ ಸ್ವೀಕರಿಸಿದ್ದನ್ನು

'ಹಾಡಿ ಹಾಡಿ ಯುದ್ಧಗೆದ್ದ ರಾಣಿಹಂಗ' ಎಂದು ಗಂಗೂಬಾಯಿಯವರ ಪಾದದ ಮೇಲೆ ಬಿದ್ದ ಹೂವಿನ ರಾಶಿಯನ್ನು ಬುದ್ಧನ ಸುತ್ತಲೂ ಬೆಳಕು ಇದ್ದಾಂಗ ಎಂದು ನಮ್ಮ ಕಾಲದೊಳಗೆ ನಮ್ಮ ನಡುವನ ಬದುಕಿದ ಅಪರೂಪದ ಅಪರಂಜಿ ಈ ತಾಯಿ ಎಂದು ಗೌರವದ ಮಾತುಗಳನ್ನ ಬರೆದಿದ್ದಾರೆ. ಗೋಕಾಕ ತಾಲೂಕಿನ ಮಮದಾಪುರದ ಡಾ.ಡಿ.ಸಿ. ಪಾವಟೆಯವರು ಇಡೀ ಉತ್ತರ ಕರ್ನಾಟಕವನ್ನು ತನ್ನ ಮಮತಾ ಪುರವನ್ನಾಗಿಸಿ ಕರ್ನಾಟಕ ವಿಶ್ವವಿದ್ಯಾಲಯ ಎಂಬ ಆಡಂಬೋಲದೊಳಗೆ ಆಡಿಸಿಬೆಳೆಸಿದ ಪದ್ಮಭೂಷಣ ಪುಣ್ಯಪ್ರಾಣ. ೧೪ ವರ್ಷ ಚಾನ್ಸಲರ್ ಆಗಿ ಈ ಭಾಗದ ಕಣಕಣದೊಳಗೆ ಸಂಜೀವಿನಿ ಬೆರೆಸಿದ ಮಹಾಚೇತನ. ಈತನ ಇಡೀ ಬದುಕು ಸದುದ್ದೇಶಮುಖವಾದ ಪ್ರತಿಭಾ ಪ್ರಮಾಣ ಕರ್ನಾಟಕ ವಿಶ್ವವಿದ್ಯಾಲಯ ಸರ್ವತೋಮುಖ ಅಭಿವೃದ್ಧಿಯ ನೇತಾರ ಎಂದು ದಾಖಲಿಸುತ್ತಾರೆ.

ಜಿ.ಎಸ್. ರಂಗನಾಥರಾವ್ ಅವರು ಈ ಅಂಕಣ ಬರಹದ ಭಾಷಾ ವಿಶಿಷ್ಟತೆಯನ್ನು ಕುರಿತು ಹೀಗೆ ಹೇಳುತ್ತಾರೆ. ಚಹಾದ ಜೋಡಿ ಚೂಡಾದ್ಹಾಂಗ ಅಂಕಣದ ಪ್ರಬಲ ಸೆಳೆತವೆಂದರೆ ಸಿದ್ಧಲಿಂಗ ಪಟ್ಟಣಶೆಟ್ಟರ ಭಾಷೆ ಮತ್ತು ಶೈಲಿ. ಸಾಹಿತ್ಯ ಯಾವುದೇ ಪ್ರಕಾರದಲ್ಲಿರಲಿ, ಅದು ನಮ್ಮದಾಗುವುದು ಅದರೊಂದಿಗೆ ನಮಗೆ ಹೃದಯ ಸಂವಾದ ಅಥವಾ ಮಾತುಕತೆ ಸಾಧ್ಯವಾದಾಗ ಭಾಷೆಯ ಈ ಪರಿಯ ಸಂವಹನ ಶಕ್ತಿ ವಿಸ್ಮಯಕರವಾದದ್ದು ಅದು ದೇಶೀಯವಾದಾಗಲಂತೂ ಸೂಜಿಗಲ್ಲಿನಂತೆ, ಸೂಜಿಮಲ್ಲಿಗೆಯಂತೆ ನಮ್ಮನ್ನು ಆಕರ್ಷಿಸಿ ಬಿಡುತ್ತದೆ. ಸಿದ್ದಲಿಂಗ ಪಟ್ಟಣಶೆಟ್ಟಿಯವರ ಈ ಅಂಕಣದ ಯಶಸ್ಸಿನ ಗುಟ್ಟು ಇಲ್ಲೇ ಇರುವುದು. ಉತ್ತರ ಕರ್ನಾಟಕದ ನಾದಮಯ, ಕಾವ್ಯಮಯ, ದೇಶಿಯ ಲಾಸ್ಯವನ್ನು ಇಲ್ಲಿ ಕಾಣಬಹುದು ಎಂದೇ ಈ ಅಂಕಣ ಪ್ರಾರಂಭವಾದ ಕೆಲವು ವಾರಗಳಲ್ಲಿ ಕೇಳಿಬಂದ ಸ್ವಾಗತಾರ್ಹ ಪ್ರತಿಕ್ರಿಯೆಗಳಲ್ಲಿ ಒಂದನ್ನು ಮಾದರಿಯಾಗಿ ಇಲ್ಲಿ ಎತ್ತಿಕೊಳ್ಳಬಹುದು. 'ರಾಜಾಜೀನಗರದ ಮನ್ಯಾಗ ಕುಂತು ಧಾರವಾಡದೊಳಗಿನ ಅಜ್ಜ, ಅಮ್ಮ, ಅಪ್ಪ-ಅವ್ವ, ಗೆಳ್ಯಾ-ಗೆಳತಿಯರ ಜೋಡಿ ಮಾತಾಡಿದಂಗೈತ್ರಿ' ಒಂದು ಅಂಕಣದ ಯಶಸ್ಸಿಗೆ ಇದಕ್ಕಿಂತ ಮಿಗಿಲಾದ ಪ್ರಸಂಶೆಬೇಕೆ''[೬] ಒಂದು ಪ್ರದರ್ಶನ ಆಡು ಭಾಷೆಗೆ ವಿಶಿಷ್ಟ ಶಕ್ತಿಯೊಂದಿರುತ್ತದೆ. ಓದುಗ ಆರಂಭದಲ್ಲಿ ಅರ್ಥಮಾಡಿಕೊಳ್ಳಲು ತಡಬಡಾಯಿಸಿದರೂ ನಂತರ ಅದರ ಚುಂಬಕ ಶಕ್ತಿಗೆ ಒಳಗಾಗುತ್ತಾನೆ. ಪಟ್ಟಣಶೆಟ್ಟರು ಬಳಸಿದ ಭಾಷೆಯಲ್ಲಿ ಅಂತಹ ಶಕ್ತಿಯಿದೆ. ಹೇಳಬೇಕಾದ ವಿಷಯವನ್ನು ಬಹಳ ಆಪ್ತವಾದ ದಾಟಿಯಲ್ಲಿ ಅಂತಕರಣ ಮುಟ್ಟುವಂತೆ ಹೇಳುತ್ತಾರೆ. ಇದಕ್ಕಿಂತ ಮೊದಲೇ ಲಂಕೇಶ ಪತ್ರಿಕೆಯಲ್ಲಿ ಹಳೇ ಮೈಸೂರಿನ ಆಡುಭಾಷೆಯನ್ನು ಬಳಸಿ ಚಂದ್ರೇಗೌಡರು ಧಾರವಾಡದ ಆಡು ಭಾಷೆಯನ್ನು ಬಳಸಿ ಪುಂಡಲೀಕ ಸೇಟ ರಾಜಕೀಯ ವಿಡಂಬನೆಯ ಅಂಕಣಗಳನ್ನು ಬರೆಯುತ್ತಿದ್ದರು. ಆದರೆ ಸಾಂಸ್ಕೃತಿಕ ವಲಯಕ್ಕೆ ಸಂಬಂಧಿಸಿದಂತೆ ಆಡುನುಡಿಯನ್ನು ಬಳಸಿ ಯಸಶ್ವಿಯಾದವರಲ್ಲಿ ಸಿದ್ದಲಿಂಗಪಟ್ಟಣಶೆಟ್ಟರೇ ಮೊದಲಿಗರು.

ಸಿದ್ಧಲಿಂಗ ಪಟ್ಟಣಶೆಟ್ಟರ ಅಂಕಣ ಬರಹದೊಳಗೆ ಐತಿಹಾಸಿಕ ಮತ್ತು ಸಮಕಾಲೀನ ವ್ಯಕ್ತಿಗಳನ್ನು, ಅವರ ಸಾಧನೆಗಳನ್ನು, ಅವರ ವಿಶಿಷ್ಟ ವ್ಯಕ್ತಿತ್ವವನ್ನು ನೋಡಬಹುದಾಗಿದೆ. ನೇತಾಜಿ ಸುಭಾಷಚಂದ್ರಭೋಸರ ಜೀವನ ನಮ್ಮ ದೇಶದ ದೊಡ್ಡ ದುರಂತ ನಾಟಕ ಅವರು ಧಾರವಾಡಕ್ಕೆ ಬಂದು ಹೋಗಿ ೫೭ ವರ್ಷ ತುಂಬಿದವು. ೧೯೩೯ ಜುಲೈ ೧೨, ೧೩, ೧೪ ಮೂರು ದಿವಸ ಸುಭಾಷರು ಧಾರವಾಡ, ಹುಬ್ಬಳ್ಳಿ, ಹಾವೇರಿ, ಬ್ಯಾಡಗಿಯೊಳಗೆ ಕಳೆದಿದ್ದರು ಎಂದು ಹೇಳುತ್ತಾರೆ. ಕರ್ನಾಟಕದ ಉಕ್ಕಿನ ಮನುಷ್ಯ ಹಳ್ಳಿಕೇರಿ ಗುದ್ಲೆಪ್ಪ, ಸಂ.ಶಿ. ಭೂಷನೂರು ಮಠ, ಬೆಟಗೇರಿ

ಕೃಷ್ಣಶರ್ಮ, ಆರ್.ಸಿ. ಹಿರೇಮಠ, ನಿಡಸೂಸಿ ಮಠದ ಶಿವಲಿಂಗಸ್ವಾಮಿಗಳು ಪೋಲಿಸ್ ಕಮೀಷನರ್ ಕೆ.ಎಸ್. ಮಂಡೆಗಾರ ನೃತ್ಯ ಪಟುವಾದ ಪುತ್ರಿಗೆ ವೆಂಕಟರಮಣ ಉಪಾಧ್ಯಾಯ, ರಂಗಭೂಮಿಯನ್ನು ಸದಾಚಾಲನೆಯಲ್ಲಿಟ್ಟಿರುವ ಸದಾನಂದ ಕನವಳ್ಳಿ, ಶಿ.ಶಿ. ಬಸವನಾಳ ಮುಂತಾದವರನ್ನು ಕುರಿತು ಉಪಯುಕ್ತ ಮಾಹಿತಿಯನ್ನು ನೀಡುತ್ತಾರೆ.

ಪುಟ್ಟರಾಜಗವಾಯಿಗಳು ಭಾರತದ ಮಹದಾಶ್ಚರ್ಯಗಳಲ್ಲಿ ಒಂದು. ಪಂಚಾಕ್ಷರಿಗವಾಯಿಗಳ ಎಲ್ಲಾ ಆಶೋತ್ತರಗಳನ್ನು ಉಳಿಸಿದ ಬೆಳೆಸಿದ ಸಂಗೀತ ದಾಸೋಹಿ ಕಾಯಕದಲ್ಲಿ ತೊಡಗಿ ಕನ್ನಡ, ಸಂಸ್ಕೃತ, ಹಿಂದೀ ಭಾಷೆ, ವ್ಯಾಕರಣ ಕಲಿತು ಶ್ರೇಷ್ಠ ಕೃತಿಗಳನ್ನು ರಚಿಸಿದ್ದಾರೆ. ತಾವು ಕಲಿತದ್ದನ್ನೆಲ್ಲಾ ಶಿಷ್ಯರಿಗೆ ಧಾರೆಯೆರೆಯುವ ವಿರಳ ಗುರುಗಳು. ಅವರು ಸ್ವಾತಂತ್ರ ಹೋರಾಟ ಕಾಲದಿಂದಲೂ ಖಾದಿ ಧಾರಿಗಳು ನಾಟಕ ಕಂಪನಿ ಕಟ್ಟಿದರು. ಕಂಪನಿ ನಷ್ಟದಲ್ಲಿದ್ದರೂ ಕಲಾಪ್ರೀತಿಯಿಂದ ಮುನ್ನಡೆಸಿದರು. ಸಿದ್ಧರಾಮೇಶ್ವರ, ಸತಿಸುಕನ್ಯಾ, ಸತ್ಯಸಂಕಲ್ಪ ಹೇಮರೆಡ್ಡಿ ಮಲ್ಲಮ್ಮ ಮುಂತಾದ ೨೨ ನಾಟಕಗಳನ್ನು ಬರೆದು ಆಡಿಸಿದರು. ೧೫ ಪುರಾಣಗಳನ್ನು ೮ ಚರಿತ್ರೆಗಳನ್ನು ಧಾರ್ಮಿಕ ಗ್ರಂಥಗಳನ್ನು ೮ ಸಂಸ್ಕೃತ ಮೀಮಾಂಸೆ ಕೃತಿ, ಬಸವ ಪುರಾಣ, ಸಿದ್ಧಲಿಂಗ ವಿಜಯ, ೬ ಹಿಂದೀ ಕಾವ್ಯ, ೬ ಸಂಗೀತಶಾಸ್ತ್ರ ಒಂದು ಸಾವಿರ ವಚನಗಳ ವಚನಮಂಜರಿ, ಭಾವಗೀತೆ ಭಜನೆಗಳ ಸಂಗ್ರಹ ಹೊರತಂದಿರುವ ಗವಾಯಿಗಳು ಭಗವದ್ಗೀತಾ ಮತ್ತು ಉಪನಿಷತ್ತುಗಳನ್ನು ಬ್ರೈಲ್ ಲಿಪಿಯೊಳಗೆ ಬರೆದಿದ್ದಾರೆ. ಪಂಚಾಕ್ಷರವಾಣಿ ಪತ್ರಿಕೆಯನ್ನು ನಡೆಸುತ್ತಿದ್ದಾರೆ ಎಂದು ಪುಟ್ಟರಾಜಗವಾಯಿಗಳ ಬಗ್ಗೆ ಕೆಲವೇ ಸಾಲುಗಳಲ್ಲಿ ಸಮಗ್ರ ಮಾಹಿತಿ ನೀಡುತ್ತಾರೆ.

ಇವರ ಅಂಕಣ ಬರಹಗಳಲ್ಲಿ ವ್ಯಂಗ ಮತ್ತು ನೇರಮಾತುಗಳಿಗೂ ಕೊರತೆಯಿಲ್ಲ, ಪೊಲೀಸರನ್ನು ಸಮವಸ್ತ್ರ ಕಾಡೈತಿ, ಜನರೊಂದಿಗೆ ಪೋಲೀಸರು ಬೆರೆಯುತ್ತಿಲ್ಲ ಎನ್ನುತ್ತಾರೆ. ಶಂಬಾಜೋಶಿ, ಬೇಂದ್ರೆಯವರಗಿಂತಲೂ ದೊಡ್ಡವರು ಎತ್ತರದವರು ಎನ್ನುತ್ತಾರೆ. ಗಂಡು ಅರ್ಧನಾರೀಶ್ವರ ಆಗುವುದರ ಬದಲು ಪೂರ್ಣನಾರೀಶ್ವರ ಆದಕಾರಣ ಈಗ ಎಲ್ಲಾ ಕಡೆ ಪೂರ್ಣನಾರೀಸ್ವರ ಕೇಳುತ್ತಿದೆ ಎನ್ನುತ್ತಾರೆ. ಕೊನೆಕೊನೆಗೆ ವೇದದ ಬೆನ್ನ ಹತ್ತಿದ್ದರಿಂದ ಕಾವ್ಯದಲ್ಲಿ ನಾದಮಯತೆ ಕಡಿಮೆಯಾಯ್ತು ಎನ್ನುತ್ತಾರೆ. ಮನಸೂರರನ್ನು ಕುರಿತು ಬರೆಯುತ್ತ ಮನಸೂರರು ಶಿಷ್ಯರನ್ನು ತಯಾರುಮಾಡಲಿಲ್ಲ. ಇದ್ದ ಒಬ್ಬ ಮಗನಿಗೆ ಕಲಿಸಬೇಕು ಅನ್ನುವ ಹೊತ್ತಿಗೆ ಮಗ ಅವರ ಹತ್ತಿರ ಬರೋದು ತಡ ಆಗಿತ್ತು. ಪಾಟೀಲ ಪುಟ್ಟಪ್ಪನವರು ಕನ್ನಡದ ಡಿಕ್ಟೇಟರ್ ಎನ್ನುತ್ತಾರೆ. ಕಟ್ಟೀಮನಿಯವರನ್ನು ಕುರಿತು ಹೇಳುತ್ತಾ ಅವರ ಇಬ್ಬರು ಮಕ್ಕಳು ದಿನಾ ಜಗಳ ಆಡುವುದನ್ನು ನೋಡಿ ಬಾಳನೋವಾಗಿತ್ತು; ಅದಕ್ಕೆ ಅವರು ಕೊನೀಕಾಲಕ್ಕೆ ತಮ್ಮ ಬರಹದ ಎಲ್ಲಾ ರೈಟನ್ನು ಐ.ಬಿ.ಹೆಚ್‌ಗೆ ಬರೆದು ಕೊಟ್ಟರು. ಎಂ.ಎಲ್.ಸಿ ಮಾಡಿಸಿಕೊಂಡ ಮೇಲೆ ತಮ್ಮ ದುರಂತ ಸುರುವಾತು ಅನ್ನೊದು ಅವರಿಗೆ ಲಗೂನ ತಿಳಿಲೇ ಎಂದು ಮಾಹಿತಿ ನೀಡುತ್ತಾರೆ.

ಹಿಂದೂಸ್ತಾನಿ ಸಂಗೀತದ ದಿಗ್ಗಜ ವೆಂಕಟೇಶಕುಮಾರ ಬಡತನದೊಳಗಿಂದ ಬಂದು ಸಾಧನ ಮಾಡಿದ ಸಂಗೀತಗಾರ ಮಹಾಸ್ವಾಭಿಮಾನಿ ಎಂದು ಮೆಚ್ಚುಗೆ ಸೂಚಿಸುತ್ತಾರೆ. ಪ್ರಸಾದನ ಕಲೆಯಲ್ಲಿ ಯಾವುದೇ ಅಂತರ್‌ರಾಷ್ಟ್ರೀಯ ಕಲಾವಿದನನ್ನು ಸರಿಗಟ್ಟುವ ಪ್ರತಿಭಾವಂತ ಗಜಾನನ ಮಹಾಲೆ ಈತ ನಟ, ಚಿತ್ರಕಾರ, ಸಂಗೀತಗಾರ, ನರ್ತನಪಟು, ತಬಲಾ, ಹಾರ್ಮೋನಿಯಂವಾದಕ ಅದ್ಭುತ ಕಲ್ಪನಾಶಕ್ತಿ, ಶಿಸ್ತು, ಕರ್ತವ್ಯ ನಿಷ್ಠೆ ಇದ್ದವ ಎಂದು ಬೆನ್ನತಟ್ಟುತ್ತಾರೆ. ಶಶಿಧರ ಸಾಲಿಯ ಫೋಟೋಗ್ರಾಫ್ ಬಗ್ಗೆ ಸಂತೋಷಪಡುತ್ತಾರೆ.

ನೀನಾಸಂನ ತಿರುಗಾಟದ ನಾಟಕಗಳನ್ನು ಉರ್ಮಾಳಿನ ಮಹಿಳಾ ಯಕ್ಷಕಲಾರಂಗದ 'ವೀರಚಂದ್ರ ಧ್ವಜ' ಮತ್ತು ಚಿಟ್ಟಾಣಿ ಹೆಗಡೆಯವರ 'ಶರಸೇತು ಬಂಧ'ದ ವಿಮರ್ಶೆಯನ್ನು ಮಾಡುತ್ತಾರೆ.

ಅಷ್ಟಾಗಿ ಪ್ರಚಾರಪಡೆದವ ಪ್ರತಿಭಾನ್ವಿತ ವ್ಯಕ್ತಿಗಳಾದ ಡಾ. ವರದರಾಜ ಹುಯಿಲಗೋಳ, ಪ್ರೊ.ವ್ಹಿ.ಜಿ. ಮಾರಿಹಾಳ, ದನಗಳ ಧನ್ವಂತರಿ ಡಾ ಕೆ.ಆರ್. ಲಕ್ಷ್ಮಯ್ಯನವರನ್ನು ಕುರಿತು ಬರೆಯುತ್ತಾರೆ.

ಸಂಗೀತಗಾರ ಸಾಧಕ ಜಿ.ವಿ. ಅತ್ರಿಯವರು ಇನ್ನೂ ಬೆಳೆಯಲಿ ಎಂದು ಹಾರೈಸುತ್ತಾರೆ. ಸಂಗೀತಾಕಟ್ಟಿ ಶಾಸ್ತ್ರೀಯ ಸಂಗೀತ ಕಲಿತ ಹುಡುಗಿ; ಸುಗಮ ಸಂಗೀತದ ಕಡೆ ಗಮನ ಕಡಿಮೆ ಮಾಡಿದರೆ ದೊಡ್ಡ ಶಾಸ್ತ್ರೀಯ ಸಂಗೀತಗಾರ್ತಿ ಆಗಬಲ್ಲಳು ಎಂದು ಸಲಹೆ ನೀಡುತ್ತಾರೆ. ಯಶವಂತ ಹಳಬಂಡಿ ಮೊದಲ ಧಾರವಾಡದ ಬೆನಕನ ಗುಡಿಯೊಳಗೆ ಹಾಡುವಾಗ ಬಹಳ ಚೆಂದ ಹಾಡುತ್ತಿದ್ದ. ಆದರೆ ಬೆಂಗಳೂರು ಸೇರಿದ ಮೇಲೆ ಹಾಡುಗಾರಿಕೆ ಬೆಂಗಳೂರು ಟ್ರ್ಯಾಕ್ ಮೇಲೆ ಹೊರಟಿದೆ ಎಂದು ಚುಚ್ಚುತ್ತಾರೆ. ಕತೆಗಾರರಾದ ವೀರಭದ್ರ ನವ್ಯರಿಗಿಂತ ಮೊದಲು ನವ್ಯದ ಬಾಗಿಲು ತಗೆದವ ಎಂದು ಹೇಳುತ್ತಾರೆ. ಶೆಟ್ಟರ ಅಂಕಣ ಬರಹಗಳನ್ನು ಕುರಿತು. ಗುಡಿಹಳ್ಳಿ ನಾಗರಾಜ ಅವರು ''ಉಪೇಕ್ಷೆಗೆ ಒಳಗಾಗಿದ್ದ ಸಂಗತಿಗಳನ್ನು ಪರಿಚಯಿಸಿದ್ದು ತಾರತಮ್ಯವನ್ನು ಮುಖಕ್ಕೆ ರಾಚುವಂತೆ ಹೇಳಿದ್ದು ಈ ಅಂಕಣಗಳ ಪ್ರಮುಖ ಕೊಡುಗೆ''[೮] ಎಂದು ಹೇಳಿದ್ದಾರೆ.

ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಅಂಕಣ ಬರಹದ ವಿಶಿಷ್ಟ ಶೈಲಿ ದೇಶಿಯಾಗಿದೆ. ಅವರು ಬಳಸುವ ಭಾಷೆ ಅಪ್ಪಟ ಧಾರವಾಡದ ಆಡುನುಡಿಯಾಗಿದ್ದು; ಬರಹಕ್ಕೆ ಒಂದು ವಿಶಿಷ್ಟತೆಯನ್ನು ತಂದುಕೊಟ್ಟಿದೆ. ಉತ್ತರ ಕರ್ನಾಟಕ ಆಡು ನುಡಿಯ ಛಾಪನ್ನು ಈವರೆಗೆ ಕಾವ್ಯಗಳಲ್ಲಿ ಕಾಣಬಹುದಾಗಿತ್ತು. ಆದರೆ ಶೆಟ್ಟರು ಅದನ್ನು ಮೊಟ್ಟಮೊದಲ ಬಾರಿಗೆ ಗದ್ಯದಲ್ಲಿ ಬಳಸಿ ಯಶಸ್ವಿಯಾದ ಮೊದಲ ಬರಹಗಾರರಾಗಿದ್ದಾರೆ. ಹಳೆಮೈಸೂರು ಭಾಗದ ಜನರಿಗೆ ಮೊದಮೊದಲು ಈ ಭಾಷೆಯನ್ನು ಓದುವುದು. ಅರ್ಥಮಾಡಿಕೊಳ್ಳುವುದು ಕಷ್ಟವಾಗಿತ್ತು. ಆದರೆ ಅದಕ್ಕೆ ಹೊಂದಿಕೊಂಡ ಮೇಲೆ ಅದರ ರುಚಿ ಸವಿದಮೇಲೆ ಎಲ್ಲರೂ ಸರಾಗವಾಗಿ ಓದಿ ಅರ್ಥಮಾಡಿಕೊಂಡು ಓದಿ ಆಸ್ವಾದನೆ ಮಾಡುವುದನ್ನು ಕಲಿತಿದ್ದಾರೆ. ಹೀಗೆ ಶೆಟ್ಟರ ಅಂಕಣ ಬರಹದ ವಿಶಿಷ್ಟತೆಗಳಲ್ಲಿ ಆಡುನುಡಿ ಒಂದಾಗಿದೆ.

**೨. ಚಹಾದ ಜೋಡಿ ಚೂಡಾದ್ಹಾಂಗ-೨**

ಪ್ರಜಾವಾಣಿಯಲ್ಲಿ ೧೯೯೫ ಸೆಪ್ಟೆಂಬರ ತಿಂಗಳಿನಿಂದ ೧೯೯೬ ಆಗಸ್ಟ್ ತಿಂಗಳವರೆಗಿನ ೫೨ ಲೇಖನಗಳು ಇಲ್ಲಿವೆ. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಚಹಾದ ಜೋಡಿ ಚೂಡಾದ್ಹಾಂಗ-೨ ಅನನ್ಯ ಪ್ರಕಾಶನ ಧಾರವಾಡದಿಂದ ಪುಸ್ತಕ ರೂಪದಲ್ಲಿ ಪ್ರಕಟಗೊಂಡಿದೆ. ಪಟ್ಟಣ ಶೆಟ್ಟಿಯವರ ಅಂಕಣ ಬರಹಗಳ ಎರಡನೆಯ ಸಂಪುಟ ಇದಾಗಿದೆ. ''ಸಾಂಸ್ಕೃತಿಕ ಸಮಾರಂಭಗಳ ವರದಿಯನ್ನು ಪ್ರಾದೇಶಿಕ ಆಡು ಭಾಷೆಯಲ್ಲಿ ಆರಂಭವಾದ ಸಿ.ಪ.ರ ಅಂಕಣಗಳು, ವ್ಯಕ್ತಿ, ಸಂಸ್ಥೆಗಳ ವಿಶಿಷ್ಟತೆಯನ್ನು ಒಟ್ಟಾರೆ ಒಂದು ಸಾಂಸ್ಕೃತಿಕ ಸಂದರ್ಭದ ಒಳನೋಟಗಳನ್ನು ಕಟ್ಟಿಕೊಡುತ್ತಾ ತನ್ನ ಕಾಲದ ಸಾಂಸ್ಕೃತಿಕ ವಿಮರ್ಶೆಗಳಾಗಿ ಬಿಡುತ್ತವೆ. ಆದ್ದರಿಂದಲೇ ಈ ಅಂಕಣಗಳಿಗೆ ದಾಖಲಾತಿಯ ಮಹತ್ವವಿದೆ.''[೯] ಸಿದ್ಧಲಿಂಗ ಪಟ್ಟಣ ಶೆಟ್ಟರು ತಾವು ನೋಡಿದ ಕಾರ್ಯಕ್ರಮಗಳನ್ನು, ಕಂಡ ದೃಶ್ಯಗಳನ್ನು, ಘಟನೆಗಳನ್ನು ಇದರ ಪ್ರಚಾರದ ಅಗತ್ಯ ಇದೆ ಎಂದು ಅನ್ನಿಸಿದಾಗ ಅದನ್ನು ಸ್ವಾರಸ್ಯಕರವಾಗಿ ಹೇಳುತ್ತಾ ಹೋಗುತ್ತಾರೆ. ಮುಂಬಯಿ, ಶಿಲ್ಪ ಜಗನ್ನಾಥ

ಶಂಕರ ಶೇಟ್ ಪುಸ್ತಕ ಬಿಡುಗಡೆ ಕಾರ್ಯಕ್ರಮವನ್ನು ಕುರಿತು ಹೇಳುತ್ತಾ ಇಂಥವರ ಚರಿತ್ರೆ ಓದಿದರ ಮನಸ್ಸು ಸ್ವಚ್ಛ ಅಗತ್ಯತೆ. ರಾಗಿಯ ಸುತ್ತಲಿನ ಕೊಂಕಣದ ಮುರವಾಡದ ಶೇಟ್ ಸಾರ್ವಜನಿಕ ಜೀವನದಲ್ಲಿ ಬಂದ ಮೇಲೆಯೇ ಮುಂಬಯಿ ಜಗತ್ಪ್ರಸಿದ್ದ ಮುಂಬಯಿ ಆಗಿದ್ದು ಅಲ್ಲಿಯ ನಾನಾ ವಿಶ್ವವಿದ್ಯಾಲಯ ಕಾರ್ಪೋರೇಶನ್ ಇವತ್ತಿಗೂ ಅವರ ಕತಿ ಹೇಳ್ತಾವ, ನಾನಾ ಅಂತ ಪ್ರಸಿದ್ಧರಾಗಿದ್ದ ಶೇಟ್ ಅವರ ನಾನಾ ಮುಖದ ಸೇವೆಗಳನ್ನು ನೆನೆಸುವ ಸಂಸ್ಥೆಗಳು; ಮುಂಬಯಿ ತುಂಬಾ ಹರಡ್ಯಾವು. ಮೂಲತಃ ವ್ಯಾಪರಸ್ಥರಾಗಿದ್ದ ಆ ಪುಣ್ಯಾತ್ಮ ಬ್ರಿಟೀಷರ ವಿಶ್ವಾಸಗಳಿಸಿಕೊಂಡು ಮುಂಬಾಯಿಯೊಳಗಿನ ಸಮಸ್ತರ ಸಲುವಾಗಿ ಸತ್ಕಾರ್ಯ, ಕೈಕೊಂಡ, ಅಲ್ಲಿ ಮೊಟ್ಟ ಮೊದಲು ಇಂಗ್ಲೀಷ್ ಶಾಲೆ, ಹೆಣ್ಣು ಮಕ್ಕಳ ಶಾಲೆ, ಜೆ.ಜೆ. ಸ್ಕೂಲ್ ಆಫ್ ಆರ್ಟ್ಸ್, ಏಶಿಯಾಟಿಕ್ ಸೊಸಾಯಿಟಿ, ಬಾಂಬೆ ಪ್ರಸಿಡೆನ್ಸಿ ಅಸೋಸಿಯೇಶನ್, ಮುಂಬಾಯಿ ವಿಶ್ವವಿದ್ಯಾಲಯ, ನಾಟಕಶಾಲೆ, ಕಾರ್ಪೋರೇಷನ್, ವಿಹಾರ ಸರೋವರ ನಿರ್ಮಾಣ, ಗ್ಯಾಸ್ ಪೂರೈಕೆಯೋಜನೆ, ಭಾರತದ ಮೊಟ್ಟ ಮೊದಲ ಪೈಪು ಮಾರ್ಗ, ಮುಂಬಾಯಿ ಠಾಣ ನಡುವೆ ಸುರು ಮಾಡಿಸಿ ಅದರ ಕಛೇರಿಗಿಂತ ತಮ್ಮ ಮನ್ಯಾಗ ಜಾಗ ಕೊಟ್ಟಿದ್ದು, ಇತ್ಯಾದಿ ಒಬ್ಬ ಮನುಷ್ಯ ತನ್ನ ಕ್ರಿಯಾಶೀಲ ಜೀವನದ ೫೦ ವರ್ಷದಾಗ ಮಾಡತಾನಂತರ ನಂಬಾಕಾಗೊದಿಲ್ಲ. ಇಂಥವರ ಜೀವನ ಓದಿದರ ಮನಸ್ಸು ಸ್ವಚ್ಛ ಆಗತೈತಿ, ಸಾರ್ವಜನಿಕ ಸೇವಾ ಮಾಡಬೇಕೆನ್ನುವವರು, ಲೀಡರಾಗಿ ಮಾಡಬೇಕೆನ್ನೆವರು ಮೊದಲು ನಾನಾ ಶೇಟ್ ಮಾಡಿದ ಕೆಲಸದ ಹತ್ತಾಂಶನಾದರೂ ಮಾಡಾಕ ಕಲಿಬೇಕು ಎಂದು ಬರೆಯುತ್ತಾರೆ. ಅದೇ ರೀತಿ, ಕಾಶೀ ಹಿಂದೂ ವಿಶ್ವವಿದ್ಯಾಲಯದೊಳಗೆ ಕನ್ನಡ ಮತ್ತು ಭಾರತೀಯ ಭಾಷಾ ವಿಭಾಗದ ಮುಖ್ಯಸ್ಥರಾಗಿರುವ ಡಾ. ವಿರಕ್ತಮಠ ಶಿವಾನಂದರನ್ನು ಕುರಿತು ಬರೆಯುತ್ತಾ 'ಪ್ರೌಢದೇವರಾಯನ ಕಾಲದ ಕನ್ನಡ ಸಾಹಿತ್ಯ'ದ ಬಗ್ಗೆ ಸಂಪ್ರಬಂಧ ಬರೆದಿದ್ದ ಶಿವಾನಂದರಿಗೆ ಕಾಶೀಯೊಳಗೆ ವ್ಯಾಳ್ಯಿ ಭಾಳಸಿಕಿರಬೇಕು. ಭಾಷಾ ಶಾಸ್ತ್ರದ ವಿಶೇಷ ಅಧ್ಯಯನಕ್ಕೆ ಅಲ್ಲಿರುವ ಅನುಕೂಲಗಳನ್ನು ಬಳಸಿಕೊಂಡು ನೇಪಾಳಿ ಭಾಷ ಕಲಿತು ಬಸವಣ್ಣನ ನೂರಾರು ವಚನಗಳನ್ನು ಅದರೊಳಗೆ ಅನುವಾದಿಸಿ ಪ್ರಕಟಿಸ್ಯಾರ, ಅಧ್ಯಯನಶೀಲ, ಅತ್ಯಭಿಮಾನಿ, ಹಠವಾದಿ ಶಿವಾನಂದರು ಕಾಶೀ ವಿಶ್ವವಿದ್ಯಾಲಯದೊಳಗೆ ಕನ್ನಡ ವಿಭಾಗವನ್ನು ಪೂರ್ಣಾಂಗ ಪೀಠವನ್ನಾಗಿಸಿದ ಮೊದಲ ವ್ಯಕ್ತಿ."[೧೦] ಎನ್ನುತ್ತಾರೆ.

ಧಾರವಾಡದಲ್ಲಿ ಜರುಗಿದ ನಾಟಕ ಅಕಾಡೆಮಿ ಪ್ರಶಸ್ತಿ ಪ್ರಧಾನ ಸಮಾರಂಭಕ್ಕೆ ಮುಖ್ಯ ಅತಿಥಿಯಾಗಿ ಆಗಮಿಸಿದ್ದ ಖ್ಯಾತ ಮರಾಠಿ ಸಾಹಿತಿ ನಾರಾಯಣ ಸುರ್ವೆ ಅವರನ್ನು ಪರಿಚಯಿಸುತ್ತಾರೆ. ಹೆತ್ತವರಿಗೆ ಬೇಡವಾದ ಮಗುವನ್ನು ತಿಪ್ಪೆಯೊಳಗೆ ಬಿಟ್ಟು ಹೋಗಿದ್ದರು; ಆ ಕೂಸನ್ನು ಕಾರ್ಮಿಕ ದಂಪತಿಗಳಾದ ಗಂಗಾರಾಮ ಸುರ್ವೆ ಮತ್ತು ಕಾಶೀಬಾಯಿ ತಂದು ಸಾಕಿದರು. ಪ್ರೀತಿಯಿಂದ ಬೆಳೆಸಿದರು. ನಾಲ್ಕನೇ ತರಗತಿಯವರೆಗೆ ಕಲಿತು ಶಾಲೆ ಬಿಟ್ಟು ಗಿರಣಿಯೊಳಗೆ ಕೂಲಿಮಾಡಿದ ನಂತರ ಬಡತನ ನೋವುಗಳನ್ನು ಪ್ರೀತಿಸಿದ ಸುರ್ವೆ ಮಾತಾಡಕ ಕಲಿತು ಮನುಷ್ಯನಾದ, ಕನಸುಕಂಡು ಕವಿಯಾದ, ಕಮ್ಯುನಿಷ್ಟರು ಭಾಳ ಪ್ರೀತಿಸುವ ಈ ಕವಿ ಮಂದಿಗೆ ಮನುಷ್ಯತ್ವ ತೋರಿಸುವ ಕನ್ನಡಿ ಆದ, ದುಂಡನ್ನ ರೊಟ್ಟಿಯೊಳಗೆ ತಣ್ಣನ್ನ ಚಂದಪ್ಪ ಹುಡುಕುತ್ತಾ ಬೆಳೆದ ಸುರ್ವೆ ಪಲಾಯನವಾಗಿಲ್ಲ. ಜೋಪಡ ಪಟ್ಟಿದಿಗಳ ದುಃಖಿ ದುರ್ಗಂಧದೊಳಗೆ ತೊಳಲಾಡಿದವರ ಉಸಿರಿನ ಬಿಸಿಗೆ ಬಸಿರಾದ ಕವನಗಳಿಗೆ ತವರಾದಂಥವ, ಆರನೇತ್ತರದ ತನಕ ಒಂದು ಮುಂದ ಕಲ್ಯಾಕ ಆಗದ ಸುರ್ವೆ ಬರೆದ ಕಾವ್ಯದ ಬಗ್ಗೆ ಈಗಾಗಲೇ ಆರು ಮಂದಿ ಪಿ.ಹೆಚ್.ಡಿ. ಪಡೆದಾರ,

ಈತ ಬಾಯಿ ತೆಗದರೆ ಸತ್ಯದ ಮುತ್ತಿನಸರ ಸುತ್ತಿದ್ಹಾಂಗ, ಮುಗ್ಧ ಕಾರ್ಮಿಕನೊಬ್ಬನ ಸಿಗ್ಧ ಸಹಜತೆ ಮಾರೀಮ್ಯಾಲ ವೇದಿಕೆಯ ಭಾಷಣಗಳಿಗಿಂತ ವೇದನೆಯ ಬೀದಿ ಭಾಷಣಗಳಿಗೆ ಹೆಚ್ಚು ಬೆಲೆ ಕೊಟ್ಟವರು''[೫೫] ಎಂದು ಪರಿಣಾಮಕಾರಿಯಾಗಿ ಅಪರಿಚಿತ ವಿಷಯಗಳನ್ನು ಮನಮುಟ್ಟುವಂತೆ ಹೇಳುವಲ್ಲಿ ಸಿದ್ದಲಿಂಗ ಪಟ್ಟಣ ಶೆಟ್ಟರು ಯಶಸ್ವೀಯಾಗುತ್ತಾರೆ.

ಪ್ರತಿಯೊಬ್ಬರ ಜೀವನದಲ್ಲೂ ದುಃಖ ಆಗುವಂತಹ ಕರುಣಾ ಜನಕ ಸಂದರ್ಭಗಳು ಕೇಳಿಬರುತ್ತವೆ. ಅಂಥವುಗಳನ್ನು ಸಿದ್ಧಲಿಂಗ ಪಟ್ಟಣಶೆಟ್ಟರು ದಾಖಲಿಸುತ್ತಾರೆ. ಲೇಖಕರು ದೆಹಲಿಗೆ ಹೋಗಿದ್ದಾಗ ಬೆಳಗಿನ ನಾಲ್ಕು ಗಂಟೆಯ ಸಮಯಕ್ಕೆ ಚಳಿಯಲ್ಲಿ ನಡುಗುತ್ತಾ ನಿಂತ ವಯಸ್ಸಾದ ಮುದುಕನನ್ನು ಹಿಂದಿಯಲ್ಲಿ ಮಾತನಾಡಿಸಿದಾಗ ಆತ ರಾಯಚೂರಿನ ಶಾಲೆಯೊಂದರಲ್ಲಿ ಶಿಕ್ಷಕನಾಗಿ ಸೇವೆಸಲ್ಲಿಸಿ ನಿವೃತ್ತಿಹೊಂದಿ ಕಾರಣಾಂತರಗಳಿಂದ ಈ ಇಷ್ಟದೂರ ಬಂದು ಅನಾಥನಾಗಿದ್ದಾನೆ. ಆತನ ಹೆಂಡತಿ ರಾಯಚೂರಿನ ಸಂಬಂಧಿಕರ ಮನೆಯಲ್ಲಿರುವುದಾಗಿ ತಿಳಿಯುತ್ತದೆ. ಅದೇ ರೀತಿ, ಜಾನಪದ ಗಾಯಕಿ ಗೀಗೀ ಪದದ ಫಕ್ಕೀರವ್ವ ಗುಡಿಸಾಗರ ತನ್ನ ಕಲೆಯನ್ನು ಮುಂದಿನವರಿಗೆ ಕಲಿಸಬೇಕಂತ ಇತ್ತೀಚಿಗೆ ಶಾಲೆಯೊಂದನ್ನೇ ಆರಂಭಿಸಿದಳು ಆದರೆ ಅದೃಷ್ಟ ನೆಟ್ಟಗಿರಲಿಲ್ಲ. ಆಕೆಗೆ ಲಕ್ವ ಹೊಡೆದು ಹಾಡುವ ಬಾಯಿಗೆ ಅಳಲಿಕ್ಕೆ ಬರದ ಹಾಗೆ ಹಾಗಿದೆ ಎಂದು ಕನಿಕರ ವ್ಯಕ್ತ ಪಡಿಸುತ್ತಾರೆ.

ಶಂಕರ ಬಾಳ ಜೋಶಿಯವರನ್ನು ಕುರಿತು ಮಾತನಾಡುತ್ತಾ, ಬೇರೆಯವರಿಗೆ ಇಷ್ಟವಾಗಲಿ ಬಿಡಲಿ ತಮಗೆ ಅನಿಸಿದ್ದನ್ನು ಗೊತ್ತಿದ್ದನ್ನು ಯಾರು ಹಂಗಿಗೂ ಒಳಗಾಗದೇ ಹೇಳುತ್ತಿದ್ದರು. ಅದಕ್ಕಾಗಿ ಅವರು ಕೆಲವರ ನಿಷ್ಠುರವನ್ನು ನಿಲುವುಗಳು ಇವತ್ತಿಗೂ ಅವರ ವೈಚಾರಿಕ ನಿಲುವುಗಳ ನಿಜವಾದ ನಮ್ಮ ಬುದ್ಧಿ ಜೀವಿಗಳ ಹತ್ತಿರ ನಿಜವಾದ ಅರ್ಥದೊಳಗೆ ಬಂದಿಲ್ಲ. ಅವರ ಜನ್ಮ ಶತಮಾನೋತ್ಸವ ಹೊತ್ತಿಗಾದರೂ ಅವರನ್ನು ಕುರಿತು ಸಾರ್ಥಕ ವಿಚಾರ ಸಂಕೀರ್ಣಗಳು ನೆಡೆಯಬೇಕು. ಶಂಬಾ ಅವರ ನಿಲುವುಗಳನ್ನು ಸಾಮಾನ್ಯರಿಗೂ ತಿಳಿಸಿ ಹೇಳುವ, ಬರೆಯುವ, ವಿವರಿಸುವ ಕೆಲಸ ಆಗಬೇಕು ಎಂದು ಸಲಹೆ ನೀಡುತ್ತಾರೆ. ಶಿಕ್ಷಕ ದಿನಾಚರಣೆಯನ್ನು ಕುರಿತು ಹೇಳುತ್ತಾ, ಕಾರ್ಯಕ್ರಮವನ್ನು ಉದ್ಘಾಟಿಸಿದ, ಶಿಕ್ಷಣ ಮಂತ್ರಿ ಗೋವಿಂದೇಗೌಡರು ಸರಕಾರದ ಅನುದಾನ ಇಲ್ಲದೆ ಶಿಕ್ಷಕರ ಭವನ ಕಟ್ಟಲು ಹೇಗೆ ಸಾಧ್ಯ ಎಂದು ಅನುಮಾನ ವ್ಯಕ್ತ ಪಡಿಸಿದಾಗ, ಇದನ್ನೇ ಸವಾಲಾಗಿ ಸ್ವೀಕರಿಸಿದ ಕ್ಷೇತ್ರ ಶಿಕ್ಷಣಾಧಿಕಾರಿ ಸಿದ್ರಾಮಪ್ಪ, ವಿ.ಚಿತವಾಡಗಿ, ಡಿ.ಡಿ.ಪಿ.ಐ. ಮಣೂರು, ಅಲ್ಲಿನ ಶಿಕ್ಷಕರು ಐದು ತಿಂಗಳೊಳಗೆ ಎಂಟುವರೆ ಲಕ್ಷದ ಗುರುಭವನ ಕಟ್ಟಿದರು. ಮಾಸ್ತರರ ಮಂದಿ ಮನಸ್ಸು ಮಾಡಿದರೆ ಗುರುಗಳಾಗ ಬಲ್ಲರು; ಗುರುಕಾರ್ಯ ಮಾಡಬಲ್ಲರು, ಎಂದು ಹೊಗಳುತ್ತಾರೆ.

ರಾಷ್ಟ್ರೀಯ ಮಹಿಳಾ ಆಯೋಗ, ಧಾರವಾಡದ ಜೆ.ಡಬ್ಲ್ಯೂಪಿ, ಮತ್ತು ವಕೀಲರ ಸಂಘಗಳು ಸೇರಿ ಆಯೋಜಿಸಿದ ಮಹಿಳಾ ಲೋಕ್ ಅದಲಾತ್ ಕಾರ್ಯಕ್ರಮದ ವರದಿ ನೀಡುತ್ತಾ, ರಾಷ್ಟ್ರೀಯ ಮಹಿಳಾ ಆಯೋಗದ ವರದಿ ನೀಡುತ್ತಾ ರಾಷ್ಟ್ರೀಯ ಮಹಿಳಾ ಆಯೊಗದ ಅಧ್ಯಕ್ಷೆ ಮೋಹಿನಿ ಗಿರಿಯವರ ಮನಕರಗುವಂತಹ ಮಾತುಗಳನ್ನು ದಾಖಲಿಸುತ್ತಾರೆ. ಬಡತನ, ಅಜ್ಞಾನ, ಮಧ್ಯಪಾನಗಳು ಮಹಿಳೆಗೆ ಶತ್ರು ಈಗ ಪಾನ ಪ್ರತಿ ಬಂಧ ಚಳುವಳಿಯನ್ನು ತೀವ್ರಗೊಳಿಸಬೇಕು, ಮಹಿಳೆಗೆ ಕಾನೂನಿನ ಸಾಮಾನ್ಯ ಜ್ಞಾನ ತಿಳಿಸಬೇಕು. ಪ್ರತಿಯೊಂದು ಕಾಲೇಜಿನ ಮಹಿಳಾ ಅಧ್ಯಾಪಕೀಯರು ಇಂಥ

ತರಬೇತಿ ಪಡೆದು ತಮ್ಮ ವಿದ್ಯಾರ್ಥಿನಿಯರಿಗೆ ತಿಳಿಸಬೇಕು. ಸಿಟ್ಟು, ಅಸಹನೆಯಿಂದ ಅತ್ಯಾಚಾರಿ ಗಂಡನನ್ನ ಅನಿವಾರ್ಯವಾಗಿ ಕೊಲ್ಲುವ ಹೆಂಗಸು ಆಗಲೂ ಅನ್ಯಾಯಕ್ಕೆ ತುತ್ತಾಗ್ತಾಳ ಅವಳಷ್ಟೇ ಅಲ್ಲ ಅವಳ ಅಮಾಯಕ ಮಕ್ಕಳೂ ಜೈಲಿಗೇರ ಬೇಕಾಗ ತೈತಿ, ಇವತ್ತು ನಮ್ಮ ದೇಶದಾಗ ಪ್ರತಿಯೊಂದು ಜಿಲ್ಲಾದಾಗ ೨೫ ಸಾವಿರಕ್ಕಿಂತ ಹೆಚ್ಚು ಮಂದಿ ವೇಶ್ಯೆಯರಾದರು, ತುಂಬಿದ ಪ್ಯಾಟ್ಯಾಗ ಬರೇ ಎರೆಡು ರೂಪಾಯಿಗೆ ಮೈಮಾರಿ ಕೊಳುವ ೮-೧೦ ವರ್ಷದ ಕಂದಮ್ಮಗಳನ್ನು ಕಣ್ಣಾರೆ ಕಂಡೇನಿ, ಅತ್ಯಾಚಾರ ಅನ್ನೋದು ಕೊಲೆಗೆ ಸಮನಾದ ಅಪರಾಧ ಅಂತ ಪರಿಗಣಿತವಾಗಬೇಕು. ಅನೇಕ ತರುಣರು ಕಾಶೀ ಮಥುರಾದ ಯಾತ್ರಾಕ್ಕಂತ ತಮ್ಮ ವಿಧವಾ ತಾಯಂದಿರನ್ನ ಕರಕೊಂಡು ಬರ್ತಾರ, ಈಗ ಬರ್ತೆವಂತ ಹೇಳಿ ಅವರನ್ನ ಅಲ್ಲೇ ಬಿಟ್ಟು ಹೊಗಿ ಬಿಡ್ತಾರ, ಹೀಂಗ ನೆಲೆ ಕಳಕೊಂಡ ಅನಾಥ ವಿಧವೆಯರು ಮಥುರಾದಾಗ ೧೦ ಸಾವಿರ ಅದಾರ, ಕಾಶೀಯೊಳಗೆ ೨೫ ಸಾವಿರ ಅದಾರ, ಭಿಕ್ಷೆ ಬೇಡಿ ಹೊಟ್ಟಿ ತುಂಬಿ ಕೊಳ್ಳುವ ಇಂಥ ವಿಧವೆಯರ ಮೇಲೆ ಅಲ್ಲಿಯ ಮಹಂತರು, ಪಂಡಾ ಪೂಜಾರಿಗಳು ಸೈತ ಅತ್ಯಾಚಾರ ಮಾಡ್ತಾರ, ಕರುಳು ಅವುಚಿ ಬರುವಂಥ ಸತ್ಯ ದೃಶ್ಯ ಇದು"[೧೨] ಎಂದು ನಮ್ಮ ಸಮಾಜದ ಕರಾಳ ಮುಖವೊಂದನ್ನು ಪರಿಚಯಿಸುತ್ತಾರೆ.

ಹಂಪಿ ಕನ್ನಡ ವಿಶ್ವವಿದ್ಯಾಲಯದೊಳಗೆ ನೆಡೆದ ಕನ್ನಡ ಮಲೆಯಾಳಂ ಕಾವ್ಯಾನುವಾದ ಕಮ್ಮಟದ ಬಗ್ಗೆ ಬರೆಯುತ್ತಾ ಭಾಷೆ-ಭಾಷೆಗಳ ನಡುವೆ ಸಂಪರ್ಕ ಸುಗಂಧ ಹರಡ ಬೇಕೆಂದರೆ ಅನುವಾದವೇ ತಾರಕ-ಮುಕ್ತಿಕಾರಕ, ನಮ್ಮಲ್ಲಿ ಪ್ರತಿಯೊಂದು ಭಾಷೆಗೂ ಮೂಲ ಗಂಧ ಇರೋದರಿಂದ ಅದನ್ನ ಅನುವಾದಿಸಿಯೇ ಅನುಸ್ವಾದಿಸಬೇಕು. ಸಾಹಿತ್ಯ ಕಾವ್ಯಗಳೊಳಗೆ ತಾನಾಗಿ ಅರ್ಥ ಇರೋದಿಲ್ಲ. ಅಲ್ಲಿಯ ಶಬ್ಧಗಳಲ್ಲಿ, ಅನುಭವಗಳಲ್ಲಿ ದೇವತೆಗಳ ಮೌನ ನುಡೀತಿರ ತೈತಿ, ಅದನ್ನ ನಮ್ಮ ಹೃದಯದ ಬದುಕಿನ ಅನುಭವಗಳ ಜೋಡಿ ಕೂಡಿಸಬೇಕು, ನುಡಿಸಬೇಕು, ಮೀಟಬೇಕು ಆಗ ನಮಗೆ ಬೇಕಾದ ಅರ್ಥಗಳ ದೇವತೆಗಳು ತಾವಾಗಿ ಸಾಕ್ಷಾತ್ಕಾರಗೊಳ್ಳುತ್ತವೆ. ಅಂತ ಅಧ್ಯಕ್ಷತೆ ವಹಿಸಿದ್ದ ಕಂಬಾರ ನುಡಿದಾಗ ಯಾವುದೇ ಗವ್ಯಾಗಿಂದ ತಪಸ್ಸು ಮುಗಿಸಿ, ಮೌನ ಮುರಿದ ಅರ್ಥ ದೇವತಾ ಬಾಯಿ ಬಿಟ್ಟಾಂಗಾಗಿತ್ತು ಎನ್ನುತ್ತಾರೆ. ರಾಮಕೃಷ್ಣನ್ ನವ್ಯಕವಿ, ನಾರಾಯಣ ಕುರುಪ್ ಛಂದೋ ವೈವಿಧ್ಯ ಬಳಸುವ ನವ್ಯಕವಿ, ತರೂರು ಶಶಿ ಧ್ಯಾನ ಕವಿ, ಶ್ರೀ ಕುಮಾರನ್ ತಂಬಿ ತಮಿಳು, ಮಲೆಯಾಳ ಎರಡರಲ್ಲಿ ಬರೆಯವ ಕವಿ, ಶಂಕರನ್ ಹೆಸರಾಂತ ವಿಮರ್ಶಕ, ಸಿ. ರಾಘುವನ್ ಒಳ್ಳೆಯ ಅನುವಾದಕ ಎಂದು ಮಲೆಯಾಳ ಕವಿಗಳ ಬಗ್ಗೆ ಹೇಳಿದ್ದಾರೆ.

ನವಲಗುಂದದ ಗೌರಮ್ಮನ ಬಗ್ಗೆ ಬರೆಯುತ್ತಾ ಹುಕ್ಕೇರಿ ಬಾಳಪ್ಪ ಸಾವಿರ ಹಾಡಿನ ಸರದಾರ. ಆದರೆ ಎಪ್ಪತ್ತು ವರ್ಷದ ಈ ಚೆಲುವಾದಿ ಗೌರಮ್ಮ ದೀಡ ಸಾವಿರ ಹಾಡಿನ ದೊರೆಸಾನಿ, ಎರೆಡು ದಿವಸ ಒಂದೇ ಸವನೆ ಹಾಡಬಲ್ಲಳು ದನಿ ಎಷ್ಟೆಷ್ಟು ತಗ್ಗುವುದಿಲ್ಲ ಕುಗ್ಗುವುದಿಲ್ಲ. ನಾಗರ ಹಳ್ಳಿಯ ಶರಣಬಸವೇಶ್ವರ ಮಠದ ಶಿವಪ್ಪಜ್ಜನಿಂದ ದೀಕ್ಷಾ ಪಡೆದು ತತ್ವಪದ ಕಲಿತಿದ್ದಾಳೆ. ಶಾಲಿ ಕಲಿಯದ ಗೌರವ್ವನ ಸ್ಮರಣ ಶಕ್ತಿ ಅಗಾಧ ಕಂಠಸಿರಿ ಶ್ರೀ ಅಪಾರ, ಸೋಬಾನ ಪದ, ಬೀಸೂಕಲ್ಲಿನಪದ, ವಚನಗಳನ್ನು ಹಾಡುವ ಗೌರಮ್ಮ ಸ್ವತಃ ಕವಿತೆಗಳನ್ನು ರಚಿಸಿದ್ದಾಳೆ. ೨೫ ವರ್ಷಗಳಿಂದ ಹಾಡುತ್ತಾ ಬಂದಿರುವ ಗೌರಮ್ಮನ ಸ್ವಂತದ ಹಾಡುಗಳನ್ನು ಯಾರಾದರೂ ಸಂಗ್ರಹಿಸಿ ಪ್ರಕಟಿಸಬೇಕು. ನಾಡಿನ ಇಂಥ ಅಮೂಲ್ಯ ಸಂಪತ್ತು ಸೋರಿ ಹೋಗ ಬಾರದು ಎಂದು ಕಾಳಜಿ ವ್ಯಕ್ತಪಡಿಸಿದ್ದಾನೆ.

ಉತ್ತರ ಕರ್ನಾಟಕದಲ್ಲಿ ಮಹಾನವಮಿ ಅಮವಾಸ್ಯೆ ನಂತರ ಸೀಗಿ ಹುಣ್ಣಿಮೆ ದಿನ ರೈತರು ಚರಗ ಚೆಲ್ಲುವ ಸಂಸ್ಕೃತಿಯನ್ನು ಆಚರಿಸುತ್ತಾರೆ. 'ಮನಮ್ಮೀ ಬಂಗಾರ ಸೀಗೀ ಹುರಾವಿಸಿಂಗಾರ' ಅನ್ನುವ ನುಡಿಗಟ್ಟು ಚಾಲ್ತಿಯಲ್ಲಿದೆ. ಹೆಣ್ಣು ಮಕ್ಕಳು ಹುಣ್ಣಿಮಿಯ ಹಂದಿನ ರಾತ್ರಿಯಲ್ಲೂ ಎದ್ದು ಐದು ನಮೂನೆಯ ಸಿಹಿ ಅಡಿಗೆ, ಐದು ನಮೂನೆ ಕಾಯಿಪಲ್ಲೆ ರೊಟ್ಟಿ ಮಾಡಿ ಬೆಳಕು ಹರಿಯುವುದರೊಳಗಾಗಿ ಚರಗಾ ಚಲ್ಲಲು ಹೋಗ್ತಾರ ಹೊಲದಲ್ಲಿ ಸಣ್ಣ ಐದು ಕಲ್ಲುಗಳನ್ನೂ ಜೋಡಿಸಿ ಪಾಂಡವರು ಅಂತ ಪೂಜಿಸಿ ಅದರ ಸುತ್ತೆಲ್ಲಾ ಚರಗಾ ಚೆಲ್ತಾರ. ಇಂತಹ ರೈತ ಮಕ್ಕಳ ಜನಪದ ಸಂಸ್ಕೃತಿಯನ್ನು ಸಿದ್ಧಲಿಂಗ ಪಟ್ಟಣಶೆಟ್ಟರು ತಮ್ಮ ಬರಹದಲ್ಲಿ ದಾಖಲಿಸುತ್ತಾರೆ. ಮುಂಬಯಿ ಕರ್ನಾಟಕದೊಳಗೆ ಪ್ರಸಿದ್ಧವಾದ ಜಾನಪದ ಕಲೆ ಶ್ರೀಕೃಷ್ಣ ಪಾರಿಜಾತಕ್ಕೆ ೧೨೫ ವರ್ಷ ತುಂಬಿದವು. ಇದನ್ನು ಪ್ರಸಿದ್ಧ ಪಡಿಸಿದವರಲ್ಲಿ ಜಮುಖಂಡಿಯ ಅಪ್ಪಾಲಾಲ್ ನದಾಫ್‌ಗೆ ಈಗ ೭೫ ವರ್ಷ ಆಗಿದೆ. ಈ ಸಣ್ಣಾಟದಲ್ಲಿ ಕೃಷ್ಣ, ರುಕ್ಮಿಣಿ, ಸತ್ಯಭಾಮೆ, ಗೊಲ್ಲಗತಿ, ಕೊರವಂಜಿ ಎಲ್ಲಾ ಪಾತ್ರೆಗಳಲ್ಲೂ ಉತ್ತಮವಾಗಿ ನಟಿಸಿದ ಪಾರಿಜಾತದ ಮೇಲೆ ತನ್ನದೇ ಆದ ಛಾಪನ್ನು ಹಾಕಿದ, ಹಾಡಿದ, ತರ್ಕಮಾಡಿದ, ತರ್ಕ ಮೀರಿದ ರಾಜ್ಯದ ತುಂಬ ಅಡ್ಡಾಡಿ ಹತ್ತು ಸಾವಿರಕ್ಕಿಂತ ಹೆಚ್ಚು ಪ್ರಯೋಗಗಳನ್ನು ಮಾಡಿ ತನ್ನ ಹರೆಯವನ್ನೆಲ್ಲಾ ಅದಕ್ಕೆ ಲೇಪಿಸಿದ ಹಣ್ಣಾದ ಆದರೆ ಕೊಳಿಲಿಲ್ಲ. ಇವತ್ತಿಗೂ ಪಾರಿಜಾತದ ಸುದ್ದಿ ತೆಗೆದರೆ ಅಪ್ಪಾಲಾಲ್‌ನ ಮೈಯೊಳಗೆ ಕೊರವಂಜಿ ಬರುತ್ತಾಳೆ. ಅಂದರೆ ಅಪ್ಪಲಾಲ್ ನಿಜವಾದ ಕಲಾರಾಧಕ ಆಗಿದ್ದ ಅಂತ ಜಾನಪದ ಕವಿಗಾರರನ್ನು ಕುರಿತು ಬರೆಯುತ್ತಾರೆ.

ಹುಬ್ಬಳ್ಳಿಯ ಇಂದಿರಾಗಾಂಧೀ ಗಾಜಿನ ಮನೆಯೊಳಗೆ 'ಹಿಂದೀ ಹಾಸ್ಯ ಕವಿ ಸಮ್ಮೇಳನ' ನೆಡೆದ ವರದಿಯನ್ನು ನೀಡುತ್ತಾ ಈ ಕವಿ ಸಮ್ಮೇಳನಕ್ಕೆ ದೇಶದ ಬೇರೆ ಬೇರೆ ರಾಜ್ಯಗಳಿಂದ ಏಳು ಜನ ಕವಿಗಳು ಬಂದಿದ್ದರು. ಯುಗ್‌ರಾಜ್ ಜೈನ್, ಗೀತೇಶ್ ಗೀತ್, ಪ್ರಹ್ಲಾದ್ ನವೀನ್, ಪೀರೂಲಾಲ್ ಬಾದಲ್, ವಿಶ್ವೇಶ್ವರ ವರ್ಮಾ, ರಾಜೇಂದ್ರ ಮಾಲವೀಯ್ ಅಲಸೀ, ಸತ್ಯನಾರಾಯಣ ಮೌರ್ಯ ಇದೊಂದು ಶುದ್ಧ ಹಾಸ್ಯ ಕವಿ ಸಮ್ಮೇಳನವಾಗಿತ್ತು. ಸಂಚಾಲಕರಾಗಿ ಸ್ವಾಗತ ಕೋರಿದ ಯುಗರಾಜ್ ಜೈನ್ ಒಂದು ತಾಸು ಮೊದಲೇ ಬಂದು ಮಲಗಿದವರಿಗೆ ಸಮಾಜವಾದ್, ಬರದವರಿಗೆ ಸಾಧುವಾದ್, ಬಂದವರಿಗೆ ಧನ್ಯವಾದ್ ಅನ್ನುತ್ತ ಮೊದಲೇ ಚಪ್ಪಾಳೆ ಹೊಡಿರಿ ಅಮ್ಯಾಲೆ ಹೊಡೀತೀರೋ ಇಲ್ಲ ಗ್ಯಾರೆಂಟಿ ಇಲ್ಲ. ಅಂತ ಸಭಿಕರಿಂದ ಚಪ್ಪಾಳೆ ಹೊಡೆಸಿದರು. ಎಲ್ಲಾ ಕವಿಗಳು ಬಾಯಿಪಾಠ ಮಾಡಿದ ಹಾಗೆ ಕವಿತೆಗಳನ್ನು ಹೇಳುತ್ತಿದ್ದರು. ತಮ್ಮಲ್ಲಿಯ ವಯಸ್ಸು ಅಂತಸ್ತುಗಳ ಭೇದ ಮರೆತು ಈ ಕವಿಗಳು ನೀಡಿದ ಜೀವರಸ, ಜೀವನೋತ್ಸಾಹಗಳು ನಮ್ಮವರ ಕವಿತಾ ವಾರ್ತದೊಳಗೂ ಮೂಡಿಬರಬೇಕು. ಹಾಸ್ಯಾಸ್ಪದ, ಅಶ್ಲೀಲಗಳನ್ನೇ ಹಾಸ್ಯ ಅಂತ ಬಿತ್ತರಿಸುವ ನಮ್ಮಲ್ಲಿಯ ಸ್ವಯಂ ಘೋಷಿತ ಪದ್ಯಕಾರರ ಹೂರಣ ಹೊರಬೀಳಬೇಕಾದರೆ ಇಂಥಲ್ಲಿ ಹಾಜರಾಗಬೇಕು ಕಿವಿತೆರೆದು ಕೇಳಬೇಕು. ತಮ್ಮೊಳಗಿನ ಕವಿಗೆ ಎಷ್ಟು ಗೆದ್ದಲಿ ಹತ್ತೇತಿ, ಹುಳುಕಾಗೇತಿ ಅನೋದನ್ನ ತಿಳಿಬೇಕು ಅಂತ ಹೇಳುತ್ತಾರೆ. ತುಂಬಿದ ಕಾವ್ಯ ಸಭಾಂಗಣದಾಗ ಕುಂತವರನ್ನೂ ಬಿಡಲಿಲ್ಲ; ಒಬ್ಬಾವ ಎದ್ದು ಒಂದಕ್ಕ ಹೊಂಟರ ಭೈಯಾ, ಹೋಗಬೇಡ ಬಾಬಿ ಒಬ್ಬಾಕೆ ಆಗ್ತಾಳ, ಇಲ್ಲೇ ಕುಂತಾಳ, ಅಂತ ಅವನ್ನ ಕುಂದ್ರಿಸಿ ಬಿಟ್ಟರು ಅಂಥ ಸಹಜ ಹಾಸ್ಯವನ್ನು ದಾಖಲಿಸಿದ್ದಾರೆ.

ದೇಹ ಕನ್ನಡ ರಕ್ತ ಶಿವಾಜಿ, ಆತ್ಮ ಬಸವಣ್ಣ ಅಂತ ರಾಮಜಾಧವರನ್ನು ಕುರಿತು ಹೇಳುತ್ತಾ ಆಡಳಿತ ಅಧಿಕಾರಿ ಮತ್ತು ಕಸ್ಟಮ್ಸ ಅಧಿಕಾರಿಯಾಗಿ ಪ್ರಾಮಾಣಿಕರಾಗಿ ದುಡಿದರು. ೧೯೭೭ರಲ್ಲಿ ನಿವೃತ್ತಿ ಹೊಂದಿದ ಮೇಲೆ ಧಾರವಾಡದ ಸಂಸ್ಥೆ, ಸಂಘಟನೆ, ವ್ಯಕ್ತಿ, ಚಳುವಳಿಗಳಿಗೆ ಹೊಸ ಉಸಿರು ನೀಡಿದರು. ತವರುಮನೆಯಾದರು, ಬಂಗಾರದ ಬಳಗ ಕಟ್ಟಿದರು. ಕುಂದಣಗಾರರಿಗೆ ನ್ಯಾಯ ಕೋರಿದರು. 'ಮಕ್ಕಳ ಮಂದಿರ' ಮಾಸ ಪತ್ರಿಕೆಯ ಸಂಪಾದಕರಾದರು. ಜಾಗೃತ ನಾಗರಿಕ ಮಂಡಳ, ಕೋಮುಸೌಹಾರ್ದ ಸಮಿತಿ, ಕನ್ನಡ ಕೇಂದ್ರ ಕ್ರಿಯಾ ಸಮಿತಿ, ಬೆನ್ನಲು ಬಾಗಿದ್ದರು. 'ಇದಿಷ್ಟೆ ಸತ್ಯ' ಅನ್ನುವ ಕವನ ಸಂಕಲನವನ್ನು 'ಬಸವ-ಪ್ರಹರ' ಎನ್ನುವ ವಚನ ಸಂಗ್ರವನ್ನು ಪ್ರಕಟಿಸಿದರು ಎಂದು ಅವರ ಜೀವನ ಸಾಧನೆಗಳನ್ನು ನೀಡುತ್ತಾ ಈಗ ರಾಜ ಇಲ್ಲದ ಧಾರವಾಡ, ಬಸವಣ್ಣ ಇಲ್ಲದ ಮಂಗಳವಾಡ ಅಂತ ಅವರ ಅನಿವಾರ್ಯತೆಯನ್ನು ಹೇಳುತ್ತಾರೆ. ಅದೇ ತೆರನಾಗಿ, ಚಿತ್ರಕಲಾವಿದ ದಾನಪ್ಪ ಹಾಲಬಾಯಿ ಪತ್ರ ಕರ್ತರಾದ ಎಸ್.ಜಿ. ಮೈಸೂರುಮಠ. ಶಂಕರ ಪಾಟೀಲ, ಹುಚ್ಚೇಶ್ವರ ಮೇದಿ, ರಂ.ಕ. ದುರ್ಗಾದಾಸ್ ಮುಂತಾದವರ ಬಗ್ಗೆ ಮಾಹಿತಿ ನೀಡುತ್ತಾರೆ.

ಗದುಗಿನಲ್ಲಿ ನೆಡೆದ ಮಿಜೋರಾಂ 'ಸಂಸ್ಕೃತಿ ದರ್ಶನ' ಕುರಿತು ಬರೆಯುತ್ತಾ ಮಿಜೋರಾಂ ಜನಾಂಗದ ಅನೇಕ ಮಗ್ಗಲುಗಳನ್ನು ಪರಿಚಯಿಸುತ್ತಾರೆ. ಮಿಜೋರಾಂನ ಜನತೆ ಗಿರಿವನ ಸಂಸ್ಕೃತಿಯನ್ನು ಉಳಿಸಿ ಕೊಂಡಿದ್ದಾರೆ. ಈ ಗುಡ್ಡಗಾಡಿನ ಕಲಾವಿದರು ತಮ್ಮತನವನ್ನು ಎಳ್ಳೆಷ್ಟು ಬಿಟ್ಟು ಕೊಡದ ಆಧುನಿಕರು, ಈ ನಾಡಿನ ಹೆಚ್ಚಿನ ಜನ ಕ್ರಿಶ್ಚಿಯನ್ನರು ಅವರು ಸುಶಿಕ್ಷಿತರು, ಮಾಂಸ ಹಾರಿಗಳು, ಎಲ್ಲಕ್ಕೂ ಮುಖ್ಯವಾಗಿ ನಾಯಕರು, ನರ್ತಕರು, ಸೌಂದರ್ಯ ಪ್ರೇಮಿಗಳು, ವರ್ಣ ಭೇದವನ್ನು ಎಣಿಸದ ಮಿಜೋರಾಂಗಳ ಸಾಮೂಹಿಕ ಐಕ್ಯಭಾವ ಇಡೀ ನಾಡನ್ನ ಏಕಸೂತ್ರದೊಳಗೆ ಬಂದಿಸಿದೆ. ಅಲ್ಲಿಯ 'ಚೆರಾವ'ಣ ಜಾನಪದ ನೃತ್ಯ ಬಹಳ ಪ್ರಸಿದ್ಧಿ; ಬಹುತೇಕ ಎಲ್ಲಾ ಹಬ್ಬ ಹರಿದಿನಗಳಲ್ಲಿ ನೃತ್ಯ ಮಾಡುವುದು ಮಿಜೋರಾಂ ಜನರ ಸಂಪ್ರದಾಯವಾಗಿದೆ. ನೃತ್ಯಗಳಲ್ಲಿ ಹಲವು ಪ್ರಕಾರಗಳಿದ್ದು ಮಧುರ ಭಾವ ಪ್ರದರ್ಶಿಸುವ ಪೌಂಚೇಯಿ, ಕಾವರ್ಚೇಯಿ, ವಾಡೀರಿಯಾ ಪ್ರಕಾರಗಳಾದರೆ, ಸಾರ್ಲಮ್ಯಾಯ್ ಅಥವಾ ಸೋಲಾಕಿಯಾ ಅನ್ನುವುದು ಶೌರ್ಯ ಭಾವ ಪ್ರದರ್ಶಿಸುತ್ತದೆ. ಪಾವಿ, ಆದಿವಾಸಿಗಳ ವಿಜಯ ನೃತ್ಯಗಳೂ ಇವೆ. ದುಃಖ, ಸುಖ ಎರಡರೊಳಗೂ ಕುಣಿಯುವ ಹಾಡುವ ಮಿಜೇಗಳು ಮಳೆಗಾಲದ ಎರೆಡು ನದಿಗಳಿದ್ದಾಂಗ ಅಂತ ಅವರ ಸಂಸ್ಕೃತಿಯನ್ನು ಓದುಗರಿಗೆ ಪರಿಚಯಿಸುತ್ತಾರೆ.

ರಂಗ ಕಲಾವಿದೆ ಜುಬೇದಾ ಬಾಯಿ, ವಿಮರ್ಶಕ ಜಿ.ಎಸ್. ಆಮೂರ್, ಶ್ರೀರಂಗರ ಮಗಳಾದ ಇಂಗ್ಲೀಷ್ ಲೇಖಕಿ ಶಶಿ ದೇಶಪಾಂಡೆ, ಚೆನ್ನವೀರ ಕಣವಿ, ಬೇಂದ್ರ, ಶಿವಮೊಗ್ಗದ ನೃತ್ಯ ಕಲಾವಿದರು, ಕನ್ನಡ ಸಂಸ್ಕೃತಿ ಇಲಾಖೆಯ ಕಾರ್ಯಕ್ರಮಗಳು ಧಾರವಾಡ ವಿಶ್ವವಿದ್ಯಾಲಯದೊಳಗೆ ಜರುಗಿದ ವಿಚಾರಗೋಷ್ಠಿಗಳು, ನೀನಾಸಂನ ತಿರುಗಾಟ, ಮಹಿಳಾ ಲೇಖಕಿಯರ ಸಂಘದ ಕಾರ್ಯಕ್ರಮಗಳು, ದಕ್ಷಿಣ ಭಾರತ ಸಾಂಸ್ಕೃತಿಕ ಕೇಂದ್ರ ತಂಜಾವೂರು, ಮಧ್ಯ ಭಾರತ ಸಾಂಸ್ಕೃತಿಕ ಕೇಂದ್ರ, ನಾಗಪುರದವರ ಕಾರ್ಯ ಕ್ರಮಗಳನ್ನು ಕುರಿತು ಸಿದ್ದಲಿಂಗ ಪಟ್ಟಣ ಶೆಟ್ಟರು, ಸರಳವಾದ ರೀತಿಯಲ್ಲಿ ನೇರಮಾತುಗಳಲ್ಲಿ ಕಟ್ಟಿಕೊಡುತ್ತಾರೆ.

**೩. ಚಹಾದ ಜೋಡಿ ಚೂಡಾದ್ಹಾಂಗ-೩**

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ೧೯೯೬-೯೭ರಲ್ಲಿ ಬರೆದ ಅಂಕಣ ಬರಹಗಳ ಸಂಗ್ರಹವಿದು ಪ್ರಜಾವಾಣಿಯ ಸಾಪ್ತಾಹಿಕ ಪುರವಣಿಯಲ್ಲಿಯ 'ಚಹಾದ ಜೋಡಿ ಚೂಡಾದ್ಹಾಂಗ' ಎನ್ನುವ ತಲೆ ಬರಹದಡಿಯಲ್ಲಿ ಇವರು ರಚಿಸಿದ ಮೂರನೇ ವರ್ಷದ ಐವತ್ತೆರೆಡು ಅಂಕಣ ಬರಹಗಳು ಇಲ್ಲಿವೆ. ಡಾ. ನರಹಳ್ಳಿ ಬಾಲಸುಬ್ರಮಣ್ಯಂ ಹೇಳುವಂತೆ ಸಾಮಾನ್ಯ ಬರಹಗಾರನ ಲೇಖನಿಯಲ್ಲಿ ನೀರಸ ವರದಿಯಾಗಬಹುದಾಗಿದ್ದ ಈ ಬಗೆಯ ಬರವಣಿಗೆಯನ್ನು ಡಾ. ಸಿದ್ಧಲಿಂಗ ಪಟ್ಟಣಶೆಟ್ಟರು ತಮ್ಮ ಸೃಜನಶೀಲ ಪ್ರತಿಭೆಯಿಂದಾಗಿ ಇದನ್ನೊಂದು ಚೇತೋಹಾರಿ ಅನುಭವವನ್ನಾಗಿಸಿದ್ದಾರೆ.[೧೩] ಸಾಂಸ್ಕೃತಿಕ ಕಾರ್ಯಕ್ರಮಗಳೇ ಈ ಅಂಕಣ ಬರಹದ ಮೂಲವಸ್ತುವಾಗಿದ್ದರೂ ಅಲ್ಲಿ ಭಾಗವಹಿಸಿದ ಹೆಸರಾಂತ ಸಾಹಿತಿ, ಕಲಾವಿದ, ಸಂಗೀತಗಾರ, ಧರ್ಮಾಧಿಕಾರಿ, ಸಮಾಜಸುಧಾರಕ ಮುಂತಾದವರ ಜೀವನ ಸಾಧನೆಗಳನ್ನು ಸೂಚ್ಯವಾಗಿ ಹೇಳುತ್ತಾರೆ. ಅವರಾಡಿದ ಬೆಲೆಯುಳ್ಳ ಮಾತುಗಳನ್ನು ದಾಖಲಿಸುತ್ತಾರೆ. ದಕ್ಷಿಣಭಾರತದ ಹಿಂದಿ ಪರಿಷತ್ ಉದ್ಘಾಟನೆಗೆ ದಿಲ್ಲಿಯಿಂದ ಪ್ರಸಿದ್ಧ ಹಿಂದೀ ಸಾಹಿತಿಗಳಾದ ರಾಜೇಂದ್ರಯಾದವ್ ಬಂದಿದ್ದರು. ಪ್ರೇಮಚಂದರ ನಂತರ ಮೂರ್‍ನಾಲ್ಕು ಮಂದಿ ಪ್ರಸಿದ್ಧ ಕತೆಗಾರರಲ್ಲಿ ಇವರೂ ಒಬ್ಬರು. ಇವರ ಪತ್ನಿ ಮನ್ನೂ ಭಂಡಾರಿ ಪ್ರಸಿದ್ಧ ಲೇಖಕಿ 'ಸಾರಾ ಆಕಾಶ್' ಉಖ್‌ಡೇ ಹವಿ ಲೋಗ್ ಮುಂತಾದ ಕಾದಂಬರಿ 'ಜಹ್ನಾ ಲಕ್ಷ್ಮೀ ಕೈದ್ ಹೈ', 'ಫೋಟೀ ಫೋಟೀ', 'ತಾಜ್‌ಮಹಲ್', 'ರೆನಾರೇಸೇ ಕಿನಾರೇತಕ್' ಮುಂತಾದ ಏಳು ಕಥಾ ಸಂಗ್ರಹ ಐದಾರು ವಿಮರ್ಶಾ ಗ್ರಂಥ ಏಳೆಂಟು ಅನುವಾದ ಕೃತಿ, ಇತ್ಯಾದಿಗಳನ್ನು ಪ್ರಕಟಿಸಿದ್ದಾರೆ. ದಿಲ್ಲಿಯ ಅಕ್ಷರ ಪ್ರಕಾಶನದ ಮಾಲಿಕರಾಗಿದ್ದಾರೆ. ಹಿಂದಿ ಮಾಸಪತ್ರಿಕೆ 'ಹನ್ಸ್'ನ ಸಂಪಾದಕರಾಗಿದ್ದಾರೆ, ಎಂದು ಪರಿಚಯಿಸುತ್ತಾ, ಅವರ ಮಾತುಗಳ್ನು ದಾಖಲಿಸುತ್ತಾರೆ. ಉದ್ಘಾಟನೆಯ ದಿನ ಅವರು ಹೇಳಿದ ಮಾತುಗಳು ದಕ್ಷಿಣ ಭಾರತದ ನಮ್ಮ ಹಿಂದೀ ಭಕ್ತ ಶಿಕ್ಷಕರನ್ನು ಸಾಕಷ್ಟು ನೇರವಾಗಿ ತಿವಿದು ಚುಚ್ಚಿ ಮಾತಾಡಿದ್ಹಾಂಗಿದ್ದವು. ಇಷ್ಟುದಿವಸ ಹಿಂದೀ ಸೇವಾ ಮಾಡಿರೀ, ಇನ್ನು ಅದು ಸಾಕು ಹಿಂದೀ ಬಗ್ಗೆ ಇನ್ನಮ್ಯಾಲೆ ತಟಸ್ಥವಾಗಿ ನಿರ್ಲಿಪ್ತವಾಗಿ, ವೈಜ್ಞಾನಿಕವಾಗಿ ಯೋಚಿಸಬೇಕು. ಹಿಂದೀಯನ್ನು ರಾಜ್‌ಭಾಷಾ ಅಂತ ಕರೆದು ತಪ್ಪ ಮಾಡಿದರು. ಅದರಿಂದಾಗಿ ಅದು ಸರಕಾರಿ ಭಾಷಾ ಆತು, ಅದರ ವಿರೋಧ ಅಂದರೆ ಕೇಂದ್ರದ ಹಿಂದೀ ನೀತಿಯ ವಿರೋಧ ಅಂತ ಆಗಿ ಬಿಟ್ಟಿತು. ಮತ್ತು ನಮ್ಮ ಅಧ್ಯಾಪಕರ ಹಿಂದೀಯೊಳಗೆ ಚಲನಶೀಲತೆ ಇರೋದಿಲ್ಲ ಬದುಕಿನ ವಿವಿಧ ಕ್ಷೇತ್ರಗಳ ಅನುಭವಗಳನ್ನು ಹಿಂದೀಯೊಳಗೆ ತರಬೇಕಾಗೇತಿ, ನೀವು ದಕ್ಷಿಣದವರು ನಿಮ್ಮ ನಿಮ್ಮ ಭಾಷೆಗಳ ಶ್ರೇಷ್ಠ ಕೃತಿಗಳನ್ನು ಹಿಂದೀಗೆ ತರ್‍ರಿ, ಹಿಂದೀಯ ಒಳ್ಳೆದನ್ನ ನಿಮ್ಮಲ್ಲಿಗೆ ಒಯ್ಯಿರಿ, ಈ ರೀತಿ ಭಾಷೆ ಸಾಹಿತ್ಯ ಸಂಸ್ಕೃತಿಗೆ ನಿಮ್ಮ ಋಣ ತೀರಿಸಿರಿ, ಬರೀ ವ್ಯಾಕರಣ ಕಲಿಸಿಗೊಂತ ಕುಂದರ ಬ್ಯಾಡ್ರಿ ಅಂದರು.[೧೪] ಹಾಗೆಯೇ ಹಿಂದೀ ಶಿಕ್ಷಕ. ಅನುವಾದಕ ಲೇಖಕರಾಗಿದ್ದ ಗುರುನಾಥ ಜೋಶಿಯವರ ಪುಣ್ಯತಿಥಿ ಆಚರಣೆ ಮಾಡಿದ್ದನ್ನು ಹೇಳುತ್ತಾ, ಜೋಶಿಯವರ ವ್ಯಕ್ತಿತ್ವ ಚಿತ್ರಿಸುತ್ತಾರೆ. ನಿಷ್ಠಾವಂತರಾಗಿದ್ದ ಜೋಶಿಯವರು ಆದರ್ಶ ಬದುಕಿಗೆ ಹೆಸರಾಗಿದ್ದರು. ಕಾಶೀಯಲ್ಲಿ ಕಲಿತು ಶಾಸ್ತ್ರೀ ಪದವಿ ಪಡೆದಿದ್ದರು. ಶ್ರೀ ಪ್ರಕಾಶ್ ನರೇಂದ್ರದೇವ್, ಬಿ.ವಿ.ಕೇಸ್‌ಕರ್ ದಿವಾಕರ, ಹರ್ಡಿಕರ್, ನಿಟ್ಟೂರು ಶ್ರೀನಿವಾಸರಾವ್ ಮುಂತಾದವರ ಸಂಪರ್ಕದೊಳಗಿದ್ದರು. ಬಡತನದಿಂದ ಮೇಲಕ್ಕೆ ಬಂದ ಜೋಶಿಯವರು ಸ್ವಾತಂತ್ರ ಹೋರಾಟದಲ್ಲಿ

ಭಾಗವಹಿಸಿ ಎರೆಡು ವರುಷ ಜೈಲಿಗೆ ಹೋಗಿದ್ದರು. ಇವರು ಬಹುಭಾಷಾ ವಿದ್ವಾಂಸರಾಗಿದ್ದರು. ಭಾರತದ ತುಂಬೆಲ್ಲಾ ಸುತ್ತಾಡಿದ ಇವರು, ಹೋದ ಕಡೆಯಲ್ಲೆಲ್ಲಾ ಕನ್ನಡ ಸಂಸ್ಕೃತಿಯ ಪ್ರಚಾರ ಮಾಡುತ್ತಿದ್ದರು. ೧೫ ಸ್ವತಂತ್ರ ಕನ್ನಡ ಪುಸ್ತಕ, ೪ ಹಿಂದೀ ಪುಸ್ತಕ ೧೫ ಹಿಂದೀ ಸ್ವತಂತ್ರ ಕೃತಿಗಳು ಕನ್ನಡಾನುವಾದ ಮಾಡಿದ್ದರು. ಕೈಲಾಸಂ ಅವರ ಬಾಲ ಪ್ರಪಂಚ, ಕುವೆಂಪು ಅವರ ಕಾನೂರು ಸುಬ್ಬಮ್ಮ ಹೆಗ್ಗಡತಿ, ಕೃತಿಗಳನ್ನು ಹಿಂದಿಗೆ ಅನುವಾದಿಸಿದರು ಎಂದು ಜೋಶಿಯವರ ಬಗ್ಗೆ ಸಂಕ್ಷಿಪ್ತ ಮಾಹಿತಿ ನೀಡುತ್ತಾರೆ.

ರ್‍ಯಾಣ ಎನ್ನುವ ಉತ್ತರ ಕರ್ನಾಟಕದ ಜಾನಪದ ಹಾಡಿನ ಪ್ರಕಾರವನ್ನು ಕುರಿತು ಹೇಳುತ್ತಾ ಬೆಳತನಕ ಡೊಳ್ಳಿನ ಪದ ಹಾಡುವಾಗ ನಡುವೆ ಬ್ಯಾಸರ ಆಗಬಾರದು ಅಂತ ನಡುವೆ ಈ ರ್‍ಯಾಣಗಳನ್ನು ಹೇಳುತ್ತಾರೆ. ದೊಡ್ಡಾಟಗಳಲ್ಲಿ ಕೆಲವೊಂದು ಕಡೆ ಈ ರ್‍ಯಾಣಗಳನ್ನು ಹೇಳುತ್ತಾರೆ. ಶೃಂಗಾರದ ಹರದೇಶಿ ಹಂಗೇನ್ ಇದ್ದರೂ ಇಲ್ಲಿ ಅಶ್ಲೀಲದ ಪ್ರಮಾಣ ಅಗತ್ಯಕ್ಕಿಂತ ಜಾಸ್ತಿ. ಹಳ್ಳಿಯವರಿಗೆ ಅಶ್ಲೀಲ ಅನಸೋದೇ ಇಲ್ಲ. ಹೆಣ್ಣು ಗಂಡಿನ ವಿಚಿತ್ರ ಅನೈತಿಕ ಸಂಬಂಧಗಳನ್ನು ರೋಚಕವಾಗಿ ಅತಿರಂಜಕ ಶೈಲಿಯಲ್ಲಿ ಕಥೆ ಹೇಳಿದ್ಹಾಂಗ ಹಾಡುತ್ತಾರೆ. ಮಂದೀನ್ನ ನಗಿಸ್ತಾರ, ಪರೋಕ್ಷವಾಗಿ ಅವರೊಳಗಿನ ಹೊಲಸಿಗೆ ಬಂದು ರಹದಾರಿ ತೋರಿಸುತ್ತಾರೆ. ಹಾಸ್ಯ ಅಪಹಾಸ್ಯಗಳು ಬಹುತೇಕ ಟೊಂಕದ ಕೆಳಗಿನ ಶಬ್ದಗಳು. ಒಮ್ಮೊಮ್ಮೆ ಹೋಳಿಹುಣ್ಣಿಮೆಯ ಹಲ್ಕಟ್ ಹಾಡುಗಳನ್ನು ನಾಚಿಸ್ತಾವ, ಸಾಕಷ್ಟು ಪ್ರಚಲಿತವಿದ್ದರೂ ಇವುಗಳನ್ನು ಸಂಗ್ರಹಿಸುವ ಕೆಲಸ ಹೆಚ್ಚು ಆಗಿಲ್ಲ ಎಂದು ಮಾಹಿತಿ ನೀಡುತ್ತಾರೆ.

ನಾನಿಕಾಕಾ ಎಂದು ಪ್ರಸಿದ್ಧರಾಗಿರುವ ಎನ್ಕೆ ಕುಲಕರ್ಣಿ ಧಾರವಾಡದ ಹಿರಿಯ ಸಾಹಿತಿಗಳಲ್ಲಿ ಒಬ್ಬರು ಅವರು ವಿಪುಲವಾದ ಸಾಹಿತ್ಯ ರಚನೆ ಮಾಡಿದ್ದಾರೆ. ಕಥೆ, ಕಾದಂಬರಿ, ಏಕಾಂತ ನಾಟಕಗಳು, ಹರಟೆ, ಲಲಿತ ಪ್ರಬಂಧಗಳನ್ನು ರಚಿಸಿದ್ದಾರೆ. ಕುಮಾರವ್ಯಾಸನನ್ನೇ ಕುರಿತು ಏಳೆಂಟು ಕೃತಿಗಳನ್ನು ರಚಿಸಿದ್ದಾರೆ. ಇಷ್ಟೆಲ್ಲಾ ಸಾಹಿತ್ಯ ಕೃಷಿ ಮಾಡಿದ್ದರೂ ಸಾಹಿತ್ಯ ವಲಯದೊಳಗೆ ಉಪೇಕ್ಷೆಗೆ ಒಳಗಾಗಿದ್ದಾರೆ. ಕನ್ನಡದ ಕೀರ್ತಿವಂತ ವಿಮರ್ಶಕರು ಎನ್ಕೆ ಅವರ ಬಗ್ಗೆ ಏನೂ ಮಾಡಲಿಲ್ಲ ಎಂದು ನೋವು ತುಂಬಿದ ಆಕ್ರೋಶವನ್ನು ಶೆಟ್ಟರು ವ್ಯಕ್ತ ಪಡಿಸುತ್ತಾರೆ. ಡಾ.ಎಂ.ಆರ್. ಗಜೇಂದ್ರಗಡರ ವ್ಯಕ್ತಿತ್ವ ಪರಿಚಯಿಸುತ್ತಾ ಇಂಗ್ಲೀಷ್, ಹಿಂದೀ, ಸಂಸ್ಕೃತ, ಉರ್ದು, ಅರಬ್ಬ, ಮರಾಠೀಗಳನ್ನು ಬಲ್ಲ ಗಜೇಂದ್ರಗಡರು ಸಾಹಿತ್ಯ ವಿಜ್ಞಾನ, ಧರ್ಮ, ತತ್ವಶಾಸ್ತ್ರಗಳನ್ನು ಅರಗಿಸಿಕೊಂಡಿದ್ದರು. ತಮ್ಮ ಅನುಭವಗಳನ್ನು ಮಠವೊಂದರ ಜಗದ್ಗುರುವಿನ ಹಾಗೆ ಹೇಳುವ ವಿರಳ ಅಧ್ಯಾಪಕರು. ನಿಜವಾದ ಅರ್ಥದಲ್ಲಿ ಇಸ್ಲಾಮಿನ ಸಂತನಂತೆ, ಮಾತನಾಡುವ ಇವರನ್ನು ಗಜೇಂದ್ರಗಡಾಚಾರ್ಯರು ಎಂದು ಕರೆದಿದ್ದು ಅನ್ವರ್ಥಕವಾಗಿದೆ ಎಂದು ಬರೆಯುತ್ತಾರೆ.

ಧಾರವಾಡದ ಕೃಷಿ ವಿಶ್ವವಿದ್ಯಾಲಯದ ಪಶುವೈದ್ಯಕೀಯ ವಿಭಾಗದೊಳಗೆ ಸೇವೆ ಸಲ್ಲಿಸುವ ಡಾ. ಲಕ್ಷ್ಮಯ್ಯನವರ ಸೇವೆಯನ್ನ 'ರೈತರ ಪಾಲಿಗೆ ದೇವರು, ಸೇವೆ ಸದಾಚಾರ ನಿಷ್ಠೆ ಪ್ರಾಮಾಣಿಕತೆಗಳನ್ನು ನಿರಂತರವಾಗಿ ರೂಡಿಸಿಕೊಂಡಿರುವ ಪ್ರೊ. ಲಕ್ಷ್ಮಯ್ಯ ವಿಶಿಷ್ಟ ಅಧ್ಯಾಪಕ ವೈದ್ಯ, ಈವರೆಗೆ ಎರೆಡುವರೆ ಲಕ್ಷ ಆಕಳು, ಎತ್ತು, ಆಡು, ಕುರಿ, ನಾಯಿ ಇತ್ಯಾದಿ ಪ್ರಾಣಿಗಳಿಗೆ ತಮ್ಮ ಕೃಷಿ ವಿಶ್ವವಿದ್ಯಾಲಯದ ಅಸ್ಪತ್ರೆಯೊಳಗೆ ಚಿಕಿತ್ಸೆ ನೀಡಿದ ಲಕ್ಷ್ಮಯ್ಯ ಸ್ವತಃ ಹಳ್ಳಿಹಳ್ಳಿಗೆ ಹೋಗಿ ಚಿಕಿತ್ಸೆ ನೀಡಿದ ಜಾನುವಾರುಗಳ ಸಂಖ್ಯೆ ಐದು ಲಕ್ಷದಷ್ಟು, ಪಶುಗಳ ಕಣ್ಣಿನ ಕ್ಯಾನ್ಸರ್, ಕೋಡಿನ ಕ್ಯಾನ್ಸರ್, ಸಿಜೇರಿಯನ್, ಹೊಟ್ಟೆಯ, ಮೂತ್ರನಾಳದ ಆಪರೇಶನ್ ಮಾಡಿದ್ದು ೩೪ ಸಾವಿರದಷ್ಟು ಹಲವಾರು ಪಶುರೋಗಗಳಿಗೆ

ಹೊಸ ಹೊಸ ನಿಧಾನ ವಿಧಾನಗಳನ್ನು ಕಂಡುಹಿಡಿದಿರುವ ಸಂಶೋಧಕ ವಿಜ್ಞಾನಿಯೂ ಹೌದು; ಯಾರಿಂದಲೂ ಒಂದು ಪೈಸೆ ಬಯಸಲಾರದ ನಿಸ್ವಾರ್ಥ ಸೇವಾ ಮಾಡಿದ್ದನ್ನು ಲಿಂಗ ಮೆಚ್ಚಿ ಅಹುದಹುದು ಎಂದಿರಬೇಕು'[೧೫] ಎಂದು ಮೆಚ್ಚಿಗೆ ಸೂಚಿಸುತ್ತಾರೆ. ಮಹತ್ವದ ವ್ಯಯಕ್ತಿಯೊಬ್ಬರ ಸಾಧನೆಗಳನ್ನು ದಾಖಲಿಸುತ್ತಾರೆ.

ಅದೇ ರೀತಿಯಾಗಿ ಅಧ್ಯಾಪಕ ಸದಾಶಿವ ಒಡೆಯರ್ ಮೂರು ಸಾವಿರ ಮಠದ ಗುರುಗಳಾದ ಡಾ. ಗಂಗಾಧರ ರಾಜಯೋಗೀಂದ್ರ ಸ್ವಾಮಿಗಳು ಬೆಂಗಳೂರು ವಿಶ್ವವಿದ್ಯಾಲಯದಲ್ಲಿ ಗ್ರಂಥಪಾಲಕರಾಗಿ ಕನ್ನಡವನ್ನು ಕಟ್ಟಿ ಬೆಳೆಸಿದ ಟಿ.ವಿ. ವೆಂಕಟರಮಣಯ್ಯ, ಕನ್ನಡವೈದ್ಯ ಸಾಹಿತ್ಯದಲ್ಲಿ ಮಹತ್ವದ ಕೃತಿಗಳನ್ನು ರಚಿಸಿದ ಡಾ. ಅಶೋಕಪೈ, ಸಾಗರದ ಚಕ್ಷುತಜ್ಞ ಡಾ.ಮೋಹನ್, ಡಾ.ಕಲವೀರಪ್ರಭು ಕ್ಯಾಲಕೊಂಡ, ಬತ್ತದ ತಳಿ ಸಂಶೋಧಕ ಛೋಟಾರಾಂ, ರಾಷ್ಟ್ರೀಯ ಪ್ರಶಸ್ತಿ ವಿಜೇತ ಮಹದೇವಪ್ಪ ಮುಂತಾದವರನ್ನು ಕುರಿತು ವಿಸ್ತೃತವಾದ ಮಾಹಿತಿ ನೀಡುತ್ತಾರೆ.

ಶಹಪುರ ತಾಲೂಕಿನಲ್ಲಿ ನೆಡೆದ ವಿಚಾರಸಂಕೀರಣ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಕುರಿತು ಹೇಳುತ್ತಾ ಪತ್ರಿಕೆಗಳು ಇಂದಿನ ಪ್ರಜಾಪ್ರಭುತ್ವದೊಳಗೆ ಎದುರಿಸುತ್ತಿರುವ ನೋವುಗಳನ್ನು ನಿರ್ವಹಿಸಬೇಕಾದ ಕರ್ತವ್ಯಗಳನ್ನು ಮತ್ತು ಪ್ರತಿಕ್ರಿಯಿಸಬೇಕಾದ ಸಮಾಜದ ಹೊಣೆಗಳು ಗುರುತರವಾಗಿವೆ. ಪತ್ರಿಕಾರಂಗ ಅದರ ಶಾಸನಾಂಗದ ಶುದ್ಧ ಜ್ಞಾನ, ಕಾರ್ಯಾಂಗದ ಕರ್ತವ್ಯ ಪ್ರಜ್ಞೆ, ನ್ಯಾಯಾಂಗದ ನಿಷ್ಠುರ ನಿಷ್ಠೆಯನ್ನು ಮೇಳೈಸಿಕೊಂಡ ಶಕ್ತ ಮಾಧ್ಯಮ ಎನ್ನುತ್ತಾರೆ. ಹೈದರಾಬಾದ್ ಕರ್ನಾಟಕದೊಳಗೆ ಅನೇಕ ಜನ ಪ್ರತಿಭಾವತಂರಿದ್ದಾರೆ. ಅದರಲ್ಲಿ ಹಿಂದುಳಿದವರನ್ನು ಗುರುತಿಸುವ ಕೆಲಸವಾಗಬೇಕು, ಗೋಗಿಯ ಡಿ.ಎಸ್. ಅಕ್ಕಿಯವರದು 'ಮೌನಸಾಧನೆ', ಅವರು ರಚಿಸಿದ ಚಿತ್ರಗಳು ಆಕರ್ಷಕವಾಗಿವೆ. ಶಹಪುರ ತಾಲೂಕಿನ ೧೫೫ ಹಳ್ಳಿಗಳ ದೇವಸ್ಥಾನ ಕೋಟಿ ಕೊತ್ತಲು, ಮಠ, ಮಸೀದಿ, ಐತಿಹಾಸಿಕ ಸ್ಥಳಗಳ ಬಗ್ಗೆ ಅಕ್ಕಿಯವರಿಗೆ ನಿಖರವಾದ ಜ್ಞಾನವಿದೆ. ಬಿಡುವಿನ ವೇಳೆಯನ್ನು ಜ್ಞಾನ ಸಂಪಾದನೆಗಾಗಿ ಸದುಪಯೋಗಪಡಿಸಿಕೊಂಡಿದ್ದಾರೆ. 'ಚಿಗುರು-ಚಿಂತನ', 'ಮುಂಬೆಳಗು' ಕವನ ಸಂಗ್ರಹಗಳನ್ನು 'ಜ್ಯೋತಿಗೆಲ್ಲಿ ಜಾತಿ', 'ಧರ್ಮಸಂಕಟ' ಮುಂತಾದ ನಾಟಕಗಳನ್ನು ರಚಿಸಿದ್ದಾರೆ. ಇವರ ವ್ಯಕ್ತಿತ್ವದ ವರ್ಷಕ್ಕೆ ಟೊಂಗೆಗಳು ಅನೇಕ ಸ್ವಂತ ಆಸಕ್ತಿಯಿಂದ ಪ್ರಾಚೀನ ಸ್ಮಾರಕ ಶಾಸನಗಳನ್ನು ಹುಡುಕಿ ಅಲ್ಲಿ ಹುದುಗಿದ ಪ್ರಾಣ ಸ್ಪಂದನೆಗಳನ್ನು ನುಡಿಸುತ್ತಿರುವುದು ಮೆಚ್ಚುವಂತ ಕಾರ್ಯ ಎಂದು ಬರೆಯುತ್ತಾರೆ.

ರಾಣಿ ಬೆನ್ನೂರಿನಲ್ಲಿ ನೆಡೆದ ಒಂದನೇ ತಾಲ್ಲೂಕು ಸಾಹಿತ್ಯ ಸಮ್ಮೇಳನದ ಬಗ್ಗೆ ಬರೆಯುತ್ತಾ ಬಹಳ ಹಿಂದೆ ಇಲ್ಲಿ ಕ್ಯಾಂಪ್ ಹಾಕಿದ್ದ ಸೈನ್ಯಾಧಿಕಾರಿ ರಾಣೇನ ಹೆಸರಲೆ ಈ ಊರಿಗೆ ರಾಣಿಬೆನ್ನೂರು ಎನ್ನುವ ಹೆಸರು ಬಂತು ಅನ್ನುವುದಕ್ಕಿಂತ ರಾಣಿ ಆಫ್ ಬಿದನೂರು, ರಾಣಿ ಬೆನ್ನೂರು ಆಗಿದೆಯೆನ್ನುವುದೇ ಹೆಚ್ಚು ಸಮಂಜಸ ಎಂದು ಸ್ಥಳನಾಮ ವಿವೇಚನೆ ಮಾಡುತ್ತಾರೆ. ರಾಣಿಬೆನ್ನೂರು ಕನ್ನಡನಾಡು ಸಾಹಿತ್ಯ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ ಅನೇಕ ಮಹನೀಯರಿಗೆ ಜನ್ಮನೀಡಿದೆ. ವಚನಕಾರ ಅಂಬಿಗರ ಚೌಡಯ್ಯ, ಹೆಳವನಕಟ್ಟಿ ಗಿರಿಯಮ್ಮ, ಶಿವಲಿಂಗ ಕವಿ, ಸುಬ್ಬಣ್ಣ ರಂಗನಾಥ ಯಕ್ಕುಂಡಿ, ಸದಾಶಿವ ಒಡೆಯರ, ಎಲ್.ಜಿ. ಹಾವನೂರು, ಕೆ.ಪಿ.ಎಫ್. ಪಾಟೀಲ, ಮೆಣಸಿನಹಾಳ ತಿಮ್ಮನಗೌಡ, ಹಾನಗಲ್ಲ ಕುಮಾರುಸ್ವಾಮಿಗಳು, ಮೂಕಪ್ಪಸ್ವಾಮಿಗಳು, ಶ್ರೀಶೈಲ ಜಗದ್ಗುರು

ವಾಗೀಶ ಪಂಡಿತಾರಾಧ್ಯರು, ಹಲಗೇರಿ ದೊಡ್ಡ ಜಟಿಪ್ಪ ಗೊಂಬಿಜೀಮ್‌ಗೌಡರು, ಪೈಲ್ವಾನ ನಂಜಪ್ಪಗೊಳಣ್ಣಾವರ ಎಂದು ಇತಿಹಾಸ ನೀಡುತ್ತಾರೆ.

ಸಹೃದಯ ಅಧಿಕಾರಿಯೊಬ್ಬ ಸಂವೇದನೆಯ ತೆಕ್ಕೆಗೆ ಸಿಕ್ಕರೆ ಒಳ್ಳೆಯ ಕವಿಯಾಗಬಲ್ಲ ಅಂತ ಐ.ಎ.ಎಸ್. ಅಧಿಕಾರಿ ವಿ.ಪಿ. ಬಳಿಗಾರ ಬಗ್ಗೆ ಬರೆಯುತ್ತಾ, ವೀರಣ್ಣ ಪಿ. ಬಳಿಗಾರ ಚಿಕ್ಕವರಿದ್ದಾಗ ಕನ್ನಂಬಾಡಿ ಅಣೆಕಟ್ಟು ನೋಡಿ, ನಾನು ಇಂತಹ ಒಂದು ಅಣೆಕಟ್ಟನ್ನು ಕಟ್ಟಬೇಕು ಎಂದು ಕನಸುಕಂಡರು. ಇಂಜಿನಿಯರಿಂಗ್ ಆದರು ಆದರೆ ಸಿವಿಲ್ ಸರ್ವೀಸ್ ಅಧಿಕಾರಿಯಾಗಿ ಅದನ್ನು ಕಾಯುವ ಕೆಲಸಕ್ಕೆ ನಿಂತರು. ಕಟ್ಟುವುದು ಸುಲಭ, ಕಾಯುವುದು ಕಷ್ಟ. ಕಾಯುವುದಕ್ಕೆ ಮನಸು, ಬುದ್ಧಿ, ಧೈರ್ಯ, ಜನ್ಮತ್ಯಾಗ, ಯುಗ ಎಲ್ಲಾ ಒಳಗೊಳ್ಳ ಬೇಕಾಗ್ತೆತೆ, ವಿನಯ ಸಜ್ಜನಿಕೆ, ಪ್ರಾಮಾಣಿಕತೆಗೆ ಹೆಸರಾದ ಬಳಿಗಾರ ಕಾವ್ಯವನ್ನು ಕಟ್ಟಲಿ, ದೇಶವನ್ನು ಕಾಯುವ ಕೆಲಸ ನಿರ್ವಹಿಸಲಿ ಎಂದು ಹಾರೈಸುತ್ತಾರೆ.

ಮುಧೋಳಿನಲ್ಲಿ ರನ್ನನನ್ನು ಕುರಿತ ವಿಚಾರಗೋಷ್ಠಿ, ಮೈಸೂರಿನ ಭಾಷಾ ಸಂಸ್ಥಾನದವರು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಬಹುಪಯೋಗಿ ಪ್ರಶ್ನೆಪತ್ರಿಕೆಗಳನ್ನು ತಯಾರಿಸುವ ಕಾರ್ಯಾಗಾರ, ಧಾರವಾಡ ಆಕಾಶವಾಣಿಯವರು ಆಚರಿಸಿದ ಮಕ್ಕಳ ದಿನಾಚರಣೆ, ಭಾರತೀಯ ವೈದ್ಯ ಸಂಸ್ಥೆಯ ರಜತೋತ್ಸವ, ,ಹಂಪನಾ ಅಭಿನಂದನಾ ಗ್ರಂಥ, 'ಬರಹ ಬಾಗೀನ' ಬಿಡುಗಡೆ ಕಾರ್ಯಕ್ರಮ ಕಲಾದನಿಯಲ್ಲಿ ನೆಡೆದ ಸಾಹಿತ್ಯ ಸಮ್ಮೇಳನ ಮುಂತಾದ ಕಾರ್ಯಕ್ರಮಗಳನ್ನು ಕುರಿತು ಲವಲವಿಕೆಯಿಂದ ವರದಿಮಾಡಿದ್ದಾರೆ.

ದೆಹಲಿಯೊಳಗೆ ನಿಂತು ಹೆಸರುಗಳಿಸಿದ ಅಬಲೆಯರ, ವೇಶ್ಯಯರ ಉದ್ಧಾರಕ್ಕಾಗಿ ಜೀವನವನ್ನೇ ಮುಡುಪಾಗಿಟ್ಟ ಕನ್ನಡತಿ ಸಮಾಜ ಸೇವಕಿ ಲಲಿತಾಳ ಬಗ್ಗೆ ಮಾಹಿತಿ ನೀಡುತ್ತಾರೆ. ಚಿಕ್ಕಮಗಳೂರಿನ ಕೊಪ್ಪದ ಶೇಡಿಗಾರ ಅಚ್ಯುತನಾಯಕ ಮತ್ತು ಪದ್ಮ ಅವರ ಮಗಳೆ ಲಲಿತಾ, ಖಚಿತ ವಿಚಾರ ನೇರನಡೆಯ ಲಲಿತಾ ದೆಹಲಿಯ ಎಲ್ಲಾ ಮಹಿಳಾ ಸೇವಾ ಸಂಸ್ಥೆಗಳಿಗೆ ಪರಿಚಿತ, ದೇವದಾಸಿಯರು, ಗಾನೇವಾಲಿಗಳು, ತವಾಯಫ್‌ಗಳು, ವೇಶ್ಯಯರು, ಸೆಕ್ಸ್‌ವರ್ಕರ್ಸ್ ನಡುವೆನಿಂತು ಕೆಲಸ ಮಾಡಿದಳು. ಅಂಥ ಕಳಂಕಿತ ಹೆಣ್ಣು ಮಕ್ಕಳ ಮುಂದೆ ನಿಂತು ಮಾತನಾಡುವುದು ಒಂದು ಅಪರಾಧ ಎನ್ನುವ ಕಾಲದಲ್ಲಿ ತನ್ನ ಜೀವನದ ಹಂಗು ತೊರೆದು ಅಂಥವರ ಕಲ್ಯಾಣಕ್ಕಾಗಿ ದುಡಿದ ಕರ್ನಾಟಕದ ಏಕಮಾತ್ರ ಮಹಿಳೇ ಲಲಿತಾ, ಅವರ ಮುಂದೆ ನಿಂತು ಸೆಕ್ಸ್ ಕೆಲಸ ಬಿಡ್ರಿ ಅನ್ನೊದು ಪರಿಹಾರ ಅಲ್ಲ ನಿಮ್ಮ ಆರೋಗ್ಯವನ್ನು ಕಾಪಾಡಿಕೊಳ್ಳಿ ಗಂಡಸರನ್ನ ಎಜುಕೇಟೆಡ್ ಮಾಡಿ ಅಂತ ತಿಳುವಳಿಕೆ ನೀಡಿದರು. ಅವರಿಗೆ ಔಷಧೋಪಚಾರಮಾಡಿದರು; ಅವರ ಮಕ್ಕಳ ಸಲುವಾಗಿ ಸಾಲಿ ಆರಂಭಿಸಿದರು. ಹಗಲು ಹೊತ್ತಿನಲ್ಲಿ ಅಗತ್ಯವಿದ್ದ ಆಶ್ರಯ ಕೇಂದ್ರಗಳ, ಅಸ್ಪತ್ರೆಗಳ ವ್ಯವಸ್ಥೆ ಮಾಡಿದರು. ಅನೇಕ ಅಂತರ್‌ರಾಷ್ಟ್ರೀಯ ಸಮ್ಮೇಳನಗಳಲ್ಲಿ ಈ ವಿಷಯ ಕುರಿತು ಪ್ರಬಂಧ ಮಂಡಿಸಿ ಸಾರ್ಥಕ ಕೆಲಸ ಮಾಡಿದ್ದಾಳೆ. ಆದರೆ ಈಕೆ ಕನ್ನಡತಿಯೆಂಬುದು ಬಹಳ ಜನಕ್ಕೆ ಗೊತ್ತಿಲ್ಲ ಎಂದು ಹೇಳುತ್ತಾರೆ.

ನಮ್ಮ ನಡುವೆ ಬದುಕಿ ಬಾಳಿ ಅಗಾಧ ಸಾಧನೆಗಳನ್ನು ಮಾಡಿದ ಮಹಾಚೇತನಗಳು ನಮಗೆ ಅಷ್ಟಾಗಿ ಪರಿಚಿತವಾಗಿರುವುದಿಲ್ಲ; ಅಂಥವ್ಯಕ್ತಿಗಳನ್ನು ಶೆಟ್ಟರು ಪರಿಚಯ ಮಾಡಿಕೊಡುತ್ತಾರೆ. ಡಾ.ಮಲ್ಲಿಕಾರ್ಜುನ

ಸಿಂದಗಿಯವರು 'ಸ್ವಾಮಿರಮಾನಂದ ತೀರ್ಥರು' ಅನ್ನುವ ಪುಸ್ತಕ ಬರೆದಿದ್ದಾರೆ. ಸ್ವಾಮಿ ರಮಾನಂದ ತೀರ್ಥರು ಸಿಂದಗಿಯವರು ಇವರು ಪೂರ್ವಾಶ್ರಮದ ನಾಮ ವೆಂಕಟೇಶ ಭವಾನಿ ಬೇಡಗಿ, ಸ್ವಾಮಿ ರಮಾನಂದ ರಾಯರು ಹೈದರಾಬಾದ್ ಮುಕ್ತಿ ಸಂಗ್ರಾಮದ ಮೂಲ ಪುರುಷರಾಗಿದ್ದರು. ೧೯೪೭ರಲ್ಲಿ ಸ್ವತಂತ್ರವಾದ ಭಾರತದಲ್ಲಿ ಹೈದರಾಬಾದ್ ಸಂಸ್ಥಾನ ವಿಲೀನದ ಹೋರಾಟದಲ್ಲಿ ಇವರ ಪಾತ್ರ ಬಹಳ ಮುಖ್ಯವಾಗಿತ್ತು. ಇವರು ಇಲ್ಲದೆ ಇದ್ದರೆ ಆಗಿನ ಗೃಹಸಚಿವ ಸರ್ದಾರ್ ವಲ್ಲಾಭಾಯ್ ಪಟೇಲರು ಮತ್ತು ಜನರಲ್ ಚೌಧರಿ ಅವರಿಗೆ ಹೈದರಾಬಾದ್ ಸಂಸ್ಥಾನದ ವಿಲೀನ ಕಷ್ಟವಾಗುತ್ತಿತ್ತು. ೧೯೫೨ರಲ್ಲಿ ಗುಲ್ಬರ್ಗದ ಸಂಸದರಾಗಿದ್ದ ರಮಾನಂದರು ಒಳ್ಳೆಯ ಶಿಕ್ಷಕ, ತ್ಯಾಗಜೀವಿ, ರಾಷ್ಟ್ರಭಕ್ತ, ಕಾರ್ಮಿಕ ಧುರೀಣ, ವಿಜನ್ ಮತ್ತು ಡೆಮಾಕ್ರಟಿಕ್ ಪತ್ರಿಕೆಗಳ ಸಂಪಾದಕರಾಗಿದ್ದರು. ವಿವೇಕಾನಂದ, ಸುಭಾಷ್‌ಚಂದ್ರ ಬೋಸ್, ಗಾಂಧೀಜಿಯವರ ಅನುಯಾಯಿಗಳಾಗಿದ್ದರು. ಎಲ್ಲಾ ಬಗೆಯ ಶೋಷಕರ ವಿರುದ್ಧ ಶೋಷಿತರ ಪರವಾಗಿದ್ದ ಧೀರ ಜಾಗೃತ ಸನ್ಯಾಸಿಯಾಗಿದ್ದರು. ಇವರ ಹೆಸರಿನಲ್ಲಿ ಮಹಾರಾಷ್ಟ್ರ ಮತ್ತು ಆಂಧ್ರಗಳಲ್ಲಿ ವಿಶ್ವವಿದ್ಯಾಲಯಗಳಿವೆ. ಆದರೆ ನಮಗೆ ಇವರು ನಮ್ಮವರೇ ಅಂತಗೊತ್ತಿಲ್ಲ ಎಂದು ನಮ್ಮ ಮರೆಗುಳಿತನವನ್ನು ಹೇಳುತ್ತಾರೆ.

ಇಂದಿನ ಸಾಮಾಜಿಕ ಪಿಡುಗಾಗಿರುವ ಕೋಮು ಗಲಭೆಗಳು ನೆಡೆಯುವ ಭಟ್ಕಳದ ಬಗ್ಗೆ ಹೇಳುತ್ತಾ ಭಟ್ಕಳ ಭಟ್ಟಕಳಂಕನ ತಪೋ ಭೂಮಿ, ಜೈನಮುನಿಗಳ ಅಹಿಂಸಾ ತತ್ವದ ನೆಲ. ಆದರೆ ಈಗ ಮನಸ್ಸು ಮುನಿದವರ ಹೃದಯ ಹರಿದವರ ತಾಣವಾಗಿದೆ. ಇಲ್ಲಿ ಬಹಳ ಹಿಂದಿನಿಂದಲೂ ಎಲ್ಲಾ ಧರ್ಮಿಯರೂ ಸಂತೋಷದಿಂದ ಸಹಬಾಳ್ವೆ ನಡೆಸಿದ್ದಾರೆ. ಒಲವಿಲ್ಲದ ಬದುಕು ಬದುಕೇ ಅಲ್ಲ. ಮನೆಯ ಜಗುಲಿಯ ಮೇಲೆ ಇರಬೇಕಾದ ಧರ್ಮ, ಅಲ್ಲೇ ಇರಲಿ; ನಮ್ಮ ಹೆಗಲ ಮೇಲೆ ಹೇರಿದ ಕಾರಣ ಈ ದುರಂತವಾಗಿದೆ. ದೈವ ಭಕ್ತಿಯ ಬದಲು, ದೈವ ಭೀತಿ ನಮ್ಮ ಸಾಮರಸ್ಯವನ್ನು ಹಾಳುಮಾಡಿದೆ. ಪ್ರತಿಯೊಂದು ಹೃದಯದೊಳಗೆ ಮಿಡಿಯುವ ಮೂಲ ಮಾನವ ಪ್ರೀತಿಯನ್ನು ನಾವು ನುಡಿಸಬೇಕು. ಜ್ಯೋತಿಹಿಡಿದು ಜಾತಿಹುಡುಕುವ ಅಪಾಯಕಾರಿ ಕೆಲಸ ಸಲ್ಲದು. ಧರ್ಮ ನಮಗೆ ಊಟದ ತಾಟು ಇದ್ದಹಾಗೆ, ಮನುಷ್ಯ ಊಟ ಇದ್ದಹಾಗೆ ನಮಗೆಲ್ಲಾ ಊಟ ಮುಖ್ಯವೇ ಹೊರತು ವಾದವಲ್ಲ ಎಂದು ಸಹಬಾಳ್ವೆಯನ್ನು ಕುರಿತು ಹೇಳುತ್ತಾರೆ.

ಹಾವೇರಿಯಲ್ಲಿ ನೆಡೆದ ಕನ್ನಡ ಸಾಹಿತ್ಯಪರಿಷತ್ತಿನ 'ಪರಿಸರ ದಿನಾಚರಣೆ' ಕುರಿತು ಬರೆಯುತ್ತಾ ಕಾವ್ಯ ಕುಂಚಗಾಯನ ಉದ್ಘಾಟಿಸಿದ ಚೆನ್ನವೀರ ಕಣವಿಯವರು ಮಾತನಾಡುತ್ತಾ ಪರಿಸರ ಪ್ರಜ್ಞೆ ಇಲ್ಲದೆ ಕವಿಯಾಗಲು ಸಾಧ್ಯವಿಲ್ಲ. ಪ್ರಕೃತಿ ಅನ್ನುವುದು ಒಳಗೂ ಹೊರಗೂ ನಮ್ಮನ್ನಾವರಿಸಿದ ರಹಸ್ಯ. ಪೂರ್ಣ ಸೃಷ್ಟಿ ಅದರೊಂದಿಗಿನ ಒಡನಾಟವೇ ಜೀವನ. ನವೋದಯ ಕಾವ್ಯದಲ್ಲಿ ಅದಮ್ಯವಾದ ನಿಸರ್ಗ ಪ್ರೀತಿಯಿತ್ತು. ಹಿಂದಿನವರಿಗೆ ಪ್ರಕೃತಿಯೊಳಗೆ ದೇವರು ಆಧ್ಯಾತ್ಮ ಎಲ್ಲಾ ಇತ್ತು. ಹೊಳೆ, ಕಾಡು ಅವರ ಸಂಗಾತಿಗಳಾಗಿದ್ದವು; ಇವತ್ತು ನೆಡೆದಿಲ್ಲವೆ ಮತ್ತೆ ಮನುಷ್ಯನಿಂದ ಮನುಷ್ಯ ಕೊಲೆ, ಜೀವಕೆಲ್ಲಿದೆ ಬೆಲೆ. ನನ್ನೆದರು ಉರಿವ ಮೇಣ ಬತ್ತಿಗೆ ರೆಕ್ಕೆ ಬಡಿದು ಸುಟ್ಟುಕೊಂಡಿದೆ ಪತಂಗ ಸುತ್ತೆಲ್ಲಾ ಕತ್ತಲೆ ಎಂದು ಕವನ ವಾಚಿಸಿ ಚಾಲನೆ ನೀಡಿದ್ದನ್ನು ಕಾರ್ಯಕ್ರಮದಲ್ಲಿ ಮೂಡಿ ಬಂದ ಉತ್ತಮ ಕವಿತೆಗಳ ಸಾಲನ್ನು ವರದಿ ಮಾಡಿದ್ದಾರೆ.

ಭರತನಾಟ್ಯದ ಗುರುಮೂರ್ತಿ, ಸಿತಾರರತ್ನ ರಹಮತ್‌ಖಾನ್, ಬಕುಲ ಸಾಹಿತ್ಯ ಪ್ರಕಾಶನ. ರಂಗಸಂಗದ ಕಾರ್ಯಕ್ರಮ, ನವರಸಪುರದ ಕವಿಗೋಷ್ಠಿ ಖ್ಯಾತ ರಂಗ ಕಲಾವಿದೆ ಜುಬೇದಾಬಾಯಿ ಗೌರೀಶ್ ಕಾಯ್ಕಿಣಿ, ವಿಜಯ್‌ನಳಿಗಿಯ ತಾಳಮದ್ದಳೆ, ಧಾರವಾಡದಲ್ಲಿ ನೆಡೆದ ಸಂಗೀತ ಗಂಗಾ ಕಾರ್ಯಕ್ರಮ ಮುಂತಾದವುಗಳನ್ನು ಕುರಿತ ವಿಸ್ತೃತ ಮಾಹಿತಿ ಈ ಅಂಕಣ ಬರಹಗಳಲ್ಲಿ ದೊರೆಯುತ್ತದೆ.

**೪. ಚಹಾದ ಜೋಡಿ ಚೂಡಾದ್ವಾಂಗ-೪**

ಡಾ. ಸಿದ್ಧಲಿಂಗ ಪಟ್ಟಣಶೆಟ್ಟರು ನಾಲ್ಕನೇ ವರ್ಷದಲ್ಲಿ ಬರೆದ ಅಂಕಣ ಬರಹಗಳ ಸಂಗ್ರಹ ಇದಾಗಿದೆ. ೧೯೯೭-೯೮ರಲ್ಲಿ ಬರೆದ ೫೨ ಅಂಕಣ ಬರಹಗಳು ಇಲ್ಲಿವೆ ಚಹಾದ ಜೋಡಿ ಚೂಡಾದ್ವಾಂಗ-೪ ಎನ್ನುವ ಹೆಸರಿನಲ್ಲಿ ಅನನ್ಯ ಪ್ರಕಾಶನ ಧಾರವಾಡದಿಂದ ಪ್ರಕಟಣೆ ಗೊಂಡಿದೆ.

ಲೇಖಕರ ಇಲ್ಲಿಯ ಬರವಣಿಗೆಗಳು ಸಾಂಸ್ಕೃತಿಕ ಕಾರ್ಯಕ್ರಮದ ವರದಿಗಳೇ ಆಗಿದ್ದರೂ ಅದನ್ನು ಮೀರಿನಿಲ್ಲುವ ಅನೇಕ ಅಂಶಗಳು ಇಲ್ಲಿ ಕಂಡು ಬರುತ್ತವೆ. ವ್ಯಕ್ತಿಗಳ ವ್ಯಕ್ತಿತ್ವ ಸಾಧನೆಗಳ ಜೊತೆಗೆ ಸಮಾಜದ ನಿರ್ಲಕ್ಷ್ಯ, ಎಚ್ಚರಿಕೆ, ಮುಂದೆ ಸಾಗಬೇಕಾದ ಮಾರ್ಗ, ಮೆಚ್ಚುಗೆಯ ಮಾತುಗಳು, ವ್ಯಂಗ ಮುಂತಾದವುಗಳ ಮಿಶ್ರಣದಿಂದ ಕೂಡಿದ ರಸಪಾಕವಾಗಿದೆ. ಕುತೂಹಲದಿಂದ ಓದಿಸಿಕೊಂಡು ಹೋಗುವ ಶೈಲಿ ಇಲ್ಲಿದೆ. ಗದ್ಯವಾದರೂ ಪದ್ಯದ ಲಯವಿದೆ. ಪದಗಳ ಲಾಲಿತ್ಯ ಔಚಿತ್ಯ ಪೂರ್ಣವಾಗಿ ಬಳಕೆಯಾಗಿದೆ. ಅದಕ್ಕಾಗಿಯೇ ಡಾ. ಬಸವರಾಜ ಸಾದರ ಅವರು ಚಹಾದ ಜೋಡಿ ಚೂಡಾದ್ವಾಂಗ-೧ರಲ್ಲಿ ಇವರ ಅಂಕಣ ಬರಹಗಳು ಕೇವಲ ವರದಿಯಲ್ಲ. ವರದಿಯ ವೃದ್ಧಿ ಎಂದು ಕರೆದಿದ್ದಾರೆ.

ಉತ್ತರ ಕರ್ನಾಟಕದ ಬಹುಮುಖ್ಯ ವಿದ್ಯಾಸಂಸ್ಥೆಯಾದ ಕರ್ನಾಟಕ ಕಾಲೇಜನ್ನು ಕುರಿತು ಬರೆಯುತ್ತಾ ೧೯೧೭ ಜೂನ್ ೧೭ರಂದು ಅಸ್ತಿತ್ವಕ್ಕೆ ಬಂದ ಕರ್ನಾಟಕ ಕಾಲೇಜು, ಉತ್ತರ ಕರ್ನಾಟಕದ ಸಮಸ್ತ ಸಂಸ್ಕೃತಿ, ಸಾಹಿತ್ಯ ಜನ ಜೀವನಗಳ ಪ್ರಾತಿನಿಧಿಕ ಸ್ವರೂಪದ ಸಂಸ್ಥೆ, ಅಲಕ್ಷಿಸಲಾಗದ ಲಕ್ಷೋಪಲಕ್ಷ ಪ್ರಖ್ಯಾತರನ್ನು ನೀಡದ ಈ ಕಾಲೇಜು ಭಾರತದ ಸುಪ್ರಸಿದ್ಧ ಶಿಕ್ಷಣ ಸಂಸ್ಥೆಗಳಲ್ಲಿ ಒಂದು. ಬ್ರಿಟೀಷರ ಕಾಲದಿಂದ ಈ ವರೆಗೆ ಭಾರತದ ಸ್ವಾತಂತ್ರ್ಯ, ಕರ್ನಾಟಕ ಏಕೀಕರಣ, ಕಲೆ, ಸಂಗೀತ, ಸಾಹಿತ್ಯ ಚಳುವಳಿಗಳು ಹಲವಾರು ಸಾಮಾಜಿಕ ಮಹತ್ವದ ನಿರ್ಧಾರಗಳು, ಶಿಕ್ಷಣದ ವಿಭಿನ್ನ ಕ್ಷೇತ್ರಗಳ ವಿಕಾಸ ಹೀಗೆ ಎಲ್ಲಾ ವಿಷಯ ಸಂಗತಿಗಳಿಗೆ ಬೆನ್ನೆಲುಬಾಗಿ ಬೃಹತ್ ಘನಸಾಕ್ಷಿಯಾಗಿ ನಿಂತ ಈ ಸಂಸ್ಥೆಯನ್ನು ಸುರುಮಾಡುವಾಗ ಎರೆಡು ಕಣ್ಣು ಕೈ ಕಾಲುಗಳಾಗಿ ದುಡಿದವರು ರೊದ್ದ ಶ್ರೀನಿವಾಸರಾಯರು. ಅರಟಾಳ ರುದ್ರಗೌಡರು ಅವರ ದೂರದೃಷ್ಠಿ, ತ್ಯಾಗ ಸೇವೆಗಳು, ಕಂಬಳಿ ಸಿದ್ಧಪ್ಪನವರ ಸಹಕಾರ ಪ್ರೀತಿ ಈ ಕಾಲೇಜಿಗೆ ಗಟ್ಟಿ ಅಡಿಪಾಯ ಹಾಕಿದವು. ಎಚ್.ಜಿ. ರಾಲಿನ್‌ಸನ್, ಎಚ್.ವಿ. ಹ್ಯಾಂಪ್‌ಟನ್, ಎ.ಸಿ.ಪ್ಯಾರನ್, ಕೊರಿಯಾ ಅಫ್‌ನ್ಸೊ, ಆರ್ಮೊಂಡೊ ಮನೆಝಿಸ್, ವಿ.ಕೃ.ಗೋಕಾಕ, ಸ.ಸ. ಮಾಳವಾಡರಂಥ ಪ್ರಿನ್ಸಿಪಾಲರು ಎನ್.ಎಸ್. ಟಕಾಬಲ್, ಕೆ.ಜಿ.ಕುಂದಣಗಾರ, ಎಸ್.ಟಿ.. ಸಾಸನೂರು, ಶ್ರೀರಂಗ, ವಿ.ಕೆ.ಆರ್.ವಿ. ರಾವ್, ವಿ.ಎಂ. ಇನಾಮದಾರ, ಸಿ.ಡಿ. ದೇಶಪಾಂಡೆಯವರಂಥ ಶಿಕ್ಷಕರು, ಡಿ.ಸಿ. ಪಾವಟೆ, ನಂದೀಮಠ, ಎಸ್.ಆರ್.ಬೊಮ್ಮಾಯಿ, ಶ್ರೀನಿವಾಸ ಹಾವನೂರು, ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಚಿದಂಬರ ದೀಕ್ಷಿತ, ಶಂಕರ ಮೊಕಾಶಿ

ಪುಣೇಕರ, ಆರ್.ಸಿ. ಹಿರೇಮಠ, ಎಸ್.ಎಸ್.ಒಡೆಯರ, ಕಣವಿಯವರಂಥ ವಿದ್ಯಾರ್ಥಿಗಳನ್ನು ಪಡೆದ ಕಾಲೇಜಿನ್ಯಾಗ ಕಲಿತ ಎಷ್ಟೋ ಪೀಳಿಗೆಗಳು ಇದನ್ನು ಕೃತಜ್ಞತೆಯಿಂದ ನೆನಸ್ತಾವ.[೨೬] ಎಂದು ಕರ್ನಾಟಕ ಕಾಲೇಜಿನ ಬಗ್ಗೆ ಮಾಹಿತಿ ನೀಡುತ್ತಾರೆ.

ಕರ್ನಾಟಕ ಸರ್ಕಾರ ನೀಡುವ ದಾನಚಿಂತಾಮಣಿ 'ಅತ್ತಿಮಬ್ಬೆ' ಪ್ರಶಸ್ತಿಯನ್ನು ಕುರಿತು ವರದಿ ಮಾಡುತ್ತಾ ತಮ್ಮ ಅನಿಸಿಕೆಯನ್ನು ನೇರಮಾತುಗಳಲ್ಲಿ ಅಭಿವ್ಯಕ್ತಪಡಿಸುತ್ತಾರೆ. ಈ ಪ್ರಶಸ್ತಿಯು ಮಹಿಳಾ ಲೇಖಕಿಯರಿಗೆ ಮೀಸಲಾಗಿರುವಂತಹದು. ಮೊದಲ ಸಲ ಅಂದರೆ ೧೯೯೫ರಲ್ಲಿ ಟಿ.ಸುನಂದಮ್ಮನವರಿಗೆ ಕೊಟ್ಟಿದ್ದರು. ಎರಡನೆಯ ಸಲ ಅಂದರೆ ೧೯೯೬ ರಲ್ಲಿ ಲೇಖಕಿ ಶಾಂತಾದೇವಿ ಮಾಳವಾಡ ಅವರಿಗೆ ನೀಡಿದರು. ಇದೆ ಕಾರ್ಯಕ್ರಮದ ವರದಿ ನೀಡುವಾಗ ಲೇಖಕರು ಹೀಗೆ ಹೇಳುತ್ತಾರೆ. ಅತ್ತಿಮಬ್ಬೆ ಪ್ರಶಸ್ತಿಯನ್ನು ಲೇಖಕಿಯರಿಗೆ ಅಂತ ಸುರುಮಾಡ್ಯಾರಂತೆ, ಬಹುಶಃ ಇದಕ್ಕೆ ಸರಿಸಮನಾಗಿಯೇ ಇದ್ದ ಯಾವುದಾದರೂ ಇದಕ್ಕೆ ಕಡಿಮೆ ಅಲ್ಲದ ಪ್ರಶಸ್ತಿಯನ್ನು ಬರೆ ಲೇಖಕರಿಗೆ ಅಂತ ಇಟಗೊಳ್ಳುತ್ತಾರ ಏನೋ, ಸಾಮಾನ್ಯವಾಗಿ ಶ್ರೇಷ್ಠ ಸಾಹಿತ್ಯ ರಚಿಸಿದ ಲೇಖಕ ಅಥವಾ ಲೇಖಕಿಗೆ ಅಂತ ಸಮಾನ ಗೌರವ ಭಾವ ಮಾನದಂಡದಿಂದ ಪ್ರಶಸ್ತಿಗಾಗಿ ಇನ್ನು ಮುಂದೆ ಆಯ್ಕೆ ಆಗಲಿಕ್ಕೆಲ್ಲ ಅಥವಾ ಅಂಥದ್ದರ ಸಲುವಾಗಿ ಇನ್ನೊಂದು ನಿರ್ಲಿಂಗ ಪ್ರಶಸ್ತಿಯನ್ನು ಸುರು ಮಾಡುವ ವಿಚಾರ ಮಾಡ್ಯಾರೇನು ಗೊತ್ತಿಲ್ಲ[೨೭] ಎಂದು ಟೀಕೆ ಮಾಡುತ್ತಾರೆ. ಪ್ರಶಸ್ತಿ ವಿತರಿಸಿದ ಸಚಿವ ಲೀಲಾದೇವಿ ಪ್ರಸಾದ ೧೯೯೭ ರಾಗ ಧಾರವಾಡದ ಕಲೆಕ್ಟರಾಗಿದ್ದ ವೀರಭದ್ರಯ್ಯ ಸಿದ್ಧಲಿಂಗಯ್ಯ ಹಿರೇಮಠರು ಮತ್ತು ಗುರುದೇವಿಯವರ ಮಗಳು, ಧಾರವಾಡದ ಮಗಳು ಧಾರವಾಡದ ಮಗಳಿಗೆ ಪ್ರಶಸ್ತಿ ವಿತರಿಸಿದ್ದು ವಿಶೇಷವೆಂದು ವರದಿಮಾಡುತ್ತಾರೆ.

ಅಂಕಣ ಬರಹಗಳು ಅಥವಾ ಪತ್ರಿಕೆಗಳು ಇತಿಹಾಸದ ಕಚ್ಚಾ ಪ್ರತಿಗಳು ಎನ್ನುವ ಮಾತು ಸತ್ಯದಿಂದ ಕೂಡಿದೆ. ಡಾ.ಸಿದ್ಧಲಿಂಗ ಪಟ್ಟಣಶೆಟ್ಟರು ಸಾಮಾನ್ಯ ಮಾಹಿತಿಗಳನ್ನು ಹೇಳುತ್ತಾ ಧಾರವಾಡದಲ್ಲಿ ಮೊದಲಿನಿಂದಲೂ ಮಂಗಳವಾರ ಸಂತೆ ನೆಡೆಯುತ್ತದೆ. ಈಗಲೂ ಕರ್ನಾಟಕ ವಿಶ್ವವಿದ್ಯಾಲಯದ ಅಧ್ಯಾಪಕ ಸಿಬ್ಬಂದಿ ವರ್ಗದವರು ಸಂತೆಗೆಂದು ಮಧ್ಯಾನ್ನವೇ ಮನೆಗೆ ಹೋಗುತ್ತಾರೆ ಎಂದು ಹೇಳಿದ್ದಾರೆ. ಕರ್ನಾಟಕ ವಿಧ್ಯಾವರ್ಧಕ ಸಂಘದವರು ಆಯೋಜಿಸಿದ್ದ ಕಾವ್ಯೋತ್ಸವವನ್ನು ಕುರಿತು ಬರೆಯುತ್ತಾ ಕವಿಗಳ ಪ್ರಮುಖ ಸಾಲುಗಳನ್ನು ದಾಖಲಿಸುತ್ತಾರೆ. ಡಾ. ಬಸವರಾಜ ಸಾದರರ ಒಂದು ಪ್ರೀತಿಯ ಮಾತು, ಒಡೆಯುವವರೆಲ್ಲಾ ಮೊದಲು ಕಟ್ಟುವುದೇ ಇಲ್ಲ, ಕಟ್ಟಿದ ಮೇಲೆ ಒಡೆಯುವುದೂ ಇಲ್ಲ. ಸುಕನ್ಯಾ ಮಾರುತಿಯವರ 'ದೇವದಾಸಿಯ ಮಗಳ ಸ್ವಗತ ಕವನ' ನಡುಮಧ್ಯಾಹ್ನದಲ್ಲೇ ಸಂಜೆ ಗತ್ತುಲ ಕವಿಯುವಾಗ ಎಲ್ಲಿ ಹುಡುಕಲಿ ನನ್ನ ಕಳೆದುಕೊಂಡ ಮುಂಜಾವುಗಳನ್ನ ಅಪ್ಪನಿಲ್ಲದೆ ಹಡೆದ ಅವ್ವನ ಮೊಲೆ ಗಂಟಿನಲ್ಲೇ ಶಾಲೆಗೆ ಹಚ್ಚುವಾಗ ತನ್ನ ಹೆಸರನ್ನೇ ಮರೆತ ಅಪ್ಪನ ಚಪ್ಪಲಿನಲ್ಲೇ? ತಂದೆಯ ಜಾಗದಲ್ಲಿ ತಾಯಿಯ ಹೆಸರು ತುಂಬಿದಾಗ ಎಲ್ಲಿ ಹುಡುಕಲಿ ನನ್ನ ಕಳೆಕೊಂಡ ಮುಂಜಾವುಗಳನ್ನು, ಹುಸಿ ಬಂಡಾಯಗಾರರನ್ನು ವಿಡಂಬನೆ ಮಾಡುವ ಮೋಹನ ನಾಗಮ್ಮನವರ ಗೀತೆ ಮುಗಿಲಗ್ನಿಯ ಮೈಥುನದಿಂದ ತಾವೇ ಹುಟ್ಟಿಸಿದೆವೆಂಬ ಹಾಡುಕಟ್ಟಿ, ಖಾಲಿ ಖುರ್ಚಿಗಳಿಗಾಗಿ ಕಾರ್ಪೊರೇಷನ್ ತೊಟ್ಟಿಯ ನಾಯಿಗಳಂತೆ ಕಚ್ಚಾಡುವಾಗ ಕ್ರಾಂತಿ ತನ್ನ ಪಾಡಿಗೆ ತಾನು ಮೌನವಾಗುಳಿಯುತ್ತದೆ. ಅದಕ್ಕೆಂದೇ ಪ್ರಳಯ ಪೂರ್ವದ ಮೌನದೊಡಲಲ್ಲೇ ವಿಪ್ಲವದ ಬೀಜಗಳು

ಅರ್ಭಟಿಸುವ ನಾವೆಲ್ಲಾ ಬಿರುಗಾಳಿಗೆದುರಾದ ಬರೀ ಖೋಜಾಗಳು, ಎಂದು ಹೇಳುತ್ತಾ ದಿನದಿಂದ ದಿನಕ್ಕೆ ಕವಿಗೋಷ್ಠಿಗಳು ಒಂದೊಂದು ಮೆಟ್ಟಿಲು ಮ್ಯಾಲೆ ಹತ್ತಬೇಕು. ಸೊರಗಬಾರದು ಗೋಷ್ಠಿಯ ಮಹತ್ವ ವಿಷಯ ಸಂದರ್ಭದ ಅಗಾಧತೆ, ಕವಿಯ ಸ್ವಂತದ ಗರಿಮೆ ಬರಬೇಕಾಗಿರುವ ಕೀರ್ತಿ ಇತ್ಯಾದಿಗಳನ್ನು ಲಕ್ಷ್ಯದಾಗ ಇಟಗೊಂಡು ಆಯೋಜಕರು, ಸಂಘಟಕರು ಕವಿ ಅಂತನಿಸಿಕೊಳ್ಳಬೇಕೆನ್ನುವವರು ಜವಾಬ್ದಾರಿಲೇ ವರ್ತಿಸಬೇಕಾದದ್ದು ಇವತ್ತು ಬಾಳ ಅಗತ್ಯ. ಇಲ್ಲದೆ ಹೋದರೆ ಯಾರೋ ಕರದಾರು, ಏನೋ ಓದಿಬಂದರಾಯಿತು. ಅನ್ನುವ ದುಷ್ಟ ಪ್ರವೃತ್ತಿ ಬೆಳೀತಯ್ತಿ ಇದು ಸಂಪೂರ್ಣವಾಗಿ ಸಂಸ್ಕೃತಿ ಮತ್ತು ಸಾಹಿತ್ಯದ ವಿಕಸನ ಪಥಕ್ಕೆ ಘಾತಕವಾದದ್ದು[೮೮] ಎನ್ನುತ್ತಾರೆ.

ಯಶವಂತ ಸರದೇಶಪಾಂಡೆ ಅಮೇರಿಕಾದಲ್ಲಿ ರಂಗಭೂಮಿಯ ಬಗ್ಗೆ ತಿಳುವಳಿಕೆಗಳನ್ನು ಪಡೆದುಕೊಂಡು ಬಂದ ಕಲಾವಿದ. ಈತನ ಆಲ್ ದಿಬೆಸ್ಟ್ ಯಶಸ್ವೀ ನಾಟಕ. ದೇವೇಂದ್ರ ಪ್ರೇಮ್ ಜೀ ಅವರ ಜನಪ್ರಿಯ ಮರಾಠೀ ನಾಟಕದ ಕನ್ನಡಾನುವಾದ ನಾಲ್ಕೇ ಪಾತ್ರಗಳ ಮೂಲಕ ಎರೆಡು ತಾಸಿಗಿಂತ ಹೆಚ್ಚು ಹೊತ್ತು ತಿಳಿ ಹಾಸ್ಯವನ್ನು ಲವಲವಿಕೆಯಿಂದ ಎಳಿಎಳಿಯಾಗಿ ತೋರಿಸುತ್ತಾ ಹೊಗುತ್ತದೆ ಎಂದು ಮಾಹಿತಿ ನೀಡುತ್ತಾರೆ.

ಕನ್ನಡದ 'ಪುಲ್ಲೆನಗೆ ಪಾವನ ತುಲಸಿ' ಕನ್ನಡದ ನೆಲದ ನೀರ್ವೊಲೆನೆಗೆ ದೇವನದಿ ಕನ್ನಡದ ನೆಲದ ಕಲ್ಲೆನೆಗೆ ಶಾಲಿಗ್ರಾಮಶಿಲೆ ಎಂದ ಸಾಲಿರಾಮ ಚಂದ್ರರಾಯರಿಗೆ ಕನ್ನಡನುಡಿ ಗಾಯತ್ರಿಯದ್ಭುತ ಮಂತ್ರವಾಗಿತ್ತು. ಆಧುನಿಕರಲ್ಲಿ ರಾಮಾಯಣವನ್ನು ಕನ್ನಡದಲ್ಲಿ ಮೊದಲು ರಚಿಸಿದ ಕವಿ ಇವರು. ಮಾನವನ ಮಾನಾಪಮಾನಗಳು ದೇವನವು ಎಂದು ನಂಬಿದ್ದರು. ಆಗುವೆನು ನಿನ್ನವನು ನಾನೆಂದು ಹರಿಯೇ ಅಂತ ಒಂದೊಂದು ಉಸಿರಿಗೂ ಹರಿನಾಮ ಸ್ಮರಣೆಯನ್ನು ಮಾಡಿದದರು. ಒಂದು ರೀತಿಯಲ್ಲಿ ಸಾಲಿರಾಮಚಂದ್ರರಾಯರ ಬಹುಪಾಲು ಗೀತೆಗಳು ಭಕ್ತಿ ಕಾವ್ಯಗಳೇ ಆಗಿದ್ದವು. ಇವರ ಪದ್ಯಗಳು ಹರಿದಾಸರ ಕೀರ್ತನೆಗಳನ್ನು ನೆನಪಿಗೆ ತರುತ್ತವೆ. ದೈವಭಕ್ತಿ, ಮನುಷ್ಯಪ್ರೇಮ, ದೇಶಭಕ್ತಿ ನಿಸರ್ಗಪ್ರೀತಿಗಳು ಇವರ ಕವನಗಳಲ್ಲಿ ಕಂಡು ಬರುತ್ತವೆ ಎಂದು ಹೇಳುತ್ತಾರೆ.

ರಾಷ್ಟ್ರದ ರಾಜಧಾನಿ ದೆಹಲಿಯಲ್ಲಿರುವ ಕನ್ನಡದ ಪ್ರೌಢಶಾಲೆಯನ್ನು ಕುರಿತು ಮಾಹಿತಿ ನೀಡುತ್ತಾರೆ. ದೆಹಲಿಯ ಕನ್ನಡ ಸೀನಿಯರ್ ಸೆಕೆಂಡರಿ ಸ್ಕೂಲ ೧೯೬೧ ರಲ್ಲಿ ಪ್ರಾರಂಭವಾಯಿತು. ಆಗಿನ ರಾಜ್ಯ ಸಭೆಯ ಉಪಾಧ್ಯಾಕ್ಷರಾಗಿದ್ದ ಎಸ್.ವಿ. ಕೃಷ್ಣಮೂರ್ತಿರಾವ್ ಮತ್ತು ಆರೋಗ್ಯಮಂತ್ರಿಯಾಗಿದ್ದ ದ.ಪ. ಕಮರಕರ ಅವರು ದಿಲ್ಲಿಯಲ್ಲಿರುವ ೩೦-೩೫ ಸಾವಿರ ಕನ್ನಡಿಗ ಮಕ್ಕಳಿಗೆ ಶಿಕ್ಷಣ ಸೌಲಭ್ಯ ಕೊಡುವುದು ಕರ್ನಾಟಕದ ಸಾಂಸ್ಕೃತಿಕ ಹಿರಿಮೆಯನ್ನು ಎಲ್ಲಾ ದಿಲ್ಲಿಗರಿಗೆ ತೋರಿಸುವುದು ಈ ಸಂಸ್ಥೆಯ ಮುಖ್ಯ ಉದ್ದೇಶವಾಗಿತ್ತು. ಕೇಂದ್ರೀಯ ಅಭ್ಯಾಸವಿರುವ ಇಲ್ಲಿ ವಿದ್ಯಾರ್ಥಿಗಳು ೧ ರಿಂದ ೫ ನೇ ತರಗತಿಯವರೆಗೆ ಕನ್ನಡ ಅನಿವಾರ್ಯವಾಗಿ ಕಲಿಯಬೇಕು. ಇಲ್ಲಿ ಅಭ್ಯಾಸ ಮಾಡುತ್ತಿರುವ ಒಂದು ಸಾವಿರ ವಿದ್ಯಾರ್ಥಿಗಳಲ್ಲಿ ಆರುನೂರಕ್ಕಿಂತ ಹೆಚ್ಚು ವಿದ್ಯಾರ್ಥಿಗಳ ಕನ್ನಡದವರು ಈಗಿನ ಪ್ರಾಂಶುಪಾಲರಾದ ಗುರುಪಾದ ಹೆಗಡೆ, ಜಮಖಂಡಿಯವರು ಮಿರ್ಚಿದಾಣೆ ತಿನ್ನುವ ಪೇಪರಿನಲ್ಲಿ ಜಾಹಿರಾತನ್ನು ನೋಡಿ ಅರ್ಜಿ ಹಾಕಿ ಆಯ್ಕೆಯಾಗಿ ಸೇವೆಸಲ್ಲಿಸುತ್ತಿದ್ದಾರೆ. ಎಂದು ಕನ್ನಡ ಶಾಲೆಯ ಬಗ್ಗೆ ಉಪಯುಕ್ತ ವಿಷಯಗಳನ್ನು ನೀಡುತ್ತಾರೆ.

ಕನ್ನಡದ ಖ್ಯಾತ ಸಂಶೋಧಕರಾದ ಎಂ.ಎಂ. ಕಲಬುರ್ಗಿಯವರಿಗೆ ೧೯೬೮ರ ಪಂಪಪ್ರಶಸ್ತಿ ಪ್ರಧಾನ ಮಾಡಲಾಯಿತು. ಬನವಾಸಿಯಲ್ಲಿ ನೆಡೆದ ಕದಂಬೋತ್ಸವದಲ್ಲಿ ಪ್ರಶಸ್ತಿ ನೀಡಲಾಯಿತು. ಅದನ್ನು ವರದಿ ಮಾಡುತ್ತಾ

ಪಂಪಪ್ರಶಸ್ತಿ ಸ್ವೀಕರಿಸಿದ ಮಲ್ಲಣ್ಣ, ಗೆಲುವು ದೀವಳಿಗೆ, ಸೋಲು ಶಿವರಾತ್ರಿ, ಮರಣ ಮಹಾನವಮಿ ಅನ್ನುವ ಧ್ಯೇಯ ಧ್ವಜ ಎತ್ತಿ ಹಲವು ಚಕ್ರವ್ಯೂಹಗಳನ್ನು ಹೊಕ್ಕು ಹೊರಬಂದ ಆತ್ಮಾಭಿಮಾನಿ ಅಭಿಮಾನ ಸತ್ಯ. ನನ್ನಲ್ಲಿ ಜೀವಂತವಾಗಿರುವವರೆಗೆ ನಾನು ಸಾಯುವುದಿಲ್ಲ ಅನ್ನುವ ಶ್ವಾಸ, ವಿಶ್ವಾಸ, ಛಾತಿ. ಅವನ ಲಿಖಿತ ಭಾಷಣಾನೂ ಒಂದು ಸಂಶೋಧನೆಯ ಲೇಖನದಂಗಿತ್ತು. ಶ್ರಮ ಸಂಸ್ಕೃತಿ, ಸಮೂಹ ಸಂಸ್ಕೃತಿಗಳ ಸಸ್ಯದ ಚಿಗುರಾದ ಮಲ್ಲಣ್ಣ ಶಂಬಾ ಜೋಶಿ ದಾರಿಯೊಳಗೆ ಸಾಗಿದ ಕರ್ನಾಟಕ ಪರಂಪರೆಯ ಸಂಸ್ಕೃತಿಯ ಶೋಧಕ, ಕನ್ನಡ ನೆಲ-ಜಲ ನುಡಿಗಳು ವಿಶ್ವದ ಎತ್ತರಕ್ಕೆ ಹೋಗಬೇಕು. ಆತ್ಮಪ್ರಜ್ಞೆ ಕಾರ್ಯೋನ್ಮುಖವಾಗಬೇಕು. ಅಣ್ಣಿ ಗೇರಿನೊಳಗೆ ಪಂಪಸ್ಮಾರಕ ಕುಡಿಯೊಡೆಯಲಿ ಅಂತ ಹೇಳಿದ 'ಅಂಬಲಿ ಕಂಬಳಿ ಆಸ್ತಿ', ಮಿಕ್ಕಿದದೆಲ್ಲಾ ಜಾಸ್ತಿ ಅಂತ ನಮ್ಮಪ್ಪ ಮಡಿವಾಳಪ್ಪ ಹೇಳ್ತಿದ್ದ ಈಗ ಈ ಪಂಪಪ್ರಶಸ್ತಿ ನನ್ನ ಪಾಲಿಗೆ ಆಸ್ತಿ. ಇದರ ಕೂಡ ಬಂದ ಒಂದು ಲಕ್ಷರೂಪಾಯೇನಯ್ತಲ್ಲಾ ಅದು ಜಾಸ್ತಿ ಅದಕ್ಕ ಅದನ್ನ ವಾಪಾಸ್ ಕೊಡ್ತೀನಿ ಅಂತ ಹೇಳಿದವನ ವಿನಯವಾಗಿ ಆಚೆಕ್ ಲೀಲಕ್ಕನ ಕೈಯೊಳಗಿಟ್ಟ ಏಮೊನುಗ್ರಹದಿಂದ ಜೀವ್ನ ತಾಳಿದ್ದ ಮಲ್ಲಣ್ಣನ ಈ ನಿಗ್ರಹ ಮುಂಬರುವ ಭಾಳ ಮಂದಿಗೆ ಪ್ರಸಂಗಗಳಿಗೆ ಎದುರಾಗುವಂತ ಆಗಾಧ ಆದರ್ಶ ಆಹ್ವಾನ" ಎಂದು ಕಾರ್ಯಕ್ರಮದಲ್ಲಿ ನಡೆದ ಸಂದರ್ಭವನ್ನು ಕಲಬುರ್ಗಿಯವರ ಮಾತುಗಳನ್ನು ಯಥಾವತ್ತಾಗಿ ದಾಖಲಿಸುತ್ತಾರೆ.

ನೇತಾಜಿ ಸುಭಾಷ್ ಚಂದ್ರ ಬೋಸರ ವ್ಯಕ್ತಿತ್ವವನ್ನು ಪರಿಚಯಿಸುತ್ತಾ ಸುಭಾಷರ ಭಾಷಣದ ಒಂದೊಂದು ಶಬ್ದವೂ ಅಂದಿನ ತರುಣರಿಗೆ ಹೋರಾಟದ ಸ್ಫೂರ್ತಿಯನ್ನು ನೀಡುತ್ತಿತ್ತು. ಯಾವುದಾದರು ಸಂಸ್ಥೆ ಸರ್ಕಾರಗಳು ಬೋಸರನ್ನು ಅಲಕ್ಷಿಸಿರಬಹುದು. ಅಥವಾ ಒಪ್ಪಿರಲಿಕ್ಕಿಲ್ಲ ಆದರೆ ಕಾಲಚಕ್ರ ತಿರುವಿದಾಗ ಅವರಿಗೂ ಅಲ್ಲಿ ತಮ್ಮ ಚಿಂತನೆ ವಿಚಾರಗಳಿಗೆ ಹೊಸ ಬೆಳಕು, ತಿಳಿವು ಹೊಳೆಯುತ್ತದೆ. ನೇತಾಜಿಯವರ ವಿಚಾರಧಾರೆಗಳು ಅಂದಿಗಿಂತ ಇಂದು ಹೆಚ್ಚು ಅಗತ್ಯವೆನ್ನಿಸುತ್ತವೆ. ಆಗ ಹೊರಗಿನ ಒಬ್ಬ ಶತ್ರುವಿದ್ದ ಈಗ ಅಧಿಕಾರದ ಮೂಗುದಾಣ ಎಳೆಯುವ ಬಂಡವಾಳಶಾಹಿಗಳು, ಭ್ರಷ್ಟತೆ, ಕೋಮುವಾದದ ಬೆಂಕಿ ಹಚ್ಚಿ, ಸಂಸ್ಕೃತಿಯ ವನವನ್ನು ಸುಡುವ ಬಡವರನ್ನು ಸುಲಿಗೆ ಮಾಡುವ ಈಗ ಎಲ್ಲಾ ರೀತಿಯ ಶೋಷಣೆ ದಬ್ಬಾಳಿಕೆಗಳಿಂದ ಮುಕ್ತರಾಗಲು ಇನ್ನೊಂದು ಕ್ರಾಂತಿ ಆಗಲೇಬೇಕು ಎಂದು ಸುಭಾಷರು ಹೇಳಿದ್ದು ಸರ್ವಕಾಲೀನ ಅರ್ಥಪೂರ್ಣ ಸತ್ಯ ಆಪುಣ್ಯಾತ್ಮ ನೀವು ನನಗೆ ರಕ್ತ ಕೊಡಿ ನಾನು ನಿಮಗೆ ಸ್ವಾತಂತ್ರ್ಯ ಕೊಡುತ್ತೇನೆ ಎಂದು ಹೇಳಿದ್ದ. ಅನ್ಯಾಯ ಅಸತ್ಯಗಳ ಕೂಡಾ ಎಂದೂ ಹೊಂದಾಣಿಕೆ ಮಾಡಿಕೊಳ್ಳಬೇಡಿ ಅಂದ ನೇತಾಜಿಯವರನ್ನು ಕಾಲುಹಿಡಿದು ಎಳೆದ ಮಹಾತ್ಮರು, ಪಂಡಿತರು ನಾವು ಇಂದಿನ ಯುವಕರು ನೇತಾಜಿಯವರನ್ನು ಆದರ್ಶವಾಗಿಟ್ಟುಕೊಂಡು ತಮ್ಮನ್ನು ರೂಪಿಸಿಕೊಳ್ಳಬೇಕೆಂದು ತಮ್ಮ ಅನಿಸಿಕೆಯನ್ನು ಹೇಳುತ್ತಾರೆ.

ಗದಗ ಜಿಲ್ಲೆಯ ಮುಳಗುಂದದ ಗವಿಮಠ ಒಂದು ಜಾಗೃತ ಸ್ಥಳವೆಂದು ಪ್ರಸಿದ್ಧಿಯಾಗಿದೆ. ೧೫೦ ವರ್ಷಗಳ ಹಿಂದೆ ಬದುಕಿದ ಮಹಾಂತ ಶಿವಯೋಗಿಗಳು ಮಾಡಿದ ಲೀಲೆಗಳು ನೀಡಿದ ಆಶೀರ್ವಾಚನಗಳು ರಚಿಸಿದ ಸಾಹಿತ್ಯದಿಂದ ಈ ಮಠಕ್ಕೆ ಹೆಚ್ಚಿನ ಪ್ರಶಸ್ತಿ ಬಂದಿದೆ. ಇವರು ಕೈವಲ್ಯ ದರ್ಪಣದ ಕರ್ತೃವಾಗಿದ್ದಾರೆ. ಕುಲಛಲವ ಹಿಡಿದಿರುವ ಕಲಕು ಮನದವರಲ್ಲಿ ತಿಳುವಳಿಕೆ ಶಿವಚಂದ್ರಮ, ಹೇಂಗ ಕಾಣಾಕ ಸಾಧ್ಯ ಅಂತ ಕೇಳಿ ಕುಲಛಲ ನಟಗಳೆಂದು

ತಿಳಿಯ ಮನದವರಾಗಿ ಮಹಾಂತಲಿಂಗ ಚಿತ್ತೂರ್ಯನನ್ನು ಕಾಣೆರಿ ಅಂತ ಸಕಲ ಕುಲದವರಿಗೂ ಬೋಧಿಸಿದರು. ಈ ಮಹಾಂತ ಶಿವಯೋಗಿಗಳಿಗೂ ಮೈಸೂರು ಅರಸರಿಗೂ ಸಂಬಂಧವುಂಟು ಅರಸರು ನೀಡಿದ ಬೆಳ್ಳಿ, ಬಂಗಾರದ ಗಟ್ಟಿಗಳನ್ನೆಲ್ಲಾ ಚಿತ್ರದುರ್ಗದ ಮುರುಘಾಮಠದಲ್ಲಿ ಬಿಟ್ಟು ಬಂದರು. ಇವರ ಹೆಸರಲ್ಲಿ ಪ್ರತಿವರ್ಷ ಜಾತ್ರೆ ನಡೆಯುತ್ತದೆಯೆಂದು ಮಠದ ಇತಿಹಾಸ ಹೇಳುತ್ತದೆ, ಎಂದು ಬರೆಯುತ್ತಾರೆ.

ಇತ್ತೀಚಿಗೆ ಬಹಳಷ್ಟು ಚರ್ಚೆಗೆ ಒಳಗಾದ ನಾಟಕ 'ಗಾಂಧೀ ವಿರುದ್ಧ ಗಾಂಧೀ' ಇದು ಅನುವಾದ ಗೊಂಡ ಬಗೆ ವಿಚಿತ್ರ. ಮೊದಲು ಗುಜರಾತಿ ಭಾಷೆಯಲ್ಲಿ ದಿನಕರ ಜೋಶಿಯವರು 'ಪ್ರಕಾಶನೋ ಫಡಛಾಯೋ' (ಬೆಳಕಿನ ನೆರಳು) ಕಾದಂಬರಿ ಬರೆದರು. ಸ್ಮಿತ್ ಭಾಗವತರು ಇದನ್ನು ಮರಾಠಿಗೆ ಅನುವಾದಿಸಿದರು. ಅಜಿತ್ ದಳವಿ ಅದನ್ನು ನಾಟಕಕ್ಕೆ ಅಳವಡಿಸಿದರು. ಡಿ.ಎಸ್. ಚಾಂಗಲೆ ಕನ್ನಡಕ್ಕೆ ಈ ನಾಟಕವನ್ನು ಅನುವಾದಿಸಿದರು. ಇದು ಗಾಂಧೀ ನಾಟಕ ಕನ್ನಡಕ್ಕೆ ಬಂದ ಬಗೆ ಆದಿನದ ರಂಗ ಪ್ರಯೋಗದ ಅಧ್ಯಕ್ಷತೆಯನ್ನು ವಹಿಸಿದ್ದ ಡಾ.ಜ.ನಾಗಲೋಟಿಮಠರ ಮಾತು ಮನನೀಯವಾದುದು. ''ನೀರಾ ನಸುಕಿನ್ಯಾಗ ಕುಡಿದರೆ ದವಾ ಆಕ್ಕತಿ, ಭಾಳ ಹೊತ್ತು ಇಟ್ಟರ ಹುಳಿ ಆಗಿ ಸಿಂಧಿ ಅಕ್ಕತಿ, ನಿಶೇ ತರಿಸಿ ಹದಾ ಕೆಡಸತಯ್ತಿ ಗಾಂಧೀನ್ನ ಈ ದೇಶದ ಭವಿಷ್ಯದ ನಸುಕಿನಾಗ ನಾವು ಸೇರಿಸಬೇಕಿತ್ತು.[೬೦] ಗಾಂಧೀ ವಿರುದ್ಧ ಗಾಂಧೀ ಅಂದರೆ ಮುಖಾಮುಖಿಯಾಗುವುದು ಎಂದೇ ಅರ್ಥ, ಗಾಂಧೀಜಿ ಕಸ್ತೂರಿ ಬಾ, ಹಿರಿಯ ಮಗ ಹರಿಲಾಲ ಈ ನಾಟಕದ ಪ್ರಮುಖ ಪಾತ್ರಧಾರಿಗಳು. ನಮಗೆ ಅಪರಿಚಿತವಾದ ಅನೇಕ ವಿಷಯಗಳು ಈ ನಾಟಕದಿಂದ ತಿಳಿಯುತ್ತವೆ. ಗಾಂಧೀಜಿ ಯಾವಾಗಲೂ ಓಡು ನಡೆಗೆಗೆ ಹೊಂದಿಕೊಂಡಿದ್ದರು ಶಾಶ್ವತ ನಿಲ್ಲು ನಡಿಗೆಗೆ ಅಭ್ಯಸ್ತರಾದ ಭಾರತೀಯರಿಗೆ ಅವರ ಕೂಡ ಮುನ್ನಡೆ ಕಷ್ಟದ್ದಾಯಿತು. ಪ್ರಾಮಾಣಿಕತೆ, ಚತುರತೆ, ಪರಿಶ್ರಮ ಸಹನೆಗಳು ಬನಿಯಾ ಗಾಂಧೀಯನ್ನು ಮಹಾತ್ಮ ಗಾಂಧೀ ಮಾಡಿಬಿಟ್ಟವು.

ತಾನು ಹುಟ್ಟಿದ ವರ್ಷವೇ ಹುಟ್ಟಿದ್ದ ಕಸ್ತೂರಬಾರನ್ನು ಗಾಂಧೀಜಿ ತಮ್ಮ ಅನಿಸಿಕೆಗಳ ಬೆಳವಣಿಗೆಗಳ ಸಲುವಾಗಿ, ಬರವಣಿಗೆ ಬೆಳವಣಿಗೆಗಳ ಸಲುವಾಗಿ ಕಪ್ಪು ಹಲಗೆಯಂಗ ಬಳಸಿದರು. ಹಿರೇಮಗ ಹರಿಲಾಲ ಮಾತ್ರ ಗಾಂಧೀಜಿ ಪಾಲಿಗೆ ಪುತ್ರ ಮಿತ್ರ ವಿಮರ್ಶಕ, ಟೀಕಾಕಾರ, ಸುಧಾರಕ, ಪ್ರೇರಕ ಸಹಾಯಕನಾಗಿ ಅವರದೇ ಪ್ರತಿ ಬಿಂಬವಾಗಿದ್ದ ಅದಕ್ಕಾಗಿಯೇ ಉಪವಾಸ ಸತ್ಯಾಗ್ರಹದಂತಹ ಅಸ್ತ್ರವನ್ನು ಅದೇ ಮಗನಿಂದ ಕಲಿತಿದ್ದರೂ ಗುಪ್ತ ಗಾಂಧೀಜಿ ಕಡೆತನಕ ಆ ಸತ್ಯವನ್ನು ಗುಪ್ತವಾಗಿಯೇ ಇಟ್ಟರು. ಸಾಮಾನ್ಯ ಗಾಂಧಿಯನ್ನು ಅಸಮಾನ್ಯರಾಗಿಸಿದ ಕಸ್ತೂರಬಾ ಮಿಸ್ಟರ್ ಗಾಂಧಿಯನ್ನು ಮಹಾತ್ಮಾಜಿಯನ್ನಾಗಿಸಿದ ಹರಿಲಾಲರನ್ನು ಇಂದು ನಾವು ಹೆಂಗ ನೆನಸ್ತೇವು ಗಾಂಧೀಜಿಯಿಂದಾಗಿಯೇ ಮುಂದೆ ಅಬ್ದುಲ್ಲಾ ನಂತರ ಹೀರಾಲಾಲ ಆಗಬೇಕಾಗಿ ಬಂದ ಹಿರೇಮಗ ಹರಿಲಾಲ ನಲ್ಲದೆ ಗಾಂಧೀಜಿಗೆ ಮಣಿಲಾಲ ರಾಮದಾಸ್, ದೇವದಾಸ್‌ರೆಂಬ ಮಕ್ಕಳು ಇದ್ದದ್ದನ್ನ ನೆನೆಸದೆ, ತಿಳಿಯದ, ತಿಳಿಯುವ ಮನಸ್ಸು ಮಾಡದೆ ನಾವು ಇವತ್ತಿನ ಎಷ್ಟೋ ಚಿಲ್ಲರೆಗಳ ಅಸಂಖ್ಯೆ ವಿವರಗಳನ್ನು ಸಲೀಲ ನೆನಪಿಟ್ಟೇವಿ[೨೦] ಎಂದು ನಮಗೆ ಗೊತ್ತಿಲ್ಲದ ಎಷ್ಟೋ ವಿಷಯಗಳನ್ನು ಪರಿಚಯಿಸುತ್ತಾರೆ.

ಅದೇ ರೀತಿ ಅಂಕೋಲೆಯ ರಾಘವೇಂದ್ರ ಪ್ರಕಾಶನದ ವಿಷ್ಣು ನಾಯ್ಕ, ಜಾನಪದ ವಿದ್ವಾಂಸ ಮುದೇನೂರು ಸಂಗಣ್ಣನವರ ಶೀಲಾವತಿ ನಾಟಕ, ಚಿತ್ರ ಕಲಾವಿದರಾದ ದಿಲೀಪ ಕುಮಾರ ಕಾಳೆ, ಎಂ.ವಿ. ಪುಣಜನಿ, ರಾಯಚೂರಿನ

ಬರಹಗಾರ, ಛಾಯಾಗ್ರಾಹಕ ಸ್ವಾಮಿ, ರಾಮಕ್ಕ, ಪದ್ಮಕ್ಕಾ ಟ್ರಸ್ಟ್‌ನ ಉಮಾಪತಿ, ನಾಟಕಕಾರರಾದ ಕನಕಗಿರಿ ವಾದಿರಾಜ, ಯಲ್ಲಾಪುರದ ವಿವೇಕಾನಂದ ವೇದಿಕೆ, ಗುಲ್ಬರ್ಗಾದ ಶಿಕ್ಷಕ ಸಾಹಿತಿ ಶಿವ ಶರಣಪ್ಪ ಪಾಟೀಲ ಜವಳಿ ಮುಂತಾದ ವ್ಯಕ್ತಿಗಳನ್ನು ಕುರಿತು ಸಂಘ ಸಂಸ್ಥೆಗಳ ಸಾಧನೆಗಳನ್ನು ಕುರಿತು ಅರ್ಥಪೂರ್ಣ ಮಾಹಿತಿ ಈ ಅಂಕಣ ಬರಹಗಳಲ್ಲಿ ಸಿಗುತ್ತದೆ.

**೫. ಚಹಾದ ಜೋಡಿ ಚೂಡಾದ್ಹಾಂಗ-೫**

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಅಂಕಣ ಬರಹಗಳ ಐದನೇ ಸಂಕಲನವಿದು ೧೯೯೮ ಸೆಪ್ಟಂಬರ್ ತಿಂಗಳಿನಿಂದ ೯೯ ಜನವರಿ ತಿಂಗಳಿನವರೆಗೆ ಬರೆದ ೨೨ ಲೇಖನಗಳು ಇಲ್ಲಿವೆ. ಅನನ್ಯ ಪ್ರಕಾಶನ ಧಾರವಾಡದಿಂದ ಈ ಪುಸ್ತಕ ಪ್ರಕಟಣೆಗೊಂಡಿದೆ.

ಹಂಪಿಯ ಹಿತ್ತಲ ಊರು ಎಂದು ಮರಿಯಮ್ಮನ ಹಳ್ಳಿ ಮತ್ತು ಅಲ್ಲಿನ ಮಹಿಳಾ ಕಲಾ ತಂಡದ ಬಗ್ಗೆ ವರದಿ ನೀಡುತ್ತಾರೆ. ೧೯೫೨ ರಲ್ಲಿ ತುಂಗಭದ್ರ ಆಣೆಕಟ್ಟನ್ನು ನಿರ್ಮಿಸಿದಾಗ 'ನಾಣಿಕೆರೆ' ಎನ್ನುವ ಊರು ಮುಳಗಿ ಹೋಯಿತು. ವ್ಯಾಪಾರಸ್ಥರು ಹೊಸಪೇಟೆಗೆ ಹೋದರೆ ಜನಸಾಮಾನ್ಯರು ಮರಿಯಮ್ಮನ ಹಳ್ಳಿಗೆ ಬಂದು ನೆಲೆಸಿದರು. ಕಲಾವಿದರಿಂದ ತುಂಬಿದ ಊರು ಇದು. ಇಲ್ಲಿನ ವೃತ್ತಿರಂಗ ನಟಿಯರು ಬೇರೆ ಊರುಗಳಿಗೆ ಹೋಗಿ ಅಭಿನಯಿಸಿ ಬರುತ್ತಾರೆ. ಬಾರಿಕರ ನಿಂಗಮ್ಮ, ತಳವಾರ ಹನುಮಂತಮ್ಮ, ಅಂಬುಜಾ, ಗಂಟ ಹುಲಿಗಮ್ಮ ಮುಂತಾದ ನೂರಾರು ಕಲಾವಿದೆಯರನ್ನು, ಡಿ. ದುರ್ಗದಾಸ, ನರಸಿಂಹಾಚಾರ್ಯ, ಹನುಮಂತಪ್ಪ ಕುರುಬರ, ಹುಚ್ಚಪ್ಪ, ಬೆಳೆಗಾರ ಶಾಂತಪ್ಪ ಪತ್ರಿ ಬಸಪ್ಪ ಮುಂತಾದ ಕಲಾವಿದರು ಈ ಊರಿನಲ್ಲಿದ್ದಾರೆ. ವೃತ್ತಿ ಮತ್ತು ಹವ್ಯಾಸಿ ಕಲಾವಿದೆಯರು ಸೇರಿಕೊಂಡು ೧೯೮೯ ರಲ್ಲಿ ಸ್ಥಾಪಿಸಿಕೊಂಡ ಲಲಿತ ಕಲಾರಂಗ ಉತ್ತಮ ಪ್ರಯೋಗಗಳನ್ನು ನೀಡುತ್ತಾ ಬಂದಿದೆ.

ಅಥಣಿಯ ವಿಮೋಚನಾ ದೇವದಾಸಿ ಪುನರ್ವಸತಿ ಸಂಘದವರು. ದುಂಡಪ್ಪ ನಿಂಗಪ್ಪ ಬೆಳಗಲಿ ಅವರ ಏರ್ಪಡಿಸಿದ ಅಭಿನಂದನಾ ಕಾರ್ಯಕ್ರಮದ ವರದಿ ನೀಡುತ್ತಾ ದು.ನಿಂ. ಬೆಳಗಲಿ ಶಿಕ್ಷಕ ಸಾಹಿತಿಯಾಗಿ ಬೆಳೆದು ಬಂದವರು. ಮಲಬಾದದಲ್ಲಿ ನೆಡೆದ ಈ ಕಾರ್ಯಕ್ರಮದಲ್ಲಿ ಬೆಳಗಲಿ ಎನ್ನುವ ಅಭಿನಂದನಾ ಗ್ರಂಥವನ್ನು ಅರ್ಪಿಸಲಾಯಿತು. ಬೆಳಗಲಿಯವರನ್ನು ಕುರಿತು ಅನೇಕ ಲೇಖಕರು ಮಾತನಾಡಿದರು. ಒಬ್ಬ ಜನಪ್ರಿಯ ಕಥೆಗಾರ ಕಾದಂಬರಿಕಾರರನ್ನು ವಿಮರ್ಶೆಯ ಕಟ್ಟುಪಾಡುಗಳಲ್ಲಿ ಬಿಗಿಯುವುದು, ಕಟ್ಟುವುದು, ಅಷ್ಟು ಸರಿಯಲ್ಲ. ಅವನ ಉದ್ದೇಶ ಮುಖ್ಯವಾಗಿ ತಾನು ಕಂಡ ಬದುಕಿನ ಚಿತ್ರಣ, ಜನರಿಗಾಗಿ ಪರೋಕ್ಷ ಬೋಧನೆ, ರಚನೆ ಆಭಾಗದ ಸಂಸ್ಕೃತಿಯ ರಕ್ಷಣೆ ಆಗಿರುತ್ತೈತಿ, ಆನಂತರ ವ್ಯಾಳೆ ಸಿಕ್ಕರೆ ಅವ ವಿಮರ್ಶಕರ ಕಡೆ ಲಕ್ಷ್ಯ ಹಾಕತಾನ ಈ ದೃಷ್ಟಿಯಿಂದ ಮನಸ್ಸು ತಳ್ಳಿವ ಖಾಸಾ ಜಮಖಂಡೀ ಭಾಗೀಯ ಭಾವಾ-ಭಾಷ ಸಂಸ್ಕೃತಿಯನ್ನು ಅಕ್ಷರಗಳಲ್ಲಿ ಅರಳಿಸಿದ ಬೆಳಗಲಿ ಅವರನ್ನ ಬದುಕುವ ಮೂಲಕ ನಾವು ಪಡೆಯುವ ಸಂತೋಷನ ಅವರ ವಿಮರ್ಶೆ, ಒಬ್ಬ ಲೇಖಕನ ಕೃತಿಗಳನ್ನ ಪ್ರೀತಿಲೇ ಓದಿದರೆ ಅದಕ್ಕಿಂತ ದೊಡ್ಡ ಕೃತಕೃತ್ಯತೆ ಏನೈತೆ ಹೇಳ್ರಿ, ತಮ್ಮದೇ ಆದ ಮುದ್ರಣಾಲಯ, ಪ್ರಕಾಶನಮಂದಿರ, ಕುಟು ಕುಟು ವ್ಯವಹಾರ, ಗೆಳೆಯರ ಬಳಗ, ಎಲ್ಲಾನೂ ಶಾಂತಿಲೇ ನಿಭಾಯಿಸಿ ಗೊಂಡ ಈ ವಯಸ್ಸಿನಾಗೂ ಅವರಷ್ಟು ಕುಟುಂಬ

ಪ್ರಿಯತೆ, ಮತ್ತು ಕುತೂಹಲಮಯ ಪ್ರವಾಸ ಪ್ರಿಯತೆಯನ್ನು ಉಳಿಸಿಕೊಂಡು ಬಂದ ಲೇಖಕರು ಕಡಿಮೆ[೨೨] ಎಂದು ಶೆಟ್ಟರು ತಮ್ಮ ಅನಿಸಿಕೆ ವ್ಯಕ್ತ ಪಡಿಸುತ್ತಾರೆ.

ಅರವತ್ತು ತುಂಬಿದ ಎಂ.ಎಂ. ಕಲಬುರ್ಗಿಯವರಿಗೆ ಧಾರವಾಡದ ಸಾಹಿತಿ ಮಿತ್ರರೆಲ್ಲಾ ಸೇರಿ ಸತ್ಕಾರ ಸಮಾರಂಭ ಏರ್ಪಡಿಸಿದ್ದರು. ಕಲಬುರ್ಗಿಯವರು ಸೃಜನಶೀಲ ಸಾಹಿತ್ಯದೊಳಗೆ ಹೆಸರು ಮಾಡಿದವರಲ್ಲ. ಅಧಿಕಾರ ಸಿಕ್ಕಾಗ ಅಹಂಕಾರದಿಂದ ವರ್ತಿಸಿದವರಲ್ಲ, ಶಾಸನ, ಸಂಶೋಧನೆ, ಜಾನಪದ, ಗ್ರಂಥಸಂಪಾದನೆಯಂಥ ಕಾಯಕವನ್ನು ಪ್ರೀತಿಯಿಂದ ಮಾಡ್ತಾ ಬಂದು ನಮ್ಮ ಸಂಸ್ಕೃತಿಯ ಸಂಶೋಧಕ ಎಂ.ಎಂ. ಕಲಬುರ್ಗಿಯವರಿಗೆ ಅರ್ಪಿಸಿದ ಅಭಿನಂದನಾ ಗ್ರಂಥ 'ಮಹಾಮಾರ್ಗ' ಇತಿಹಾಸದೊಳಗೆ ದಾಖಲಾಗುವಂತಹದು ೯೨೫ ಪುಟಗಳಲ್ಲಿ ಸಂಶೋಧನಾವಿಧಾನಕ್ಕೆ ಸಂಬಂಧ ಪಟ್ಟ ೨೨ ಲೇಖನಗಳು ಭಾಳ ಚತಿಯುಳ್ಳವು ಆಗಿವೆ.

ಕಿಟಲ್, ರೈಸ್, ಆರ್.ನರಸಿಂಹಾಚಾರ್, ಡಿ.ಎಲ್.ಎನ್. ಮುಂತಾದ ೬೧ ಸಂಶೋಧಕರನ್ನು ಕುರಿತಾದ ಲೇಖನಗಳು ಇಲ್ಲಿವೆ. ಕನ್ನಡದೊಳಗೆ ಬರೆಯಲ್ಪಟ್ಟ ಸಂಶೋಧನಾ ಸಂಪ್ರಬಂಧಗಳ ಪಟ್ಟಿಯೂ ಇಲ್ಲಿದೆ. ಎಂದು ವರದಿ ಮಾಡಿದ್ದಾರೆ.

'ನೆಲದ ಮರೆಯ ನಿಧಾನ' ಅನ್ನುವ ತಲೆ ಬರಹದಡಿಯಲ್ಲಿ ಶಿಕ್ಷಣ ಇಲಾಖೆಯ ಉನ್ನತ ಹುದ್ದೆಗಳಲ್ಲಿ ಕೆಲಸಮಾಡಿದ ಶಾಂತಪ್ಪ ಬಸವಂತಪ್ಪ ಹಳಕಟ್ಟಿಯವರನ್ನು ಪರಿಚಯಿಸುತ್ತಾ ಬಡತನದಲ್ಲಿ ಬೆಳೆದು ಬಂದ ಶಾಂತಪ್ಪ ಬಸಪ್ಪ ಹಳ ಕಟ್ಟಿಯವರು ಸಂಸ್ಕೃತಿ, ಸಾಹಿತ್ಯ, ಸಮಾಜ ಸೇವೆ, ಶಿಕ್ಷಣ ಕ್ಷೇತ್ರಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು. ವಚನ ಪಿತಾಮಹರೆಂದು ಪ್ರಸಿದ್ಧ ಪಡೆದ ಫ.ಗು. ಹಳಕಟ್ಟಿಯವರ ತಮ್ಮ ಮಗ ಇವರು, ಇಂತವರ ಬಗ್ಗೆ ಅಲಕ್ಷ್ಯ ಸಲ್ಲದು. ನಮಗೆ ಇತಿಹಾಸದ ಕಿಮ್ಮತ್ತು ಗೊತ್ತಿಲ್ಲ. ಕಲಿತ ಅಕ್ಷರ ಸಾಧಿಸಿದ ಅರಿವುಗಳ ಮೂಲಕ ಸಂಸ್ಕೃತಿಯು ಇತಿಹಾಸ ಉಳಿಸಾಕ ಪ್ರಯತ್ನ ಮಾಡುವ ನಾವು ಬಹಳಷ್ಟು ಮಂದಿ ವ್ಯರ್ಥ ಆಲಾಪಗಳಲ್ಲಿ ಮುಳುಗಿದ್ದೇವೆ. ಒಂದು ರೀತಿಯಲ್ಲಿ ಕಾಲವಂಚನೆ, ಆತ್ಮವಂಚನೆ, ನೆನಪುಗಳನ್ನು ರಕ್ಷಿಸದ, ಇತಿಹಾಸವನ್ನು ಹಿಡಿದಿಡದ ನಾವು ಸೃಷ್ಟಿಯ ದೃಷ್ಟಿಯೊಳಗೆ ಕುಬ್ಜರಾಗಿದ್ದೇವೆ ಎಂದು ವಿಮರ್ಶೆ ಮಾಡುತ್ತಾರೆ.

ಹೀಗೆ ಇಲ್ಲಿನ ಅಂಕಣ ಬರಹಗಳು ಮಹತ್ವ ಪೂರ್ಣವಾದ ಮಾಹಿತಿಗಳನ್ನು ನೀಡುತ್ತವೆ. ಅಲಕ್ಷಕ್ಕೆ ಒಳಗಾಗಬಹುದಾದ ಸಂಗತಿಗಳನ್ನ ಕಲೆ ಹಾಕುತ್ತವೆ. ಇತಿಹಾಸದಲ್ಲಿ ಸೇರಲಾರದ ಘಟನೆಗಳನ್ನು ದಾಖಲಿಸುತ್ತವೆ.

**೬. ಕಡೇಪುಟ**

ಡಾ. ಸಿದ್ಧಲಿಂಗ ಪಟ್ಟಣಶೆಟ್ಟರು ಕವಿಗಳಾಗಿ, ಅನುವಾದಕರಾಗಿ ಸಾಹಿತ್ಯ ಲೋಕಕ್ಕೆ ಪರಿಚಿತರಾಗಿದ್ದರೂ ಪ್ರಜಾವಾಣಿ ಪತ್ರಿಕೆಯಲ್ಲಿ 'ಚಹಾದ ಜೋಡಿ ಚೂಡಾದಂಗ' ಅಂಕಣ ಬರಹದಿಂದ ಶ್ರೇಷ್ಠ ಅಂಕಣ ಬರಹಗಾರರಾಗಿ ಪ್ರಸಿದ್ಧರಾದರು ತಮ್ಮದೇ ಆದ ಸಂಪಾದಕತ್ವದಲ್ಲಿ ಹೊರ ಬರುತ್ತಿರುವ ದ್ವೈಮಾಸಿಕ ಸಾಹಿತ್ಯ ಪತ್ರಿಕೆ ಸಂಕಲನದಲ್ಲಿ ಪತ್ರಿಕೆಯ ಕೊನೆಗೆ ಕಡೇಪುಟ ತಲೆಬರಹದಡಿಯಲ್ಲಿ ಅಂಕಣ ಬರಹ ಬರೆಯುತ್ತಲಿದ್ದಾರೆ. ಜುಲೈ ೨೦೦೨ ರಿಂದ ಈ ಅಂಕಣವನ್ನು ಇಂದಿಗೂ ಬರೆಯುತ್ತಲಿದ್ದಾರೆ.

ಕಡೀಪುಟ ಅಂಕಣ ಬರಹವು ತತ್ವವಿವೇಚನೆ, ಶಬ್ದದ ಉತ್ಪತ್ತಿ, ಅಲಂಕಾರ ಶಾಸ್ತ್ರ, ಜೀವನಾನುಭವ, ಅಮೂಲ್ಯ ಸಂದರ್ಭಗಳು ಮುಂತಾದವುಗಳನ್ನು ಒಳಗೊಂಡಿದೆ. ಅಭಿವ್ಯಕ್ತಿಯನ್ನು ಕುರಿತು ಒರೆಯುತ್ತಾ. ಹುಟ್ಟಿಗೆ ಕ್ರಮೇಣ ಸಾವು, ದೇಹಕ್ಕೆ ಅನ್ನದ ಹಸಿವು, ಬದುಕಿಗೆ ಅನಿತ್ಯ ಉಸಿರು. ಕಣ್ಣಿಗೆ ಬಣ್ಣದ ಹಸಿರು, ಚಲನಕ್ಕೆ ಚಾಂಚಲ್ಯ, ಹಗಲಿಗೆ ಕತ್ತಲು, ಬಸಿಲಿಗೆ ನೆರಳು, ಉಸಿರಿಗೆ ವಿರಲು ಬೆನ್ನು ಹತ್ತಿದಾಂಗ ಮನಸ್ಸಿಗೆ, ಹೃದಯಕ್ಕೆ, ಭಾವಕ್ಕ ಅಭಿವ್ಯಕ್ತಿ ರೂಪಿ ಬ್ರಹ್ಮರಾಕ್ಷಸ ಬೆನ್ಹತ್ತತ್ತಾನೆ. ಇವ್ನಾ ಬೆನ್ನ ಹತ್ತದಿದ್ದರೂ ನಾವ್ ಆ ಇವ್ನನ ಬೆನ್ನೆ ಹತ್ತಿ ಬ್ಯಾರೆ ಬ್ಯಾರೆ ರೀತಿಲೇ ನಮ್ಮನ್ನ ನಮಗೆ ಅ ತಿಳಿಯದ ಏನೋ ನಮ್ಮೊಳಗಿಂದ ಹೊರಗೆ ಹಾಕ್ಕೂ ಬೇಕು, ತೋರಿಸಬೇಕು, ಗಳುಹಬೇಕು, ಹೊಳೆವಬೇಕು ಅಂತ್ಹೇಳಿ ಅವನ್ನ ಹುಡುಕ್ಯಾಡ ತಿರತೇವು. ಅದು ಯಾವ ಪುಣ್ಯಾದ್ಲೇನೋ ಅವ್ನ ಲಗೂನ ಸಿಕ್ಕಾ ಅಂದರೆ ನಮ್ಮ ನಮ್ಮ ಶಕ್ತ್ಯಾನುಸಾರ ಹಾಡುಗಾರರಾಗತೇವು. ಕಲ್ಲು ಕಟ್ಯಾವರಾಗತೇವು, ಗೊಂಬಿ ಮೂಡಸತೇವು. ಕಲಾವಿದರು, ಕವಿ ಸಾಹಿತಿಗಳು ಅಂತ ಆಗತೇವು, ಮಾತಾಡತೇವು, ಹೇಳತೇವು, ಬರಿತೀವು, ಅವ್ನಾ ಸಿಗದಿದ್ದರೂ ಅವ್ನನನ್ನ ಜಪಿಸಿಕೊಂಡ ಬ್ರಹ್ಮ ಅಂತ ಬರ್‍ಯಾಕ ಹೋಗಿ ಭ್ರಮಾ ಅಂತ ಬರಕೋತೇವು, ಪ್ರಜ್ಞಾವಂತ ಮಂದಿ ಇದಕ್ಕನ್ ಅ ಅಭಿವ್ಯಕ್ತಿ ಅಂತ ಕರೆದಿರಬಹುದು[೨೬] ಎಂದು ತಮ್ಮ ಅನಿಸಿಕೆ, ವ್ಯಕ್ತಪಡಿಸುತ್ತಾರೆ.

ಈ ಅಂಕಣ ಬರಹದಲ್ಲಿ ಭಾಷೆ ಮತ್ತು ಪದವ್ಯುತ್ಪತ್ತಿ ವಿವೇಚನೆಗಳನ್ನು ಮಾಡುವುದರ ಮೂಲಕ ಶಾಸ್ತ್ರವನ್ನು ಹೇಳುತ್ತಾರೆ. ಇವರು ಬಳಸುವ ಉಚ್ಛಾರಾಧಿಷ್ಠ ಶಬ್ದ ಶೈಲಿಯ ಹೊಸ ಪ್ರಯೋಗ ಕನ್ನಡದಲ್ಲಿ ಹೊಸದು. ಗ್ರಾಂಥಿಕ ಭಾಷೆ ಮತ್ತು ವ್ಯಾವಹಾರಿಕ ಭಾಷೆಗಳಲ್ಲಿ ಅಂತರ ಕಡಿಮೆಯಾಗಬೇಕು; ಎನ್ನುವ ವಿದ್ವಾಂಸರ ಅಭಿಮತ ಇಲ್ಲಿ ಸಾಕಾರಗೊಳ್ಳುವ ಹಾದಿಯಲ್ಲಿದೆ. ಲಾವಣ್ಯ ಅನ್ನುವ ಪದ ಪದಾರ್ಥವಾಗಿದ್ದು ಲವಣದಿಂದ. ಲವಣಕ್ಕೆ ಉಪ್ಪು, ಆಯುಧ, ಚೂರಿ, ಕತ್ತರಿಸುವ ಕ್ರಿಯೆ ಮುಂತಾದ ಮೂಲಾರ್ಥಗಳಿವೆ. ಲವಣ ಹೆಸರಿನ್ಯಾವ ಒಬ್ಬ ರಾಕ್ಷಸನೂ ಇದ್ನಂತ, ಚೂರಿ, ಕುಡುಗೋಲು ಮುಂತಾದವುಗಳನ್ನು ಸಾಣಿ ಹಿಡಿದು ಕೊಯ್ಯುವ, ಕತ್ತರಿಸುವ ಕೆಲಸದೊಳಗೆ ನೀವು ಆಗಿದ್ದರಿಂದ ಅವನಿಂದಾಗಿ ಲವಣ ಪದಕ್ಕೆ ರಾಕ್ಷಸಾರ್ಥ ವಿಸ್ತಾರ ಲಭಿಸಿರಬೇಕು. ಲವಣದ ಹಿತವಾದ, ಹದವಾದ ಬಳಕೆಯಿಂದ ದೇಹಕ್ಕಾ ಮೆರಗು ಬರತಯ್ತಿ ಅನ್ನುವ ಕಾರಣದಿಂದ ಲಾವಣ್ಯ ಮೂಲದಿಂದ ಸೌಂದರ್ಯ ಸೌಶೀಲ್ಯ, ಕಾಂತಿ ಅನ್ನುವ ಲಾಭರ್ಥಗಳು ಸ್ವಜಸ್ತವ. ಲಾವಣ್ಯ ಅಂದರೆ ಬ್ರಾಹ್ಮಿಸಸಿಅಂತ ಅರ್ಥನೂ ಇದೆ. ಹೇಮ ಅಂದರೆ ಬಂಗಾರ ಚಿನ್ನ, ದತ್ತೂರಿ, ಕರಿಬಣ್ಣದ ಕುದುರಿ, ಬುಧಗ್ರಹ, ನೀರು, ಇಬ್ಬನಿ, ಕೇಸರಿಯ ಹೂ ಅಂತ ಅರ್ಥ ಇದೆ. ಆದರೆ ಹೇಮ ಬೇರೆ ಹೇಮಾ ಬೇರೆ ಹೇಮಾ ಅಂದರೆ ಭೂಮಿ, ಪೃಥ್ವಿ, ಸುಂದರ ಹೆಣ್ಣು, ಮಾಧವೀ, ಬೆಳ್ಳಿ ಅಂಥ ಅರ್ಥ ಈ ಹೆಸರಿನ ಒಬ್ಬ ಅಪ್ಸರೆ ಇದ್ದಳಂತೆ[೨೭] ತಮ್ಮ ಈ ಅಂಕಣದಲ್ಲಿ ತಂದೆ ತಾಯಿಯರನ್ನು, ಜೀವನದಲ್ಲಿ ನಾಲ್ಕು ಒಳ್ಳೆಯ ಮಾತುಗಳನ್ನು ಹೇಳಿದ ಗುರುಗಳನ್ನು ನೆನೆಯುತ್ತಾರೆ. ಹಿರಿಯರ ಪ್ರೀತಿ ವಿಶ್ವಾಸದ ಹಾರೈಕೆಗಳಿಂದ ನಾವು ಬೆಳೆಯಲು ಸಾಧ್ಯ ಎನ್ನು ಭಾವನೆ ವ್ಯಕ್ತಪಡಿಸುತ್ತಾ ನಾಲ್ಕುದಿನದ ಈಬದುಕಿನಲ್ಲಿ ಹಿರಿಯರು ಹೇಳುವ ಹಾಗೆ ನೆಡೆದು ಬಾಳಿ ನಾಲ್ಕು ಜನರ ಹೆಗಲ ಮೇಲೆ ಹೋಗುವಾಗ ಗೌರವ ಸಿಗಬೇಕು. ನಾಲ್ಕು ಕಾಲಿನ ಪ್ರಾಣಿಗಳಾಗೆ ಸಿಗುವ ಸುಖ ನೆಮ್ಮದಿ ಮನುಷ್ಯ ಪ್ರಾಣಿಗೆ ಸಿಗಬೇಕು ಎನ್ನುತ್ತಾ ಋಗ್ವೇದ ಯಜುರ್ವೇದ ಸಾಮವೇದ ಅಥರ್ವಣ ವೇದಗಳು ವಿದ್ವತ್ ಜ್ಯೋತಿ ಬೀರಿದವು. ಸತ್ಯ ತೇತ್ರಾ, ದ್ವಾಪರಾ ಕಲಿಯುಗಗಳು ತಮ್ಮೊಡಲ ಕಡಲ ಕಥೆಗಳಾದ

ರಾಮಾಯಣ ಮಹಾಭಾರತಗಳನ್ನು ಬಯಲಿಗೆ ತಂದವು. ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ ಬಯಲಿಗೆ ಬಂದರು. ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ ಆಶ್ರಮಗಳು ಶ್ರಮಬೋಧೆ ಕಲಿಸಿದವು. ಧರ್ಮ, ಅರ್ಥ, ಕಾಮ, ಮೋಕ್ಷಗಳು ಪದಪದಾರ್ಥಗಳ ಹೊಳಹು ಹೇಳಿದವು, ಹಸ್ತಿ, ಅಶ್ವ, ರಥ, ಪದಾತಿ ದಳಗಳು ಕಾಲ್ಕೆಳಗೆ ಗುಂಡಿ-ಕಂದರ ತೋಡಿದವು. ನಾಲ್ಮೊಗ ಬ್ರಹ್ಮ ನಾಕ ಕಡೆ ಮಾರಿ ತಿರಿವಿಕೊಂಡ, ದೃಷ್ಟಿ ದೂರಾಗಿ ನಿಂತ ದಿಕ್ಕ ತೋಚದಂಗಾತು[೨೨] ಎನ್ನುತ್ತಾರೆ.

ಮಾನವ ಜೀವನದ ಬಗ್ಗೆ ಬರೆಯುತ್ತಾ ಭೌತಿಕವಾಗಿ ಮತ್ತು ಮಾನಸಿಕವಾಗಿ ಜೀವಿಸುವುದೇ ಬದುಕು. ಅಹಂಮನ ಕದಾ ತೆರೆಯಲಾರದೆ ಜೀವನದ ಹದಾ ತಿಳಿಯೋದಲ್ಲಾ. ಜೀವನ ಅನ್ನುವ ಪದ ಒಂದು ಶಬ್ಧಕೋಶ ಇದ್ದಾಂಗ. ನಮಗೆ ತಿಳಿದದ್ದು, ಹೊಳೆದದ್ದು, ಎಲ್ಲಾನು ಅದರ ಒಡಲಾಗ ಇರುತ್ತದೆ ಎನ್ನುತ್ತಾರೆ. ವಯಸ್ಸು ಮತ್ತು ಆಯುಷ್ಯದ ಬಗ್ಗೆ ಬರೆಯುತ್ತಾ ಆಯುಷ್ಯ ಬೆಳೆಯುವ ಪ್ರಕ್ರಿಯೆಗೆ ಒಳಪಟ್ಟದ್ದು, ವಯಸ್ಸು ಅಳಿಯುವ ಮಿತಿಯೊಳಗೆ ಸಿಲುಕಿದ್ದು ಆಯುಷ್ಯ ಬೆಳೆತಯ್ತಿ, ವಯಸ್ಸು ಕಳೆತಯ್ತಿ, ಒಂದಕ್ಕೆ ನಿರಂತರ ಉದ್ದೇಶದ ಗುರಿ, ಇನ್ನೊಂದಕ್ಕೆ ಅಳಿಯುವ, ಗತಿಸುವ ಮರಣ, ಸಾವು ಅನ್ನುವ ಕಾಲಮಿತಿ, ಅದಕ್ಕಾಗಿ ಪ್ರಕೃತಿ ಧರ್ಮವನ್ನು ವಯೋ ಮಾನದಿಂದ ತಿಳಿಯಬೇಕು. ಅದಕ್ಕಾಗಿ ದೇಹ ಧರ್ಮದ ಬಗ್ಗೆ ಧಿಮಾಕು ಮಾಡೋದನ್ನ ಆದಷ್ಟು ಲಗೂನ ಬಿಡಬೇಕು. ಅದರ ಬಚ್ಚ ಬಾಯಾಗ, ಕಿಸೇದಾಗ, ಚೀಲದಾಗ, ಹಾದಿದಂಡ್ಯಾಗ, ಮೂಲ್ಯಾಗ, ಬೆಳಕು, ಅನುಭವದ ಜ್ಯೋತಿ, ಪ್ರಕಾಶ ಪರ್ವದ ದೀಪಾವಳಿ ಆಗಾಹಂಗ ಮಾಡಬೇಕು. ಈ ಪ್ರಕಾರ ವಯಸ್ಸಾದವರು ಮುಂದಿನವರ ಹಾದಿಯ ಅಡಿಗಲ್ಲಾಗಬೇಕು. ದೀಪಗಳ ಆವಳಿ ಆಗಬೇಕು. ಆಗ ಮಾತ್ರ ವಯಸ್ಸು ಅನ್ನೊದು ಆಯುಷ್ಯದ ಕಟ್ಟಡದ ಮುಂದುವರಿಕೆ ಆಕ್ಕತಿ.[೨೩]

ಕಾವ್ಯ ಶಾಸ್ತ್ರದಲ್ಲಿನ ಅನೇಕ ವಿದ್ವಾಂಸರು ಹೇಳಿದ ಅಕ್ಷರಗಳ ಮಡಿ ಮೈಲಿಗೆ ಬಗ್ಗೆ ಹೇಳುತ್ತಾರೆ. ಕ.ಬ.ಘ.ಚ.ಛ.ಜ, ತ.ದ.ಧ.ನ, ಯ.ಶ.ಸ.ಗಳು ಇದ್ದದ್ದರಲ್ಲಿಯೇ ಶುಭ ಅಕ್ಷರಗಳೆನಿಸಿ ಕೊಂಡಿವೆ. ಇನ್ನುಳಿದ ಎಲ್ಲಾ ವ್ಯಂಜನಗಳು ಅಶುಭವಂತೆ ಇದರಲ್ಲಿ ಫ, ಹ, ರ.ಭ.ಷ.ಗಳು ಅತ್ಯಂತ ಅಶುಭ, ದೂಷಿತ ವ್ಯಂಜನಳಂತೆ. ಆದರೆ ಈ ಆರೋಪಗಳಿಗೆ ಸರಿಯಾದ ವೈಜ್ಞಾನಿಕ ಕಾರಣಗಳಿಲ್ಲವೆಂದು ಹೇಳುತ್ತಾರೆ.

ಜಾಗತೀಕರಣದ ಪ್ರಭಾವಲಯದಲ್ಲಿರುವ ನಾವುಗಳು ಎಷ್ಟೊಂದು ಶಬ್ದಗಳನ್ನು ಕಳೆದು ಕೊಳ್ಳುತ್ತಿದ್ದೇವೆ. ಬಹಿರ್ದೆಸೆ ಎನ್ನುವಪದಕ್ಕೆ ಪಾಯಿಖಾನೆ, ಊರಮುಂದೆ, ಹಳ್ಳದ ಕಡೆ, ಹಿತ್ತಲಕಡೆ, ಬೇಲಿಕಡೆ, ಬಯಲಕಡೆ, ಅಗಸೀಕಡೆ, ಹೊಳಿಕಡೆ, ದಿಡ್ಡೀಕಡೆ, ಹೊರಕಡೆ, ಮಡ್ಡೀಕಡೆ, ಹೊಗ್ಯಾರ ಎಂದು, ತಂಬೀಗಿ ತಗೊಂಡು, ಚರಗೀತಗೊಂಡು, ಚೆಂಬುತಗೊಂಡು ಹೊಗ್ಯಾರ ಎಂದು ಹೇಳುವ ಪದಗಳು ಇಂದು ಇಲ್ಲದಂತಾಗಿದೆ. ವ್ಯಕ್ತಿ ವಿಷಯ ಪ್ರಸಂಗಕ್ಕೆ ಸಂಬಂಧಿಸಿದ ಪದಗಳು ಕಡಿಮೆ ಇತಿಹಾಸ ಆಗುತ್ತವೆ. ಇದರಿಂದ ಶಬ್ದ ಬೊಕ್ಕಸ ಬರಿದಾಗುತ್ತದೆ ಎನ್ನುತ್ತಾರೆ.

ಪಟ್ಟಣ ಶೆಟ್ಟರು ಪ್ರೀತಿಯ ಬಗ್ಗೆ ಬರೆಯುತ್ತಾ ಬಹುತೇಕ ಪ್ರೀತೀನ್ನೊದು ಪ್ರತಿಯೊಬ್ಬ ವ್ಯಕ್ತಿಯ ಪ್ರತಿಯೊಂದು ಹೃದಯದ ಅನಿವಾರ್ಯ ಮಾರ್ದವತೆ; ದೇಹದೊಳಗಿನ ಬಿಸಿ ಹವಾಮಾನಕ್ಕೆ, ವಾತಾವರಣಕ್ಕೆ ತಕ್ಕಂಗ ತಾನ್ ಅ ಹೆಚ್ಚು ಕಡಿಮೆ ಅಕ್ಕೊಂತ ಅದು ತನ್ನ ಬ್ಯಾಲನ್ಸ್ ಕಾಪಾಡಿಕೊಂಡಂಗ ಇದು ದೇಹದ ಮಾತು ಆತು, ಹಂಗನ್ ಅ ಮನಸ್ಸಿನ ಹೃದಯದ ತಾಪವನ್ನು ಮನುಷ್ಯ ಸಾಯುವ ತನಕ ಸಮತೋಲನದಾಗ ಇಟಗೋ ಬೇಕಾಕ್ಕತಿ, ದೇಹಕ್ಕ

ಔಷಧ ರಸ, ಮನಸ್ಸಿಗೆ ರಸ ಔಷಧ, ಮೃದುತ್ವ, ಅಮೃತತ್ವ ಕೋಮಲತ್ವ ಎಂದೂ ಒಣಗದಾಂಗ ಗಟ್ಟಿಯಾಗದಾಂಗ ಘನೀಕೃತ ಆಗದಾಂಗ ಕಾಪಾಡಿಕೊಳ್ಳುವ ನಿಟ್ಟಿನೊಳಗೆ ಅನಿಸಿಕೆ ಭಾವಾಭಾವಗಳ ಸೈನಿಕ ತತ್ವಗಳು ನಿರಂತರ ಕೆಲಸ ಮಾಡತಿರತವು. ಅದರಿಂದಾಗಿ ಭಾವಾಂದೋಲನ ಭಾವ ಸಬಲತೆ, ಮಿಶ್ರಭಾವಗಳ ಕುಲುಕಾಟ ಅಗತ್ಯ, ಅನಿವಾರ್ಯ, ಆಂದೋಲನ ಅಂದು ಮ್ಯಾಲೆ ಯುಕ್ತಿ ಹೂಡಿಕೆ, ತಂತ್ರಗಾರಿಕೆ, ಸುಳ್ಳ ಸತ್ಯಗಳ ದ್ವಂದ್ವ, ಮಿಶ್ರಣ ಪ್ರಯತ್ನ, ಏರಾಟ ಹಾರಾಟ, ಸೋಲು, ಹೊಂದಾಣಿಕೆಗಳೂ ಅನಿವಾರ್ಯ ಆಗತಾವು. ಇವೆಲ್ಲವನ್ನು ಏಕೀಕರಿಸಿ ಮನುಷ್ಯ ಪ್ರೀತಿ ಮಾಡತೀನಿ ಅಂತಾನ ಹಂಗಾಗಿ ಪ್ರೀತಿ ಅನ್ನೋದು ಪ್ರಾಣಧರ್ಮ, ಮನೋಧರ್ಮ, ಶ್ವಾಸ ಕರ್ಮಗಳ ತ್ರಿಶೂಲ, ವಿಕಾಸದ ಹಂತದೊಳಗೆ ಪ್ರಗತಿಯ ಮೆಟ್ಟಿಲುಗಳು ಮೇಲೆ ಏರುವ ನಿಚ್ಚಣಿಕೆ ಆಗ್ತವ, ಪ್ರೀತಿ ರೂಪಾಂತರದ ನಿಷಗೆ ಬಂದು ಹಿರಿಯರ ಬಗ್ಗೆ ಗೌರವ ಆಕ್ಕತಿ, ಚಿಕ್ಕವರ ಬಗ್ಗೆ ವಾತ್ಸಾಲ್ಯ, ಬಂಧುಗಳ ಬಗ್ಗೆ ಸೋದರಿಕೆ, ಸೇವಕರ ಬಗ್ಗೆ ಅನುಕಂಪ, ಕರ್ತವ್ಯದ ಬಗ್ಗೆ ಪ್ರಾಮಾಣಿಕ ನಿಷ್ಠೆ, ಗುರುವಿನಲ್ಲಿ ಶ್ರದ್ಧೆ, ಭಕ್ತಿ, ದೇವರಲ್ಲಿ ಉಪಾಸನೆ ಪ್ರಾರ್ಥನೆ ಪೂಜೆ ಆಗಿ ಸಮರ್ಪಣಾ ಭಾವದೊಳಗೆ ಮೌನಗಾನವಾಗುತ್ತಯ್ತಿ.[೨೭]

ಮಕ್ಕಳೊಂದಿಗೆ ಕಾಲಕಳೆಯುವುದು ಪಟ್ಟಣಶೆಟ್ಟರಿಗೆ ಇಷ್ಟ. ಇದರಿಂದ ಪರೋಕ್ಷವಾಗಿ ಮಾನಸಿಕ ಮತ್ತು ಬೌದ್ಧಿಕ ದೃಷ್ಟಿಯಿಂದ ಬೆಳೆಯಲಿಕ್ಕೆ ಸಾಧ್ಯ, ಮಕ್ಕಳಿಂದ ದೂರ ಇದ್ದರೆ ಪಡೆದುಕೊಳ್ಳುವುದು ಕಡಿಮೆಯಾಗಿ ಕಳೆದು ಕೊಳ್ಳುವುದು ಜಾಸ್ತಿಯಾಗುತ್ತದೆ ಎನ್ನುತ್ತಾರೆ.

''ಮಕ್ಕಳಲ್ಲಿರುವಷ್ಟು ವೇಗ, ಕಲ್ಪನಾ ಶಕ್ತಿ, ನಮ್ಮಲ್ಲಿ ಇರಲು ಸಾಧ್ಯವಿಲ್ಲ ಎನ್ನುತ್ತಾರೆ. ದೇಹ ಮನಸ್ಸಿನ ಅಕಲುಷಿತ ಶಾಂತಿ ಬೌದ್ಧಿಕವಿಕಾಸ ನಿನ್ನ ನಾಳೆಗಳನ್ನು ಬದಿಗಿಟ್ಟು ಇಂದನ್ನು ಪ್ರೀತಿಸುವ ವಾಸ್ತವ ಪ್ರಜ್ಞೆ, ಕಂಡದ್ದನ್ನು ಅನ್ನಿಸಿದ್ದನ್ನು ನೇರವಾಗಿ ಹೇಳುವ ದಾಟಿ, ಸ್ಥಾನ ಪದ ಅಧಿಕಾರ, ಧನ ಮದಗಳಯೋಚಿಸದೇ ಎಲ್ಲರನ್ನೂ, ಎಲ್ಲವನ್ನು ಬೆಳಗೊಳ್ಳುವ ಭಾವನೆ ಇತ್ಯಾದಿ ನಮಗೆ ಮಕ್ಕಳಿಂದ ತಳಿದಷ್ಟು, ಸಿಕ್ಕಷ್ಟು ಪುಸ್ತಕಗಳಿಂದ, ದೊಡ್ಡವರು ಅನಿಸಿಕೊಂಡವರಿಂದ ಸಿಗೋದಿಲ್ಲ''[೨೮] ಎಂದು ಹೇಳುತ್ತಾರೆ. ಒಬ್ಬ ಲೇಖಕನಿಗೆ ತನ್ನ ಭಾವನೆಗಳನ್ನು ಕಲ್ಪನೆಗಳನ್ನು ಸಾಹಿತ್ಯ ರೂಪದಲ್ಲಿ ಅಭಿವ್ಯಕ್ತ ಪಡಿಸಬೇಕಾದರೆ ಅವನು ತನಗೆ ಸರಿ ಹೊಂದುವ ಪ್ರಕಾರವನ್ನು ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ. ಅದರಲ್ಲಿ ಅವನು ಯಶಸ್ವಿಯಾಗಲು ಸಾಧ್ಯವಾಗುತ್ತದೆ. ಅದೇ ರೀತಿ ಬದುಕುವ ರೀತಿಗೂ ಒಂದು ಆಯ್ಕೆಯಿರಬೇಕು ಹಾಗಿದ್ದಾಗ ವ್ಯಕ್ತಿತ್ವ ಸುಂದರವಾಗಿ ರೂಪುಗೊಂಡು ಜೀವನ ಸುಖಮಯವಾಗಿರುತ್ತದೆ ಎಂದು ಹೇಳುತ್ತಾರೆ. ಲೇಖಕನಿಗೆ ಬರವಣಿಗೆ ಸಯ್ತ ಒಂದು ಆಯ್ಕೆಯನ್ನು ಆಪೇಕ್ಷಿಸುತ್ತದೆ ಆಗ ಮಾತ್ರ ಅವ್ನನ ಬರವಣಿಗೆ ಕಾವ್ಯ ಕಲಾ ಸಾಹಿತ್ಯ ಇತ್ಯಾದಿ ಆಕೃತಿ ಮೌಲ್ಯ ಅಂತಾರಲ್ಲ ಅದನ್ನ ಪಡೋಕತ್ತೈತಿ. ಹೀಗೆ ಮುಂದುವರಿದು ಪಟ್ಟಣಶೆಟ್ಟರು ಬದುಕನ್ನು ಕುರಿತು ''ನಮ್ಮ ಬದುಕು ಇದಕ್ಕೆ ಹೊರತಾಗಿಲ್ಲ; ಅದು ಎಲ್ಲಾ ಥರದ ಕಲಾತ್ಮಕತೆಗೆ ಮೂಲವಾದ ಉತ್ಸಾಹ ಆಗಿದ್ದರಿಂದ ಅದನ್ನು ಬದುಕುವ ರೀತಿಗೂ ಒಂದು ಬಗೆಯ ಆಯ್ಕೆ ಇರಬೇಕು. ಮಣ್ಣಿನ ಮೆತ್ತುವಿಕೆ, ಕಾಷ್ಠದ ಕೆತ್ತುವಿಕೆ, ಕಲ್ಲಿನ ಕಿತ್ತುವಿಕೆ, ಲೇಖನದ ತಿದ್ದುವಿಕೆಯಂಥ ಚತುರ್ಮುಖ ಮಿಶ್ರ ಪರಿಣಾಮವನ್ನು ಸಂಯೋಜಿಸಿ ರೂಪಿಸಿಕೊಂಡಾಗ ಮಾತ್ರ ವ್ಯಕ್ತಿತ್ವದ ಪರಿಪೂರ್ಣತೆಗೆ ಹತ್ತಿರ-ಹತ್ತಿರ ಹೋಗಿ ಜೀವಿಸುವುದು ಸಾಧ್ಯ ಆಕ್ಕತಿ ಆಗ ಅದು ಬದುಕು ಅಕ್ಕತಿ, ಜೀವನ ಅಕ್ಕತಿ.[೨೯]

ಶಿಕ್ಷಕ ದಿನಾಚರಣೆ ಬಗ್ಗೆ ಹೇಳುತ್ತಾ ಶಿಕ್ಷಕ ದೇಶದ ನಿರ್ಮಾಪಕ ಅವನೊಬ್ಬ ಯಶಸ್ವೀ ಕವಿ, ಸಫಲನಿರ್ಮಾಪಕ ಪರೋಕ್ಷವಾಗಿ ಸೃಷ್ಟಿ ಕರ್ತನೇ ಆಗಿರುತ್ತಾನೆ. ಅವನಿಂದ ಹಲವಾರು ಕಾಲ ಖಂಡಗಳು ಪ್ರಭಾವಿತಗೊಳ್ಳುತ್ತವೆ. ಅನೇಕ ಪೀಳಿಗೆಗಳು ತಮ್ಮ ಭವಿಷ್ಯವನ್ನು ರೂಪಿಸಿಕೊಳ್ಳುತ್ತವೆ. ಆದರೆ ಎಲ್ಲಾ ಶಿಕ್ಷಕರೂ ಹೀಗೆ ಇರಲಾರದೆ ಇರುವುದು ದುರಂತ. ಶಿಕ್ಷಕನಾದವನು ತನ್ನ ಸುತ್ತಲಿನ ಎಲ್ಲವನ್ನು ತಿಳಿದುಕೊಂಡು ಅದರ ಫಲವಾಗಿ ಬಂದ ರಸ ರುಚಿಗಳನ್ನು ನವೋಲ್ಲಾಸ ಬೀಜಗಳನ್ನು ಸ್ವಪ್ನ ಭವಿಷ್ಯಗಳನ್ನು ಮಕ್ಕಳಿಗೆ ನೀಡಬೇಕೆಂದು ಹೇಳುತ್ತಾರೆ. ಆದರೆ ಇಂದು ಸಮಾಜದಲ್ಲಿ ಶಿಕ್ಷಣ ಸ್ಥಾನಮಾನ ಕಡಿಮೆಯಾಗಿದೆಯೆಂದು ವಿಷಾಧಿಸುತ್ತಾರೆ. ಶಿಕ್ಷಕ ನಿಜದ ಅರ್ಥದೊಳಗೆ ಶಿಕ್ಷಕ ಆಗ ಬೇಕು ಶಿಕ್ಷಾ ಪಾಕದೊಳಗೆ ಬೇಯಬೇಕು. ಶಿಕ್ಷಣ ಎಂದರೆ ತಿಳುವಳಿಕೆ ಕೊಡುವ ತಿಳುವಳಿಕೆ ನೀಡುವ, ತಿಳುವಳಿಕೆ ಮೂಲವನ್ನು ಅರಿಯುವ ಪ್ರಜ್ಞಾಬೇಕು. ತನ್ನ ಬೇರೆ ಬಿಸಿಲಿಗೆ ಹರವಿಕೊಂಡು ಬಣಗಿ ಒಡನಾಟ, ಅಂಥಾವ ಶಿಷ್ಯ, ವಿದ್ಯಾರ್ಥಿ, ಶಿಕ್ಷಕ ಆಗಲಾರ ವಿದ್ಯೆಯನ್ನು ಅರ್ಜಿಸುವವನಿಗಿಂತ ವಿದ್ಯೆಯ ಅರ್ಥಿ ಸಿದಗಿ ಆಗ ತಾನ ಇವತ್ತು ಗುರುದೇವೋ ಭವ ಅನಕೊಂಡ ಗುರುಪೂಜೆ, ಗುರುವಂದನೆ ನೆಡಿಬೇಕಿತ್ತು. ಆದರೆ ಶಿಕ್ಷಕ ದಿನಾಚರಣೆ ನೆಡ್ಯಾಕತ್ತೇತಿ ಅದರಾಗ ಎಲ್ಲರೂ ಪಾಲ್ಗೊಂಡಾರ ಏನು ಕಾಲ ಬಂತು[೨೦] ಎನ್ನುತ್ತಾರೆ.

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಈ ಅಂಕಣ ಬರಹದಲ್ಲಿ ಅನೇಕ ಬಗೆಯ ಹೊಸ ಹೊಸ ಪದಗಳನ್ನು ಸೃಷ್ಟಿಸಿದ್ದಾರೆ. ಅನ್ಯ ಭಾಷೆಯ ಪದಗಳಿಗೆ ಕನ್ನಡದ ಪ್ರತ್ಯಯಗಳನ್ನು ಸೇರಿಸುತ್ತಾರೆ. ಉದಾಹರಣೆಗೆ ಫೋನಿಸಿ, ಟೈಪಿಸಿ, ರಂಗಿಸಿ, ಕಂಪೂಟರಿಸಿ.

ಅಲ್ಲದೆ ಕನ್ನಡದಲ್ಲಿರುವ ಪದಗಳನ್ನು ಸಹಜವಾಗಿ ಬರೆಯದೆ ಬೇರೆ ಅಕ್ಷರಗಳನ್ನು ಬೆಳೆಸಿ ಬರೆಯುತ್ತಾರೆ. ಉದಾ: ಅರ್ಥಶಾಸ್ತ್ರ, ಧರ್ಮ, ಅರ್ಥಾಥ್, ಯಜುರ್ವೇದ.

ಈ ಅಂಕಣವನ್ನು ಧಾರವಾಡದ ಆಡು ಭಾಷೆಯಲ್ಲಿ ರಚಿಸಿರುವುದರಿಂದ ಒಂದು ರೀತಿಯ ಹೊಸ ಪದಗಳ ಪರಿಚಯವಾಗುತ್ತಾದೆ.

ಉದಾಹರಣೆಗೆ: ಮನುಶ್ಯಾ, ಅದ್ನಗಾಲಿ, ಕಬರು, ಪ್ಯಾಲಿ

ಮತ್ತು ಹಾಗೂ ಮುಂತಾದ ವಾಕ್ಯ ಜೋಡಣೆ ಶಬ್ದ ಜೋಡಣೆ ಪದಗಳ ಬದಲಾಗಿ ಚಿಹ್ನೆ ಬಳಸುತ್ತಾರೆ. ಉದಾ: ನಾನು+ಹೇಮಾ, ಧರ್ಮ+ಅರ್ಥ, ನಪುಂಸಕ+ಪುರುಷ, ಮನಸು+ಹೃದಯ, ಮೇ+ಜೂನ್, ಹೀಗೆ ಈ ಅಂಕಣ ಬರಹ ಅನೇಕ ವಿಶೇಷಿತಗಳಿಂದ ಕೂಡಿದೆ.

**೭. ಒನ್ನೇಪುಟ**

ಸಿದ್ಧಲಿಂಗ ಪಟ್ಟಣಶೆಟ್ಟರು ತಮ್ಮ ಸಂಪಾದಕತ್ವದಲ್ಲಿ ಹೊರ ತರುತ್ತಿರುವ ದ್ವೈಮಾಸಿಕ ಸಾಹಿತ್ಯಿಕ ಪತ್ರಿಕೆ ಸಂಕಲನದಲ್ಲಿ ೨೦೦೬ ಜುಲೈ ತಿಂಗಳಲ್ಲಿ 'ಒನ್ನೇಪುಟ' ಎನ್ನುವ ಅಂಕಣ ಬರಹವನ್ನು ಆರಂಭಿಸಿದ್ದಾರೆ. ಪ್ರತಿಯೊಂದು ಅಂಕಣದಲ್ಲಿ ಒಬ್ಬ ಅನ್ಯಭಾಷೆಯ ಸಾಹಿತಿಯನ್ನು ಸಂಕ್ಷಿಪ್ತವಾಗಿ ಸಮಸ್ತವಾಗಿ ಪರಿಚಯಿಸುವ ಆಶಯವನ್ನಿಟ್ಟುಕೊಂಡು ಈ ಅಂಕಣವನ್ನು ಬರೆಯುತ್ತಲಿದ್ದಾರೆ.

ಅಕ್ಬರ ಬಾದಷಹನ ಆಸ್ಥಾನದಲ್ಲಿ ನವರತ್ನ ಸಾಹಿತಿಗಳಲ್ಲಿ ಒಬ್ಬನಾದ ಅಬ್ದುಲ್ ರಹೀಮ್‌ಖಾನ್ ಖಾನಾನ ಬಗ್ಗೆ ತಿಳಿಸುತ್ತಾ ಇವನು ಗಜನಿಯಿಂದ ಬಂದಿದ್ದ; ಅಕ್ಬರನ ಆಡಳಿತದಲ್ಲಿ ಅನೇಕ ದೊಡ್ಡ ಹುದ್ದೆಗಳನ್ನು ನಿಭಾಯಿಸಿದ್ದ ಒಳ್ಳೆಯ ಆಡಳಿತಗಾರ, ಪರಾಕ್ರಮಿ, ಕವಿ, ರಾಜನೀತಿಪಟುವಾಗಿದ್ದ, ಬಹುಭಾಷೆಗಳನ್ನು ಕಲಿತಿದ್ದ ಎಂದು ಹೇಳುತ್ತಾ, ಅವನ ಜೀವನದ ಮುಖ್ಯಾಂಶಗಳನ್ನು ಪರಿಣಾಮಕಾರಿಯಾಗಿ ನೀಡುತ್ತಾರೆ. ಹಿಂದೂಧರ್ಮ, ಸಂಸ್ಕೃತಿಗಳನ್ನು ಹಿಂದೂಗಳಂತೆ ತಿಳಿಕೊಂಡು ಹಂಗ ಅ ಪ್ರೀತಿಸಿದ, ಪ್ರೀತಿಸದ ಮೊಟ್ಟ ಮೊದಲ ಮುಸ್ಲಿಂ ಕವಿ ರಹೀಮ್. ಅವನ ಜೀವನದ ಮುಕ್ಕಾಲು ಭಾಗದೊಳಗೆ ಭೌತಿಕ ಮತ್ತು ಮಾನಸಿಕ ಸಮೃದ್ಧಿ, ಸಂತೋಷ ವಿಲಾಸ, ವೈಭವ ತುಂಬಿದ್ದವು. ಹೆಂಡರು ಮಕ್ಕಳು ಜಾಗೀರು ಆಸ್ತಿ ಕೀರ್ತಿ ದೊಡ್ಡವರ ಸಾಮಿಪ್ಯ ಎಲ್ಲವೂ ಇತ್ತು. ಆದರೆ ತನ್ನ ಕಣ್ಣಮುಂದೆ ಬೆಳೆದ ವಯಸ್ಸಾದ ಗಂಡು ಮಕ್ಕಳು ಸತ್ತಿದ್ದು, ಹೆಣ್ಣುಮಕ್ಕಳು ವಿಧವೆಯರಾದದ್ದು ಆಗ ರಾಜನಾಗಿದ್ದ ಜಹ್ಹಾಗೀರ್ ಅವಮಾನಿಸಿ ಜಾಗೀರು ಕಸಗೊಂಡಿದ್ದು ಇತ್ಯಾದಿಯಿಂದಾಗಿ ರಹೀಮ್‌ನ ಬಾಳ ಜರ್ಜರಿತವನಾಗಿ ಬಿಟ್ಟ ೧೬೨೭ ನೇ ಇಸ್ವಿಯೊಳಗೆ ೭೨ ನೇ ವಯಸ್ಸಿನಾಗ ದಿಲ್ಲಿಯೊಳಗೆ ಹುಮಾಯಾನನ ಸಮಾಧಿಯ ಪಕ್ಕದೊಳಗೆ ಅವನೂ ಮಕಬಾರಾಸ್ಥನಾದ.[೩೧]

ಇದೇ ರೀತಿಯಾಗಿ ಮಧ್ಯಕಾಲೀನ ಹಿಂದಿ ಸಾಹಿತ್ಯದ ಭಕ್ತಿ ಕವಿಯತ್ರಿಯಾದ ಮೀರಾಬಾಯಿಯ ಬಗ್ಗೆ ಬರೆಯುತ್ತಾರೆ. ೧೮ ನೇ ಶತಮಾನದಲ್ಲಿ ಬದುಕಿದ್ದ ಘನಾನಂದ ಕವಿಯ ಬಗ್ಗೆ ತಿಳಿಸುತ್ತಾ ಈ ತನು ಮಧುರ ಫ್ರೆಂಚ್ ಭಾಷೆಯಲ್ಲಿ ಕವಿತೆ ಬರೆಯುತ್ತಿದ್ದ ಶೃಂಗಾರದ ಪ್ರೇಮ ಭಕ್ತಿ ಪ್ರಾಮಾಣಿಕ, ರಸಿಕತೆಗಳ ಮೋಹಕ ಕಾವ್ಯಗಳನ್ನು ರಚಿಸಿದ. ಜೀವನದಲ್ಲಿ ಸುಜನಾ ಎಂಬ ವೇಶ್ಯಯ ಪ್ರೇಮಕ್ಕೆ ಸಿಲುಕಿದ ಅವಳಿಂದ ದೂರವಾಗಿ ವಿರಹ ಅನುಭವಿಸಿದ. ಈತನ 'ಸುಜನಾಹಿತ', 'ವಿಯೋಗ ಬೇಲಿ', 'ಯಮುನಾ ನಾಶ', 'ಪ್ರೀತಿ ಪಾವಸ', 'ರಸವಸಂತ', 'ನಾಮ ಮಾಧುರಿ', ದಾನಘಟಾ 'ಪ್ರಿಯಪ್ರಸಾದ' ಮುಂತಾದ ೪೦ ಕೃತಿಗಳನ್ನು ರಚಿಸಿದ್ದಾನೆ. ಎಂದು ತಿಳಿಸುತ್ತಾರೆ.

ಬಿಹಾರಿಲಾಲ್ ಚೌಟಿ 'ಬಿಹಾರಿ ಕಾವ್ಯ' ನಾಮದಿಂದ ಹಿಂದಿಯಲ್ಲಿ ಪ್ರಸಿದ್ಧಿ ಹೊಂದಿದ ಶೃಂಗಾರ ಕವಿ ೧೭ ನೇ ಶತಮಾನದಲ್ಲಿ ಈತ ರಸ, ಅಲಂಕಾರ ಛಂದೊವಿಹಾರ, ಧ್ವನಿ ವೈಶಿಷ್ಟ್ಯ ವಕ್ರೋಕ್ತಿವಿಲಾಸ, ರಸಿಕತೆ, ಮಾಧುರ್ಯಗಳಿಂದ ಕೂಡಿದ ಕಾವ್ಯಗಳನ್ನು ರಚಿಸಿದ. ಈತನು ಅಲ್ಪಕಾಲ ಮೊಗಲರ ದೊರೆ ಶಹಜಾನನಲ್ಲಿ ನಂತರ ಜಯಪುರದ ರಾಜನಾದ ಜಯಸಿಂಹನ ಆಸ್ಥಾನದಲ್ಲಿದ್ದ. ವಿರಹ, ಮಿಲನ, ವಿನೋದ, ಹಾಸ್ಯ ಮುಂತಾದ, ಕೃಷ್ಣನ ಬಾಲಿಲೀಲೆ, ರಾಸ, ಪ್ರಕೃತಿ ಸೌಂದರ್ಯ, ರಾಜನೀತಿ ಸಂಸ್ಕೃತಿಗಳ ಈ ಕವಿಯ, ದೋಹಾಗಳಲ್ಲಿ ತುಂಬಿಕೊಂಡಿವೆ. ಎಂದು ತಿಳಿಸುತ್ತಾರೆ.

ಅದೇ ರೀತಿ ಆಗ್ಯೆಯ್ ಕಾವ್ಯನಾಮದಿಂದ ಸಾಹಿತ್ಯ ರಚಿಸಿದ ಸಚ್ಚಿದಾನಂದ ಹೀರಾನಂದ ವಾತ್ಸಾಯನರ ಬಗ್ಗೆ ಬರೆಯುತ್ತಾ ಅವರು ಬಳ್ಳಿಗೆ ಪತ್ರಿಕಾಸಂಪಾದಕರಾಗಿದ್ದರು. ತಾರಾಸಪ್ತಕ ಹೆಸರಿನಿಂದ ಹೊಸ ಹಿಂದೀ ಕವಿತೆಗಳನ್ನು ಸಂಪಾದಿಸಿದ್ದಾರೆ. ೬ ಋತುಗಳ ಹೆಸರಿನಲ್ಲಿ ಪತ್ರಿಕೆಗಳನ್ನು ನೆಡೆಸಿದರು. ಎಂದು ಅವರ ಸಾಹಿತ್ಯಕ ಸಾಧನೆಗಳನ್ನು ತಿಳಿಸುತ್ತಾರೆ.

ಆಕ್ಸ್‌ಫರ್ಡ ನಲ್ಲಿರುವ ಖ್ಯಾತ ಅಮೇರಿಕನ್ ಕವಿ ಜೇ ಪ್ಯಾರಿನಿ ಅವರ ಸಾಹಿತ್ಯದ ಪರಿಚಯ ಮಾಡಿಕೊಡುತ್ತಾರೆ. 'ತಿರುಳುಗನ್ನಡದ ತಿರುಕ' ಎಂದು ಕಾವ್ಯ ನಾಮದಿಂದ ಸರ್ವಜ್ಞನ ವಚನಗಳನ್ನು ಸಂಗ್ರಹಿಸಿ ಕನ್ನಡಿಗರಿಗೆ ಕೊಟ್ಟ ಉತ್ತಂಗಿ ಚೆನ್ನಪ್ಪನವರ ಜೀವನದ ಬಗ್ಗೆ, ಅವರ ಸಾಹಿತ್ಯಿಕ ಸಾಧನೆಗಳ ಬಗ್ಗೆ ಅವರಲ್ಲಿರುವ ಸರಳ ಸಜ್ಜನಿಕೆಯ ಬಗ್ಗೆ ತಿಳುಸುತ್ತಾರೆ.

ಹೀಗೆ ಪ್ರತಿಯೊಂದು ಅಂಕಣದಲ್ಲಿ ದೇಶ ವಿದೇಶಗಳ ಒಬ್ಬ ಸಾಹಿತಿಗಳನ್ನು ಅವರ ಜೀವನ ಸಾಧನೆಗಳನ್ನು ಅವರ ಸಾಹಿತ್ಯದ ವಿಶೇಷತೆಗಳನ್ನು ತಿಳಿಸುತ್ತಲಿದ್ದಾರೆ.

**ಅಡಿಟಿಪ್ಪಣಿಗಳು**

೧. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಚಹಾದ ಜೋಡಿ ಚೂಡಾದ್ಹಾಂಗ-೧, ಅನನ್ಯ ಪ್ರಕಾಶನ ,ಧಾರವಾಡ, ಬೆನ್ನುಡಿ,

೨. ಅದೇ ಪುಟ ೪೩. ೭೪

೩. ಅದೇ ಪುಟ ೧೫೨.೧೫೩

೪. ಅದೇ ಪುಟ ೫೯

೫. ಅದೇ ಪುಟ.ಸಂ.೧೭೧

೬. ಅದೆ ಮುನ್ನುಡಿ ಪುಟ.ಸಂ. ೬

೭. ಅದೇ ಮುನ್ನುಡಿ, ಪುಟ.ಸಂ. ೬. ೭

೮. ಪ್ರೊ.ದೇ.ಜ.ಗೌ, ಪ್ರ.ಸಂ. ಸಹೃದಯ ವನಶ್ರೀ ಪ್ರಕಾಶನ, ಮೈಸೂರು, ಪುಟ.ಸಂ ೩೦೭

೯. ಅದೇ ಪುಟ.ಸಂ. ೩೦೩

೧೦. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಚಹಾದ ಜೋಡಿ ಚೂಡಾದ್ಹಾಂಗ-೨, ಅನನ್ಯ ಪ್ರಕಾಶನ, ಧಾರವಾಡ ಪುಟ.ಸಂ. ೧೦೧, ೧೨೩

೧೧. ಅದೇ ಪುಟ.ಸಂ. ೧೧೧

೧೨. ಅದೇ ಪುಟ.ಸಂ. ೧೩೭, ೧೩೮

೧೩. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಚಹಾದ ಜೋಡಿ ಚೂಡಾದ್ಹಾಂಗ-೩, ಅನನ್ಯ ಪ್ರಕಾಶನ, ಧಾರವಾಡ ಬೆನ್ನುಡಿ.

೧೪. ಅದೇ ಪುಟ.ಸಂ. ೧೩

೧೫. ಅದೇ ಪುಟ.ಸಂ. ೨೬

೧೬. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಚಹಾದ ಜೋಡಿ ಚೂಡಾದ್ಹಾಂಗ-೪, ಅನನ್ಯ ಪ್ರಕಾಶನ, ಧಾರವಾಡ, ಪುಟ.ಸಂ. ೨೦,೨೧

೧೭. ಅದೇ ಪುಟ. ಸಂ. ೨೪

೧೮. ಅದೇ ಪುಟ. ಸಂ. ೪೨

೧೯. ಅದೇ ಪುಟ. ಸಂ. ೬೬

೨೦. ಅದೇ ಪುಟ. ಸಂ. ೧೦೨, ೧೦೩

೨೧. ಅದೇ ಪುಟ. ಸಂ. ೧೦೩

೨೨. ಡಾ. ಸಿದ್ದಲಿಂಗ ಪ್ಟಣಶೆಟ್ಟಿ, ಚಹಾದ ಜೋಡಿ ಚೂಡಾಹ್ಪಾಂಗ-೫, ಅನನ್ಯ ಪ್ರಕಾಶನ, ಧಾರವಾಡ ಪುಟ. ಸಂ. ೪೩

೨೩. ಸಂ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ, ಸಂಕಲನ ಜುಲೈ ೨೦೦೨ ಕಡೀಪುಟ

೨೪. ಸಂಕಲನ ನವೆಂಬರ್ ೨೦೦೨

೨೫. ಸಂಕಲನ ಕಡೀಪುಟ ಜನವರಿ ೨೦೦೩

೨೬. ಸಂಕಲನ ಕಡೀಪುಟ, ನವೆಂಬರ್ ೨೦೦೩

೨೭. ಸಂಕಲನ ಕಡೀಪುಟ, ಮೇ ೨೦೦೪

೨೮. ಸಂಕಲನ ಕಡೀಪುಟ, ನವೆಂಬರ್ ೨೦೦೪

೨೯. ಸಂಕಲನ ಕಡೀಪುಟ, ಮೇ ಜೂನ್ ೨೦೦೫

೩೦. ಸಂಕಲನ ಕಡೀಪುಟ, ಸೆಪ್ಟಂಬರ್ ಅಕ್ಟೋಬರ್ ೨೦೦೫

೩೧. ಸಂಕಲನ ಒನ್ನೇಪುಟ, ಜುಲೈ ೨೦೦೬

* * *

## ಭಾಗ-೫, ಪತ್ರಿಕಾ ಸಾಹಿತ್ಯ

೩.೫.೧. ಸಂಕ್ರಮಣ

೩.೫.೨. ಸೃಜನವೇದಿ

೩.೫.೩. ಸಂಕಲನ

## ಭಾಗ-೫, ಪತ್ರಿಕಾ ಸಾಹಿತ್ಯ

ಭಾರತದಲ್ಲಿ ಪತ್ರಿಕೋಧ್ಯಮ ಆರಂಭವಾಗಿ ಇನ್ನು ಎರೆಡು ಶತಮಾನಗಳು ಆಗಿಲ್ಲ. ನಮ್ಮ ಪತ್ರಿಕೋದ್ಯಮ ಸ್ವಾತಂತ್ರ್ಯ ಪೂರ್ವದಲ್ಲಿ ಅಂದರೆ ೧೯ನೇ ಶತಮಾನದ ಆ ಭಾಗದಲ್ಲಿ ಆರಂಭವಾಗಿರುವುದು ಗುರುತಿಸಬಹುದಾಗಿದೆ. ಬಿ. ಎಸ್. ಮಹಾದೇವಪ್ಪ ಅವರು ಬರೆದಿರುವಂತೆ ಮೊದಲು ಭಾರತದಲ್ಲಿ ಪತ್ರಿಕೆಯನ್ನು ಆರಂಭಿಸಿದವರು ಗಂಗಾಧರ ಭಟ್ಟಾಚಾರ್ಜಿ ಅವರು ೧೭೮೦ರಲ್ಲಿ 'ಬೆಂಗಲ್ ಗೆಜೆಟ್' ಪ್ರಕಟಿಸಿದರು. ಅನಂತರ ಸ್ವಲ್ಪ ಕಾಲದಲ್ಲೇ ರಾಜಾರಾಮ್ ಮೋಹನರಾಯ್ ಅವರು ಪತ್ರಿಕೆಯನ್ನು ಹೊರತಂದರು. ಭಟ್ಟಾಚಾರ್ಜಿ ಅವರೂ ಸೇರಿದಂತೆ ಅನೇಕ ಮಹನೀಯರು ರಾಜಾರಾಮ್ ಮೋಹನ್‌ರಾಯ್ ಅವರ ತತ್ವಗಳಿಂದ ಪ್ರಭಾವಿತರಾಗಿದ್ದರು. ರಾಮ್‌ಮೋಹನ್‌ರಾಯ್ ಅವರು ತಮ್ಮ ಪರ್ಷಿಯನ್ ಮತ್ತು ಇಂಗ್ಲೀಷ್ ಪ್ರಕಟಣೆಗಳನ್ನು ಸಾಮಾಜಿಕ ಬದಲಾವಣೆಯ ತತ್ವಗಳ ಪ್ರಚಾರಕ್ಕಾಗಿ ಸತಿಸಹಗಮನ ಪದ್ಧತಿ ಮುಂತಾದ ಕೆಟ್ಟ ಆಚಾರಗಳನ್ನು ತ್ಯಜಿಸಲು ಮನವಿ ಮಾಡಿಕೊಳ್ಳುವ ಸಲುವಾಗಿ ಸರ್ಕಾರವನ್ನು ಟೀಕಿಸಲು ಹಾಗೂ ಬಂಗಾಳದ ಜನತೆಗೆ ಪಾಶ್ಚಿಮಾತ್ಯರ ಸಂಸ್ಕೃತಿ ಹಾಗೂ ರಾಜಕೀಯ ತತ್ವಗಳನ್ನು ಪರಿಚಯಿಸಲು ಬಳಸಿಕೊಂಡರು. ಹೀಗೆ ಆಧುನಿಕ ಭಾರತೀಯ ಪತ್ರಿಕೋದ್ಯಮ ಆರಂಭವಾಯಿತು.[೧] ಅನಂತರ ಗಾಂಧೀಜಿಯವರು ಯಂಗ್ ಇಂಡಿಯಾ ಪತ್ರಿಕೆಯನ್ನು ಆರಂಭಿಸಿದರು. ಒಟ್ಟಾರೆಯಾಗಿ ಸ್ವಾತಂತ್ರ್ಯ ಪೂರ್ವದಲ್ಲಿನ ಪತ್ರಿಕೆಗಳ ಮುಖ್ಯ ಉದ್ದೇಶ, ಜನಸಾಮಾನ್ಯರಲ್ಲಿ ಸ್ವಾತಂತ್ರ್ಯ ಹೋರಾಟದ ಕೆಚ್ಚನ್ನು ಹೆಚ್ಚಿಸುವುದು. ಸಮಾಜದಲ್ಲಿನ ಓರೆಕೋರೆಗಳನ್ನು ಖಂಡಿಸುವುದು, ವಾಸ್ತವ ಸ್ಥಿತಿಯನ್ನು ವರದಿಮಾಡುವುದು ಜೊತೆ ಜೊತೆಗೆ ಸಾಹಿತ್ಯ, ಕಲೆ, ಸಂಸ್ಕೃತಿಗೂ ಅವಕಾಶ ಮಾಡಿಕೊಟ್ಟವು.

ಹಾಗೆಯೇ ಕನ್ನಡ ಪತ್ರಿಕಾ ಇತಿಹಾಸ ನೋಡಿದಾಗ ಎಲ್.ಎಸ್.ಶೇಷಗಿರಿರಾವ್ ಹೇಳುವಂತೆ, ೧೮೪೩ರಲ್ಲಿ ಕನ್ನಡದ ಮೊಟ್ಟ ಮೊದಲ ಪತ್ರಿಕೆ, ಮಂಗಳೂರು ಸಮಾಚಾರ ಪ್ರಕಟವಾಗಿ ಅನಂತರ ಅದೇ ಶೈಲಿಯ ಇನ್ನೂ ಕೆಲವು ಪ್ರಕಟವಾಗಿ ಪತ್ರಿಕೆ ಪ್ರಕಟಿಸುವ ಆಕಾಂಕ್ಷೆ ಮುದ್ರಣದ ಅನುಕೂಲತೆ ದೊರಕಿದಾಗ, ಕನ್ನಡಿಗರಿದ್ದ ಪ್ರದೇಶದಲ್ಲೆಲ್ಲಾ ಹುಟ್ಟಿಕೊಂಡಿತು. ಸ್ವಾತಂತ್ರ್ಯದ ಕಿಡಿಯೆಬ್ಬಿಸುವ ಪ್ರಯತ್ನಗಳು ಮತ್ತು ಸಾಹಿತ್ಯ ಪ್ರಚಾರ ಪ್ರಯತ್ನಗಳು ಜೊತೆ ಜೊತೆಗೆ ಆಗ ತೊಡಗಿದವು.[೨]

೧. ಸಂಕ್ರಮಣ

ಭಾರತವು ಸ್ವಾತಂತ್ರ್ಯ ಪಡೆದ ನಂತರ ಪತ್ರಿಕೆಗಳ ರಚನೆಯ ವಿನ್ಯಾಸವೇ ಬದಲಾಯಿತು. ಪ್ರಾದೇಶಿಕ ಭಾಷೆಗಳಲ್ಲಿ ದೇಶದ ತುಂಬೆಲ್ಲಾ ಹಲವಾರು ಪತ್ರಿಕೆಗಳು ಹುಟ್ಟಿಕೊಂಡವು. ಪತ್ರಿಕೆಗಳು ಸಾಮಾಜಿಕ ಚಿಂತನೆಗಳು, ವೈಚಾರಿಕ ವಿಚಾರಗಳು, ಕ್ರೀಡೆ, ರಾಜಕೀಯ ವಿದ್ಯಾಮಾನಗಳನ್ನು ವರದಿ ಮತ್ತು ವಿಶ್ಲೇಷಣೆ ಮಾಡಿದಂತೆ ಆಯಾ ಪ್ರದೇಶಗಳ ಸಾಹಿತ್ಯಕ್ಕೂ ವೇದಿಕೆಯಾದವು ಮತ್ತು ಉತ್ತಮ ಚಾಲನೆಯನ್ನು ನೀಡಿದವು. ಸಾಹಿತ್ಯವನ್ನು ಜನರಿಗೆ ತಲುಪಿಸುವ ಕೆಲಸ ಬಹಳ ಹಿಂದಿನ ಕಾಲದಿಂದಲೂ ನೆಡೆದು ಬಂದಿದೆ. ಈ ದಿಶೆಯಲ್ಲಿ ಕರ್ನಾಟಕದಲ್ಲಿ ಕನ್ನಡಸಾಹಿತ್ಯ ಸಂಸ್ಕೃತಿ, ವೈಜ್ಞಾನಿಕ, ಸಾಮಾಜಿಕ ಬೆಳವಣಿಗೆಗೆಂದೇ ಹಲವಾರು ಪತ್ರಿಕೆಗಳು ಹುಟ್ಟಿಕೊಂಡಿವೆ. ತಾವು ಹುಟ್ಟಿಕೊಂಡ ಮೂಲ ಉದ್ದೇಶ ಸಾಧನೆಯೇ ಪತ್ರಿಕೆಗಳ ನಿಶ್ಚಿತ ಗುರಿಯಾಗಿತ್ತು. ಸದ್ಬೋದ ಚಂದ್ರಿಕೆ, ಕೃಷ್ಣಸೂಕ್ತಿ ಜಯಕರ್ನಾಟಕ ಜಯಂತಿ, ವಾಗ್ಭೂಷಣ, ಕತೆಗಾರ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಪ್ರಬುದ್ಧ ಕರ್ನಾಟಕ ಮುಂತಾದವು ಕನ್ನಡ ಸಾಹಿತ್ಯದ ಪ್ರಮುಖ ಪತ್ರಿಕೆಗಳಾಗಿ ಕಾರ್ಯ ನಿರ್ವಹಿಸಿದವು. ನಂತರದ ಅವಧಿಯಲ್ಲಿ ಪುಸ್ತಕ ಪ್ರಪಂಚ, ಜೀವನ, ಸಾಕ್ಷಿ, ಲಹರಿ, ಸಂಕ್ರಮಣ, ಶೂದ್ರ, ಇತ್ತೀಚಿನ ಮಯೂರ, ತುಷಾರ, ಕಸ್ತೂರಿಯವರೆಗೆ ಸುಮಾರ ೧೩೫ ಕ್ಕಿಂತಲೂ ಹೆಚ್ಚು ಪತ್ರಿಕೆಗಳು ನಾಡು ಕಟ್ಟುವ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡವು. ಇಂತಹ ಸಾಹಿತ್ಯ ಪತ್ರಿಕೆಗಳು ಅಂದಂದಿನ ಸಾಹಿತ್ಯ ಮತ್ತು ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಸೂಕ್ತ ಮಾಧ್ಯಮಗಳಾಗಿ ಕೆಲಸ ಮಾಡಿವೆ. ಡಾ. ಕೆ. ವಿಜಯಶ್ರೀ ಅವರು ಹೇಳುವಂತೆ, ನವ್ಯದ ಸಂದರ್ಭದಲ್ಲಿ ಸಾಹಿತ್ಯಿಕ ಪತ್ರಿಕೆಗಳು ಹೊಸ ರೂಪ ತಾಳಿ, ಹೊಸ ಸವಾಲುಗಳನ್ನು ಎದುರಿಸುತ್ತಾ ಮುನ್ನೆಡೆದವು. ೧೯೬೨ರಲ್ಲಿ ಪೂರ್ಣಚಂದ್ರತೇಜಸ್ವಿ ಮತ್ತು ಬಿ.ಎನ್.ಶ್ರೀರಾಮ್ ಅವರು ಆರಂಭಿಸಿದ ಸಣ್ಣ ಸಾಹಿತ್ಯ ಪತ್ರಿಕೆ, 'ಲಹರಿ' ಹೊಸತನದೊಂದಿಗೆ ಮೂಡಿಬಂತು. ಮೂರ್‍ನಾಲ್ಕು ವರ್ಷಗಳಲ್ಲಿ ನಿಂತು ಹೋದರೂ ಅದು ಬೀರಿದ ಪ್ರಭಾವ ಸ್ಮರಿಸುವಂತಹದು. ಇದು ಕಾವ್ಯ ಮತ್ತು ಕಾವ್ಯ ವಿಮರ್ಶೆಗೆ ಮಾತ್ರ ಸೀಮಿತವಾಗಿತ್ತು, ಈ ಪತ್ರಿಕೆ ಸಂಕ್ರಮಣ ಪತ್ರಿಕೆಗೆ ಸ್ಫೂರ್ತಿ ನೀಡಿತು. ಸಂಕ್ರಮಣ ಸಾಮಾಜಿಕ, ಸಾಹಿತ್ಯಿಕ, ಮತ್ತು ಸಾಂಸ್ಕೃತಿಕ ಚಳುವಳಿಗಳ ಜೊತೆ ಬೆಳೆಯಿತು.[೩] ೧೯೬೪ರಲ್ಲಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟರ 'ನೀನಾ' ಕವನ ಸಂಗ್ರಹ ಬಿಡುಗಡೆಯಾಯಿತು. ಅದೇ ತಿಂಗಳು ವಿನಾಯಕಕೃಷ್ಣ ಗೋಕಾಕರು ಬೆಂಗಳೂರಿನಲ್ಲಿ ಇಂಗ್ಲೀಷ್ ಅಧ್ಯಾಪಕರುಗಳಿಗಾಗಿ ಒಂದು ಶಿಬಿರ ನೆಡೆಸಿದರು. ಚಂದ್ರಶೇಖರ ಪಾಟೀಲ ಮತ್ತು ಸಿದ್ಧಲಿಂಗ ಪಟ್ಟಣಶೆಟ್ಟರು ತಮ್ಮ ಗುರುಗಳಾದ ಗೋಕಾಕರನ್ನು ಕಂಡು ಆಶೀರ್ವಾದ ಪಡೆದು ಮೈಸೂರಿಗೆ ಹೊರಟರು. ದಾರಿಯಲ್ಲಿ ಅನೇಕ ವಿಚಾರಗಳ ಬಗ್ಗೆ ಮಾತನಾಡುತ್ತಾ ನಾವು ಪತ್ರಿಕೆಯನ್ನು ಯಾಕೆ ಆರಂಭಿಸಬಾರದು ಎಂದು ಯೋಚಿಸಿದರು. ಮೈಸೂರಿನಲ್ಲಿ ಗೋಪಾಲಕೃಷ್ಣ ಅಡಿಗರನ್ನು ಲಹರಿ ಪತ್ರಿಕೆಯ ಸಂಪಾದಕ ಮಿತ್ರರನ್ನು ಕಂಡು ಅವರಿಂದ ಕೆಲವು ಅನುಭವಗಳನ್ನು ತಿಳಿದುಕೊಂಡು ಬಂದರು. ೧೯೬೪ರ ಜೂನ್ ತಿಂಗಳಿನಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟರು ಧಾರವಾಡದ ಮಾಳಮಡ್ಡಿಯ ಪಾರ್ವತಿ ನಿವಾಸದಲ್ಲಿದ್ದರು. ಅದು ಬಾಡಿಗೆ ಮನೆಯಾಗಿತ್ತು, ಅಂದು ಸೋಮಶೇಖರ ಇಮ್ರಾಪುರ, ಬಿ.ಟಿ. ದೇಸಾಯಿ, ಚಂದ್ರಶೇಖರ ಪಾಟೀಲ, ಗಿರಡ್ಡಿ ಗೋವಿಂದರಾಜು ಮುಂತಾದ ಸಾಹಿತ್ಯ ಮಿತ್ರರು ಸೇರಿದ್ದಾಗ ಚಂದ್ರಶೇಖರ ಪಾಟೀಲರು ಮತ್ತು ಸಿದ್ಧಲಿಂಗ ಪಟ್ಟಣಶೆಟ್ಟಿ ಇಬ್ಬರೂ ಕೂಡಿ ದ್ವೈಮಾಸಿಕ ಸಾಹಿತ್ಯ ಪತ್ರಿಕೆಯನ್ನು ಹೊರತರುವ

ವಿಷಯ ಪ್ರಸ್ತಾಪಕ್ಕೆ ಬಂತು. ಅಲ್ಲಿಯೇ ಇದ್ದ ಗಿರಡ್ಡಿ ಗೋವಿಂದರಾಜು ಅದರಲ್ಲಿ ಸೇರಿಕೊಂಡರು. ಈ ಮೂವರೂ ಸೇರಿಕೊಂಡು ಸಂಕ್ರಮಣ ಅನ್ನುವ ಹೆಸರಿನಲ್ಲಿ ಪತ್ರಿಕೆ ಹೊರತರಲು ನಿರ್ಧರಿಸಿದರು. ಡಾ.ಹೆಚ್.ಸಿ. ವಿಷ್ಣುಮೂರ್ತಿ ಹೇಳುವ ಹಾಗೆ ಈ ಮೂವರೂ ಹತ್ತತ್ತು ರೂಪಾಯಿ ಹಾಕುವುದು, ಚಂಪಾ ಮತ್ತು ಗಿರಡ್ಡಿಯವರು ನೌಕರಿಯಲ್ಲಿದ್ದುದರಿಂದ ಸಿದ್ಧಲಿಂಗ ಪಟ್ಟಣಶೆಟ್ಟರಿಗೆ ಹೆಚ್ಚಿನ ಜವಾಬ್ದಾರಿ ಹೋಲಿಸಿದರು. ಆಗಸ್ಟ್ ೧೬, ೧೯೬೪ರಂದು ಸಂಕ್ರಮಣದ ಪ್ರಥಮ ಸಂಚಿಕೆ ಹೊರಬರುತ್ತದೆ. ಈ ಸಂಚಿಕೆ ೬೪ ಪುಟದಿಂದ ಕೂಡಿತ್ತು. ರವೀಂದ್ರ ಘುಣೇಕರರ ಪ್ರತಿಭಾ ಮುದ್ರಣಾಲಯದಲ್ಲಿ ಮುದ್ರಿತವಾಗಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರಿಂದ ಬಿಡುಗಡೆಗೊಂಡಿತು. ಸಂಕ್ರಮಣದ ಮೊದಲೆರೆಡು ಸಂಚಿಕೆಗಳ ವ್ಯಾಪ್ತಿಯನ್ನು ನೋಡಿದರೆ ಸಂಕ್ರಮಣದ ಸಾಹಸದ ಪರಿಚಯವಾಗುತ್ತದೆ. ಬೇಂದ್ರೆ, ವಿನಾಯಕ, ಶಾಂತಿನಾಥ ದೇಸಾಯಿಯಂಥ ಹಿರಿಯ ಲೇಖಕರ ಜೊತೆ ಮಧ್ಯಂತರದ ಕಂಬಾರ, ಸಿ.ಪ, ಚಂಪಾ, ಹಕಾರಿ, ನಾಡಿಗ ಅದೇ ತಾನೆ ಬಿ.ಎ. ವ್ಯಾಸಾಂಗ ಮಾಡುತ್ತಿದ್ದ ಬಸವರಾಜ ಐವಳ್ಳಿ, ಶ್ರೀಕೃಷ್ಣ ಆಲನಹಳ್ಳಿಯವರ ಕವನಗಳು ಮಿಂಚುತ್ತವೆ. ಆರಂಭದಿಂದಲೂ ಸಂಕ್ರಮಣ ನೆಡೆದ ದಾರಿ ಹೆದ್ದಾರಿ, ಹೆಜ್ಜೆ ಆನೆಯ ಹೆಜ್ಜೆ, ಸಾಧನೆ ಹಿಮಾಲಯ ಸದೃಷ್ಯ.[೪] ಸಂಕ್ರಮಣ ಪತ್ರಿಕೆ ಈ ಮೂವರಿಂದ ಆರಂಭವಾಗಿ ಈಗ ಚಂಪಾ ಅವರಿಂದ ಹೊರ ಬರುತ್ತಲಿದೆ. ಈ ಮೂವರೂ ಸಂಪಾದಕರಿಂದ ೫೮ ಸಂಚಿಕೆಗಳು ನವ್ಯ ಸಾಹಿತ್ಯದ ಹೊಸ ವಿಚಾರ ಧಾರೆಗಳ ಪ್ರತಿಬಿಂಬವೆಂಬಂತೆ ಹೊರಬಂದವು. ಸಂಕ್ರಮಣದ ೫೪ನೇ ಸಂಚಿಕೆಯಲ್ಲಿ ಗಿರಡ್ಡಿ ಗೋವಿಂದರಾಜು ಅವರ ಟಿಪ್ಪಣಿಯೊಂದು ಪ್ರಕಟವಾಗುತ್ತದೆ. ನಂತರದ ೫೫ನೇ ಸಂಚಿಕೆಯಲ್ಲಿ ಅದಕ್ಕೆ ಪ್ರತಿಕ್ರಿಯೆಯಾಗಿ ಚಂಪಾರು ಬರೆಯುತ್ತಾರೆ. ಇದು ಮನಸ್ತಾಪವಲ್ಲ ಎಂಬ ಸೂಚನೆಯೂ ದೊರೆಯುತ್ತದೆ. ಆದರೆ ೫೬ನೇ ಸಂಕ್ರಮಣ ಪ್ರತಿಯ ಸಂಪಾದಕೀಯದಲ್ಲಿ ಗಿರಡ್ಡಿ ಗೋವಿಂದರಾಜು ಅವರ ಹೆಸರು ಕಾಣುವುದಿಲ್ಲ. ಅಲ್ಲಿಂದ ೧೯೭೪ರ ಮಧ್ಯಂತರದವರೆಗೆ ಚಂಪಾ ಮತ್ತು ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಂಪಾದಕತ್ವದಲ್ಲಿ ಸಂಕ್ರಮಣದ ಸಂಚಿಕೆಗಳು ಹೊರಬರುತ್ತವೆ. ಚಂದ್ರಶೇಖರ ಪಾಟೀಲರು ಮತ್ತು ಗಿರಡ್ಡಿಯವರು ವಿದ್ಯಾಭ್ಯಾಸಕ್ಕಾಗಿ ಹೈದರಾಬಾದಿಗೆ, ವಿದೇಶಗಳಿಗೆ ಹೋದಾಗಲೂ ಇವರ ಹೆಸರನ್ನು ಹಾಕಿಸಿ ಸಿದ್ಧಲಿಂಗ ಪಟ್ಟಣಶೆಟ್ಟರು ಪತ್ರಿಕೆಯನ್ನು ನಡೆಸಿದ್ದಾರೆ.

ಡಾ.ಹೆಚ್.ಸಿ.ವಿಷ್ಣುಮೂರ್ತಿಯವರು ಹೇಳುವ ಹಾಗೆ ೧೯೭೪ರ ಏಪ್ರಿಲ್ ೨೦ ಮತ್ತು ೨೧ರಂದು ಮೈಸೂರಿನಲ್ಲಿ ಕರ್ನಾಟಕ ಬರಹಗಾರರ ಒಕ್ಕೂಟದ ಸಂಸ್ಥಾಪನಾ ಸಮ್ಮೇಳನ ನೆಡೆಯುತ್ತದೆ. ಕುವೆಂಪು ಅವರು ಉದ್ಘಾಟನೆ ಭಾಷಣ ಮತ್ತು ಜಿ.ಎಸ್.ಶಿವರುದ್ರಪ್ಪನವರು ಅಧ್ಯಕ್ಷ ಭಾಷಣ ಮಾಡುತ್ತಾರೆ. ಸಂಕ್ರಮಣದ ೬೦ನೇ ಸಂಚಿಕೆ ಬರಹಗಾರರ ಒಕ್ಕೂಟದಲ್ಲಿ ನೆಡೆದ ಪೂರ್ತಿ ಭಾಷಣದಲ್ಲಿ ಭಾಗವಹಿಸಿದವರ ಹೆಸರುಗಳ ಪಟ್ಟಿ ಸಹಿತ ಪ್ರಕಟವಾಯಿತು. ಅನಂತರದಲ್ಲಿ ಶಿವಮೊಗ್ಗೆಯಲ್ಲಿ ನೆಡೆದ ಒಕ್ಕೂಟದ ಎರಡನೆಯ ಸಭೆಯಲ್ಲಿ ಸಂಕ್ರಮಣವನ್ನು ಒಕ್ಕೂಟದ ಮುಖವಾಣಿಯಾಗಿ ತರುವ ಪ್ರಸ್ತಾಪವಾಯಿತು. ಸಿ.ಪ. ಇದಕ್ಕೆ ಒಪ್ಪಲಿಲ್ಲ. ಸಂಕ್ರಮಣದ ವ್ಯಾಪ್ತಿಗೂ, ಒಕ್ಕೂಟದ ಉದ್ದೇಶಗಳಿಗೂ ಹೊಂದಿಕೆಯಾಗದಿರುವ ಅಂಶಗಳನ್ನು ಸಿ.ಪ. ಪ್ರಸ್ತಾಪಿಸಿ ತಮ್ಮ ಅಸಮ್ಮತಿ ವ್ಯಕ್ತಪಡಿಸಿದರಲ್ಲದೆ, ಒಂದುವೇಳೆ ಸಂಕ್ರಮಣ ಒಕ್ಕೂಟದ ಮುಖವಾಗಿಯಾಗುವುದಾದರೆ ತಾನು ಸಂಕ್ರಮಣದಿಂದ ಹಿಂದೆ ಸರಿಯುತ್ತೇನೆಂದು ಹೇಳಿದರು. ಒಕ್ಕೂಟದ ಉದ್ದೇಶಕ್ಕಾಗಿಯೇ ಅದರ ಆಶಯಗಳನ್ನು ಒಳಗೊಂಡ ಪ್ರತ್ಯೇಕ ಪತ್ರಿಕೆಯೊಂದನ್ನು

ಹೊರತರುವ ಸಲಹೆಯನ್ನು ಸಿ.ಪ. ನೀಡಿದರು. ಆದರೆ ಸಮಿತಿ, ಸಂಕ್ರಮಣವನ್ನು ಉಪಯೋಗಿಸಿಕೊಳ್ಳುವ ತೀರ್ಮಾನಕ್ಕೆ ಬಂದಿತ್ತು. ಅದೇ ರೀತಿ ೬೪ನೇ ಸಂಚಿಕೆಯಿಂದ ಚಂಪಾರ ನೇತೃತ್ವದಲ್ಲಿ ವಿಸ್ತೃತ ಸಂಪಾದಕ ಮಂಡಳಿಯೊಂದಿಗೆ ಕ್ರೌನ್ ಆಕಾರ ಕಳಚಿಕೊಂಡು ಡೆಮಿ ಆಕಾರದಲ್ಲಿ ಸಿ.ಪ.ರ. ಹೊರತು ಪಡಿಸಿ ಪ್ರಕಟಗೊಂಡಿತು.[೫]

ಸಂಕ್ರಮಣ ಪತ್ರಿಕೆಯು ನಾಡಿಗೆ ಖ್ಯಾತ ಲೇಖಕರನ್ನು ಪರಿಚಯಿಸಿದೆ. ಆರಂಭದಲ್ಲಿ ಅವರು ಬೆಳೆಯಲು ಸಹಾಯ ಮಾಡಿದೆ. ಸಂಕ್ರಮಣದಲ್ಲಿ ಕಥೆ, ಕವನ, ಪ್ರಕಟವಾಗುವುದೆಂದರೆ ಒಂದು ಹೆಮ್ಮೆಯ ವಿಷಯವಾಗಿತ್ತು. ಸಂಕ್ರಮಣ ಪರಿಣಾಕಾರಿ, ಪ್ರಭಾವಯುತ ಸಾಹಿತ್ಯ ಪತ್ರಿಕೆಯಾಗಿ ಕೆಲಸ ನಿರ್ವಹಿಸಿದೆ. ನಮ್ಮ ಸಾಹಿತ್ಯದಲ್ಲಿ ಹುಟ್ಟಿಕೊಂಡು, ಮುಂದುವರಿದು ಹೊಸ ಪ್ರಕಾರಗಳಾದ ಬಂಡಾಯ, ಪ್ರಗತಿಶೀಲ ದಲಿತ ಮುಂತಾದ ಸಾಹಿತ್ಯ ಚಳುವಳಿಗಳ ಆಶ್ರಯ ತಾಣವಾಯಿತು. ಈ ಪತ್ರಿಕೆಯಿಂದ ಲೋಹಿಯಾವಾದ ಜೇ.ಡಿ.ವಾದ ಅಂಬೇಡ್ಕರ್‌ವಾದಗಳು ಕನ್ನಡದಲ್ಲಿ ಬೆಳೆಯಲು ಸಾಧ್ಯವಾಯಿತು.

**೨. ಸೃಜನವೇದಿ**

ಸಂಕ್ರಮಣ ಪತ್ರಿಕೆಯಿಂದ ಹೊರ ಬಂದ ನಂತರ ಪಟ್ಟಣಶೆಟ್ಟರು ಸುಮಾರು ಒಂಬತ್ತು ವರ್ಷಗಳ ಕಾಲ ಪತ್ರಿಕೆ ನಡೆಸುವ ಸಾಹಸಕ್ಕೆ ಕೈಹಾಕಲಿಲ್ಲ. ೧೯೮೪ರಲ್ಲಿ ಮುಂಬೈಯಲ್ಲಿದ್ದ ಸಾಹಿತಿ ಮಿತ್ರರಾದ ಅರವಿಂದ ನಾಡ ಕರ್ಣಿಯ ಒತ್ತಾಸೆಯ ಮೇರೆಗೆ ಸಿದ್ಧಲಿಂಗ ಪಟ್ಟಣಶೆಟ್ಟರು ಇವರ ಜೊತೆ ಸೇರಿ ಸೃಜನವೇದಿ ಸಾಹಿತ್ಯ ಪತ್ರಿಕೆಯನ್ನು ಹೊರತಂದರು. ಇದು ಮುಂಬೈನಿಂದ ಪ್ರಕಟವಾಗುತ್ತಿದ್ದ ಕನ್ನಡ ಸಾಹಿತ್ಯ ಪತ್ರಿಕೆಯಾಗಿತ್ತು. ತ್ರೈಮಾಸಿಕ ಪತ್ರಿಕೆಯಾದ ಇದು ಕೇವಲ ಒಂದು ವರ್ಷಮಾತ್ರ ನೆಡೆಯಿತು. ನಾಲ್ಕು ಸಂಚಿಕೆಗಳು ಹೊರಬಂದ ನಂತರ ಮುಂದುವರಿಯಲಿಲ್ಲ ಮೊದಲ ಎರೆಡು ಸಂಚಿಕೆಗಳಿಗೆ ಮಾತ್ರ ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಸಂಪಾದಕ ಮಂಡಳಿಯಲ್ಲಿದ್ದರು. ಇವರು ಧಾರವಾಡದಲ್ಲಿದ್ದ ಕಾರಣ ಮುಂಬೈಯಲ್ಲಿ ಪತ್ರಿಕೆಗೆ ಅಂತಿಮ ಸ್ವರೂಪ ನೀಡಬೇಕಾದ ಕಾರಣ ಸಂಪರ್ಕದ ಕೊರತೆಯಿಂದಾಗಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳುವುದು ಸಾಧ್ಯವಿಲ್ಲದ ಕಾರಣ ಪಟ್ಟಣಶೆಟ್ಟರು ತಾವಾಗಿಯೇ ಪತ್ರಿಕೆಯಿಂದ ದೂರವುಳಿದರು.[೬] ನಂತರ ಎರೆಡು ಸಂಚಿಕೆಗಳು ಬಂದನಂತರ ಮುಂದೆ ಪತ್ರಿಕೆ ನಿಂತುಹೋಯಿತು.

**೩. ಸಂಕಲನ**

ಕನ್ನಡದ ಬಹಳಷ್ಟು ಸಾಹಿತ್ಯ ಪತ್ರಿಕೆಗಳು ಅಕಾಲ ಸಾವಿಗೆ ತುತ್ತಾಗಿವೆ. ಕನ್ನಡದಲ್ಲಿ ದುಡ್ಡುಕೊಟ್ಟು ಕೊಂಡು ಓದುವ ಓದುಗರ ಸಂಖ್ಯೆ ಬಹಳ ಕಡಿಮೆಯಿರುವುದು ಒಂದು ಕಡಿಮೆಯಾದರೆ, ದುರ್ಬಲ ಸಂಪಾದಕತ್ವ, ದೂರಾಲೋಚನೆಯ ಕೊರತೆ, ಗುಣಮಟ್ಟ ಕಾಯ್ದುಕೊಳ್ಳುವಿಕೆ, ಸಮಯಕ್ಕೆ ಸರಿಯಾಗಿ ಪ್ರಕಟಗೊಳ್ಳದೇ ಇರುವುದು ಮುಂತಾದ ಕಾರಣಗಳಿಂದ ಸಾಹಿತ್ಯ ಪತ್ರಿಕೆಗಳನ್ನು ಹೊರತರುವುದು ಕಷ್ಟದ ಕೆಲಸವಾಗಿದೆ. ಆದರೆ ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಜನವರಿ ೨೦೦೨ ರಿಂದ ತಮ್ಮ ಪತ್ನಿ ಶ್ರೀಮತಿ ಹೇಮಾ ಪಟ್ಟಣ ಶೆಟ್ಟಿಯವರ ಜೊತೆಗೂಡಿ ನಿರಂತರವಾಗಿ ಇಂದಿಗೂ ಸಂಕಲನ ಪತ್ರಿಕೆ ಹೊರತರುತ್ತಲಿದ್ದಾರೆ.

೨೦೦೨ನೇ ಜನವರಿ ೧೪ ರಂದು ಸಂಕಲನ ಪ್ರಕಾಶನ ಗದಗದಿಂದ ಪತ್ರಿಕೆ ಆರಂಭವಾಯಿತು. ಆಗ ಸಿದ್ಧಲಿಂಗ ಪಟ್ಟಣಶೆಟ್ಟರು ಮಾತ್ರ ಸಂಪಾದಕರಾಗಿದ್ದರು. ಕನ್ನಡ ಸಾಹಿತ್ಯದ ಎಲ್ಲಾ ಪ್ರಕಾರಗಳಿಗೂ ಪತ್ರಿಕೆ ಮೀಸಲಾಗಿದ್ದರೂ ವಿರಳ ಕೃತಿಗಳ ಪರಿಚಯ ಮತ್ತು ವಿಮರ್ಶೆಗೆ ಆರಂಭದಲ್ಲಿ ಹೆಚ್ಚಿನ ಒಲವು ತೋರಿಸಲಾಯಿತು. ಸಿದ್ಧಲಿಂಗ ಪಟ್ಟಣಶೆಟ್ಟರು ಈಗಾಗಲೇ ಸಂಕ್ರಮಣ ಮತ್ತು ಸೃಜನವೇದಿ ಪತ್ರಿಕೆಗಳನ್ನು ನಡೆಸಿ ಸಾಕಷ್ಟು ಅನುಭವಗಳಿದ್ದ ಕಾರಣ ಸಂಕಲನ ಬಹಳ ವ್ಯವಸ್ಥಿತವಾಗಿ ಮೂಡಿಬರಲು ಸಾಧ್ಯವಾಯಿತು. ಪಟ್ಟಣಶೆಟ್ಟರು ತಮ್ಮ ಸರಳ ಸ್ವಭಾವದಿಂದಾಗಿ ನಾಡಿನಾದ್ಯಾಂತ ಅನೇಕ ಮಿತ್ರರನ್ನು ಸಂಪಾದಿಸಿದ್ದಾರೆ. ಅವರನ್ನೆಲ್ಲಾ ಸಂಪರ್ಕಿಸಿ ಸಮಾಲೋಚಿಸಿ ಅವರು ತೋರಿಸಿದ ಪ್ರೀತಿ ಸಲಹೆಗಳನ್ನು ಸ್ವಾಗತಿಸಿ ಪತ್ರಿಕೆಯನ್ನು ಆರಂಭಿಸಿದರು.

'ಸಂಕಲನ' ದ್ವೈಮಾಸಿಕ ಪತ್ರಿಕೆಯಾಗಿದೆ. ೨೦೦೩ ಜನವರಿಯಿಂದ ಶ್ರೀಮತಿ ಹೇಮಾ ಪಟ್ಟಣಶೆಟ್ಟಿಯವರ ಸಂಪಾದಕತ್ವದಲ್ಲಿ ಗುರಿ ಸೇರಿಕೊಂಡಿದ್ದಾರೆ. ಈ ಪತ್ರಿಕೆಯು ಸಿ.ಜಿ.ಕೃಷ್ಣ ಸ್ವಾಮಿ, ನಿರಂಜನ ವಾನಳ್ಳಿ ಸುಮಿತೀಂದ್ರ ನಾಡಿಗ, ಎಸ್.ವಿ. ಪ್ರಭಾವತಿ, ರಾಘವೇಂದ್ರ ಪಾಟೀಲ, ಪ್ರಸನ್ನ, ಶಾಂತಾ ಇಂಮ್ರಾಪುರ, ಎ.ಮುರಿಗೆಪ್ಪ, ಬಸವರಾಜ ಸಬರದ, ಪ್ರೊ.ಸಿ.ನಾಗಣ್ಣ, ಲಕ್ಷ್ಮಿನಾರಾಯಣ ಭಟ್ಟ ಮುಂತಾದ ಹಿರಿಯ ಲೇಖಕರಿಂದ ಹಿಡಿದು ಹೊಸ ಸಾಹಿತಿಗಳ ಕಥೆ, ಕವನ, ವಿಮರ್ಶೆ, ಪ್ರಬಂಧ, ನಾಟಕ, ಪುಸ್ತಕ ವಿಮರ್ಶೆ, ಪ್ರಬಂಧ ಸಂಶೋಧನಾ ಲೇಖನಗಳೂ ಪ್ರಕಟಗೊಂಡಿವೆ.

ಸಂಕಲನ ಪತ್ರಿಕೆಯು ಪ್ರತಿ ಎರೆಡು ತಿಂಗಳಿಗೆ ಒಮ್ಮೆ ಸಮಯಕ್ಕೆ ಸರಿಯಾಗಿ ಬರುತ್ತಲಿದೆ. ಯಾವುದೇ ಕಾರಣಕ್ಕೂ ಇದುವರೆಗೆ ತಡವಾಗಿಲ್ಲ. ಪತ್ರಿಕೆಯಲ್ಲಿ ಯಾವುದೇ ಲೇಖನಗಳಿಗೆ ಕೃತಜ್ಞತೆ ಪತ್ರದ ಜೊತೆಗೆ ಸಂಭಾವನೆಯನ್ನು ಖಡ್ಡಾಯವಾಗಿ ಕಳಿಸಲಾಗುತ್ತದೆ. ವೈವಿಧ್ಯಮಯತೆಯಿಂದ ಕೂಡಿರುವ ಈ ಪತ್ರಿಕೆ ಸದ್ಯದ ಸಾಹಿತ್ಯಿಕ ವಾತಾವರಣಕ್ಕೆ ಅನಿವಾರ್ಯವಾಗಿ ಬೇಕಾಗಿದೆಯೆಂಬುದು ಅನೇಕ ಸಾಹಿತಿಗಳ ಅನಿಸಿಕೆಯಾಗಿದೆ.

ಸಿದ್ಧಲಿಂಗ ಪಟ್ಟಣಶೆಟ್ಟರು ಸಂಕಲನದಲ್ಲಿ ಬರೆಯುತ್ತಿರುವ ಒನ್ನೇಪುಟ ಮತ್ತು ಕಡೇಪುಟ ಅಂಕಣ ಬರಹಗಳು ಬರಹ ಜನಪ್ರಿಯತೆಯನ್ನು ಗಳಿಸಿವೆ. ಅದೇ ರೀತಿ 'ನನ್ನ ಅವ್ವ ಅಪ್ಪ' ಮಾಲಿಕೆಯ ಕೃತಜ್ಞತಾ ಲೇಖನಗಳು ಮತ್ತು ನನ್ನ ಶಾಲಾ ಗುರುಗಳು ಮಾಲಿಕೆಯ ಗೌರವ ಲೇಖನಗಳು ಪರಿಣಾಮಕಾರಿಯಾಗಿ ಮೂಡಿಬಂದಿವೆ.

ತಂದೆ ತಾಯಿಂದರು ಮಕ್ಕಳಿಗಾಗಿ ಮಾಡಿದ ತ್ಯಾಗ ಅವರ ಶ್ರಮ, ದುಡಿಮೆ, ಕೌಟುಂಬಿಕ ಸಂಬಂಧಗಳು, ಅವರ ಜೀವನ ಪದ್ಧತಿ, ಭಿನ್ನ ಭಿನ್ನ ಮನೋಧರ್ಮಗಳು ಮುಂತಾದ ವಿಷಯಗಳಿಂದ ಕೂಡಿದ ಹತ್ತು ಹಲವು ಮಾಹಿತಿಯನ್ನು ನೀಡುತ್ತಲಿವೆ. ಈ ಮಾಲಿಕೆಯ ಹಲವಾರು ಲೇಖನಗಳು ಕರುಣ ರಸ ಪ್ರಧಾನವಾಗಿವೆ.

ಅದೇ ರೀತಿ ನನ್ನ ಶಾಲಾ ಗುರುಗಳು ಮಾಲಿಕೆಯಲ್ಲಿ ಬಾಲ್ಯದಲ್ಲಿ ತಮ್ಮ ಪ್ರಭಾವ ಬೀರಿ ಪರಿಣಾಮಕಾರಿ ಬೋಧನೆಗಳಿಂದ ಸದ್ವರ್ತನೆಗಳಿಂದ, ತೋರಿದ ಪ್ರೀತಿ ವಾತ್ಸಲ್ಯಗಳಿಂದ, ನೀಡಿದ ಮಾರ್ಗದರ್ಶನದಿಂದ ಇಂದಿಗೂ ಸದಾ ನೆನಪಿನಲ್ಲಿರುವ ಗುರುಗಳನ್ನು ಕುರಿತಾದ ಲೇಖನಗಳು ಇಲ್ಲಿವೆ. ಈ ಮೇಲಿನ ಎರಡಕ್ಕೂ ಈ ಮೇಲಿನ ಎರಡೂ ಮಾಹಿತಿಗಳಲ್ಲಿ ಪ್ರಕಟವಾಗುವ ವಿವಿಧ ಲೇಖನಗಳು ಕನ್ನಡ ಸಾಹಿತ್ಯ ಚರಿತ್ರೆ, ಸಂಸ್ಕೃತಿ, ಭಾಷಿಕ ವೈವಿಧ್ಯ ಅನುಭವಗಳ ವ್ಯಾಪಕ ಚಿತ್ರ ಶಾಲೆಗಳನ್ನೇ ತೆರೆದಿಡುತ್ತದೆ. ಇವುಗಳು ಬಾಲ್ಯದಲ್ಲಿನ ಮರೆಯಲಾಗದ ದಿನಗಳ, ಅನುಭವಾಮೃತಗಳ ಸ್ಮರಣೆಗಳಾಗಿವೆ. ನಾಡಿನ ಬೇರೆ ಬೇರೆ ಭಾಗಗಳಿಂದ ಈ ಮಾಲಿಕೆಯಲ್ಲಿ ಪ್ರಕಟಗೊಳ್ಳುತ್ತಿರುವ

ಲೇಖನಗಳು ಅಲ್ಲಿನ ಪ್ರಾದೇಶಿಕ ಭಾಷೆಯ ಸೊಗಡನ್ನು ಭೌಗೋಳಿಕ, ಸಾಮಾಜಿಕ, ಕೌಟುಂಬಿಕ, ವೈವಿಧ್ಯಮಯ ಸನ್ನಿವೇಶಗಳು ಪರಿಣಾಮಕಾರಿಯಾಗಿ ಅಭಿವ್ಯಕ್ತಗಳಾಗಿವೆ.

ನಾಡಿನ ಖ್ಯಾತ ಸಂಶೋಧಕರಾದ ಡಾ. ಶೆಟ್ಟರ್ ಅವರ ಕವಿರಾಜ ಮಾರ್ಗ ಮಂಥನ ವಿಶೇಷ ಲೇಖನಮಾಲೆಯು ಅನೇಕ ಹೊಸ ಮಾಹಿತಿಗಳನ್ನು ವಿವಿಧ ಆಕರಗಳೊಂದಿಗೆ ನೀಡುವ ವಿಶಿಷ್ಟ ಬರಹವಾಗಿದೆ. ಈ ಲೇಖನಗಳು ಕನ್ನಡ ಭಾಷೆ ಮತ್ತು ಸಾಹಿತ್ಯದ ಬಗ್ಗೆ ಹೊಸ ದೃಷ್ಟಿ ಕೋನವನ್ನು ಬೀರುತ್ತವೆ. ಕನ್ನಡದ ಪ್ರಾಚೀನ ಸಂಬಂಧದ ಬೇರುಗಳು ಬಹುದೂರಕ್ಕೆ ಹರಡಿರುವ ಬಗ್ಗೆ ಮಾಹಿತಿಗಳು ವಿವರಿಸುವ ಈ ಲೇಖನಗಳು ತಮಿಳಿನ ತೊಲ್ಕಾಪ್ಪಿಯಂ ಪ್ರಿಯಮ್ ಮತ್ತು ಶಂಗಂ ಸಾಹಿತ್ಯದ ಸ್ವರೂಪವನ್ನು ಪರಿಚಯಿಸುತ್ತಾ ಇವು ಮತ್ತು ಕವಿರಾಜ ಮಾರ್ಗದಲ್ಲಿ ಕಂಡುಬರುವ ಸಮಾಂತರ ಸಂವೇದನೆಗಳನ್ನು ತಿಳಿಸುತ್ತವೆ. ಈ ಲೇಖನಗಳು ಸಂಸ್ಕೃತಿ ಪದಗಳ ಅಳವಡಿಕೆ ಮತ್ತು ಸಂಸ್ಕೃತೀಕರಣ ಪ್ರಕ್ರಿಯೆಗೆ ಒಳಗಾಗುವುದನ್ನು ತಿಳಿಸುತ್ತವೆ. ಇದಕ್ಕೆ ಕನ್ನಡದ ಖ್ಯಾತ ವಿದ್ವಾಂಸರಾದ ಬಸವಾರಾಧ್ಯರು ಪ್ರತಿಕ್ರಿಯೆ ಹೀಗಿದೆ. ಶ್ರೇಷ್ಠ ಇತಿಹಾಸಕಾರರಾದ ಡಾ.ಎಸ್. ಶೆಟ್ಟರ್ ಅವರು ತಮ್ಮ ಬಹುಕಾಲದ ವ್ಯಾಸಾಂಗ ಮತ್ತು ಸಂಶೋಧನೆಗಳ ಫಲವಾಗಿ ಅಭೂತಪೂರ್ವ ಲೇಖನಗಳನ್ನು ಬರೆದಿದ್ದಾರೆ. ಕವಿರಾಜ ಮಾರ್ಗದ ಆಂತರಿಕ ಆಧಾರಗಳನ್ನು ಆಧರಿಸಿ ಕಾವೇರಿಯಿಂದ ಮಾಗೋದಾವರಿ ವರಮಿಪಕದ ಕರ್ನಾಟಕ ಸೀಮಾರೇಖೆಗಳನ್ನು ಗುರುತಿಸಲು ಯತ್ನಿಸಿರುವುದು ಲೇಖಕರ ಅಸಾಧಾರಣೆ ಪ್ರತಿಭೆಗೆ ಅನುಪಮ ಸಂಶೋಧನಾ ಪ್ರವೃತ್ತಿಗೆ ಜ್ವಲಂತ ನಿದರ್ಶನವಾಗಿದೆ. ಕನ್ನಡದ ಆದಿ ಗ್ರಂಥವೂ, ಲಕ್ಷಣ ಗಂಥವೂ ಆಗಿರುವ ಕವಿರಾಜ ಮಾರ್ಗದ ಕತೃ ಕಾಲ, ದೇಶ, ವರ್ತಮಾನಗಳ ಬಗೆಗೆ ಈ ವರೆಗೆ ವಿದ್ವಾಂಸರಲ್ಲಿ ಸಾಕಷ್ಟುವಾದ ವಿವಾದಗಳು, ವಿಮರ್ಶೆ, ವಿಶ್ಲೇಷಣೆ, ಸಂಶೋಧನೆಗಳೂ ನೆಡೆದಿವೆ. ಈ ಕಾವ್ಯದ ಮೂರು ನಾಲ್ಕು ಪರಿಷ್ಕರಣಗಳೂ ಪ್ರಕಟವಾಗಿವೆ. ಈ ಎಲ್ಲಾ ಮುದ್ರಣಗಳಲ್ಲಿ ಡಾ. ಶೆಟ್ಟರ್ ಅವರು ಕೂಲಂಕುಶವಾಗಿ ಪ್ರಸ್ತಾಪಿಸಿರುವ ಸಂಗತಿಗಳು ಮತ್ತೆಲ್ಲಿಯೂ ಉಲ್ಲೇಖಗೊಂಡಂತೆ ಕಂಡುಬಂದಿಲ್ಲ. ಒಬ್ಬ ಶ್ರೇಷ್ಠ ಇತಿಹಾಸಕಾರನ ವಿಶಿಷ್ಟ ಪ್ರತಿಭೆ ಯಾವ ಯಾವ ನಿಟ್ಟಿನಲ್ಲಿ ನೂತನ ಸಂಶೋಧನೆಗಳನ್ನು ಮಾಡಬಲ್ಲವು ಎಂಬುದಕ್ಕೆ ಈ ಲೇಖನಗಳು ಸಾಕ್ಷಿಭೂತವಾಗಿ ನಿಲ್ಲಬಲ್ಲವು. ನಾಮನಿಷ್ಪತ್ತಿ, ಬಿರುದುಗಳು, ವಿಶೇಷಣಗಳು, ವಿಶಿಷ್ಟ ಪದಗಳ ಬಗೆಗೆ ಲೇಖಕರ ವಿವರಣೆ, ವಿಶ್ಲೇಷಣೆಗೆ, ವ್ಯಾಖ್ಯಾನ, ತೀರ್ಮಾನ ತರ್ಕ ಬದ್ಧವಾಗಿದೆ. ಕನ್ನಡದ ಎಲ್ಲಾ ಕಾವ್ಯಗಳ ಅನುಸಂಧಾನ ಈ ತೆರನಲ್ಲಾದರೆ ಸಾಹಿತ್ಯದ ಮೇಲೆ ನಿಜಕ್ಕೂ ಹೊಸ ಬೆಳಕುಂಟಾಗುವುದರಲ್ಲಿ ಎಳ್ಳಷ್ಟು ಸಂಶಯವಿಲ್ಲ. ಕವಿರಾಜಮಾರ್ಗ ಮಂಥನದಿಂದ ಈ ವರೆಗೆ ಉದ್ಭವಿಸಿ ಕೊಲಾಹಲಗಳನ್ನು ನಿಷ್ಕ್ರಿಯಗೊಳಿಸಿ ಅಮೃತವನ್ನು ಧಾರೆಯರೆದಂತಾಗಿದೆ.[೨] ಹಾಗೆಯೇ ಖ್ಯಾತ ಕವಿಗಳಾದ ಡಾ.ಜಿ.ಎಸ್.ಶಿವರುದ್ರಪ್ಪನವರು ಈ ಲೇಖನಗಳಿಗೆ ಹೇಗೆ ಪ್ರತಿಕ್ರಿಯಿಸಿದ್ದಾರೆ. ಕವಿರಾಜಮಾರ್ಗದ ದ್ರಾವಿಡ ಬೇರುಗಳನ್ನು ಕವಿರಾಜಮಾರ್ಗ ಈ ಎರಡೂ ಕೃತಿಗಳು ಸಂಸ್ಕೃತ ಸಾಹಿತ್ಯ ಹಾಗೂ ಭಾಷಾ ಪರಂಪರೆಗೆ ತೋರಿದ ಜನಾತ್ಮಕ ಪ್ರತಿಕ್ರಿಯೆಗಳ ತೌಲನಿಕ ವಿವೇಚನೆಯ ಮೂಲಕ ಬಹುಶಃ ಮೊದಲ ಬಾರಿಗೆ ಗುರುತಿಸುವ ಪ್ರಯತ್ನವನ್ನು ನೀವು ಮಾಡಿದ್ದೀರಿ. ಕಾವೇರಿಂದ ಮಾ ಗೋದಾವರಿಯವರೆಗೆ ಎಂಬ ಉಕ್ತಿ ಮೂಲಕ ಕರ್ನಾಟಕ ಭೌಗೋಳಿಕ ನಕಾಶೆಯನ್ನು ಪ್ರಸ್ತಾಪಿಸಿದ ಕವಿರಾಜಮಾರ್ಗಕ್ಕೂ ಬಹು ಹಿಂದೆ ತಮಿಳು ತೊಲ್ಕಾಪ್ಪಿಯಂ ಬಳಗೇರ್ ಸೂಚನೆಯಿದೆ ಎಂಬ ಸಂಗತಿಯನ್ನು ನೀವು ನಿಮ್ಮ ಲೇಖನದಲ್ಲಿ ತುಂಬಾ ಸವಿಸ್ತರವಾಗಿ

ಚರ್ಚಿಸಿ, ಪ್ರಾಕೃತ ಮತ್ತು ಸಂಸ್ಕೃತ ಭಾಷಿಕರಾರೂ ಮಾಡದಿದ್ದುದನ್ನು ತಮಿಳರು ಮಾಡಿ ತಮ್ಮ ಭಾಷೆಯೊಂದಿಗೆ ಹೊಸ ವಿಚಾರ ಮಾಡಿದ್ದುದನ್ನು ತಮಿಳರು ಮಾಡಿ ತಮ್ಮ ಭಾಷೆಯೊಂದಿಗೆ ಗುರುತಿಸಿಕೊಂಡಿದ್ದು ನಮ್ಮ ಭಾಷೆ ಇತಿಹಾಸದಲ್ಲಿ ಒಂದು ಅಭೂತಪೂರ್ವ ಘಟನೆ ಎಂಬ ಹೊಸ ವಿಚಾರವನ್ನು ನೀವು ಅನಾವರಣಗೊಳಿಸಿದ್ದೀರಿ.[೮]

ಈ ಲೇಖನ ಮಾಲೆಯ ಕನ್ನಡ ಭಾಷೆ ಜನಾಂಗದ ಬಗ್ಗೆ ಹೊಸ ಮಾಹಿತಿಗಳನ್ನು ನೀಡುವುದರ ಜೊತೆಗೆ ಈ ಪತ್ರಿಕೆಗೆ ಒಂದು ಘನತೆಯನ್ನು ತಂದು ಕೊಟ್ಟಿತು.

ಸಂಕಲನದ ಪ್ರತಿ ಸಂಚಿಕೆಯಲ್ಲಿ ಪುಸ್ತಕ ಪರಿಶೀಲನೆ ತಲೆ ಬರಹದಡಿಯಲ್ಲಿ ಪ್ರತಿ ಸಂಚಿಕೆಯಲ್ಲಿ ಐದರಿಂದ ಹಿಡಿದು ಹತ್ತು ವಿಮರ್ಶೆಗಳು ಪ್ರಕಟಣೆಗೊಂಡಿವೆ. ನಾಡಿನ ಸಾಹಿತಿಗಳಾದ ಪ್ರಸನ್ನ, ಚಂದ್ರಶೇಖರ ವಸ್ತ್ರದ ಬಸವರಾಜ ವಕ್ಕುಂದ, ಎಂ.ಡಿ. ಗೋಗೇರಿ, ಪ್ರೊ.ಅಶೋಕ ಶೆಟ್ಟರ್, ಶಿವಶಂಕರ್, ಹಿರೇಮಠ, ದೇಶಪಾಂಡೆ, ಸುಬ್ಬರಾಯರು, ಡಾ.ಅಂಕದ ಮುರಿಗೆಪ್ಪ, ಡಾ.ನಾ.ದಾಮೋದರ ಶೆಟ್ಟಿ, ಶ್ರೀಪತಿ ಮಂಜನ ಬೈಲು, ಶಶಿಧರ ತೋಡಕರ ಸುಮಿತ್ರ, ಹಲವಾಯೀ, ಡಾ.ಮೋತಿಲಾಲ ಹಲವಾಯೀ ಮುಂತಾದವರ ಪ್ರಸ್ತುತ ವಿಮರ್ಶೆಗಳು ಪ್ರಕಟವಾಗುತ್ತಲಿವೆ.

ಯಾವುದೇ ಒಂದು ಪಂಥ ಅಥವಾ ಮಾರ್ಗಕ್ಕೆ ಕಟ್ಟು ಬೀಳದೇ ಹಿರಿಯ ಸಾಹಿತಿಗಳಿಂದ ಹಿಡಿದು ಹೊಸ ಸಾಹಿತಿಗಳ ಬರಹಗಳು ಇಲ್ಲಿ ಪ್ರಕಟಗೊಂಡಿವೆ. ಅನೇಕ ಹೊಸ ಸಾಹಿತಿಗಳನ್ನು ನಾಡಿಗೆ ಪರಿಚಯಿಸುವ ಕೆಲಸ ನೆಡೆಯುತ್ತಲಿದೆ. ಸಾಹಿತ್ಯ ಪತ್ರಿಕೆಗಳು ಕಡಿಮೆಯಾಗುತ್ತಲಿರುವ ಕಾಲದಲ್ಲಿ ನಿರಂತರವಾಗಿ ಈ ಪತ್ರಿಕೆಯನ್ನು ನೆಡೆಸಿಕೊಂಡು ಬರುತ್ತಿರುವುದು ಒಂದು ಸಾಹಸವೇ ಆಗಿದೆ.

**ಅಡಿಟಿಪ್ಪಣಿ**

೧. ಬಿ.ಎಸ್. ಮಹಾದೇವಪ್ಪ ಸ್ಪರ್ಧಾಪ್ರಪಂಚ, ನಮ್ಮ ವೃತ್ತಾಪತ್ರಿಕೆಗಳು ಏಪ್ರೀಲ್, ಮೇ ೨೦೦೦ ಪುಟ.೧೭

೨. ಡಾ.ಎಲ್.ಎಸ್. ಶೇಷಗಿರಿರಾವ್, ಸ್ವಾತಂತ್ರ್ಯೋತ್ತರ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿ, ಉದಯಭಾನು ಕಲಾಸಂಘ ಪ್ರಕಾಶನ, ೧೯೯೩ ಪುಟ.ಸಂ ೮೨೩

೩. ಡಾ.ಕೆ. ವಿಜಯಶ್ರೀ, ಕನ್ನಡ ಪತ್ರಿಕೆಗಳು ಮತ್ತು ಸಾಹಿತ್ಯ, ಕ.ವಿ.ವಿ. ಹಂಪಿ. ಪುಟ.ಸಂ.೧೦

೪. ಪ್ರ.ಸಂ.ದೇ.ಜ.ಗೌ. ಸಹೃದಯ ವನಶ್ರೀ ಪ್ರಕಾಶನ ಮೈಸೂರು ೨೦೦೪ ಪು.ಸಂ ೩೦೩

೫. ಅದೇ ಪು.ಸಂ. ೩೮೩.೩೮೪

೬. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಂದರ್ಶನ ೨೦.೦೩.೨೦೦೬

೭. ಸಂ. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ಡಾ. ಹೇಮಾ ಪಟ್ಟಣಶೆಟ್ಟಿ, ಸಂಕಲನ, ಜುಲೈ-ಆಗಸ್ಟ್ ೨೦೦೫ ಪು.ಸಂ.೭೯

೮. ಅದೇ ಪು.ಸಂ. ೮೦

* * *

# ಅಧ್ಯಾಯ-೪

## ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ ಮತ್ತು ಆಧುನಿಕ ಕನ್ನಡ ಸಾಹಿತ್ಯ

ಕಾಲದ ದೃಷ್ಟಿಯಿಂದ ವಿಸ್ತಾರ, ಪ್ರಕಾರದ ದೃಷ್ಟಿಯಿಂದ ವೈವಿಧ್ಯ, ವಸ್ತುವಿನ ದೃಷ್ಟಿಯಿಂದ ವಿನೂತನತೆ, ಭಾಷೆಯ ದೃಷ್ಟಿಯಿಂದ ಪ್ರಯೋಗಶೀಲತೆಗೆ ಒಳಗಾದ ಕನ್ನಡ ಸಾಹಿತ್ಯ ನಿತ್ಯನಿರಂತರವಾಗಿ ಸೃಜನಶೀಲತೆಯನ್ನು ಮೈಗೂಡಿಸಿಕೊಂಡು ಬೆಳೆಯುತ್ತಾ ಬಂದಿದೆ. ಬದುಕಿನ ಬರಹದಾದ ಸಾಹಿತ್ಯವನ್ನು ಕುರಿತು ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಹೇಳುವ ಹಾಗೆ ''ಸಾಹಿತ್ಯ ರಚನೆ, ವಾಸ್ತವತೆಯ ಸಾನ್ನಿಧ್ಯ ಮತ್ತು ಓದಿನ ವಿಸ್ತಾರ ಮಿತಿಗಿಂತ ಪ್ರೇರಣಾತ್ಮಕವೂ, ಮೌಲ್ಯಕಾರಕವೂ ಆದುದು. ಕಾಲಕಾಲಕ್ಕೆ ಪರಿಸ್ಥಿತಿ ಸಂದರ್ಭಗಳು ಭಿನ್ನವಾದಂತೆ ಸೃಷ್ಟಿಕ್ರಿಯೆಯಲ್ಲಿಯೂ ಭಿನ್ನತೆ ತೆರೆದುಕೊಳ್ಳುತ್ತದೆ. ಅವುಗಳಲ್ಲಿ ಕೆಲವು ಕೃತಿಗಳು ಸರ್ವಕಾಲಿಕವಾದವುಗಳೆಂದು ಗುರುತಿಸಲ್ಪಟ್ಟು ಉಳಿದುಕೊಂಡು ಬರುತ್ತವೆ. ಇನ್ನು ಕೆಲವು ಕೃತಿಗಳು ಪ್ರಸ್ತುತ ಕಾಲಕ್ಕಷ್ಟೇ ಸೀಮಿತಗೊಂಡು ಸಂದರ್ಭದ ಕಳಚುವಿಕೆಯಲ್ಲಿ ಅರ್ಥಹೀನವೆನಿಸಿ ಉದುರಿಬಿಡುತ್ತವೆ. ಋತು ಜೀವನ ಬದಲಾಗದಂತೆ ಸಾಹಿತ್ಯ ರಚನೆಯಲ್ಲಿ ಬದಲಾವಣೆ ಅತ್ಯನಿವಾರ್ಯ ಏಕೆಂದರೆ ಬದುಕು ಚನಲಶೀಲ ಬದಲಾವಣೆ ಅದರ ಜೀವಂತಿಕೆಯ ಲಕ್ಷಣ. ಹಾಗಾಗಿ ಬದುಕಿನ ಅಭಿವ್ಯಕ್ತಿಯಾದ ಸಾಹಿತ್ಯದಲ್ಲಿಯೂ ಈ ಬದಲಾವಣೆ ಕಾಲಕಾಲಕ್ಕೆ ನಡೆಯುತ್ತ ಬಂದಿದೆ. ಜಗತ್ತಿನ ಯಾವುದೇ ಭಾಷೆಯ ಸಾಹಿತ್ಯಕ್ಕೂ ಈ ಮಾತು ಅನ್ವಯಿಸುತ್ತದೆ.'' ಹಾಸನ ಜಿಲ್ಲೆಯ ಬೇಲೂರು ತಾಲೂಕಿನ ಹಲ್ಮಿಡಿ ಎಂಬ ಗ್ರಾಮದಲ್ಲಿ ದೊರೆತ ಕನ್ನಡದ ಉಪಲಬ್ದ ಮೊದಲ ಶಾಸನದ ಕಾಲಮಾನದಿಂದ ಹಿಡಿದು ಕನ್ನಡ ಸಾಹಿತ್ಯಕ್ಕೆ ಹದಿನೈದು ಶತಮಾನಗಳ ಇತಿಹಾಸವಿದೆ. ಈ ದೀರ್ಘವಾದ ಕಾಲಾವಧಿಯಲ್ಲಿ ಕನ್ನಡ ಸಾಹಿತ್ಯ ಕಾಲಮಾನದ ಅಗತ್ಯಕ್ಕೆ ಅನುಗುಣವಾಗಿ ಬದಲಾವಣೆಯಾಗುತ್ತಾ ಬಂದಿದೆ. ಭಾಷೆ ವಸ್ತು, ಶೈಲಿ, ಸತ್ವ. ದೃಷ್ಟಿ, ಧೋರಣೆಗಳ, ಒಳಗೊಂಡ ಸಾಹಿತ್ಯ ಸಂಪ್ರದಾಯಗಳು ಹೇರಳವಾಗಿ ಬಂದಿವೆ.

ಆರಂಭದ ಶಾಸನ ಸಾಹಿತ್ಯವನ್ನು ಒಟ್ಟಾರೆ, ಹತ್ತನೇ ಶತಮಾನದ ಸಾಹಿತ್ಯ ಸಂಪೂರ್ಣವಾಗಿ ರಾಜಾಶ್ರಯದಲ್ಲಿ ಬೆಳೆಯಿತು. ಸಂಸ್ಕೃತ ಸಾಹಿತ್ಯದ ದಟ್ಟಪ್ರಭಾವವಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಜೈನ ಧರ್ಮದ ಕೃತಿಗಳು

ಹೆಚ್ಚು ರಚನೆಯಾದವು. ಅನ್ನದ ಋಣಕ್ಕಾಗಿ ಆಶ್ರಯದಾತ ರಾಜನನ್ನು ಕಥಾನಾಯಕನಿಗೆ ಸಮೀಕರಿಸಿ ಹೊಗಳಿ ಬರೆಯುವ ಪರಿಪಾಠವಿತ್ತು. ಆ ಕಾಲ ರಾಜಕೀಯ ಸ್ಥಿರತೆಗಾಗಿ ಯುದ್ಧಗಳಿಂದ ಕೂಡಿದ ಕಾರಣ ಕೃತಿಗಳಲ್ಲಿ ವೀರರಸ ಹೆಪ್ಪುಗಟ್ಟಿದೆ. ಧರ್ಮದ ಋಣಕ್ಕಾಗಿ ಆಗಮಿಕ ಕಾವ್ಯಗಳು ಸೃಷ್ಟಿಯಾದವು. ಗದ್ಯಪದ್ಯ ಮಿಶ್ರಿತ ಚಂಪೂ ಶೈಲಿ ಅಂದಿನ ಪ್ರಸಿದ್ಧ ಪ್ರಕಾರವಾಗಿತ್ತು, ಒಟ್ಟಾರೆಯಾಗಿ ಆ ಸಾಹಿತ್ಯ ಪರಂಪರೆ ಮತ್ತು ದೇಶಿ ಸಂಸ್ಕೃತಿಯ ಪ್ರಭಾವ ಪ್ರೇರಣೆಯಲ್ಲಿ ಬೆಳೆಯಿತು. ನಂತರ ಹನ್ನೆರಡನೇ ಶತಮಾನದಲ್ಲಿ ಬಂದ ವಚನಸಾಹಿತ್ಯ ಸಾಮಾಜಿಕ, ಧಾರ್ಮಿಕ ಚಳುವಳಿಯ ಮೂಲಕ ಜಡ್ಡುಗಟ್ಟಿದ ವ್ಯವಸ್ಥೆಯನ್ನು ಸುಧಾರಿಸಲು ಯತ್ನಿಸಿತು. ಧರ್ಮದ ತಳಹದಿಯ ಮೇಲೆ ಸಮಾಜದ ನಿರ್ಮಾಣ ನಡೆಯಿತು. ಕಾಯಕ ತತ್ವ, ಏಕದೇವೋಪಾಸನೆ, ಲಿಂಗ, ವರ್ಗ, ಸಮಾನತೆಗೆ ಪಣತೊಟ್ಟಿತು. ಜನ ಭಾಷಾ ಮಾಧ್ಯಮವೇ ಸರ್ವೋದಯದ ಕೀಲಿ ಕೈ ಎಂಬ ಭಾವ ಅಲ್ಲಿತ್ತು, ಸ್ಥಾವರಗೊಂಡ ಸಮಾಜವನ್ನು ಚಲನಶೀಲಗೊಳಿಸಲು ಪ್ರಯತ್ನಿಸಿದ ಶರಣರು ತಮ್ಮ ಆಂದೋಲನದ ಮೂಲಕ ಹಿಂದಿನ ಸಾಹಿತ್ಯ ಮತ್ತು ಪರಂಪರೆಯ ವ್ಯವಸ್ಥೆಯನ್ನೆಲ್ಲ ಮುರಿದು ಸಾಹಿತ್ಯ ಕ್ಷೇತ್ರದಲ್ಲಿ ನವೀನ ಅವಿಷ್ಕಾರ ಉಂಟುಮಾಡಿದರು. ಸರಳವಾದ ಭಾಷೆಯಲ್ಲಿ ಹೇಳಿದರು ಸರಳವಾದ ಜೀವನ ನಡೆಸಿದರು. ಆದರೆ ಉದಾತ್ತ ಮೌಲ್ಯಗಳ ಪ್ರತಿಪಾದಕರಾಗಿದ್ದರು. ಅವರ ನಡೆನುಡಿಗಳು ಒಂದಾಗಿದ್ದವು. ಹೀಗಾಗಿ ವಚನ ಸಾಹಿತ್ಯ ಜಗತ್ತಿನ ಅದ್ವಿತೀಯ ಸಾಹಿತ್ಯಗಳಲ್ಲಿ ಒಂದಾಗಲು ಸಾಧ್ಯವಾಯಿತು.

ಪ್ರತಿಭಾವಂತ ಸಾಹಿತಿಗಳು ಸಾಹಿತ್ಯ ರೂಪವನ್ನು ಹುಟ್ಟು ಹಾಕುತ್ತಾರೆ; ಎನ್ನುವಂತೆ ಮುಂದೆ ಬಂದ ಹರಿಹರ ರಾಘವಾಂಕ ಕವಿಗಳು ಕನ್ನಡ ಸಾಹಿತ್ಯಕ್ಕೆ ಮಗದೊಂದು ಆಯಾಮವನ್ನು ತಂದು ಕೊಟ್ಟರು. ವಸ್ತುವಿನ ದೃಷ್ಟಿಯಿಂದ ಐತಿಹಾಸಿಕ ವ್ಯಕ್ತಿಗಳನ್ನು ಅವರ ಉದಾತ್ತ ಜೀವನವನ್ನು ರಗಳೆ ಷಟ್ಪದಿಗಳಲ್ಲಿ ಚಿತ್ರಿಸಿದರು. ನಂತರದ ಕೀರ್ತನಕಾರರು ಸಮಾಜದ ಆರೋಗ್ಯ ಸೂತ್ರಗಳಾಗ ಸತ್ಯ, ಧರ್ಮ, ಸ್ವಚ್ಛತೆ, ಭಕ್ತಿ ಸಜ್ಜನಿಕೆಗಳನ್ನು ಬೋಧಿಸುವುದರ ಜೊತೆಗೆ ಮನುಷ್ಯನ ಮತ್ತು ಸಮಾಜದ ಸಣ್ಣತನ, ಮತ್ಸರ, ಭ್ರಮೆ, ಅಂಧ ಶ್ರದ್ಧೆಗಳನ್ನು ಗುರುತಿಸಿ ನಾಶಪಡಿಸಲು ಕೀರ್ತನೆ, ಸುಳಾದಿ, ಉಗಾಭೋಗಗಳ ಮೂಲಕ ಹರಿದಾಸರು ಯತ್ನಿಸಿದ್ದಾರೆ. ನಂತರ ಶತಕ ಸಾಹಿತ್ಯ, ಸಾಂಗತ್ಯ, ತ್ರಿಪದಿ ರೂಪಗಳು ಗದ್ಯ ಸಾಹಿತ್ಯ, ಕನ್ನಡ ಸಾಹಿತ್ಯದಲ್ಲಿ ವೈವಿಧ್ಯತೆಯನ್ನು ಸಾಧಿಸಿದವು. ಈ ಕಾಲವನ್ನು ಕವಿಚರಿತಾಕಾರರು ನಡುಗನ್ನಡ ಸಾಹಿತ್ಯ ಎಂದು ಕರೆದರು.

ವೀರಣ್ಣ ರಾಜೂರು ಅಭಿಪ್ರಾಯ ಪಡುವಂತೆ ''ಹತ್ತೊಂಬತ್ತನೆಯ ಶತಮಾನ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆಯನ್ನು ತಂದ ಕಾಲ. ಭಾರತದ ಸ್ವಾತಂತ್ರ್ಯ ಚಳುವಳಿ ಹಾಗೂ ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆಗಳ ಗಾಢ ಪ್ರಭಾವದಿಂದಾಗಿ ಭಾರತದ ಸಮಸ್ತ ಬದುಕು ಈ ಶತಮಾನದಲ್ಲಿ ತೀವ್ರ ಬದಲಾವಣೆಗೆ ಈಡಾಗಿ, ಇಲ್ಲಿಯ ಹಳೆಯ ವ್ಯವಸ್ಥೆ, ವಿದ್ಯೆ, ಜೀವನಶೈಲಿ, ಆಧುನಿಕ ಸ್ವರೂಪವನ್ನು ತಾಳಿದವು. ಇದು ಸಾಹಿತ್ಯವನ್ನು ವ್ಯಾಪಿಸಿದ್ದರಿಂದ ಹಳೆಗನ್ನಡ, ನಡುಗನ್ನಡ ಶೈಲಿ, ಶೈಲಿಯ ಜತೆ ಅದರ ನಂಬಿಕೆ, ಮೌಲ್ಯ, ಕಲ್ಪನೆ, ಕೂಡ ಹಿಂದೆ ಸರಿದು ಹೊಸರೂಪ ಪ್ರಕಾರಗಳು ಅವತರಿಸಿದ್ದವು.''[೨] ಪಾಶ್ಚಿಮಾತ್ಯ ಸಂಸ್ಕೃತಿಯ ರೀತಿ ನೀತಿಗಳು ಅವರ ಸಾಹಿತ್ಯ ವಿಚಾರ ಲಹರಿಗಳು ಭಾರತೀಯರ ಮೇಲೆ ಕನ್ನಡಿಗರ ಮೇಲೆ ಸಹಜವಾಗಿಯೇ ಪ್ರಭಾವ ಬೀರಿದವು. ಪ್ರಭಾವವು ಹೆಚ್ಚು

ಋಣರೂಪಿಯಾಗಿರುತ್ತದೆ. ಈ ಪ್ರಭಾವ ಸಾಹಿತ್ಯ ರಚನೆಯಲ್ಲಿ ಸಾಹಿತಿಗಳ ಹಿಂದೆ ನಿಂತು ಶಕ್ತಿಕೊಡುವ ಮತ್ತು ನಿಯಂತ್ರಿಸುವ ಎರಡೂ ಕೆಲಸಗಳನ್ನು ಮಾಡಿತು. ಶಕ್ತಿ ಕೊಡುವುದು ಪ್ರಭಾವದ ತಾಯ್ತನದ ಗುಣವಾಗಿದೆ. ಈ ಕೆಲಸ ಪಾಶ್ಚಾತ್ಯ ಸಂಸ್ಕೃತಿ ಸಾಹಿತ್ಯದಿಂದ ಆಧುನಿಕ ಕನ್ನಡ ಸಾಹಿತ್ಯದ ಮೇಲೆ ಆಗಿದೆ. ಸಾಹಿತಿಗಳು ಬರಹಕ್ಕೆ ಬೇಕಾದ ಶಕ್ತಿಯನ್ನು ಮತ್ತು ತಂತ್ರಗಳನ್ನು ಪಡೆದುಕೊಳ್ಳಲು ಪಂರಪರೆಯ ಅನುಸಂಧಾನಮಾಡುತ್ತಾರೆ. ನಮ್ಮ ಆಧುನಿಕ ಕನ್ನಡ ಲೇಖಕರು ಪಶ್ಚಿಮ ಪರಂಪರೆಯೊಂದಿಗೆ ಅನುಸಂಧಾನ ನಡೆಸಿದ್ದಾರೆ. ಹೀಗೆ ಪಾಶ್ಚಿಮಾತ್ಯ ಮತ್ತು ಭಾರತೀಯ ಸಂಸ್ಕೃತಿ ಸಾಹಿತ್ಯ ವಿಚಾರಗಳನ್ನು ಒಪ್ಪಿದ ಅನೇಕ ಲೇಖಕರು ಸಾಕಷ್ಟು ದ್ವಂದ್ವಗಳನ್ನು ಅನುಭವಿಸಿದ್ದಾರೆ. ಪ್ರೊ. ಎಲ್. ಎಸ್. ಶೇಷಗಿರಿರಾವ್ ಅವರು ಹೇಳುವ ಹಾಗೆ ''ಹೊಸಗನ್ನಡ ಸಾಹಿತ್ಯದ ಆರಂಭಕಾಲ ೧೯ನೇ ಶತಮಾನದ ಉತ್ತಾರಾರ್ಧ, ಈ ಕಾಲ ಇಪ್ಪತ್ತನೇಯ ಶತಮಾನದ ಪ್ರಾರಂಭದ ದಶಕಗಳು, ಪರಿವರ್ತನೆಯ ಘಟ್ಟ ಇದಕ್ಕೆ ಮುಖ್ಯ ಕಾರಣ ದೇಶದ ಜೀವನದಲ್ಲಿ ಆಗುತ್ತಿದ್ದ ವ್ಯಾಪಕವಾದ ಬಹುಮುಖವಾದ ಕ್ರಾಂತಿ. ೧೮೫೭ರ ಸ್ವಾತಂತ್ರ್ಯ ಹೋರಾಟದ ನಂತರ ಈಸ್ಟ್ ಇಂಡಿಯಾ ಕಂಪನಿಯ ಆಡಳಿತ ಮುಗಿದು, ಭಾರತ ನೇರವಾಗಿ ಇಂಗ್ಲೆಂಡಿನ ಆಡಳಿತಕ್ಕೆ ಬಂದ ಮೇಲೆ ದೇಶದಲ್ಲಿ ಒಂದು ರೀತಿಯಲ್ಲಿ ಶಾಂತಿ ನೆಲೆಸಿತು. ರಾಜ್ಯ ರಾಜ್ಯಗಳ ನಡುವಣ ಘರ್ಷಣೆಗಳು ಮುಗಿದು ಎಷ್ಟೋ ಶತಮಾನಗಳ ನಂತರ ಇಡೀ ಭಾರತ ಯುದ್ಧದಿಂದ ಮುಕ್ತವಾಯಿತು. ಕರ್ನಾಟಕದಲ್ಲಿ ಅರ್ಧಭಾಗವಾದ ಮೈಸೂರು ಸಂಸ್ಥಾನಕ್ಕೆ ೧೮೯೯ರಲ್ಲಿ ಮುಮ್ಮಡಿ ಕೃಷ್ಣರಾಜ ಒಡೆಯರು ಮಹಾರಾಜರಾದರೂ, ೧೮೩೧ ರಿಂದ ಇಂಗ್ಲಿಷ ಅಧಿಕಾರಿಗಳೇ ರಾಜ್ಯ ಸೂತ್ರಗಳನ್ನು ವಹಿಸಿಕೊಂಡಿದ್ದರು. ದೇಶದಲ್ಲೆಲ್ಲಾ ಇಂಗ್ಲಿಷ್ ವಿದ್ಯಾಭ್ಯಾಸ ಕ್ರಮ ಪ್ರಾರಂಭವಾಯಿತು. ಇದರ ಪರಿಣಾಮವಾಗಿ ಹೊಸ ವಿಷಯಗಳ ಅಧ್ಯಯನ ಸಾಧ್ಯವಾದದ್ದು, ಚಾರಿತ್ರಿಕ ಪ್ರಜ್ಞೆ ಮೊಳಕೆ ಇಟ್ಟದ್ದು ಮಾತ್ರವಲ್ಲ, ಹೊಸವಿಚಾರ ರೀತಿ ಬೆಳೆಯಿತು. ಸ್ವಾತಂತ್ರ್ಯ ಪ್ರೇಮ, ಪ್ರಜಾಪ್ರಭುತ್ವದಲ್ಲಿ ಶ್ರದ್ಧೆ ಇವು ಜನಮನದಲ್ಲಿ ಬೇರೂರಿದವು. ತಮ್ಮ ಚರಿತ್ರೆಗಿಂತ ತೀರಾ ವಿಭಿನ್ನವಾದ ಜನರ ಚರಿತ್ರೆಯ ಅಭ್ಯಾಸ ವಿಚಾರ ಪ್ರಚೋದಕವಾಯಿತು. ಅಲ್ಲದೆ ರೂಢಿಗಳನ್ನು, ಸಂಪ್ರದಾಯಗಳನ್ನು ಏಕೆ ಎಂದು ಪ್ರಶ್ನಿಸುವ ಮನೋಭಾವ, ಧೈರ್ಯವೂ ಬೆಳೆದವು. ೧೮೫೭ಕ್ಕೆ ಎಷ್ಟೋ ಮೊದಲೇ ರಾಜರಾಮ್ ಮೋಹನ್ ರಾಯ್ (೧೭೭೨-೧೮೩೩) ಅಂತವರು ಪಾಶ್ಚಾತ್ಯ ವಿದ್ಯಾಭ್ಯಾಸದಿಂದ ಪ್ರಭಾವಿತರಾಗಿದ್ದರು.ಅದರ ಅಗತ್ಯವನ್ನು ಒತ್ತಿ ಹೇಳಿದರು. ಆಗ ಕ್ರಾಂತಿಕಾರಕ ಎಂದು ಕಾಣುವಂತಹ ಸುಧಾರಣೆಗಳಿಗಾಗಿ ಒತ್ತಾಯ ಮಾಡಿದರು. ಸತಿಸಹಗಮನ, ಬಾಲ್ಯವಿವಾಹ ಇವುಗಳನ್ನು ಕೊನೆಗಾಣಿಸಬೇಕು. ವಿಧವಾ ವಿವಾಹಕ್ಕೆ ಅಡ್ಡಿ ಇರಬಾರದು. ಅಸ್ಪೃಶ್ಯತೆ ತೊಲಗಬೇಕು. ಇಂತಹ ವಿಚಾರ ರೀತಿ ಸಾಧ್ಯವಾಯಿತು. ಸಂಪ್ರದಾಯ ಅಥವಾ ಸಾಂಪ್ರದಾಯಿಕ ವ್ಯಾಖ್ಯಾನಗಳನ್ನು ಒಪ್ಪದೆ ಶಾಸ್ತ್ರಗಳನ್ನು ಮತ್ತೆ ಓದಿ ಅರ್ಥ ಕಂಡುಕೊಳ್ಳುವ ಪ್ರವೃತ್ತಿ ಬೆಳೆಯಿತು. ಈಶ್ವರಚಂದ್ರ ವಿದ್ಯಾಸಾಗರ ದೇವೇಂದ್ರನಾಥ ಠಾಕೂರ್, ವಿವೇಕಾನಂದ, ರಾಮತೀರ್ಥ, ದಯಾನಂದ ಸರಸ್ವತಿ, ಮೊದಲಾದವರ ಪ್ರಭಾವ ಇಡೀ ಭಾರತದ ಮೇಲಾಯಿತು. ಪಾಶ್ಚಾತ್ಯರ ವಿಚಾರ ರೀತಿ, ವೈಜ್ಞಾನಿಕ ಸಾಧನೆ ಇವುಗಳ ಬಗ್ಗೆ ಮೆಚ್ಚುಗೆಯ ಜೊತೆಗೆ ಒಂದು ಪ್ರತಿಕ್ರಿಯೆ ಮೂಡಿಬಂತು. ಭಾರತೀಯ ಸಂಸ್ಕೃತಿ, ಭಾರತೀಯ ಭಾಷೆಗಳಲ್ಲಿ ಅಭಿಮಾನ ಮೂಡಿತು. ಭಾರತದ ಪ್ರಾಚೀನ ಸಾಧನೆಯ ಅಧ್ಯಯನಕ್ಕೆ ಪಾಶ್ಚಾತ್ಯರಿಂದಲೇ ಎಷ್ಟು ನೆರವು ಮತ್ತು ಮಾರ್ಗದರ್ಶನ ದೊರೆಯಿತು ಎಂಬುದನ್ನು ಕೃತಜ್ಞತೆಯಿಂದ ಸ್ಮರಿಸಬೇಕು.''[೩]

ದೇಶಿಯವಾಗಿ ಬಂಗಾಳಿ, ಮರಾಠಿ ಭಾಷೆಗಳಿಂದಲೂ ಕನ್ನಡ ಪ್ರಭಾವಕ್ಕೆ ಒಳಗಾಯಿತು. ಆದರೆ ಹೆಚ್ಚು ಪ್ರಭಾವ ಬೀರಿದ್ದು ಮಾತ್ರ ಪಾಶ್ಚಿಮಾತ್ಯ ಸಾಹಿತ್ಯವೇ ಆಗಿದೆ. ಅಂತೂ ಕನ್ನಡ ಸಾಹಿತ್ಯ ಸೃಷ್ಟಿ ನಿಧಾನಗತಿಯಲ್ಲಿ ಸಾಗಿದ್ದ ಕಾಲದಲ್ಲಿ ಹತ್ತು ಕಡೆಗಳಿಂದ ಹರಿದು ಬಂದ ಪ್ರಭಾವ ಪ್ರೇರಣೆಗಳು ವಿಪುಲ ಸಾಹಿತ್ಯ ಸೃಷ್ಟಿಗೆ ಕಾರಣವಾದವು. ಪ್ರೊ ಎಲ್.ಎಸ್ ಶೇಷಗಿರಿರಾಯರು ಹೇಳುವ ಹಾಗೆ ''ಹತ್ತೊಂಬತ್ತನೆಯ ಶತಮಾನದ ಕಡೆಯ ದಶಕಗಳು ಮತ್ತು ಇಪ್ಪತ್ತನೆಯ ಶತಮಾನದ ಮೊದಲ ಎರಡು ದಶಕಗಳು ಇಡೀ ಭಾರತದಲ್ಲಿ ಮಹತ್ವದ ಬದಲಾವಣೆಗಳ ಕಾಲ. ಪಾಶ್ಚಾತ್ಯ ಸಂಸ್ಕೃತಿ, ರೀತಿನೀತಿಗಳು, ವಿಚಾರಲಹರಿ, ಸ್ವಾತಂತ್ರ್ಯ-ಪ್ರಜಾಪ್ರಭುತ್ವ ಮತ್ತು ವ್ಯಕ್ತಿಯ ಮಹತ್ವವನ್ನು ಕುರಿತ ಕಲ್ಪನೆಗಳು - ಇವುಗಳ ಪ್ರಭಾವ ಭಾರತೀಯರ ಮೇಲೆ - ಸಹಜವಾಗಿ ಕನ್ನಡಿಗರ ಮೇಲೆ ಆದ ಕಾಲ. ಪಾಶ್ಚಾತ್ಯ ಸಂಸ್ಕೃತಿಗೆ ಒಮ್ಮೆ ಮನಸೋತು, ಒಮ್ಮೆ ಅದಕ್ಕೆ ಬೆನ್ನು ತಿರುಗಿಸಿ ಭಾರತೀಯ ಸಂಸ್ಕೃತಿಗೆ ಆತುಕೊಂಡು, ಭಾರತೀಯರ ಮನಸ್ಸು ಹೊಸ ಒಲವು-ನಿಲುವುಗಳನ್ನು ಸ್ವೀಕರಿಸುತ್ತಿದ್ದ ಕಾಲ.''[೪]

ಯಾವ ದೇಶದ ಕಾಲದ ಸಾಹಿತ್ಯವಾದರೂ ಆ ದೇಶ ಕಾಲಗಳ ಸಂದರ್ಭದಲ್ಲಿ ಬೆಳೆಯಬೇಕಾಗುತ್ತದೆ. ಅದರ ಬಣ್ಣವನ್ನು ತಳೆಯಬೇಕಾಗುತ್ತದೆ. ಹತ್ತೊಂಬತ್ತನೆಯ ಶತಮಾನದ ಕಡೆಯ ದಶಕಗಳು, ಇಪ್ಪತ್ತನೆಯ ಶತಮಾನದ ಮೊದಲ ಎರಡು ದಶಕಗಳು, ಕನ್ನಡ ಸಾಹಿತ್ಯದಲ್ಲಿ ಹೊಸಯುಗದ ಹೆಬ್ಬಾಗಿಲುಗಳನ್ನು ತೆರೆದದ್ದು ಸಹಜವೇ. ಹೀಗೆ ಕನ್ನಡ ಸಾಹಿತ್ಯ ಹೊಸತನವನ್ನು ಪಡೆದುಕೊಳ್ಳಲಾರಂಭಿಸಿತು. ಅನೇಕ ಜನ ಸಾಹಿತಿಗಳು ಶ್ರೇಷ್ಠ ಕೃತಿಗಳನ್ನು ರಚಿಸಿದರು. ಹೊಸಗನ್ನಡ ಸಾಹಿತ್ಯ ಹೊಸತನದೊಂದಿಗೆ ಮೂಡಿಬಂತು. ಡಾ. ಶಾಂತಲಕ್ಷ್ಮಿಯವರು ಆಧುನಿಕ ಕನ್ನಡ ಸಾಹಿತ್ಯ ಸೃಷ್ಟಿಗೆ ಕಾರಣವಾದ ಮುಖ್ಯ ಪ್ರೇರಣೆಗಳನ್ನು ಹೀಗೆ ಗುರುತಿಸಿದ್ದಾರೆ.

''೧. ಭಾರತೀಯ ಪ್ರಾಚೀನ ಪರಂಪರೆ.

೨. ಇಂಗ್ಲೀಷ್ ವಿದ್ಯಾಭ್ಯಾಸ ವಿಚಾರ ಸರಣಿ ಇಂಗ್ಲೀಷ್ ಸಾಹಿತ್ಯ ಮತ್ತು ಚರಿತ್ರೆಯ ಅಧ್ಯಯನದ ಮೂಲಕ ವಿಶ್ವಸಾಹಿತ್ಯದ ಪರಿಚಯ.

೩. ಪಾಶ್ಚಾತ್ಯ ನಾಗರೀಕತೆ ಹಾಗೂ ಅನ್ಯ ಸಂಸ್ಕೃತಿಗಳ ಪ್ರಭಾವ.

೪. ಭಾರತದ ಅಂದಿನ ಪರಿಸ್ಥಿತಿ - ಆಂಗ್ಲರ ಆಡಳಿತ - ಸ್ವಾತಂತ್ರ ಹೋರಾಟ-ದೇಶಪ್ರೇಮ ಇತ್ಯಾದಿ.

೫. ಪ್ರಾಚೀನ ಕನ್ನಡ ಕಾವ್ಯ ರೂಪಗಳಾದ ಚಂಪೂ, ರಗಳೆ, ಷಟ್ಪದಿ, ವಚನಗಳು, ದಾಸರ ಹಾಗೂ ಶರಣರ ಕೀರ್ತನೆಗಳು ಜಾನಪದ ಸಾಹಿತ್ಯ ಇತ್ಯಾದಿ

೬. ಹೊಸ ಅಭಿವ್ಯಕ್ತಿಗಾಗಿ ಹಾತೊರೆಯುವ ಅಂತಃ ಪ್ರೇರಣೆ, ಹೊಸತನದ ಬಯಕೆ. ಉದಾಹರಣೆಗೆ ಬಿ.ಎಂ.ಶ್ರೀ ಅವರ ''ಅವಳ ತೊಡುಗೆ ಇವಳಿಗಿಟ್ಟು ನೋಡಬಯಸಿದೆ'' ಎನ್ನುವ ಮಹಾತ್ವಾಕಾಂಕ್ಷೆ.

೭. ಮೌಲಿಕತೆಯ ಸ್ವಾಭಿಮಾನ, ವ್ಯಕ್ತಿಯ ಪ್ರಯೋಗ ಶೀಲತೆಯ ಹಂಬಲ.

೮. ಮಣ್ಣಿನ ವಾಸನೆಯ ತುಡಿತ, ಹಳೆಯದರ ವಿರುದ್ಧ ಪ್ರತಿಕ್ರಿಯಾತ್ಮಕ ಧೋರಣೆ.

೯. ವೈಜ್ಞಾನಿಕ ಅನ್ವೇಷಣೆ, ವಿಕಾಸವಾದ ಮನೋವಿಜ್ಞಾನಗಳ ಪ್ರಯೋಗ ಪ್ರಿಯತೆ.''[೫]

ಹೊಸಗನ್ನಡ ಸಾಹಿತ್ಯವನ್ನು ಅಧ್ಯಯನದ ದೃಷ್ಟಿಯಿಂದ ಹಲವು ಘಟ್ಟಗಳನ್ನಾಗಿ ವಿಂಗಡಿಸಬಹುದು. ಅವುಗಳೆಂದರೆ ನವೋದಯ ಪೂರ್ವ, ನವೋದಯ, ನವ್ಯ, ಪ್ರಗತಿ ಶೀಲ, ಬಂಡಾಯ ಮತ್ತು ದಲಿತ. ರಂ ಶ್ರೀ ಮುಗಳಿಯವರು ೧೮೭೦ ರಿಂದ ೧೯೨೦ರ ಅವಧಿಯನ್ನು ಹೊಸಸಾಹಿತ್ಯದ ಮೊದಲ ಹಂತ. ಈ ಅವಧಿಯಲ್ಲಿ ೧೮೨೩ರಲ್ಲಿ ಕೆಂಪುನಾರಾಯಣನ ಮುದ್ರಾಮಂಜೂಷ, ೧೮೭೦ರಲ್ಲಿ ಚುರಮುರಿ ಶೇಷರಾಯರೂ, ೧೮೮೩ರಲ್ಲಿ ಬಸವಪ್ಪ ಶಾಸ್ತ್ರಿಗಳೂ ಕಾಳಿದಾಸನ ಶಾಕುಂತಳ ಕೃತಿಗಳು ಅನುವಾದಗೊಂಡವು. ೧೮೮೫ರಲ್ಲಿ ವೆಂಕಟಾಚಾರ್ಯರು ಬಂಕಿಮ ಚಂದ್ರ ಚಟರ್ಜಿಯವರ 'ದುರ್ಗೇಶ ನಂದಿನಿ' ಕಾದಂಬರಿ ಅನುವಾದಿಸಿದರು. ೧೯೦೬ರಲ್ಲಿ ಮುರುಗಾರಾಧ್ಯರ ಶೃಂಗಾರ ಚಾತುರ್ಯೋಲ್ಲಾಸಿನಿ ಕಾದಂಬರಿ ಪ್ರಕಟವಾಯಿತು. ೧೮೮೨ರಲ್ಲಿ ನಂದಳಿಕೆ ಲಕ್ಷ್ಮಿನಾರಾಯಣಪ್ಪನವರು ರತ್ನಾವಳಿ, ಅದ್ಭುತರಾಮಾಯಣ. ಶ್ರೀರಾಮ ಪಟ್ಟಾಭಿಷೇಕ ಮತ್ತು ರಾಮಾಶ್ವಮೇಧ ಕೃತಿಗಳನ್ನು ರಚಿಸಿದರು. ೧೮೨೦ರಲ್ಲಿ ಕರ್ನಾಟಕ ವಿದ್ಯಾವರ್ಧಕ ಸಂಘ ಸ್ಥಾಪನೆಯಾಯಿತು. ಎಸ್.ಜಿ. ನರಸಿಂಹಾಚಾರ್ಯರು, ಹಟ್ಟಿಂಗಡಿ ನಾರಾಯಣರಾಯರು, ಪಂಜೆಮಂಗೇಶರಾಯರು ಮುಂತಾದವರ ಕವನಗಳಲ್ಲಿ ಹೊಸ ಭಾವಲಹರಿಗಳು ಅಭಿವ್ಯಕ್ತಿಪಡೆದವು. ಈಮೇಲಿನ ಎಲ್ಲಾ ಸಾಹಿತ್ಯ ಜನಸಾಮಾನ್ಯರ ಜೀವನಕ್ಕೆ ಬಹಳ ಹತ್ತಿರವಾಗಿದ್ದವು.

ನವೋದಯ ಹೊಸಗನ್ನಡ ಸಾಹಿತ್ಯದ ಒಂದು ಪ್ರಮುಖ ಘಟ್ಟ. ಇಂಗ್ಲೀಷ ವಿದ್ಯಾಭ್ಯಾಸ ಅದರ ಮೂಲಕ ಹೊಸ ಜಗತ್ತಿನ ಪರಿಚಯ, ರಾಷ್ಟ್ರೀಯತೆಯ ಬೆಳವಣಿಗೆ, ಸ್ವಾತಂತ್ರ್ಯ ಚಳುವಳಿ, ಪರಿಸರ ಪ್ರೀತಿ, ಇವುಗಳ ಪರಿಣಾಮವಾಗಿ ರೂಪಗೊಂಡ ಹೊಸ ಬಗೆಯ ಸಾಹಿತ್ಯವನ್ನು ನವೋದಯ ಸಾಹಿತ್ಯ ಎಂದು ಕರೆಯಬಹುದು. ಈ ಹೊಸಬಗೆಯ ಕಾವ್ಯವೇ ವಿಮರ್ಶಕರಿಂದ ರೋಮ್ಯಾಂಟಿಕ್ ಕಾವ್ಯ ಅಥವಾ ರಮ್ಯ ಕಾವ್ಯ ಎಂದು ಕರೆಸಿಕೊಂಡಿತು. ಕುವೆಂಪು, ಮಾಸ್ತಿ, ವೆಂಕಟೇಶ ಅಯ್ಯಂಗಾರ, ದತ್ತಾತ್ರೇಯ ರಾಮಚಂದ್ರ ಬೇಂದ್ರೆ, ಚೆನ್ನವೀರ ಕಣವಿ, ಶಿವರಾಮ ಕಾರಂತ, ಕೆ.ಎಸ್. ನರಸಿಂಹಸ್ವಾಮಿ, ಪು.ತಿ. ನರಸಿಂಹಾಚಾರ್ಯರು, ಜಿ.ಎಸ್. ಶಿವರುದ್ರಪ್ಪನವರು ಈ ಘಟ್ಟದಲ್ಲಿ ಹೆಚ್ಚು ಸಾಹಿತ್ಯ ಸೃಷ್ಟಿಸಿದರು. ಬಿ.ಎಂ.ಶ್ರೀಯವರ 'ಇಂಗ್ಲೀಷ ಗೀತೆಗಳು' ನವೋದಯವನ್ನು ಆರಂಭಿಸಿದ ಶ್ರೇಷ್ಠ ಕೃತಿ. ಈ ಕೃತಿಯಿಂದ ಹಿಡಿದು ಪ್ರಗತಿಶೀಲದವರೆಗಿನ ಕಾಲಾವಧಿಯ ಸಾಹಿತ್ಯವನ್ನು ನವೋದಯ ಎಂಬ ಹೆಸರಿನಿಂದ ಗುರುತಿಸಲಾಗುತ್ತದೆ. ಹೊಸ ಬಗೆಯ ಕಾವ್ಯ. ಕತೆ, ಕಾದಂಬರಿ, ಪ್ರಬಂಧ, ನಾಟಕ, ವಿಮರ್ಶೆ ಮುಂತಾದ ಪ್ರಕಾರಗಳಲ್ಲಿ ವೈವಿಧ್ಯತೆಯನ್ನು ಈ ಸಾಹಿತ್ಯ ನೀಡಿತು. ನಿಸರ್ಗಕ್ಕೆ ಪ್ರತಿಕ್ರಿಯೆ ಮತ್ತು ದೈವಭಕ್ತಿ ಈ ಪಂಥ ಸಾಹಿತ್ಯದಲ್ಲಿ ಮೂಡಿಬಂತು. ಭಾವಗೀತೆ ಈ ಕಾಲದ ಪ್ರಮುಖ ಅಭಿವ್ಯಕ್ತಿ ಪ್ರಕಾರವಾಯಿತು. ಸುನೀತ, ಶೋಕಗೀತೆ, ಪ್ರಗಾಥ, ಕಥನಕಾವ್ಯ, ಖಂಡಕಾವ್ಯ, ಮಹಾಕಾವ್ಯ ಮುಂತಾದ ಹಲವಾರು ಹೊಸ ರಚನೆಗಳು ಉಂಟಾದವು. ಉತ್ತಮ ಪರಂಪರೆಯನ್ನು ನಿರ್ಮಾಣ ಮಾಡಿದ ನವೋದಯ ಸಾಹಿತ್ಯಕ್ಕೆ ಬದುಕಿನ ಹೊಸ ಅನುಭವಗಳಿಗೆ ಪ್ರಮುಖ ಪ್ರತಿಕ್ರಿಯೆಯಾಗಿದೆ.

ನಂತರ ಬಂದ ಪ್ರಗತಿಶೀಲ ಸಾಹಿತ್ಯ, ಸಾಹಿತ್ಯ ಕ್ಷೇತ್ರದಲ್ಲಿ ಚಳುವಳಿ. ಪ್ರತಿಭಟನೆ ಎಂದೇ ಹೆಸರಾಯಿತು. ಪ್ರೊ. ಎಲ್.ಎಸ್. ಶೇಷಗಿರಿರಾಯರು ಹೇಳುವ ಹಾಗೆ ''ಪ್ರಗತಿಶೀಲ ಸಾಹಿತ್ಯ ಆಧುನಿಕ ಕನ್ನಡ ಸಾಹಿತ್ಯದಲ್ಲಿ ಆವರೆಗೆ ಕಾಣದಿದ್ದ ಹೊಸ ಭಾವ ಕೇಂದ್ರವೊಂದನ್ನು ತಂದುಕೊಟ್ಟಿತು. ರೋಷ, ಸುತ್ತಲಿನ ಸಮಾಜದ ಕೊಳೆಯನ್ನು ತೊಡೆದು

ಹಾಕುವ ಛಲದಿಂದ ಬರೆದ ಪ್ರಗತಿಶೀಲರು 'ಗೌರವಸ್ಥರು' ಬಚ್ಚಿಡುವ ವಿಷಯಗಳಿಗೆ ಅಭಿವ್ಯಕ್ತಿ ನೀಡಿದರು. ಆಷಾಢಭೂತಿತನವನ್ನು ಬಯಲಿಗೆಳೆಯಲು ಶ್ರಮಿಸಿದರು. ಮಠಗಳಲ್ಲಿ, ದೇವಾಲಯಗಳಲ್ಲಿ, ಮನೆಗಳಲ್ಲಿ ನಡೆಯುವ ಮೋಸ ದುಷ್ಟಾಚಾರಗಳನ್ನು ಬಯಲಿಗೆಳೆದರು. ಲೈಂಗಿಕ ಜೀವನದಲ್ಲಿ ಮೋಸ ಹೆಚ್ಚಾಗಿ ನಡೆಯುವುದರಿಂದ ಇದು ಅನೇಕ ಕೃತಿಗಳ ವಸ್ತುವಾಯಿತು. ಅನಕೃ ಅವರ 'ನಗ್ನಸತ್ಯ', 'ಶನಿಸಂತಾನ', 'ಸಂಜೆಗತ್ತಲು', 'ಕಬ್ಬಿಣದ ಕಾಗೆ', ತ.ರಾ.ಸು. ಅವರ 'ಮುಂಜಾವಿನಿಂದ ಮುಂಜಾವು', ಕಟ್ಟೀಮನಿಯವರ 'ಜರತಾರಿ ಜಗದ್ಗುರು', 'ಮೋಹದ ಬಲೆಯಲ್ಲಿ', 'ಜ್ವಾಲಾಮುಖಿಯ ಮೇಲೆ', ಅರ್ಚಿಕ ವೆಂಕಟೇಶರ 'ಅಸ್ಥಿಪಂಜರ' ಇಂತಹ ಹಲವಾರು ಕಾದಂಬರಿಗಳು ಹೊರಬಿದ್ದವು. ಅನಕೃ ಸಲಿಂಗರತಿಯನ್ನು ಕುರಿತು 'ಮಧುರ ಸ್ವಪ್ನ' ಎಂಬ ಸಣ್ಣ ಕಥೆಯನ್ನು ಬರೆದರು. ಈ ಎಲ್ಲಾ ಕೃತಿಗಳ ಉದ್ದೇಶ ಜೀವನದ ನಗ್ನಸತ್ಯವನ್ನು ನಿರೂಪಿಸುವುದು. ಸುತ್ತಲಿನ ಸಮಾಜದ ಜೀವನದ ಮುಸುಕನ್ನೆಳೆದು, ದೀನ ದಲಿತರ ಶೋಷಣೆ ಹೇಗೆ ನಡೆಯುತ್ತಿದೆ ಎಂದು ತೋರಿಸುವುದು. ಸುಮಾರು ಎಂಟು ವರ್ಷಗಳ ಕಾಲ ಪ್ರಗತಿಶೀಲ ಚಳುವಳಿ ಕನ್ನಡ ಸಾಹಿತ್ಯದಲ್ಲಿ ಒಂದು ಜೀವಂತ ಶಕ್ತಿ ಎಂದು ಬೋಧವಾಗುತ್ತಿತ್ತು.

ನವೋದಯ ಲೇಖಕರಂತೆಯೇ ಪ್ರಗತಿಶೀಲರೂ ಬದುಕು ಸ್ವೀಕಾರಾರ್ಹ ಎಂಬ ನಂಬಿಕೆಯಿಂದಲೇ ಬರೆಯುತ್ತಾರೆ. ಬದುಕನ್ನು ಇನ್ನೂ ಶುಭ್ರಗೊಳಿಸಬೇಕು ಎಂಬ ಕಳಕಳಿ, ಇವರಲ್ಲಿ ತೀವ್ರವಾಗಿತ್ತು. ನವೋದಯ ಸಾಹಿತಿ ಬಹುಮಟ್ಟಿಗೆ ಸಾಹಿತ್ಯವು ವ್ಯಕ್ತಿಯ ಮನಸ್ಸನ್ನು ಮೃದುಗೊಳಿಸುವ ಪ್ರಭಾವ ಎಂದು ನಂಬಿದರೆ; ಅದು ಸಾಮಾಜಿಕ ಕ್ರಾಂತಿಯನ್ನು ಸಾಧಿಸುವ ಶಕ್ತಿ ಎಂದು ಪ್ರಗತಿಶೀಲ ಸಾಹಿತಿ ನಂಬಿದೆ. ಆದರೆ ಇಬ್ಬರೂ ಬಾಳು ಅರ್ಥಪೂರ್ಣ ಎಂಬುದು ಸ್ವತಃ ಸಿದ್ಧ ಎಂದು ಭಾವಿಸಿದರೂ ಕೆಲವು ಮೌಲ್ಯಗಳನ್ನು ಸ್ವೀಕರಿಸಿದರು. ಈ ಮೌಲ್ಯಗಲಾದರೂ ತೀರ ಭಿನ್ನವಾಗಿರಲಿಲ್ಲ. ತ್ಯಾಗ, ಪ್ರಾಮಾಣಿಕತೆ, ಅನುಕಂಪ, ಪ್ರೇಮ, ಸ್ನೇಹ, ದೇಶಪ್ರೇಮ. ಇವು ಎರಡೂ ಪಂಥದವರು ಒಪ್ಪಿದ ಮೌಲ್ಯಗಳು"[೩] ಈ ಪ್ರಗತಿಶೀಲ ಸಾಹಿತ್ಯದಿಂದ ಕನ್ನಡ ಸಾಹಿತ್ಯ ಇನ್ನಷ್ಟು ವೈಶಾಲ್ಯತೆಯನ್ನು ಪಡೆದುಕೊಂಡಿತು. ಈ ಪ್ರಗತಿಶೀಲರು ಅಪಾರವಾದ ಕಥಾ ಸಾಹಿತ್ಯವನ್ನು ಕಾದಂಬರಿಗಳನ್ನು ರಚಿಸಿದರು. ಇವರು ಪ್ರತಿಭಟನೆಯ ಕಾವಿನಲ್ಲಿ, ಕ್ರಾಂತಿಯ ಹುಮ್ಮಸ್ಸಿನಲ್ಲಿ, ವಸ್ತುವನ್ನು, ಜೀವನವನ್ನು ಇಡಿಯಾಗಿ ನೋಡುವುದನ್ನು ಮರೆತಂತೆ ಕಾಣುತ್ತದೆ. ಇವರ ಬರವಣಿಗೆಯಲ್ಲಿ ಸಂಯಮತೆ ಬಹಳ ಕಡಿಮೆಯೆಂದು ಹೇಳಬಹುದು.

ಭಾವುಕತೆಯಿಂದ ಕೂಡಿದ ಆವೇಶದಲ್ಲಿ ನೋಡಬೇಕಾದ ಅನೇಕ ಅಂಶಗಳನ್ನು ಸರಿಯಾಗಿ ನೋಡಲು ಸಾಧ್ಯವಾಗಲಿಲ್ಲ. ಇದನ್ನೇ ಎಚ್.ಕೆ. ರಾಮಚಂದ್ರ ಅವರು ಬದುಕಿನ ವೈವಿಧ್ಯವನ್ನು, ವಿರೋಧಗಳನ್ನು ಗಮನಿಸಲಾರದೆ ಹೋದ ಪ್ರಗತಿ ಶೀಲರು, ತಾವು ಎತ್ತಿಕೊಂಡ ಸಮಸ್ಯೆಗಳನ್ನೆಲ್ಲಾ ಬೋಳಾಯಿತನದಿಂದ ಕಂಡು ಅವನ್ನು ಅಲೆಯಾಗಿ ಸರಳಗೊಳಿಸ ಹೊರಟರು. ಎಲ್ಲಕ್ಕಿಂತ ಮಿಗಿಲಾಗಿ ಅವರಿಗೆ ಭಾಷೆಯನ್ನು ಔಚಿತ್ಯ ಪೂರ್ಣವಾಗಿ ಬಳಸುವುದು ಸಾಧ್ಯವಾಗಲಿಲ್ಲ. ಭಾಷೆಗೆ ಒಂದು ಸಾಮಾಜಿಕ ಉದ್ದೇಶವಿದೆ. ಅದು ಸಾಮಾಜಿಕ ವ್ಯವಸ್ಥೆಯ ಇತಿಹಾಸದಲ್ಲಿ ಮನುಷ್ಯನ ವಿಕಾಸದ ಸಾಧನವಾಗಿ ರೂಪಗೊಂಡಿತು ಎನ್ನುವ ಪರಿಜ್ಞಾನ ಪ್ರಗತಿಶೀಲರಿಗೆ ಇದ್ದಂತೆ ಕಾಣಲಿಲ್ಲ. ಸಮಾಜವನ್ನು ಹೆಚ್ಚು ಪ್ರಭಾವಶಾಲಿಯಾಗಿ ಪ್ರಚೋದಿಸಬಲ್ಲ. ನಾಟಕದಂಥ ಮಾಧ್ಯಮವನ್ನು ಪ್ರಗತಿಶೀಲರು ದುಡಿಸಿಕೊಳ್ಳಲೇ ಇಲ್ಲ. ಒಟ್ಟಿನಲ್ಲಿ ಪ್ರಗತಿಶೀಲ ಸಾಹಿತ್ಯ ತನ್ನತನವನ್ನು ಸಾಧಿಸಲಾರದೇ ಹೋಯಿತು."[೪]

ಸಾಂಸ್ಕೃತಿಕವಾಗಿ, ಶೈಕ್ಷಣಿಕವಾಗಿ, ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಹಿಂದುಳಿದ ಸಮುದಾಯಗಳು ಅಕ್ಷರದ ಮೂಲಕ ಅಭಿವ್ಯಕ್ತಿಸಲು ತೊಡಗಿದವು. ಈ ಜನಾಂಗಗಳು ಶತಶತಮಾನಗಳ ಕಾಲ ತಾವು ಅನುಭವಿಸಿದ ನೋವುಗಳನ್ನು ಅವಮಾನಗಳನ್ನು ಮನುಷ್ಯರಾದರೂ ಕೂಡ ಪ್ರಾಣಿಗಳಂತೆ ಬದುಕಿದ ತಮ್ಮ ನಿಕೃಷ್ಟ ಬದುಕನ್ನು ಸಾಹಿತ್ಯದ ಮೂಲಕ ಹೇಳತೊಡಗಿದವು. ತಮ್ಮ ಕೇರಿಯ, ಪ್ರದೇಶದ ಭಾಷೆಯನ್ನು ಉಪಯೋಗಿಸಿಕೊಂಡು ತಮ್ಮ ಸಹಜ ಅನುಭವಗಳನ್ನು ದಾಖಲಿಸತೊಡಗಿದವು. ಆಗ ಒಂದು ಜನಾಂಗದ ಸಾಹಿತ್ಯವೇ ಸೃಷ್ಟಿಯಾದಂತೆ ಆಯಿತು. ಇದನ್ನೇ ದಲಿತ ಸಾಹಿತ್ಯವೆಂದು ಕರೆಯಲಾಯಿತು. ದೇವನೂರು ಮಹಾದೇವ ಅವರ 'ಒಡಲಾಳ' ಮತ್ತು 'ಕುಸುಮ ಬಾಲೆ' ಕಾದಂಬರಿಗಳು, ಸಿದ್ಧಲಿಂಗಯ್ಯನವರ 'ಸಾವಿರಾರು ನದಿಗಳು', 'ಕಪ್ಪು ಕಾಡಿನ ಹಾಡು', 'ಪಂಚಮ ನೆಲಸಮ', 'ಏಕಲವ್ಯ ನಾಟಕಗಳು', ಅರವಿಂದ ಮಾಲಗತ್ತಿಯವರ 'ಮೂಕನಿಗೆ ಬಾಯಿ ಬಂದಾಗ', 'ಕಪ್ಪು ಕಾವ್ಯ', 'ಗೌರ್ಮೆಂಟ್ ಬ್ರಾಹ್ಮಣ', ಮುಳ್ಳೂರು ನಾಗರಾಜರ 'ಮರಣಮಂಡಲ ಮಧ್ಯದೊಳಗೆ' ಮ.ನ. ಜವರಯ್ಯನವರ 'ಕೇಳು ಜಗಮಾದಿಗ ಹೊಲೆಯ', 'ಮಾಗಿ', ಚೆನ್ನಣ್ಣ ವಾಲಿಕಾರರ 'ಪ್ಯಾಂಥರ್ಸ್ ಪದ್ಯಗಳು' ಮೊಗಳ್ಳಿ ಗಣೇಶರ 'ಬುಗುರಿ' ಮುಂತಾದ ಅನೇಕ ದಲಿತ ಸಾಹಿತಿಗಳು ಮಹತ್ತರ ಕೃತಿಗಳನ್ನು ಸೃಷ್ಟಿಸಿದರು. ಈ ಸಾಹಿತಿಗಳು ವಿಪುಲ ಸಾಹಿತ್ಯವನ್ನು ಸೃಷ್ಟಿಸುತ್ತ ಪ್ರಗತಿಪರ ಸಂಘಟನೆಗಳಲ್ಲಿ ತಮ್ಮನ್ನು ಗುರುತಿಸಿಕೊಂಡು ಸಾಹಿತ್ಯ ಸಂಸ್ಕೃತಿ ಮತ್ತು ರಾಜಕೀಯ ಹಿತಾಸಕ್ತಿಗಳನ್ನು ಬೆಳೆಸುತ್ತಲಿದ್ದಾರೆ.

ಶೋಷಣೆಗೆ ಒಳಗಾದ ದಲಿತೇತರರು ಬರೆದ ಸಾಹಿತ್ಯವೇ ಬಂಡಾಯ ಸಾಹಿತ್ಯ ಎಂದು ಕರೆಸಿಕೊಂಡಿದೆ. ದಲಿತ ಮತ್ತು ಬಂಡಾಯ ಸಾಹಿತ್ಯದ ಆಶಯ ಒಂದೇ ಆಗಿದೆ. ಒಂದು ಅಸಮಾನ ವ್ಯವಸ್ಥೆಯ ವಿರುದ್ಧ ಕೈಗೊಳ್ಳುವ ಸಾಹಿತ್ಯಿಕ ಅಭಿವ್ಯಕ್ತಿ ಅಥವಾ ಪ್ರತಿಭಟನೆ ಬಂಡಾಯ ಸಾಹಿತ್ಯವಾಗಿದೆ. ಬಂಡಾಯ ಅನ್ನುವುದು ಒಂದು ಮನೋಧರ್ಮ, ಈ ಮನೋಧರ್ಮದ ಮುಖ್ಯ ಲಕ್ಷಣ, ಸಾಮಾಜಿಕ ಅಸಮಾನತೆ ಹಾಗೂ ಅನ್ಯಾಯಗಳನ್ನು ಒಟ್ಟಾರೆಯಾಗಿ ಪ್ರಶ್ನಿಸುವ ಮತ್ತು ಪರಿಸ್ಥಿತಿಯನ್ನು ಬದಲಾಯಿಸುವ ಉದ್ದೇಶದಿಂದ ಇದು ನಡೆಯುತ್ತದೆ. ಬಂಡಾಯ ಗುಣವನ್ನು ಆದಿಕವಿ ಪಂಪ, ವಚನಕಾರರು, ಹರಿಹರ, ರಾಘವಾಂಕ ಮುಂತಾದ ಅನೇಕ ಕವಿಗಳಲ್ಲಿ ಇರುವುದನ್ನು ಕಾಣಬಹುದಾಗಿದೆ. ಡಾ. ಎಸ್.ಶಿವಣ್ಣ ಅವರು ಗುರುತಿಸಿರುವ ಹಾಗೆ ''ಬಂಡಾಯ ಸಾಹಿತ್ಯ ವಾಸ್ತವವಾಗಿ ರೂಪ ತಾಳಿದ್ದು ಎಪ್ಪತ್ತರ ದಶಕದಲ್ಲಿ, ಆಗ ಕರ್ನಾಟಕ ಸಾಂಸ್ಕೃತಿಕ ವಲಯದಲ್ಲಿ ಮಹತ್ವದ ಘಟನೆಗಳು ಜರುಗಿದವು. ರಾಷ್ಟ್ರಕವಿ ಡಾ.ಕುವೆಂಪು ಅವರ ನೇತೃತ್ವದಲ್ಲಿ ಜಾತಿನಾಶ ಆಂದೋಲನ, ವಿಚಾರವಾದಿ ಚಳುವಳಿ, ಸಚಿವ ಬಿ. ಬಸವಲಿಂಗಪ್ಪನವರು ಕನ್ನಡ ಸಾಹಿತ್ಯವನ್ನು ಬೂಸಾ ಎಂದು ಕರೆದಿದ್ದರಿಂದ ಅವರ ವಿರುದ್ಧ ಮೇಲ್ಜಾತಿಯವರು ನಡೆಸಿದ ಪ್ರತಿಭಟನೆ. ಕರ್ನಾಟಕ ಸಾಹಿತಿ ಕಲಾವಿದರ ಒಕ್ಕೂಟ. ನಂತರ ಒದಗಿಬಂದ ತುರ್ತು ಪರಿಸ್ಥಿತಿಯಲ್ಲಿ ಜೆ.ಪಿ. ಆಂದೋಲನದ ಹೊಣೆ ಹೊತ್ತು ನವ ನಿರ್ಮಾಣ ಸಮಿತಿ, ಪ್ರಗತಿಪಂಥ, ದಲಿತ ಸಂಘರ್ಷ ಸಮಿತಿ. ಇವೆಲ್ಲಾ ಎಪ್ಪತ್ತರ ದಶಕದಲ್ಲಿ ಸಾಹಿತಿಗಳನ್ನು, ಕಲಾವಿದರನ್ನು, ಒಟ್ಟಾರೆ ಕರ್ನಾಟಕದ ಬುದ್ಧಿಜೀವಿಗಳನ್ನು ಬೀದಿಗೆ ಎಳೆದು ತಂದು ಹೋರಾಟದಲ್ಲಿ ಭಾಗಿಯಾಗುವಂತೆ ಮಾಡಿದ ಘಟನೆಗಳು''[೯] ಬಂಡಾಯ ಸಾಹಿತ್ಯಕ್ಕೆ ನಾಂದಿ ಹಾಡಿದವು. ಹೊಸಗನ್ನಡ ಸಾಹಿತ್ಯದಲ್ಲಿ ದಲಿತ ಬಂಡಾಯ ಚಳುವಳಿಗಳಗೆ ತನ್ನದೇ ಆದ ಚಾರಿತ್ರಿಕ ಮಹತ್ವವಿದೆ. ದಲಿತ-ಬಂಡಾಯ ಸಾಹಿತ್ಯ ಮೂಲ ಉದ್ದೇಶ ವ್ಯವಸ್ಥೆಯ

ವಿರುದ್ಧದ ಧ್ವನಿಯೇ ಆಗಿದ್ದರೂ ಎರೆಡೂ ಹೊರನೋಟಕ್ಕೆ ಒಂದೇ ಎಂದು ಕಂಡುಬಂದರೂ ಇವುಗಳಲ್ಲಿ ಅನೇಕ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ದಲಿತ ಸಾಹಿತಿಗಳೆಲ್ಲಾ ಬಂಡಾಯ ಸಾಹಿತಿಗಳು, ಆದರೆ ಬಂಡಾಯ ಸಾಹಿತಿಗಳೆಲ್ಲಾ ದಲಿತರಲ್ಲ ದಲಿತ ಜನಾಂಗದಲ್ಲಿ ಹುಟ್ಟಿ ಸಾಹಿತ್ಯ ರಚಿಸಿದ ಎಂದಾಕ್ಷಣ ಆತ ದಲಿತ ಸಾಹಿತಿಯಾಗಲಾರ. ಆತ ದಲಿತ ಸಾಹಿತಿಯಾಗ ಬೇಕಾದರೆ ಮೊದಲು ಬಂಡಾಯದ ಮನೋಧರ್ಮವನ್ನು ಹೊಂದಿರಬೇಕು. ದಲಿತ ಬಂಡಾಯ ಕವಿಗಳ ಪ್ರಧಾನ ಆಶಯ ಜನಪರ ಕಾಳಜಿಯೇ ಆಗಿದೆ. ಜನಸಾಮಾನ್ಯರನ್ನು ಸದಾ ಕಾಡುವ ಹಸಿವು, ಬಡತನ, ನಿರುದ್ಯೋಗ, ಜಾತಿ ವ್ಯವಸ್ಥೆಗಳ ವಿರುದ್ಧ ಹೋರಾಟದ ಧ್ವನಿ ಈ ಕವಿಗಳ ಸಾಹಿತ್ಯದಲ್ಲಿ ಕಂಡುಬರುತ್ತದೆ.

ಹೊಸಗನ್ನಡ ಸಾಹಿತ್ಯದಲ್ಲಿ ಅತ್ಯುತ್ತಮ ಕೃತಿಗಳನ್ನು ನೀಡಿದ ನವೋದಯ ಸಾಹಿತ್ಯ, ಪ್ರಗತಿಶೀಲ ಸಾಹಿತ್ಯ ಒಂದು ಸಂಪ್ರದಾಯವಾಗಿ ನೆಲೆಗೊಂಡು, ಆರಂಭದ ದೆಸೆಯಲ್ಲಿ ಕಂಡುಬರುವ ಕೃತಿಶಕ್ತಿಯ ಕಾವು ಕ್ರಮೇಣ ಕಡಿಮೆಯಾಗಿ ಹೊಸ ಪ್ರಯೋಗವಾಗಿ ಹರಿದದ್ದು ಜಡ ಸಂಪ್ರದಾಯವಾಗಿ ರೂಢಿಯಾಯಿತು. ದಲಿತ ಬಂಡಾಯ ಸಾಹಿತ್ಯದಲ್ಲಿ ಒಂದೊಂದು ಸಲ ಪ್ರತಿಭಟನೆ, ಕ್ರಾಂತಿ, ಅಂಶಗಳು ಆವೇಶಗಳೇ ಹೆಚ್ಚಾಗಿ ಸಾಹಿತ್ಯದ ಅಂಶ ಕಡಿಮೆಯಾಯಿತು. ಆಗ ಅನುಕರಣೆ ಪುನರುಚ್ಚಾರಣೆ ಆರಂಭವಾಗಿ ಕಾವ್ಯ ನಿಸ್ಸತ್ವವಾಗಿ ಕೇವಲ ಶಬ್ಧಚೇಷ್ಟೆಗೆ ನಿಂತು ಸಾಹಿತ್ಯಸತ್ವ ಕಡಿಮೆಯಾಯಿತು. ಇದು ಪ್ರತಿಯೊಂದು ಸಾಹಿತ್ಯಕ್ಕೂ ಅನ್ವಯಿಸುತ್ತದೆ. ಆದರೆ ಅದರಲ್ಲಿನ ಅತ್ಯುತ್ತಮವಾದ ಕಾವ್ಯಗಳು ಮುಂದೇ ಎಷ್ಟೇ ಘಟ್ಟಗಳು ಬಂದರೂ ತಮ್ಮ ಇರುವಿಕೆಯನ್ನ ಕಳೆದುಕೊಳ್ಳುವುದಿಲ್ಲ. ತಮ್ಮ ಶಕ್ತಿಯ ಮೇಲೆ ಮುಂದಿನ ಜನಾಂಗಕ್ಕೆ ಹತ್ತಿರವಾಗಿ, ತಮ್ಮ ಸ್ಥಾನವನ್ನು ಉಳಿಸಿಕೊಂಡಿರುತ್ತವೆ. ನವ್ಯ ಕವಿ ಗೋಪಾಲಕೃಷ್ಣ ಅಡಿಗರು ಹೇಳುವ ಹಾಗೆ ''ಯಾವ ಸಂಪ್ರದಾಯದ್ದೇ ಆಗಲಿ, ಉತ್ತಮ ಕಾವ್ಯ ಯಾವಾಗಲೂ ಉತ್ತಮ ಕಾವ್ಯವೇ. ಒಂದು ಸಲ ಒಂದು ಶುಭ ಮಹೂರ್ತದಲ್ಲಿ ಕವಿಯ ಮನಸ್ತರಂಗಗಳ ಮೂರ್ತಿಯಾಗಿ ಹೊರಬಿದ್ದ ಕಾವ್ಯ ತನ್ನ ಅಂತಸ್ಸತ್ವದಿಂದ ಬಹುಕಾಲ ತಲೆಯೆತ್ತಿ ನಿಲ್ಲಲು ಸಮರ್ಥವಾಗುತ್ತದೆ. ಆದರೆ ಅದು ರಚಿತವಾದ ಕಾಲದಲ್ಲಿ ಅದು ಎಷ್ಟು ಉತ್ತಮ ಎಂದು ತಿಳಿದಿದ್ದರೋ ಅಷ್ಟು ಉತ್ತಮ ಅದಲ್ಲ. ಅದು ಉತ್ತಮವಾಗಿರುವ ರೀತಿ ಈಗ ಸಲ್ಲ ಎಂದು ಮುಂದಿನ ತಲೆಮಾರು ನಿರ್ಧರಿಸಬಹುದು. ಹಾಗೆಯೇ ಇನ್ನು ಮುಂದಿನ ತಲೆಮಾರಿನಲ್ಲಿ ಅದೇ ಉತ್ತಮ ಕವಿತೆಯಂತಲೂ ಆಗಬಹುದು. ಪ್ರತಿಯೊಂದು ಕಾವ್ಯ ಮಾರ್ಗದಲ್ಲೂ ಅದರದರ ಗಂಡಾಂತರ ಇದ್ದೇ ಇರುತ್ತದೆ. ಆ ಮಾರ್ಗದಲ್ಲಿ ಸತ್ವವಿದ್ದಾಗ ಆ ಗಂಡಾಂತರಗಳನ್ನು ಮೆಟ್ಟಿ ನಿಂತ ಕೃತಿ ಕೃತಾರ್ಥವಾಗುತ್ತದೆ.''[೧೦]

ಹೊಸಗನ್ನಡ ಸಾಹಿತ್ಯದಲ್ಲಿ 'ನವ್ಯ' ಬಹಳ ವಿಶಿಷ್ಟವಾದ ಘಟ್ಟ. ಸುಮಾರು ೧೯೫೦ರ ಹೊತ್ತಿಗೆ ಕನ್ನಡ ಸಾಹಿತ್ಯದಲ್ಲಿ ಹೊಸತನ ಮೂಡಲು ಆರಂಭವಾಯಿತು. ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದದ್ದು ಮತ್ತು ಅಲ್ಲಿಯವರೆಗೆ ಪ್ರಚಲಿತದಲ್ಲಿದ್ದ ನವೋದಯ ಕಾವ್ಯ ಮಾರ್ಗದ ಸತ್ವ ತೀರಿತು. ಹೊಸ ಕಾವ್ಯ ಮಾರ್ಗದ ಅವಶ್ಯಕತೆಯಿದೆ ಎಂಬ ಭಾವ ಬಲಿತು. ನವೋದಯ ಕಾವ್ಯ ಮಾರ್ಗಕ್ಕೆ ಪ್ರತಿಭಟನೆಯಾಗಿ ಹೊಸ ಕಾವ್ಯ ಮಾರ್ಗವೊಂದು ರೂಪತಾಳಿತು; ಇದೇ ನವ್ಯಮಾರ್ಗವಾಯಿತು. ೧೯೫೦ ರಿಂದ ೧೯೭೫ರ ವರೆಗಿನ ಈ ಮುಂಚಿನ ಸಾಹಿತ್ಯಕ್ಕಿಂತ ಭಿನ್ನವಾಗಿದ್ದ ಸಾಹಿತ್ಯವನ್ನು ನವ್ಯ ಎಂದು ಸ್ಥೂಲವಾಗಿ ವಿದ್ವಾಂಸರು ಗುರುತಿಸಿದ್ದಾರೆ. ನವ್ಯ ಕಾವ್ಯ ಎಂದು ಹೆಸರು ಕೊಟ್ಟವರು ವಿನಾಯಕ ಕೃಷ್ಣ ಗೋಕಾಕರು. ನವ್ಯ ಕಾವ್ಯದ ಸಮತೋಲನವನ್ನು ಉಳಿಸಿಕೊಂಡು

ಬಂದವರು ಗೋಕಾಕರು. ಗೋಪಾಲಕೃಷ್ಣ ಅಡಿಗರು ನವ್ಯ ಕಾವ್ಯದ ಪ್ರತಿಷ್ಠಿತ ಕವಿಯಾಗಿದ್ದರೂ ನವ್ಯದ ಧ್ವನಿ ಪ್ರವರ್ತಕರಾಗಿದ್ದರೂ ಕನ್ನಡಕ್ಕೆ ಮೊದಲು ನವ್ಯವನ್ನು ಪರಿಚಯಿಸಿದವರು ಗೋಕಾಕರೇ ಆಗಿದ್ದಾರೆ. ಖ್ಯಾತ ವಿಮರ್ಶಕರಾದ ಕೀರ್ತಿನಾಥ ಕುರ್ತುಕೋಟಿಯವರು ಗುರುತಿಸಿರುವ ಹಾಗೆ ಕನ್ನಡ ಸಾಹಿತ್ಯದಲ್ಲಿ ನವ್ಯದ ಆರಂಭ ಹೀಗಿದೆ. ''೧೯೫೦ರಲ್ಲಿ ನಡೆದ ಮುಂಬಯಿ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿಯ ಕವಿಗೋಷ್ಠಿಯ ಅಧ್ಯಕ್ಷರಾಗಿದ್ದ ವಿ.ಕೃ. ಗೋಕಾಕರು ನವ್ಯ ಕಾವ್ಯದ ಪ್ರಸ್ತಾಪವನ್ನು ಮಾಡಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಕವಿಗೋಷ್ಠಿಯ ಅಧ್ಯಕ್ಷ ಭಾಷಣವೆಂದ ಮೇಲೆ ನವ್ಯ ಕಾವ್ಯಕ್ಕೆ ಅಧಿಕೃತತೆ ಬರಲೇಬೇಕು. ಪರಿಷತ್ತು ಕನ್ನಡ ಸಾಹಿತ್ಯದ ಅಧಿಕೃತವಾದ ಸಂಸ್ಥೆ. ನವ್ಯ ಕಾವ್ಯದ ಮಟ್ಟಿಗೆ ಮಾತ್ರ ಸೀಮಿತಗೊಳಿಸಿಕೊಂಡು ಹೇಳುವುದಾದರೆ ಪರಿಷತ್ತಿನ ಹೊರಗೆ ಕೂಡಾ ನವ್ಯ ಕಾವ್ಯ ಹುಟ್ಟಿತು. ೧೯೫೦ರಲ್ಲಿ ಧಾರವಾಡದ ಮನೋಹರ ಗ್ರಂಥ ಭಂಡಾರದ ದ.ಬಾ. ಕುಲಕರ್ಣಿಯವರು 'ದೀಪದಾನ' ಎಂಬ ಒಂದು ದೀಪಾವಳಿ ಸಂಚಿಕೆಯನ್ನು ಪ್ರಕಟಿಸಿದರು. ಈ ಸಂಚಿಕೆಯಲ್ಲಿ ಗೋಪಾಲಕೃಷ್ಣ ಅಡಿಗರ ಹಿಮಗಿರಿಯ ಕಂದರ ಎಂಬ ಒಂದು ದೀರ್ಘ ಕವಿತೆ ಪ್ರಕಟವಾಯಿತು. ಅದರ ಮುಂದಿನ ವರ್ಷ ಅದೇ ದೀಪದಾನದಲ್ಲಿ ಅಡಿಗರ 'ಗೊಂದಲಾಪುರ' ಪ್ರಕಟವಾಯಿತು. ಈ ಎರಡೂ ಕವಿತೆಗಳು ಪ್ರತಿಕ್ರಿಯೆಗಳ ಅಲೆಗಳನ್ನೇ ಹುಟ್ಟುಹಾಕಿದವು. ಗೋಕಾಕರ ನವ್ಯ ಕವಿತೆಗಳು ಮರೆತು ಹೋಗುವಷ್ಟು ಈ ಕವಿತೆಗಳು ನವ್ಯವಾಗಿದ್ದವು.''[೧೧]

ನವ್ಯ ಎಂದರೆ ಹೊಸದು; ಇಂಗ್ಲಿಷಿನ Modernsim ಎಂಬ ಪದಕ್ಕೆ ಸಂವಾದಿಯಾಗಿ ಈ ಪದವನ್ನು ಕನ್ನಡದಲ್ಲಿ ಬಳಸಲಾಗುತ್ತದೆ. ಕನ್ನಡದಲ್ಲಿ ಮೊದಲು ನವ್ಯ ಕಾವ್ಯ ಪದ ಬಳಕೆಯಾಗಿರುವುದನ್ನು ಪ್ರೊ ಎಸ್.ಅನಂತನಾರಾಯಣ ಅವರು ಹೀಗೆ ಗುರುತಿಸಿದ್ದಾರೆ.

''ಏ ಮಾತೊ ನವ್ಯ ಕಾವ್ಯ ಕ
ಲಾ ಮಹಿಯೋಳ್ ಬಿಡದೆ ಬೀದಿವರಿವೊಡೆ ಮೊದಲೋಳ್ |
ನೇಮಿಯ ನೆಮ್ಮುಗೆಯಿಲ್ಲರೊ
ಡೀ ಮತ್ತಿನ ಕವಿ ಮನೋರಥಂ ನಡೆದಪುದೇ||

ಎಂಬ ಮಧುರ ಕವಿಯ ಪದ್ಯದಿಂದ ಬಂದುದು ಈ 'ನವ್ಯ ಕಾವ್ಯ' ಎಂಬ ಪದ, ಆದರೆ ಇದನ್ನು ಆಧುನಿಕ ಕನ್ನಡದಲ್ಲಿ ಈ ಅರ್ಥದಲ್ಲಿ ಮೊದಲು ಉಪಯೋಗಿಸಿದವರು ವಿ.ಕೃ.ಗೋಕಾಕರು. ಡಿಸೆಂಬರ್ ೧೯೫೦ರಲ್ಲಿ ಮುಂಬಯಿಯ ಕನ್ನಡ ಸಾಹಿತ್ಯ ಸಮ್ಮೇಳನದ ಕವಿಗೋಷ್ಠಿಯ ಅಧ್ಯಕ್ಷ ಭಾಷಣದಲ್ಲಿ''[೧೨] ಆದರೆ ಕೀರ್ತಿನಾಥ ಕುರ್ತುಕೋಟಿಯವರು ನವ್ಯ ಕಾವ್ಯದ ಆರಂಭವನ್ನು ಕುರಿತು ಹೀಗೆ ಹೇಳಿದ್ದಾರೆ. ''ಸೂಕ್ಷ್ಮವಾಗಿ ನೋಡಿದರೆ ನಮ್ಮಲ್ಲಿ ನವ್ಯತೆ, ಇಟಲಿಯ ನೃತ್ಯ ಮಂದಿರದಲ್ಲಿ ಹುಟ್ಟಿದ ಪೇಜಾವರ ಸದಾಶಿವರಾಯರ ಕಾವ್ಯದಿಂದ ಪ್ರಾರಂಭವಾಯಿತು ಎನ್ನಬಹುದು. 'ಲಾಃರೆಂಝೋ ಇಲ್ ಮನ್ನಿಫಿಕೊ' ಎಂಬ ನಾಟ್ಯಗೀತೆ ಹಾಗೂ 'ವರುಣ' ಎಂಬ ಕವಿತೆಗಳು ನವ್ಯ ಪ್ರಜ್ಞೆಯಲ್ಲಿ ಬರೆದವುಗಳಾಗಿವೆ.''[೧೩] ಹೀಗೆ ಆರಂಭವಾದ ನವ್ಯ ಸಾಹಿತ್ಯ ೧೯೫೦ ರಿಂದ ೧೯೮೦ರ ವರೆಗೆ ಸುಮಾರು ಮೂರು ದಶಕಗಳ ಕಾಲ ತನ್ನ ಪರಿಧಿಯನ್ನು ವಿಸ್ತರಿಸಿಕೊಂಡಿತು. ಹೀಗೆ ಹೊಸಗನ್ನಡ ಸಾಹಿತ್ಯದ ಪ್ರಮುಖ ಘಟ್ಟವಾದ ನವ್ಯ ಸಾಹಿತ್ಯದ ಪ್ರೇರಣೆ ಪ್ರಭಾವಗಳನ್ನು ಈ ರೀತಿಯಾಗಿ ಹೇಳಬಹುದು.

೧. ಬದಲಾವಣೆಯಾದ ಜೀವನಕ್ಕೆ ಬದಲಾದ ಕಾವ್ಯ

೨. ಇಂಗ್ಲೀಷ್ ಶಿಕ್ಷಣದ ಪ್ರೇರಣೆ ಪ್ರಭಾವ

೩. ಹಿಂದಿನ ಕಾವ್ಯದ ಸತ್ವ ಕಡಿಮೆಯಾಯಿತು ಎನ್ನುವ ಭಾವ

೪. ಭಾರತೀಯರ ವಿದೇಶಿ ಪ್ರವಾಸಗಳು

೫. ಪಾಶ್ಚಾತ್ಯ ಕವಿಗಳ ಪ್ರಭಾವ

೬. ಸ್ವಾತಂತ್ರ್ಯ ನಂತರದಲ್ಲಿದ್ದ ಬಡತನ ಮತ್ತು ಅಜ್ಞಾನ

೭. ನಗರೀಕರಣದ ಪ್ರಭಾವ

೮. ಮೊದಲನೆಯ ಮಹಾಯುದ್ಧದ ಪರಿಣಾಮಗಳು

೯. ಸ್ವಾತಂತ್ರ್ಯ ನಂತರದ ರಾಜಕೀಯ ಮತ್ತು ಸಾಮಾಜಿಕ ಸ್ಥಿತಿಗತಿಗಳು

ನವ್ಯ ಸಾಹಿತ್ಯ ತನ್ನ ಹಿಂದಿನ ನವೋದಯಕ್ಕಿಂತ ವಿಶಿಷ್ಟವಾದ ಲಕ್ಷಣಗಳನ್ನು ಮೈಗೂಡಿಸಿಕೊಂಡಿತು. ಅವುಗಳನ್ನು ಈ ರೀತಿಯಾಗಿ ಗುರುತಿಸಬಹುದಾಗಿದೆ.

೧. ನವ್ಯ ಸಾಹಿತ್ಯ ತನ್ನ ಹಿಂದಿನ ಸಾಹಿತ್ಯಕ್ಕಿಂತ ವಾಸ್ತವಿಕ ನೆಲಗಟ್ಟಿನ ಮೇಲೆ ರಚನೆಯಾಯಿತು.

೨. ಸಮಕಾಲೀನ ಸಮಸ್ಯೆಗಳೇ ಕಾವ್ಯದ ವಸ್ತುಗಳಾದವು.

೩. ವ್ಯಕ್ತಿಯ ವೈಯಕ್ತಿಕ ಸಮಸ್ಯೆಗಳಿಗೆ ಪ್ರಾಮುಖ್ಯತೆ ನೀಡಲಾಯಿತು.

೪. ಭಾಷೆ ಸರಳವಾಗಿತ್ತು ಪ್ರಾಸ ಛಂದಸ್ಸುಗಳಿಂದ ಮುಕ್ತಿ ಪಡೆಯಿತು.

೫. ಮಾನವನ ಬದುಕಿನ ಸಮಗ್ರ ಸಮೀಕ್ಷೆ ನಡೆಸಲು ಪ್ರಯತ್ನಿಸಿತು.

೬. ವೈಚಾರಿಕತೆಯೇ ಇಲ್ಲಿ ಪ್ರಧಾನವಾಗಿದೆ.

೭. ಈ ಸಾಹಿತ್ಯದಲ್ಲಿ ಕಂಡುಬರುವ ನಾಯಕ ದುರ್ಬಲ, ಅಂತರ್ಮುಖಿ ಮತ್ತು ಸೂಕ್ಷ್ಮ ಸಂವೇದನಾಶೀಲವುಳ್ಳವನು.

ಕಾವ್ಯ, ಕಥೆ, ಸಾಹಿತ್ಯ, ಕಾದಂಬರಿ, ವಿಮರ್ಶೆಯ ಪ್ರಕಾರಗಳಲ್ಲಿ ನಾವು ಸಾಧ್ಯತೆಯನ್ನು ಕಾಣಬಹುದಾಗಿದೆ. ವಿದೇಶಿ ಲೇಖಕರುಗಳಾದ ಎಜ್ರಾಪೌಂಡ್, ಟಿಎಸ್.ಎಲಿಯಟ್, ಆಲ್ಬರ್ಟ್‌ಕಮು, ಕಾಫ್ಕ, ಜೀನ್‌ಪಾಲ್ ಪಾತ್ರೆ, ರಿಚರ್ಡ್ಸ್, ಲೀವೀಸ್, ಮುಂತಾದವರ ಪ್ರಭಾವವು ಕನ್ನಡ ಸಾಹಿತಿಗಳ ಮೇಲೆ ಆಯಿತು. ಅನಂತಮೂರ್ತಿ, ಗೋಕಾಕ, ಗೋಪಾಲಕೃಷ್ಣ ಅಡಿಗ ಲಂಕೇಶ, ಶಾಂತಿನಾಥ ದೇಸಾಯಿ, ಕೃಷ್ಣ ಆಲನಹಳ್ಳಿ, ಪೂರ್ಣಚಂದ್ರ ತೇಜಸ್ವಿ, ಎ.ಕೆ.ರಾಮಾನುಜಂ, ಕೆ.ವಿ.ತಿರುಮಲೇಶ, ಚಂದ್ರಶೇಖರ ಪಾಟೀಲ, ಗಿರಡ್ಡಿ ಗೋವಿಂದರಾಜು, ಜಿ.ಎಸ್.ಆಮೂರ, ಗಿರೀಶ್ ಕಾರ್ನಾಡ, ಜಿ.ಎಚ್.ನಾಯಕ, ಸಿದ್ಧಲಿಂಗ ಪಟ್ಟಣಶೆಟ್ಟಿ, ಚೆನ್ನಯ್ಯ ಮುಂತಾದವರು ಈ ಪ್ರಮುಖ ನವ್ಯ ಸಾಹಿತಿಗಳಾಗಿದ್ದಾರೆ.

ಹೀಗೆ ಹೊಸಗನ್ನಡ ಸಾಹಿತ್ಯ ವೈವಿಧ್ಯಮಯವಾಗಿದ್ದು, ಸಾಹಿತ್ಯಕ್ಕೆ ಉತ್ತಮ ಕೃತಿಗಳನ್ನು ನೀಡಿದೆ. ಭಾರತದ ಯಾವುದೇ ಭಾಷೆಯ ಹೊಸ ಸಾಹಿತ್ಯಕ್ಕಿಂತ ಒಂದೆಜ್ಜೆ ಮುಂದೆಯೇ ಇದೆ. ನವೋದಯದ ನಾಲ್ಕು ಲೇಖಕರಿಗೆ ನವ್ಯದ ಮೂರು ಲೇಖಕರಿಗೆ ಜ್ಞಾನಪೀಠ ಪ್ರಶಸ್ತಿ ದೊರಕಿರುವುದೇ ಇದಕ್ಕೆ ಸಾಕ್ಷಿ. ಪ್ರೊ.ಎಸ್.ಅನಂತನಾರಾಯಣ ಅವರು ಹೊಸಗನ್ನಡ ಕಾವ್ಯವನ್ನು ಕುರಿತು ಹೇಳುವಹಾಗೆ ''ಆಧುನಿಕ ಕನ್ನಡ ಕಾವ್ಯ ಮಿಶ್ರವಿವಾಹದ ಸಂತತಿ. ಕನ್ನಡ ಚೇತನ ಅದರ ತಂದೆಯಾದರೂ ಆಂಗ್ಲ ಕಾವ್ಯ ಅದರ ತಾಯಿ. ಈ ಕಾವ್ಯದ ಇತಿಹಾಸವನ್ನು ಬರೆಯುವಾಗ ಕೆಲವರು ತಂದೆಯ ಪುಣ್ಯವನ್ನು ಅತಿಶಯೀಕರಿಸಿದರೆ ಹಲವರು ತಾಯಿಯ ಋಣವನ್ನು ಒತ್ತಿ ಹೇಳುವ ಸಂಭವವಿದೆ. ಈ ಪುಣ್ಯ ಋಣಗಳನ್ನು ಸರಿಯಾಗಿ ತೂಗಿ ನೋಡುವುದು ವಿಮರ್ಶಕನ ಕರ್ತವ್ಯವಾಗಿದೆ''.[೧೪]

ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರು ನವ್ಯ ಸಾಹಿತ್ಯದ ಪ್ರಮುಖ ಕವಿಗಳಲ್ಲಿ ಒಬ್ಬರಾಗಿದ್ದಾರೆ. ಮಣ್ಣಿನ ವಾಸನೆ ಕಾವ್ಯದಲ್ಲಿ ಅಡಕವಾಗಿರಬೇಕು. ಪ್ರತಿಯೊಬ್ಬ ವ್ಯಕ್ತಿಯ ಬದುಕೂ ಅವರ ಪಾಲಿಗೆ ದೊಡ್ಡದೇ ಆಗಿರುತ್ತದೆ. ಆದ್ದರಿಂದ ಬದುಕನ್ನು ಮತ್ತು ಸಮಾಜವನ್ನು ಪ್ರತಿಬಿಂಬಿಸುವುದೇ ನವ್ಯ ಕಾವ್ಯದ ಪ್ರಮುಖ ವಿದೇಶಗಳಲ್ಲಿ ಒಂದಾಗಿದೆ. ಅದನ್ನು ನಾವು ಪಟ್ಟಣ ಶೆಟ್ಟಿಯವರ ಕಾವ್ಯಗಳಲ್ಲಿ ಕಾಣಬಹುದು. ಅವರ ವೈಯಕ್ತಿಕ ಬದುಕು; ಮತ್ತು ಸಮಾಜದ ಬದುಕು ಕಾವ್ಯವಾಗಿ ಮೂಡಿಬಂದಿದೆ. ಗದುಗಿನ ತೋಂಟದ ಸಿದ್ಧಲಿಂಗ ಸ್ವಾಮಿಗಳು ಅಭಿಪ್ರಾಯ ಪಡುವಹಾಗೆ ಸಿದ್ಧಲಿಂಗ ಪಟ್ಟಣಶೆಟ್ಟರು ''ಯಾವ ಸದ್ದು ಗದ್ದಲವಿಲ್ಲದೆ ಬದುಕಿನ ಲಯವನ್ನಾಲಿಸುತ್ತಾ ಅದನ್ನು ಬರಹಕ್ಕಿಳಿಸುವ ಅವರು ಅನನ್ಯ ಶೈಲಿಯ ಕವಿ, ಸಾಮಾನ್ಯವಾಗಿ ಸಾಹಿತ್ಯಿಕ ಚಳುವಳಿಯ ಅವಸ್ಥಾಂತರಗಳಿಗೆ ಒಳಗಾಗಿ ಕವಿಗಳೂ ಬದಲಾಗುವುದು ಸಹಜ. ಆದರೆ ಶೆಟ್ಟರು ಎಲ್ಲ ಸಾಹಿತ್ಯಕ ಚಳುವಳಿಯ ಪ್ರಭಾವಗಳನ್ನು ಅರಗಿಸಿಕೊಂಡು ತಮ್ಮ ಮೂಲದ್ರವ್ಯಕ್ಕೆ ನಿಷ್ಠರಾಗಿ ಕಾವ್ಯವನ್ನು ಸೃಜಿಸುತ್ತಿದ್ದಾರೆ. ಹೀಗಾಗಿ ಅವರ ಕಾವ್ಯದಲ್ಲಿ ಸಾಹಿತ್ಯದ ಅವಸ್ಥಾಂತರಗಳಿಗಿಂತ ಬದುಕಿನ ಅವಸ್ಥಾಂತರವೇ ಹೆಚ್ಚು ದಟ್ಟವಾಗಿ ಚಿತ್ರಿತವಾಗಿದೆ. ಅಂತೆಯೇ ಶೆಟ್ಟರ ಕಾವ್ಯದಲ್ಲಿ ಪೌರಾಣಿಕ ಐತಿಹ್ಯಗಳು ಪ್ರತಿಮೆಗಳಾಗಿ ಬರುವುದು ಇಲ್ಲವೇ ಇಲ್ಲವೆನ್ನುಷ್ಟು ಕಡಿಮೆ. ಅವರು ಎತ್ತಿದ್ದು, ಬಿತ್ತಿದ್ದು, ಬೆಳೆದದ್ದು, ಪಡೆದದ್ದು ಎಲ್ಲವೂ ಈ ಬದುಕಿನಿಂದಲೇ.''[೧೫] ಬದುಕು ಎಂದ ಮೇಲೆ ಅಲ್ಲಿ ಎಲ್ಲವೂ ಇರುತ್ತದೆ. ನೆನಪು, ದೇಶಪ್ರೇಮ, ಪ್ರೀತಿಗಳು ಸಹಜವಾಗಿರುತ್ತವೆ. ಆದರೆ ಪಟ್ಟಣಶೆಟ್ಟಿಯವರ ಕವನಗಳ ಸ್ಥಾಯಿ, ವಿರಹ-ವೇದನೆಗಳೇ ಆಗಿವೆ. ಹದಿಮೂರು ಕವನ ಸಂಕಲನಗಳನ್ನು ಬರೆದಿರುವ ಪಟ್ಟಣಶೆಟ್ಟಿಯವರ ಕವನಗಳು ವೇದನೆ-ನೋವುಗಳೇ ಹೆಚ್ಚಾಗಿ ಒಳಗೊಂಡಿದ್ದರೂ ಕಾವ್ಯಗಳಾಗಿ ಗೆದ್ದಿವೆ. ಒಂದೇ ಭಾವವನ್ನು ಭಾಷೆಯಲ್ಲಿ ಅಭಿವ್ಯಕ್ತಪಡಿಸಿ ಕನ್ನಡ ಭಾಷೆಯನ್ನು ದುಡಿಸಿಕೊಂಡಿರುವ ಇವರ ಸೃಜನಶೀಲ ಶಕ್ತಿ ಮೆಚ್ಚುವಂತಹದಾಗಿದೆ.

''ವೇದನೆಯ ಅತಿಚಹವ ಮಿತಿಮೀರಿ ಕುಡಿದು
ವ್ಯಥೆಯ ಕತೆಯನು ಕಕ್ಕಿ
ಅಗ್ನಿಮಂಚದ ಮೇಲೆ ವಿಶ್ರಾಂತಿ ಹೊಂದಿದರೆ
ನಾನು ಕಕ್ಕಾವಿಕ್ಕಿ
ನೀನೊ ರೆಕ್ಕೆಯಿಲ್ಲದ ಹಕ್ಕಿ !''[೧೬]

(ಸಮತೆ)

''ಚಿಂತೆಯನು ಉಟ್ಟು, ತೊಟ್ಟು, ತಿಂದು ಕುಡಿದು
ಇನ್ನೇನು ಉಳಿದಿಹುದು ಮತ್ತೆ ಹೊರಚೆಲ್ಲಿ''೧೭

(ಶಿಕಾರಿ)

''ಸುಖದ ಕಸ ಕಿತ್ತೆಸೆದು
ನನ್ನ ಬೆವರಲಿ ಕುದಿವ ಅನ್ನಕ್ಕೆ ಕಾಯುತಿಹೆ...
ಹಂತಿ ಹೊಡೆಯುತಲಿರುವ ದಿನದ ದನಗಳ ಕಟ್ಟಿ
ನೆನಪುಗಳ ಪೈಯರನ್ನು ತುಳಿಸುತಿರುವೆ''೧೮

(ಮಳೆಗಾಲ)

''ಕಾಳರಾತ್ರಿಯನ್ನರೆದು ಕುಡಿದು
ವೀರ್ಯಸಾಗರವೇ ಸ್ಖಲಿತವಾಗಿ ಇಚ್ಚೆ
ಮುಕ್ಕಾಗಿ, ಮಚ್ಚೆಯ ಕೊಳಕು ಅಟ್ಟೆಯಾಗಿ
ಗರಿಸುಟ್ಟ ಹದ್ದಾಗಿ ಮಣ್ಣು ಮುಕ್ಕಿದವ
ನಾನು''೧೯

(ನಾನು)

ಹೀಗೆ ಪಟ್ಟಣಶೆಟ್ಟರ ಅನೇಕ ಕವನಗಳು ವೇದನೆಯನ್ನು ಕಾವ್ಯದ ಸ್ಥಾಯಿಯನ್ನಾಗಿ ಮಾಡಿಕೊಂಡು ರಚನೆಯಾಗಿವೆ. ಪಟ್ಟಣಶೆಟ್ಟರ ಮೊದಲ ಕವನ ಸಂಕಲನಾ 'ನೀನಾ' ಪ್ರಕಟವಾಗಿದ್ದು ೧೯೬೪ರಲ್ಲಿ ಈ ಸಂಕಲನದಲ್ಲಿ ಒಟ್ಟು ೬೨ ಕವನಗಳಿವೆ. ಇಲ್ಲಿಯ ಎಲ್ಲಾ ಕವನಗಳು ನೀನು ಮತ್ತು ನಾನು ಎರೆಡು ಭಾವಗಳನ್ನು ಇಟ್ಟುಕೊಂಡು ರಚನೆಯಾಗಿವೆ. ಕವನ ಸಂಕಲನದ ಶೀರ್ಷಿಕೆ 'ನೀನಾ' ಎಲ್ಲಾ ೬೨ ಕವನಗಳನ್ನು ಪ್ರತಿನಿಧಿಸುತ್ತವೆ. ಈ ರೀತಿ ಹೊಸಗನ್ನಡ ಸಾಹಿತ್ಯದಲ್ಲಿ ಬಂದದ್ದು ಬಹಳ ಕಡಿಮೆ. ಈ ಸಂಕನದಲ್ಲಿ 'ನೀನಾ' ಪದವು ಹಲವಾರು ರೀತಿಯಲ್ಲಿ ಬಳಕೆಯಾಗಿದೆ. ಪ್ರಶ್ನಾರ್ಥಕವಾಗಿ ಕಾರಕಾರ್ಥವಾಗಿ, ಕಾರಣಾರ್ಥವಾಗಿ, ಭಾವಸೂಚಕವಾಗಿ ಇನ್ನು ಮುಂತಾದ ರೀತಿಯಲ್ಲಿ ಬಳಕೆಯಾಗಿರುವುದು ಈ ಸಂಕಲನದ ವಿಶಿಷ್ಟತೆಯಾಗಿದೆ. ಪಟ್ಟಣಶೆಟ್ಟರ ಕಾವ್ಯದ ಸ್ಥಾಯಿಯಾದ ನೋವು ಕಾವ್ಯವಾಗಿ ಅಭಿವ್ಯಕ್ತವಾಗುವ ಬಗೆ ಉತ್ತಮವಾಗಿದೆ. ಪಟ್ಟಣಶೆಟ್ಟರು ಮೂಲತಃ ಕವಿಗಳೂ; ಹಿಂದಿ ಪ್ರಾಧ್ಯಾಪಕರು ಆದ ಕಾರಣ ಇವರ ಕಾವ್ಯಗಳಿಗೆ ಕಾವ್ಯದ ಭಾಷೆಗೆ ಹಿಂದಿ ಭಾಷೆಯ ಕೋಮಲತೆ ಪ್ರಾಪ್ತವಾಗಿದೆ.

ನನ್ನೆದೆಯ ಕಳವಳದ
ತಳಮಳವನ್ನೆಲ್ಲ ಹರಿವಿಬಿಟ್ಟಿದ್ದೇನೆ.
ಮಾರಲಿಟ್ಟಿದ್ದೇನೆ ಕೊಳ್ಳುವಿರಾ ?

ನನ್ನ ನಂಬಿಕೆ ಸಾಚಾತನ

ಮುಗ್ಧತೆ ಕಣ್ಣಾಲಿಗಳ ಮಿಂಚ ಮಾರಬೇಕೆಂದಿರುವೆ

ಕೊಳ್ಳುವಿರಾ.

ಓದುಗರೊಡನೆ ವಾಗ್ವಾದಕ್ಕೆ ನಿಲ್ಲದೆ ಒಂದು ಬಗೆಯ ಸಲಿಗೆಯ ಸಾಚಾತನ ಆತ್ಮಾನುಸಂಧಾನಕ್ಕೆಳೆಸುವ ಶೈಲಿಯನ್ನು ಇಲ್ಲಿ ಕಾಣಬಹುದಾಗಿದೆ.

ಬದುಕು ಅರ್ಥಪೂರ್ಣವಾದುದೆಂಬ ಅಭಿಪ್ರಾಯವನ್ನು ನವೋದಯ ಸಾಹಿತ್ಯವು ಹೊಂದಿತ್ತು. ಆದರೆ ನವ್ಯ ಸಾಹಿತ್ಯ ಬಾಳು ಸ್ವೀಕಾರಾರ್ಹ ಎಂಬುದನ್ನು ಒಪ್ಪುವುದಿಲ್ಲ. ಇಲ್ಲಿ ವ್ಯಕ್ತಿ ನಿಷ್ಠೆಯೇ ಮುಖ್ಯ. ನವ್ಯ ಸಾಹಿತ್ಯವು ಬದುಕಿನ ಸಂಕೀರ್ಣತೆಯ ಆಯಾಮಗಳನ್ನು ವಿಶ್ಲೇಷಣೆಮಾಡುತ್ತದೆ. ಇದು ಬದುಕಿನ ಜಟಿಲತೆಯ ಹಿನ್ನೆಲೆಯಲ್ಲಿ ಉದಾತ್ತ, ಸಂದೇಹ, ಉಲ್ಲಾಸ ಮತ್ತು ಆತಂಕಗಳಿಗೆ ಪ್ರಜ್ಞಾವಂತ ಮನಸ್ಸನ್ನು ಮತ್ತು ಅಂತಹ ವ್ಯಕ್ತಿತ್ವವನ್ನು ಕಾಣಬಹುದು. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಈ ಹಿನ್ನೆಲೆಯಲ್ಲಿ ತಮ್ಮ ಕಾವ್ಯ ರಚನಾ ವಿಧಾನವನ್ನು ಹೊಸ ಬೆಳಕಿಗೆ ಒಡ್ಡಿ ದುಃಖ ದುಃಖವನ್ನಪ್ಪಿ ಸುಖವಾಗಿ ತನ್ನ ದಾರಿಯಲ್ಲಿಯೇ ಸಾಗುವಂತೆ ಇವರ ಕವಿತೆಗಳು ಸಾಗಿಬಂದಿವೆ. ಇವರ ಕವನಗಳಲ್ಲಿ ಬರುವ ನಾನು ಎನ್ನುವ ಆತ್ಮವಿಮರ್ಶಾ ಕವನಗಳು ಬದುಕಿನ ಸಂಕೀರ್ಣತೆಯನ್ನು ಕುರಿತು ಸುಂದರವಾಗಿ ಹೇಳುತ್ತವೆ.

''ಉದ್ಗಾರವಾಚಕವೇ ಕಾವ್ಯ

ವೆಂದವ,

ಪೆಂಡಿ ಪೆಂಡಿ ಅನುಭವ ತಂದು

ಹರವಿ ಚೆಲ್ಲಾಪಿಲ್ಲಿ ಮನಬಂದಂತೆ

ಪ್ರತಿಮೆ - ಶಬ್ಧಬಣವೆಯ ಮೇಲೆ

ಏನೇನೂ ಗೊಣಗುತ್ತ ವಟಗುಟ್ಟುತ್ತಾ ಹೊರಳಾಡಿದವ.

ವೇದನೆ ಚರಕಿ - ಚಪ್ಪಲಿ ಮೆಟ್ಟಿ

ಹರಗಾಡಿ ದಣಿಯದವ,

ಅನ್ನ ಬಿಟ್ಟು

ಜೀವಂತ

ಪ್ರೀತಿಸೆನ್ನನೆಂದು

ಪ್ರೀತಿಯನ್ನೇ ಕಾಡಿ ಬೇಡಿದವ''[೨೦]

ತನ್ನ ಹಾದಿಯನ್ನು ಕಂಡುಕೊಳ್ಳುವ ಕವಿಯ ಸಂಕಲ್ಪಕ್ಕೆ ಇಲ್ಲಿ ಮೂರ್ತ ಸ್ವರೂಪ ಒದಗಿದೆ. ಯಾವುದೇ ಒಂದು ಮಾದರಿಯ ಕಾವ್ಯ ತಂತ್ರಕ್ಕೆ ಈ ಕವಿ ಮಾರು ಹೋಗದೆ, ತಮ್ಮ ಅಭಿವ್ಯಕ್ತಿಗೆ ಅನಿವಾರ್ಯವಾದ ರೀತಿಯನ್ನು ಶೋಧಿಸಿ ಸಾಧಿಸಿಕೊಂಡಿರುವುದು ಇವರ ಕವಿತೆಯ ಹೆಚ್ಚಳವೆಂದೇ ಹೇಳಬಹುದು.

ಪಟ್ಟಣಶೆಟ್ಟರ ಕವಿತೆಗಳಲ್ಲಿ ವಿರಹ ಗೀತೆಗಳು ಹೆಚ್ಚಾಗಿವೆ. ಕವಿಗಳದು ಮುಗ್ಧ ಮನಸ್ಸು, ನಿರ್ಮಲ ಮನಸ್ಸಿನಿಂದ ಪ್ರೀತಿಸುತ್ತಾರೆ. ಪ್ರೀತಿ ವಿಫಲವಾದಾಗ ನೋವು ಅನುಭವಿಸುತ್ತಾರೆ. ಕವಿ ಅನುಭವಿಸುವ ವೇದನೆಗಳು, ಒಂದಾಗುವುದಕ್ಕೆ ಮಾಡಿದ ವಿಫಲ ಯತ್ನಗಳು ಕಾರ್ಯ ಸಾಧನೆಯಾಗದಿದ್ದಾಗ ಅವರಲ್ಲಿ ಉಂಟಾಗುವ ಭಿನ್ನಾಭಿಪ್ರಾಯಗಳು ಮುಂತಾದ ಚಿತ್ರಗಳನ್ನು ನಾವು ಇವರ ಕವನಗಳಲ್ಲಿ ಕಾಣುತ್ತೇವೆ. ಜೊತೆಗೆ ಈ ಅಗಲಿಕೆಗೆ ಕಾರಣವೇನು ಎಂಬುದರ ಜಿಜ್ಞಾಸೆಯೂ ಇಲ್ಲಿ ನಡೆಯುತ್ತದೆ. ಕವಿಗೆ ತಾಯಿಯಾಗಿ, ಹೆಂಡತಿಯಾಗಿ, ಪ್ರೇಯಸಿಯಾಗಿ, ಮಗಳಾಗಿ ಹೆಣ್ಣು ಅವಶ್ಯಕವಾಗಿ ಬೇಕು. ಹೆಣ್ಣು ಎಷ್ಟೇ ಸರಳ, ನೇರ ಅಂದರೂ ಕೂಡ ಅವಳೊಂದು ಕಗ್ಗಂಟು, ಅರ್ಥವೇ ಆಗದವಳು ಎಂಬಭಾವ ಇವರ ಕವಿತೆಗಳಲ್ಲಿದೆ. ಹೆಣ್ಣಿನ ಮೇಲಿನ ವ್ಯಾಮೋಹ, ಅದನ್ನು ಕುರಿತ ಜಿಜ್ಞಾಸೆ ಪಟ್ಟಣಶೆಟ್ಟರ ಕವನಗಳಲ್ಲಿ ಮಡುಗಟ್ಟಿ ನಿಂತಿದೆ. ಅದಕ್ಕೆ ಕವಿ ಹೇಳುತ್ತಾರೆ. ಪ್ರೀತಿಯೊಂದೇ ಹೌದು ಪ್ರಣಯವೊಂದೇ ಕಾವ್ಯವಾಗುವ ಕಾವು ಪಡೆದಿಹುದು ಎನ್ನುತ್ತಾರೆ. ಕವಿತೆ ಬರೆಯಲು ಈ ಹಾಳು ಹುಡುಗಿಯರೇ ಬೇಕೆ? ಎಂದು ಪ್ರಶ್ನಿಸುತ್ತಾರೆ. ಬೇರೆ ವಿಷಯವನ್ನು ಕುರಿತು ಕವಿತೆ ಬರೆಯ ಹೊರಟರೂ ಅವರಿಗೆ ಸಾಧ್ಯವಾಗುತ್ತಿಲ್ಲ. ಕವಿಗಳ ದೃಷ್ಟಿಯಲ್ಲಿ ಹೆಣ್ಣು ನೋವು ನಲಿವಿನ ನಾಡಿಯನ್ನು ಮಿಡಿಯುವ, ಎದೆಯ ಮಿಡಿತಗಳನ್ನು ಹಿಡಿದಿಡುವ ಹಾಗೂ ಮಧುರ ಆಕರ್ಷಣೆಯ ಹೊಳಪು ಅವಳು ನಿತ್ಯವಾಹಿನಿ,

''ಹೆಣ್ಣು
ನನಗೆ ಮೋಹಗಳ ಮಧುರ ಆಕರ್ಷಣೆ
ಬಣ್ಣಗಳೆ ತುಂಬಿರುವ ಐಂದ್ರಜಾಲಿಕ ಣ್ಣು
ಎತ್ತಬೇಕಾದತ್ತ ಹೊರಳಿ ಮರಳಿನಲ್ಲೂ
ನಿತ್ಯ ಚಿತ್ತಾರಗಳ ಬರೆವ ದೀರ್ಘವಾಹಿನಿ
ಸದಾಯೌವನೆ ನದಿ''[೨೧]

(ಹೆಣ್ಣು)

ಆಧುನಿಕ ಜೀವನ ಶೈಲಿಯಲ್ಲಿ ಕೌಟುಂಬಿಕ ಸಂಬಂಧಗಳು ಸಡಿಲವಾಗುತ್ತಲಿವೆ. ಕವಿಯ ಎಲ್ಲಾ ನೋವುಗಳ ಹಿಂದೆ ಹೆಣ್ಣಿದ್ದಾಳೆ. ಇಂದು ದಾಂಪತ್ಯ ಜೀವನ ಸುಂದರವಾಗಿ ಉಳಿಯುವುದು ಕಷ್ಟವಾಗಿದೆ. ಈ ವಿಚಾರದಲ್ಲಿ ಕವಿ ಇದಕ್ಕಾಗಿ ವ್ಯಥೆಪಡುತ್ತಾರೆ. ಎಷ್ಟೇ ಕಷ್ಟವಾದರೂ ಸರಿ ಹೊಂದಾಣಿಕೆ ದಾಂಪತ್ಯ ಜೀವನದಲ್ಲಿ ಮುಖ್ಯ. ಸಂತೃಪ್ತಿಯ ಸಮಾಧಾನದ ಜೀವನಕ್ಕೆ ಹೆಂಡತಿ ಬೇಕೆ ಬೇಕು. ಆದರೆ ಹೆಂಡತಿ ಜೀವನದಲ್ಲಿ ಅಪಶೃತಿಯಾಗಿ ಬಂದರೆ ಅದು ಅವರ ಕರ್ಮ ಎಂದು ವ್ಯಂಗ್ಯದಿಂದ ಹೇಳುತ್ತಾರೆ.

''ಮರಣ ಮಹಾನವಮಿ ಶರಣರಿಗೆ
ಮದುವೆ ಮಹಾಮರಣಾ
ನಮ್ಮಂಥ ವ್ಯಥಾಕರಣರಿಗೆ
ಹೆಂಡತಿ ನೂರು ನೋವು

ಗಳಲ್ಲಿ ಒಂದು ಅಲ್ಲ. ನೂರು
ನೋವುಗಳ ಒಂದು ಬೆಲ್ಲ.
ಗಂಡ ಹೆಂಡತಿಯ ಸಂಬಂಧಗಳ ಸೌಧ
ಎಷ್ಟು ಬೇಗ ಕುಸಿಯುತ್ತವೆ ಹುಸಿಯಾಗುತ್ತವೆ.
ಈ ಸನಾತನ ಪ್ರಬದ್ಧ ಮಣ್ಣಿನಲಿ
ಹುಣ್ಣಾಗಿ ಕೊಳೆಯುತ್ತವೆ. ವಿಧವಿಧ
ವಿಧಿಯಾಗಿ ಅಳಿಯುತ್ತವೆ.''[೨೨]

ಹೀಗೆ ಹೆಣ್ಣನ್ನು, ಹೆಂಡತಿಯನ್ನು ಕುರಿತು ಬರೆಯುವ ಪಟ್ಟಣಶೆಟ್ಟರು ಹನಿಗವಿತೆಗಳಲ್ಲಿಯೂ ಪ್ರೀತಿ, ಹೆಣ್ಣನ್ನು ಕುರಿತು ಹೇಳಿದ್ದಾರೆ. ಹೆಣ್ಣು ಸಮಸ್ಯೆಗಳ ಸೃಷ್ಟಿಕರ್ತಳುಮಾತ್ರವಲ್ಲ. ಅವಳು ಅವುಗಳ ಅಕ್ಷಯಪಾತ್ರೆಯಾಗಿದ್ದಾಳೆ ಎಂಬುದು ಕವಿಗಳ ಅಭಿಪ್ರಾಯ.

''ಹೆಣ್ಣು
ಸಮಸ್ಯೆಯ ನೆಗೆಟಿವ್
ಎಷ್ಟು ಪ್ರತಿ ಮುದ್ರಿಸಿದಾರೇನು
ಬೃಹತ್ತಿಸಿದರೇನು
ಹಂಬಲ ರಸಾಯನ ತಿಕ್ಕಿದಷ್ಟೂ
ಅದೇ ಸ್ಪಷ್ಟ ಚಿತ್ರ ಇನ್ನೇನು''[೨೩]

(ಹೆಣ್ಣು)

''ಶುದ್ಧವಾದ ಸಿದ್ಧ ಚಹ ನಾನು
ನನ್ನೊಳಗಿನ ಚಹ ಹಾಲು ನೀರು ಸಕ್ಕರೆ
ಬೇರ್ಪಡಿಸುವುದು ಸಾಧ್ಯವಿಲ್ಲ
ನಿನಗೂನು''[೨೪]

(ಸಿದ್ಧ ಚಹಾ)

''ಅವಳ ಗಲ್ಲದ ಮೇಲೆ
ನಗೆಯು ಸಿಂಗರಿಸಿಟ್ಟು
ಇಂದು ಅಳುತ್ತಿದ್ದೇನೆ.''[೨೫]

(ಅವಳಗಲ್ಲ)

ನವ್ಯದ ಒಂದು ಸಂದರ್ಭದಲ್ಲಿ ನವೋದಯದ ಸೌಂದರ್ಯಾನುಭೂತಿ ಕಡಿಮೆಮಾಡಿ, ಮೌಲ್ಯ ಮತ್ತು ಬದುಕನ್ನು ಮಾತ್ರ ಬರಿಯಬೇಕೆಂಬ ಆಶಯ ವ್ಯಕ್ತವಾದಾಗ ಚಂದ್ರಶೇಖರ ಪಾಟೀಲರು ನಾವು ಹೆಣ್ಣಿನ ಬಗ್ಗೆ, ತಾರೆಯ ಬಗ್ಗೆ,

ಹೂವಿನ ಬಗ್ಗೆ ಬರೆಯುವುದು ಬೇಡ ಎಂದು ಹೇಳುವುದು ಬೇಡ. ಗೆಳೆಯ ಎಂಬ ಕವನ ರಚಿಸಿರುವ ಈ ಕಾಲದಲ್ಲಿಯೇ ಪಟ್ಟಣಶೆಟ್ಟರು ಸ್ತ್ರೀ ಕೇಂದ್ರಿತ ಕವನಗಳನ್ನು ಹೆಚ್ಚಾಗಿ ಬರೆದರು.

ವೈಯಕ್ತಿಕ ಕಾಳಜಿ ನವ್ಯದ ಪ್ರಮುಖ ಅಂಶಗಳಲ್ಲಿ ಒಂದು. ಪಟ್ಟಣಶೆಟ್ಟರು ತಮ್ಮ ಮನದ ತುಡಿತಗಳನ್ನು, ಆಸೆನಿರಾಸೆಗಳನ್ನು, ಕಲ್ಪನೆಗಳ ಕನಸುಗಳ ಸಾಕ್ಷಾತ್ಕಾರಕ್ಕಾಗಿ ಹಂಬಲಿಸುವ ಭಾವನಾ ತೀವ್ರತೆಯನ್ನು ಸಹಜ ಶೈಲಿಯಲ್ಲಿ ಅಭಿವ್ಯಕ್ತಪಡಿಸಿದರು. ವೈಯಕ್ತಿಕ ಅನಿಸಿಕೆಗಳನ್ನು ಸಾರ್ವತ್ರಿಕ ಸ್ತರಕ್ಕೆ ತಂದು ನಿಲ್ಲಿಸುವ ಶಕ್ತಿ ಇವರ ಕವನಗಳಾಗಿವೆ. ಇವರ ಹಲವಾರು ಕವನಗಳನ್ನು ಓದಿದಾಗ ಸಹೃದಯಿಯಾದವನು ಅದು ತನ್ನದೇ ಅನುಭವ ಆಗಿದೆಯೇನೋ ಎಂಬ ಅನುಭವಕ್ಕೆ ಒಳಗಾಗುತ್ತಾನೆ. ಈ ಪರಿಣಾಮ ಉಂಟಾಮಾಡುವ ಶಕ್ತಿ ಇವರ ಕವನಗಳ ಸಂಫಲತೆ ಮತ್ತು ಸಾರ್ಥಕತೆಯಲ್ಲಿ ಅಡಗಿದೆ. ಪಟ್ಟಣಶೆಟ್ಟರ ಆರಂಭದ ಕವನಗಳಿಗೆ ಪ್ರತಿಕ್ರಿಯಿಸಿರುವ ಪ್ರೊ. ಅಬ್ದುಲ್ ಮಜಿದ್ ಖಾನ್ ಅವರು ಹೇಳುವ ಹಾಗೆ. ''ಕವಿಯ ಅನಿಸಿಕೆ ಆವೇಶ ಮತ್ತು ಭಾವನೆಗಳ ಉತ್ಕಟತೆಗಳನ್ನು ಅಭಿವ್ಯಕ್ತಿಗೊಳಿಸಲು ಕವಿ ಸೃಷ್ಟಿಸಿರುವ ಉಪಮೆಗಳು, ಪ್ರತಿಮೆಗಳು (Imagery) ಮತ್ತು ಪ್ರತೀಕಗಳು ಸಮರ್ಪಕವಾಗಿರುವುದು ಕವಿಯ ಪ್ರತಿಭೆಯ ಉತ್ತಮ ನಿದರ್ಶನಗಳು. ಇತರ ಎಷ್ಟೋ ಜನ ಕವಿಗಳಲ್ಲಿ ಕಂಡುಬರುವಂತೆ ತೊದಲುತ್ತ, ಎಡವುತ್ತ ಸಾಗಿ ಕ್ರಮೇಣ ಒಳ್ಳೆಯ ಕವನ ರಚನೆಯ ಹಂತವನ್ನು ತಲುಪುವ ತೊಂದರೆಯಿಂದ ಸಿದ್ಧಲಿಂಗ ಪಟ್ಟಣಶೆಟ್ಟಿ ಅವರ ಕಾವ್ಯ ಸೃಷ್ಟಿ ಮುಕ್ತವಾಗಿದೆ. ಅವರ ಕವಿತಾ ಕಲೆ ಆರಂಭದಿಂದಲೇ ಒಳ್ಳೆಯ ಗುಣವಟ್ಟಗಳನ್ನು ಹೊಂದಿದುದಾಗಿದೆ.'Great poetry Communicates even before it is under stood' (ನಮಗೆ ಅರ್ಥವಾಗುವ ಮೊದಲೇ ಮಹಾಕಾವ್ಯ ನಮ್ಮೊಂದಿಗೆ ಸಂವಹನಗೊಳ್ಳುತ್ತದೆ.) ಎಂದು F.A. Richards ಅಭಿಪ್ರಾಯಿಸಿದ್ದಾನೆ. ಈ ಅಭಿಪ್ರಾಯಕ್ಕಿಂತಲೂ 'It is more important to be a good poet than a great poet' (ಮಹಾಕವಿ ಆಗುವುದಕ್ಕಿಂತಲೂ ಒಳ್ಳೆಯ ಕವಿ ಆಗುವುದು ಹೆಚ್ಚು ಮುಖ್ಯ) ಎಂದು ಮಹಾಕವಿ John milton ನನ್ನು ಕುರಿತು ಈ ಶತಮಾನದ ಅತ್ಯುತ್ತಮ ಕವಿ ಹಾಗೂ ವಿಮರ್ಶಕ T.S. Elist ಹೇಳಿದ ಮಾತು ಸಮಂಜಸೆನಿಸುತ್ತದೆ. ಸಾಹಿತ್ಯದ ವಿವಿಧ ಪ್ರಕಾರಗಳಲ್ಲಿ ಅದಮ್ಯ ಉತ್ಸಾಹದಿಂದ ಸತತವಾಗಿ ಸಾಗಿದ ಕೆಲವೇ ಮೇಲ್ಪಂಕ್ತಿಯ ಬರಹಗಾರರಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟಿ ಅವರು ಅಗ್ರಸ್ಥಾನ ಸಂಪಾದಿಸಿಕೊಂಡಿರುವರೆಂದು ನನಗನ್ನಿಸುತ್ತದೆ.''[೨]

ಸ್ವಾತಂತ್ರ್ಯ ನಂತರದಲ್ಲಿ ಹುಟ್ಟಿದ ನವ್ಯ ಕವಿತೆ. ದೇಶದ ಭವಿಷತ್ತಿನ ಬಗ್ಗೆ ಅಪಾರ ನಿರೀಕ್ಷೆಗಳನ್ನು ಇಟ್ಟುಕೊಂಡಿರುವ ಕವಿಗಳು ನವ್ಯರು. ಗೋಪಾಲಕೃಷ್ಣ ಅಡಿಗರು ಕಟ್ಟುವೆವುನಾವು ನಾಡೊಂದನು ರಸದ ಬೀಡೊಂದನು ಎಂದು ಹೇಳುವರು, ಆದರೆ ವಾಸ್ತವದಲ್ಲಿ ನಮ್ಮ ರಾಜಕಾರಣಿಗಳ ಕೈಯಿಂದ ಸಾಧ್ಯವಾಗಲಿಲ್ಲ. ಇದರಿಂದ ನವ್ಯ ಕವಿಗಳಿಗೆ ಬಹಳ ನಿರಾಸೆಯಾಯಿತು. ಇದಕ್ಕೆ ಸಿದ್ಧಲಿಂಗ ಪಟ್ಟಣಶೆಟ್ಟರು ಪ್ರತಿಕ್ರಿಯಿಸಿದರು. ಡಾ.ಬಿ.ನಂ.ಚಂದ್ರಯ್ಯ ಅವರು ಹೇಳುವ ಹಾಗೆ ''ಕಲೆಗಾಗಿ ಕಲೆ'' ಎಂಬ ವಾದವನ್ನು ಮುಂದಿಟ್ಟುಕೊಂಡು ಕೆಲವರು ಇಂಗ್ಲೀಷ್ ಅನುಯಾಯಿಗಳು ಕೆಲವು ಕಾಲ ತಮಟೆ ಬಾರಿಸಿದರು. ಕಲೆಗಾಗಿ ಕಲೆ ಎನ್ನುವುದಾದರೆ ಬರೆದ ಕಲಾಭಿವ್ಯಕ್ತಿಗಳನ್ನು ಅಚ್ಚು ಮೂಡಿಸುವುದಾದರೂ ಏಕೆ? ಅವರಷ್ಟಕ್ಕೆ ಅವರ ಗುಂಪಿನಷ್ಟಕ್ಕೆ ಮೀಸಲಾಗಿರಬಹುದಾದ ಈ ವಾದದ

ಸಂಕುಚಿತ ದೃಷ್ಟಿಯನ್ನು ಗಮನಿಸಿದಾಗ ಹಾಗನ್ನಿಸದಿರುವುದಿಲ್ಲ. ಸಂಸ್ಕೃತದಲ್ಲಿ ಒಂದು ಮಾತಿದೆ. ಪ್ರಯೋಜನ ಮನುದ್ದಿಶ್ಯನ ಮಂದೋಪಿ ಪ್ರವರ್ತತೆ. ಅಂದರೆ ಪ್ರಯೋಜನವಿಲ್ಲದೆ ಯಾವ ದಡ್ಡನೂ ಯಾವ ಕೆಲಸವನ್ನು ಮಾಡುವುದಿಲ್ಲ. ಅಂದ ಮೇಲೆ ಸಾಮಾಜಿಕ ವ್ಯಕ್ತಿಯಾಗಿ, ಸಮಾಜಕ್ಕೆ ಜವಾಬ್ದಾರನಾಗಿ, ಸಮಾಜಕ್ಕಾಗಿ, ಸಮಾಜದ ಒಳಿತಿಗಾಗಿ, ಬರೆಯುವ ಲೇಖಕ ಸಾಹಿತಿ ಕಲೆಗಾಗಿ ಮಾತ್ರ ಬರೆಯುತ್ತಾನೆಯೇ! ಲೇಖನಿ ಖಡ್ಗಕ್ಕಿಂತ ಹರಿತ ಎಂದು ಹೇಳುತ್ತಾರೆ. ಒಳ್ಳೆಯ ಪ್ರತಿಭಾಶಾಲಿ ಲೇಖಕನಿಂದ ಮೂಡಿಬಂದ ಸಾಹಿತ್ಯ ಪ್ರಪಂಚದಲ್ಲಿ ನಾನಾ ರೀತಿಯ ಪರಿಣಾಮಗಳನ್ನುಂಟು ಮಾಡಿದೆ. ಸಾಮಾಜಿಕ, ರಾಜಕೀಯ, ಸ್ಥಿತ್ಯಂತರಗಳನ್ನುಂಟುಮಾಡಿ ಸಾಮಾಜಿಕ ಪರಿವರ್ತನೆಗಳನ್ನುಂಟು ಮಾಡಿದ ಉದಾಹರಣೆಗಳಿವೆ. ಇಂಥ ಸಾಮಾಜಿಕ ಕಳಕಳಿಯನ್ನಿಟ್ಟುಕೊಂಡು ಬರೆಯುತ್ತಿರುವ ಉತ್ತಮ ಸಾಹಿತಿ ಶ್ರೀ ಸಿದ್ಧಲಿಂಗ ಪಟ್ಟಣಶೆಟ್ಟಿ ಅವರು.''[೨೭]

ಪ್ರಗತಿ ಶೀಲರಿಗಿಂತ ಜನಸಾಮಾನ್ಯರ ಬದುಕನ್ನು ಹೆಚ್ಚು ಹತ್ತಿರದಿಂದ ನೋಡಿದವರು; ಅದನ್ನು ಕೃತಿಯಲ್ಲಿ ರಚಿಸಿದವರು ನವ್ಯರು. ವಾಸ್ತವತೆಯೇ ಇವರ ಕಾವ್ಯದ ನೆಲೆಗಟ್ಟು, ಸಮಾಜಮುಖಿಯಾದ ಇವರ ಕಾವ್ಯಗಳು ದೇಶದಲ್ಲಿನ, ವ್ಯವಸ್ಥೆಯೊಳಗಿನ ಅಸಹಜತೆಯನ್ನು ವ್ಯಂಗ್ಯ ಮತ್ತು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ. ಪಟ್ಟಣ ಶೆಟ್ಟರು ತಮ್ಮ ಅನೇಕ ಕವನಗಳಲ್ಲಿ ತೋರಿಕೆಯ ವ್ಯಕ್ತಿಗಳ ವ್ಯಭಿಚಾರವನ್ನು ಬಯಲಿಗೆಳೆಯುತ್ತಾರೆ. ದೇಶಕ್ಕೆ ಸ್ವಾತಂತ್ರ್ಯ ಹೆಸರಿಗಷ್ಟೆ ಬಂತೇ ಹೊರತು ಸಾಮಾನ್ಯ ಜನತೆಗೆ ಅದರ ಫಲ ಸಿಗಲಿಲ್ಲ. ಮೂವತ್ತ ಮೂರನೇ ವಯಸ್ಸಿಗೆ ಬದುಕಿದ್ದರೂ ಸತ್ತಂತಿದ್ದೇವೆ ಎಂಬ ಮಾತುಗಳಲ್ಲಿ ಅಡಗಿರುವ ವ್ಯಂಗ್ಯ, ನಿರಾಸೆ ನಮ್ಮ ಪ್ರಜಾಪ್ರಭುತ್ವದ ನಡಿಗೆ ಕುರಿತು ಬೇಸರ ವ್ಯಕ್ತಪಡಿಸುತ್ತಾರೆ.

''ನಾನು ಸತ್ತಿದ್ದೇನೆ.
ಹೌದು ಈ ವಯಸ್ಸಿನಲ್ಲಿ ಯಾರು ಬದುಕುತ್ತಾರೆ.
ಈ ದೇಶದಲ್ಲಿ ಬದುಕಿ ಮಾಡುವುದಾದರೂ ಏನು
ಅದಕ್ಕಾಗಿ ಸತ್ತಿದ್ದನೆ ಈ ದೇಶದಲ್ಲಿ

ಸೋತಿದ್ದೇನೆ ಸಂಜೆ ಪೇಟೆಯಲ್ಲಿ ದಿನಾ
ಪುಸ್ತಕ ತರಹೋಗಿ ತರಕಾರಿ ತರುತ್ತೇನೆ
ಯೋಚನೆ ಮಾಡಹೋಗಿ ಸರಕಾರ ಸರಿಯಾವುದಾ ಓದುತ್ತೇನೆ
ಸಾಯುವುದಕ್ಕೆ ಇಷ್ಟು ಸಾಕಾಗದೆ
ಈದೇಶದಲ್ಲಿ?''[೨೮]

(ಚೀಲ)

ನಮ್ಮ ಜನರು ಮುಗ್ಧರಾಗಿದ್ದಾರೆ. ಜನ ನಾಯಕರು ಸ್ವಾರ್ಥಿಗಳಾಗಿದ್ದಾರೆ. ಅವರ ಜನರ ನಾಡಿಮಿಡಿತ ಚೆನ್ನಾಗಿ ತಿಳಿದಿದೆ; ಇವರ ಪ್ರತಿಯೊಂದು ಮಾತಿಗೆ ಪ್ರಜೆಗಳು ಮರುಳಾಗುತಲಿದ್ದಾರೆ. ಇಂತಹ ಜನರಿಂದ, ಜನಪ್ರತಿನಿಧಿಗಳಿಂದ

ದೇಶದ ಉದ್ಧಾರ ಸಾಧ್ಯವಿಲ್ಲ. ಜನರ ನಿರ್ಲಿಪ್ತ ಭಾವನೆಯಿಂದ ಕ್ರಾಂತಿಯ ಮಾತು ಕನಸೇ ಆಗಿದೆ. ಹಾಗದೇ ದೇಶದ ಗತಿ ಹೇಗೆ ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ.

''ಈ ದೇಶದಲ್ಲಿ ಕ್ರಾಂತಿ
ಆಗುವುದಿಲ್ಲ. ಈ ಜನರಿಗೆ ಅದು
ಬೇಕಾಗಿಲ್ಲ ಇವರು ಅದಕ್ಕಾಗಿ
ಬಂದವರಲ್ಲ

ಈ ದೇಶದ ಐದು ಸಾವಿರದ ಇತಿಹಾಸ ಕೊಳೆತು
ಕಳಿತ ನಮ್ಮೆಲ್ಲರ ದೇಹದಲ್ಲಿ
ಕ್ಷಯವಾಗಿದೆ ಕ್ಯಾನ್ಸರಾಗಿದೆ
ಈಗ ಕೊನೆಯ ಹಂತಕ್ಕೆ
ಬಂದು ತಲುಪಿದೆ ಗಾಡಿ. ರೋಗದಧಾಡಿ.''[೨೯]

ನವ್ಯದ ಪ್ರವರ್ತಕಾರ ಗೋಪಾಲಕೃಷ್ಣ ಅಡಿಗರ ಮುಖ್ಯ ಜಿಜ್ಞಾಸೆಗಳಲ್ಲಿ 'ಕಲಿಸು ಬಾಗದೆ ಸೆಟೆದು ನಿಲ್ಲುವುದನ್ನು' ಎಂಬುದೂ ಒಂದು. ಕವಿ ಪಟ್ಟಣ ಶೆಟ್ಟರು ಮಗಳಿಗೆ ಈ ಮಾತನ್ನು ಹೇಳುತ್ತಾರೆ. ಕವಿ ಹೆಣ್ಣನ್ನು ಮಗಳಾಗಿ ನೋಡುವ ಪರಿ ವಾತ್ಸಲ್ಯಮಯವಾಗಿದೆ. ಮಗಳಿಗೆ ಬಹಳ ಗಂಭೀರವಾಗಿ ಹಿತೋಪದೇಶ ಮಾಡುತ್ತಾರೆ.

''ನಿನಗೆ ಬಡತನ ತಿಳಿದಿರಲಿ
ನಾನು ಪಟ್ಟಿದ್ದೇನೆ ಇದ್ದೂ
ಇಲ್ಲದಂತಾಗಿದ್ದೇನೆ. ನಿನಗೆ
ಕೊರತೆಯ ಶಬ್ದ ಗೋತ್ತಾಗದಿರಲಿ.''[೩೦]

ಡಾ.ಬಿ.ನಂ.ಚಂದ್ರಯ್ಯ ಅವರು ಅಭಿಪ್ರಾಯ ಪಡುವ ಹಾಗೆ ಕವಿ ಪಟ್ಟಣಶೆಟ್ಟರು ಮಗಳಿಗೆ 'ಷೇಕ್ಸ್‌ಪಿಯರ್‌ನಂತೆ ಉಪದೇಶ ಅಥವಾ ಆಶಯ ವ್ಯಕ್ತಪಡಿಸುತ್ತದೆ. ಹಣವೇ ಎಲ್ಲ ಬೆಲೆ ಮೌಲ್ಯಗಳನ್ನು ಕಟ್ಟುವ ಕೇಂದ್ರವಾಗಿರುವುದರಿಂದ ಹಣವಿಲ್ಲದವರ, ಬಡವರ, ಬಡತನದಲ್ಲಿರುವವರ ಕಿಮ್ಮತ್ತು ಈ ಸಮಾಜದಲ್ಲಿ ಎಷ್ಟೆಂಬುದನ್ನು ಬಲ್ಲ ಕವಿ ತನ್ನ ಮಗಳು ಇಂಥ ಬವಣೆಗೆ ಪಕ್ಕಾಗದಿರಲಿ ಎಂದು ಬಡತನವನ್ನು ಸಾರ್ವತ್ರೀಕರಿಸುವ ಆಶಯ ಕವಿತೆಯಲ್ಲಿ ಸೊಗಸಾಗಿ ಮೂಡಿ ಬಂದಿದೆ. ವ್ಯಕ್ತಿ ಬದುಕಿನ ದುರ್ಭರ ಬವಣೆಗೊಳಗಾದಾಗ ಮಾತ್ರ ಇಂಥ ಅಭಿವ್ಯಕ್ತಿ ಸಹಜ ಅವರ ಕವಿ ಹೃದಯ ಸಮಾಜದ ಈ ವರ್ತನೆಗೆ ಮರುಗಿರುವುದು. ಅದು ಸಹಜ ಕಾವ್ಯವಾಗಿ ಹರಿದಿರುವುದು ಅವರ ಕವಿತನಕ್ಕೆ ಕಾವ್ಯತ್ವಗಳ ಸಾಕ್ಷಿಯಾಗಿದೆ.''[೩೧] ಸಮಾಜದಲ್ಲಿರುವ ಜನರೆಲ್ಲರೂ ಒಳ್ಳೆಯದಲ್ಲ ಹೆದರಿಕೊಂಡರೆ ಹೆದರಿಸುತ್ತಾರೆ. ಎದುರು ಹಾಕಿಕೊಂಡು ಧೈರ್ಯ ತೋರಿಸಿದರೆ ಸುಮ್ಮನಾಗಿ ಬಿಡುತ್ತಾರೆ. ಆದ್ದರಿಂದ ಧೈರ್ಯವಾಗಿ ಮುನ್ನುಗ್ಗುವಂತೆ ಹೇಳುತ್ತದೆ.

''ಮೊದಲಿನಿಂದ ಚೆನ್ನಾಗಿ ನಗು ತಿನ್ನು ಓದು ಒದೆ
ಬೈದು ಝಾಡಿಸ ಬಾ ಆಗ
ಇರದಿದ್ದರೂ ಯೋಗ್ಯತೆ ಕಾಣುತ್ತದೀ ಮಕ್ಕಳಿಗೆ
ನಿನ್ನಲ್ಲಿ ಕಣ್ಣ ಬೆಳಕಿನ ರೇಖ ರೇಖೆಯ ಗುಂಟ
ನೂರು ಸಾವಿರದ ಸೂತ್ರಗಳ ಪ್ರತಿಭೆ
ತುಳುಕಿದೆ ತಾಯೆ.

ಬೃಹತ್ತಾಗಿ ಗಂಬೀರವಾಗಿ ತಲೆಯೆತ್ತಿ ತುಳಿ
ನಿನ್ನ ದಾರಿ ನಿನಗೆ ಬಿಡುತ್ತಾರೆ. ಹೇಸಿಗಳು
ಒಡೆಯ ಧನಿಕ ಅಧಿಕಾರಿ ವಂಚಕರು''[೨]

ಐತಿಹಾಸಿಕ ಅಥವಾ ಪೌರಾಣಿಕ ಪಾತ್ರಗಳ ಮೂಲಕ ಆತ್ಮವಿಮರ್ಶೆ ಮಾಡಿಕೊಳ್ಳುವುದು ನವ್ಯ ಸಾಹಿತಿಗಳು ಪ್ರಮುಖ ಅಂಶಗಳಲ್ಲಿ ಒಂದು. ನವ್ಯದ ಪ್ರಮುಖ ಲೇಖಕರಾದ ಲಂಕೇಶರ 'ಗುಣಮುಖ', ಗಿರೀಶ್ ಕಾರ್ನಾಡರ 'ತುಘಲಕ್' ಇದಕ್ಕೆ ಉತ್ತಮ ಉದಾಹರಣೆಯಾಗಿದೆ. ಇವರು ಆತ್ಮವಿಮರ್ಶೆಗಳ ನಾಟಕದಂತ ದೊಡ್ಡ ಕ್ಯಾನವಾಸ್‌ಗಳನ್ನು ಬಳಸಿದರೆ ಕವಿ ಪಟ್ಟಣಶೆಟ್ಟರು ಕವಿತೆಯನ್ನೇ ಆಯ್ಕೆ ಮಾಡಿಕೊಂಡರು. ಪ್ರಬುದ್ಧ ಕವಿ ಮನಸ್ಸು ಸೃಷ್ಟಿಸಿದ ಸುಂದರಶಿಲ್ಪ 'ಔರಂಗಜೇಬ' ಮತ್ತು ಲಂಕೇಶ: ಕವನಗಳು. ಇಲ್ಲಿ ತಾಕಲಾಟ ವಿಶಿಷ್ಟ ಪದ ಪುಂಜಗಳು ಕವಿಯೋ ಔರಂಗಜೇಬ ಮತ್ತು ಲಂಕೇಶನಾಗಿ, ಔರಂಗಜೇಬ ಮತ್ತು ಲಂಕೇಶರೇ ಕವಿಯಾಗಿ ಕಾವ್ಯ ರಚಿಸಿದಂತೆ ಇದೆ.

''ನನ್ನನ್ನು, ನಿನ್ನನ್ನು, ಅವಳನ್ನು
ಹವಳ ಮುತ್ತುಗಳನ್ನು ಧವಳ
ಪಾಪಗಳನ್ನು, ಮರಳ ಮುತ್ತಿಗಳನ್ನು
ಕತ್ತು ಹಿಸಿಕಿದೆ ಕಣೋ
ನಾನೆ ಸಂಗ್ರಹಿಸಿದ್ದ ಸಂರಕ್ಷಿಸಿದ್ದ ಶಂಕೆಸೈನ್ಯ
ನಾನೆಯ್ದ ಬಲೆಯಲ್ಲಿ ಬಿದ್ದು ವಿಲಿವಿಲಿ ನಾನು
ರಾಜ್ಯವಾಳಿದ್ದೇನೆ. ಸ್ವಂತ ದುಡಿದಿದ್ದೇನೆ.
ಪ್ರಜರ ಸಲಹಿದ್ದೇನೆ ಪ್ರಖರ ಸಂಯಮದಿಂದ
ದಿನವೂ ಕುರಾನು ನೂರು ಬಾರಿ ಓದಿದ್ದೇನೆ.
ವರ್ಷವಿಡೀ ರೋಜ, ರಮಜಾನು,
ಮಹಾ ಫಕೀರ

ನಂತೆ ಬದುಕಿದ್ದೇನೆ. ನಿಟ್ಟುಸಿರ ಬುಟ್ಟಿಯಲ್ಲಿ.
ಜಪೋ ಫಲ ತುಂಬಿದ್ದೇನೆ
ಆದರೂ ಯಾವುದೋ ಸಂದೇಹ ದಂಗಡಿಯ
ಸಾವಿರದ ಗೊಂಬೆಗಳಲ್ಲಿ ನಾನೂನು ನಿಂತಿರುವೆ
ಹೌದು, ನಾನು ತಳ ಊರಿರದ ಔರಂಗಜೇಬ."[೩೩]

ದೇಶದಲ್ಲಿ ತುರ್ತು ಪರಿಸ್ಥಿತಿಯನ್ನು ತಂದು ಎಲ್ಲರ ಅಭಿವ್ಯಕ್ತಿ ಸ್ವಾಸಂತ್ರವನ್ನು ಹತ್ತಿಕ್ಕೆ ಸರ್ವಾಧಿಕಾರಿಯಂತೆ ವರ್ತಿಸಿದೆ ಶ್ರೀಮತಿ ಇಂದಿರಾಗಾಂಧಿಯವರ ಧೋರಣೆಯನ್ನು ಆಗಿನ ವ್ಯವಸ್ಥೆಯನ್ನು ಅನೇಕ ಕನ್ನಡ ಕವಿಗಳ ಬಹಳ ಉಗ್ರವಾಗಿಯೇ ವಿರೋಧಿಸಿದರು. ಇದಕ್ಕೆ ಸಿದ್ಧಲಿಂಗ ಪಟ್ಟಣಶೆಟ್ಟರೂ ಹೊರತಾಗಿರಲಿಲ್ಲ. ರಾಜಕೀಯ ವ್ಯವಸ್ಥೆಯನ್ನು ವಿವೇಚನೆಮಾಡುವ 'ಮತ್ತೆ ಬಂದಿದ್ದಾಳೆ' ಎನ್ನುವ ಗೀತೆಯನ್ನು ರಚಿಸಿದರು. ೧೯೭೭ರಲ್ಲಿ ಅಧಿಕಾರ ಕಳೆದುಕೊಂಡ ಇಂದಿರಾಗಾಂಧಿ ೧೯೮೦ರಲ್ಲಿ ಮತ್ತೆ ಅಧಿಕಾರಕ್ಕೆ ಬಂದಾಗ; ಕವಿ ಪಟ್ಟಣಶೆಟ್ಟರು ಈ ಕವಿತೆಯನ್ನು ರಚಿಸಿದ್ದಾರೆ. ವ್ಯಕ್ತಿ ಮತ್ತು ಸಮಾಜ ಸರ್ವಾಧಿಕಾರತ್ವ ಮತ್ತು ಪ್ರಜಾಸತ್ತೆ ಇವುಗಳ ನಡುವಿನ ಸಂಬಂಧಗಳ ಬಗ್ಗೆ ಕವನ ಗಂಭೀರವಾಗಿ ಹೇಳುತ್ತದೆ. ಸರ್ವಾಧಿಕಾರಿತನದ ಕ್ರೂರತೆಗಳನ್ನು ಕವನ ಹೇಳುತ್ತದೆ. ಸರ್ವಾಧಿಕಾರಿಗಳಿಗೆ ದೇಶದ ಹಿತಕ್ಕಿಂತ ತಮ್ಮ ಹಿತಮುಖ್ಯ. ದೇಶದ ಮೇಲೆ ಹೇರಿರುವ ತುರ್ತು ಪರಿಸ್ಥಿತಿ ಜನರ ತನ್ನತನಗಳನ್ನು ಕಸಿದುಕೊಂಡು ಬಾಯಿದ್ದೂ ಮೂಕರನ್ನಾಗಿ ಮಾಡಿ ನಿಶ್ಯಕ್ತರನ್ನಾಗಿ ಮಾಡಿದೆ. ಸಂದರ್ಭವನ್ನು ಕುರಿತು ಕವಿಗಳು ಹೇಳಿದ್ದಾರೆ.

ಮತ್ತೆ ಬಂದಿದ್ದಾಳೆ ಮತ್ತು ತಂದಿದ್ದಾಳೆ
ನಮ್ಮ ಗುಣ ಅವಗುಣಾ ಬಹುಗುಣಾಗೊಳಿಸಿ
ಸರ್ವಪುರುಷತ್ವಗಳ ಬರಿ ಬಣಾಗೊಳಿಸಿ
ಎಲ್ಲರುಸಿರಾಟಗಳ ಹುಸಿ ಮಜಾ ಮಾಡಿ
ತೃಷಿತ ಕನಸುಗಳ ನಗೆ ಅಸಿಗೆ ಜಾಲಾಡಿ
ಪೂತನಿಯ ನಾಲಿಗೆಯ ಹಿರಿದು ಚಾಚಿದ್ದಾಳೆ
ನಾಡಿನುದ್ದಕ್ಕೂ ತೋಳ ತೋಳ ಬಾಚಿದ್ದಾಳೆ

ರಕ್ತ ಬೀಜಾಸುರರ ನಿತ್ಯ ಬಸಿರಾಗಿ
ಹೊಟ್ಟೆಗಿಕ್ಕುತ ಕಿಚ್ಚು ನುಚ್ಚು ಹುಸಿರಾಗಿ
ಮತ್ತೆ ಬಂದಿದ್ದಾಳೆ ಮಾರಿ ಬಂದಿದ್ದಾಳೆ"[೩೪]

(ಮತ್ತೆ ಬಂದಿದ್ದಾಳೆ)

ಹೀಗೆ ಆರ್ಭಟಿಸುತ್ತ ಬಂದ ಮಾರಿಗೆ ಜನರು ಭಯ ಭೀತರಾಗಬೇಕಿಲ್ಲ. ಏಕೆಂದರೆ ಅಧರ್ಮದವರ ಆಟ ಬಹಳದಿನಗಳ ಕಾಲ ನಡೆಯುವುದಿಲ್ಲ. ಇದು ಆದಷ್ಟು ಬೇಗನೆ ಕೊನೆಗೊಳ್ಳುತ್ತದೆ. ಎಂಬ ಸಾಂತ್ವಾನದ ಮಾತುಗಳನ್ನು ಕವನದ ಕೊನೆಯಲ್ಲಿ ಹೇಳಲಾಗಿದೆ.

ಬೆದರದಿರಿ ಬೆಚ್ಚದಿರಿ ಮಾರಿ ಬಂದಿಹಳೆಂದು
ಹೊಳೆಗೆ ನೆಕೆ ಶಿರಕೆ ಹೊರೆ ಬಹುಕಾಲವಿರದು
ಬೆಕ್ಕು ಸಿಕ್ಕಿದ ಸೊಕ್ಕು ಗಕ್ಕನಿಳಿಯುವುದು
ಸಂಚು ಹೂಡಿದ ಕೆಂಚರೆಲ್ಲರನು ತಡೆದು
ಕಾರ್ಮೋಡ ಕವಿದಾಗ ಮಿಂಚು ಬರದಿರದು
ನಾಗರವ ಮೆಚ್ಚದಿರಿ ಭೂರಿ ಸುಂದರವೆಂದು
ಬೆದರದಿರಿ ಬೆಚ್ಚದಿರಿ ಮಾರಿ ಬಂದಿಹಳೆಂದು''[೩೫]

ಯಾವತ್ತು ಕಾವ್ಯ ಅಸಲಿಯಾಗಿರಬೇಕು. ಆತ್ಮ ಶೋಧ ಮಾಡಿಕೊಳ್ಳುವಂತಿರಬೇಕು. ಪಟ್ಟಣಶೆಟ್ಟರ ಕಾವ್ಯ ಈ ನಿಟ್ಟಿನಲ್ಲಿ ಕ್ರಿಯಾಶೀಲವಾಗಿರುವುದನ್ನು ಕೆಲವು ಕವಿತೆಗಳಲ್ಲಿ ಕಾಣಬಹುದಾಗಿದೆ. ಕಂಡದ್ದನ್ನು ಕಾವ್ಯ ಮಾಡುವ ಸೃಜನಶೀಲತೆ ಪಟ್ಟಣಶೆಟ್ಟರಲ್ಲಿದೆ. ಪ್ರೊ. ದೊಡ್ಡರಂಗೇಗೌಡರು ಹೇಳುವಂತೆ ''ಚಿಂತನ ಶೀಲತೆ ಆಧುನಿಕ ಕನ್ನಡ ಕಾವ್ಯದ ಇತ್ಯಾತ್ಮಕ ಬಿಂದುವಾಗಿದೆ. ಇದು ಕನ್ನಡ ಕವಿಗಳ ಅಭಿವ್ಯಕ್ತಿಯ ಗೆಲುವು ಸಕಾರಾತ್ಮಕ ಸೃಜನಶೀಲತೆ ಕೆತ್ತಿ ಕೆಡೆದ ವೈಚಾರಿಕತೆಯ ಸಾವಿರದ ವಿನ್ಯಾಸಗಳು ಉಲ್ಲೇಖನಾರ್ಹ.

ಪ್ರಶ್ನೆಗಳ ನುಂಗೆ, ಬೆಂಕಿ-ಬರಸಿಡಿಲುಗಳನುಗುಳಿ
ಧರ್ಮವನು ಸುರಿದ ನನ್ನ ಸುತ್ತಲೂ ಮಿತ್ತು
ಕುಣಿಯುತ್ತ ನಿಂತು, ಆಳಕುಣಿಕಡಿದು
ನನಗೆ ಕೊನೆ ಪಂಚಾರತಿ ಬೆಳಗ ಬೇಕೆಂದು ಕಾದಿದೆ.

ನನ್ನ ಹಳವಂಡ-ಭಂಡಾರಗಳ
ತುಂಬಿದ ಭಂಡತನದೆಲ್ಲ ಗತ್ತು
ನಾಪಿತ್ತ ಸಾಗಲಿ? ಬದುಕಲಿ?

ಮತ್ತೆ ಅಸಂಭವದ ಸಮದುರ್ಗದ ಹೊಳಹೊಕ್ಕು ನಿರ್ನಾಮ
ವಾಗುವತನಕ ಚಿನ್ನಾಟವಾಡಿದವ, ಮಳೆಯ ಉಳಿವಿಳೆಗುಂಟೆ
ಪಾತಾಳದಾಳ ಸೇರಿ ತೊಳಲಾಡಿದವ
ನೂರೆಂಟನೆಯ ಆಕಾಶವನೇರಿ ನೇತಾಡಿ ಹಗ್ಗಹರಿದೆಲೋ ಬಿದ್ದು

ಚಿಂದಿ ಚಿಪ್ಪಡಿಯಾದವ, ನಾನು ಏನಾಗಿಲ್ಲ?

ನನ್ನ ಬದುಕೆಲ್ಲ ಗಡಿಬಿಡಿ, ತಳಮಳ

(ಸಿದ್ಧಲಿಂಗ ಪಟ್ಟಣಶೆಟ್ಟಿ)

ಹೀಗೆ ವ್ಯಕ್ತಿ ಚಿತ್ರಕೊಡುವ ಸಾಧ್ಯವಾದದ್ದು ಕನ್ನಡ ಭಾಷಾ ಮೊನಚಿನ ಜಾಯಿಮಾನ. ವೈಚಾರಿಕತೆಯ ದೃಷ್ಟಿಕೋನ; ಸಂಕೀರ್ಣ ಬದುಕು ನೀಡಿದ ಅನುಭವದ ಹಿನ್ನೆಲೆಯಲ್ಲಿ ಇತಿಹಾಸವನ್ನಳೆಯುವ ಮೌಲ್ಯಮಾಪನ ಸಂಕೇತ ಪ್ರತಿಮೆಗಳಲ್ಲಿ ಕಾವ್ಯವನ್ನು ಅನನ್ಯವಾಗಿ ಕಂಡರಿಸುವ ಮಹಾತ್ವಾಕಾಂಕ್ಷೆಯ ಕವಿಗಳ ಕಲ್ಪನೆಯ ಮೂಲಗುಣ ಪ್ರತಿಭೆಯ ಅಪೂರ್ಣ ದರ್ಶನವಾಗಿದೆ.''[೩೬]

ನವೋದಯ ಸಾಹಿತ್ಯದಲ್ಲಿ ಭಾಷೆಯು ಲಲಿತ ಮತ್ತು ಸುಮಧುರವಾಗಿತ್ತು. ಕಾವ್ಯದಲ್ಲಿ ಇವುಗಳಲ್ಲದಿದ್ದರೆ ಅದು ಸಪ್ಪೆಯಾಗಿ ಬಿಡುತ್ತದೆ ಎನ್ನುವ ಭಾವ ಅವರಲ್ಲಿತ್ತು. ಆದರೆ ನವ್ಯ ಸಾಹಿತ್ಯದಲ್ಲಿ ಕಾವ್ಯವು ಛಂದೋಬಂಧಗಳಿಂದ ಮುಕ್ತಿ ಪಡೆಯಿತು. ಪ್ರತಿಮೆ ಸಂಕೇತಗಳು ಪ್ರದಾನತೆಯನ್ನ ಪಡೆದುಕೊಂಡವು. ಡಾ. ಸಿ.ಆರ್.ಯರವಿನ ತೆಲಿಮಠ ಅವರು ಹೇಳುವ ಹಾಗೆ ''ಕನ್ನಡ ನವ್ಯ ಕವಿಗಳಲ್ಲಿ ಪ್ರತಿಮಾನಿಷ್ಠ ಕವನಗಳನ್ನು ಬರೆಯುವುದರಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟಿ ಅವರ ಕವಿತೆಯ ಎದ್ದು ಕಾಣುವ ಗುಣವೆಂದರೆ ಪ್ರತಿಮಾ ಬಾಹುಲ್ಯ, ಪ್ರತಿಮೆಗಳ ತೀಕ್ಷ್ಣತೆ ಅವರೇ ಹೇಳುವಂತೆ ಅವರು

ಪೆಂಡಿ ಪೆಂಡಿ ಅನುಭವ ತಂದು

ಹರವಿ ಚೆಲ್ಲಾಪಿಲ್ಲಿ ಮನಬಂದಂತೆ

ಪ್ರತಿಮೆ ಶಬ್ದ ಬಣವೆ ಮೇಲೆ

ಏನೇನೋ ಗೊಣಗುತ್ತ ವಟಗುಟ್ಟುತ್ತ

ಹೊರಳಾಡಿದವ

(ನಾನು)

ಅವರ ಕಾವ್ಯಗಳಲ್ಲಿ ಪ್ರತಿಮೆಗಳು ಅನಾಯಾಸವಾಗಿ ಒಂದರ ಹಿಂದೊಂದು ಸಾಲು ಸಾಲಾಗಿ ಬಂದು ಬಿಡುತ್ತವೆ. ಅವರ ಕಾವ್ಯ ಕುಲುಮೆಯಲ್ಲಿ ಭಾವನೆಯ ಉತ್ಕಟತೆಯ ಅಭಿವ್ಯಕ್ತಿಗಾಗಿ ಪ್ರತಿಮೆಗಳು ಸೃಷ್ಟಿಗೊಳ್ಳುತ್ತವೆ. ಅವರ ಪ್ರತಿಮೆಗಳು ಸ್ಪಷ್ಟವೂ ವಸ್ತು ನಿಷ್ಠವೂ ಆಗಿರುತ್ತದೆ. 'ನೀನಾ' ದಲ್ಲಿಯ ಕವಿತೆಯೊಂದರಲ್ಲಿ ಕಣ್ಣುಕುಕ್ಕುವ ಪ್ರತಿಮೆ ಹೀಗಿದೆ.

ಕತ್ತಲೆಯ ಮೈತುಂಬ ಹೊದ್ದು

ಕೋಟಿ ಕೋಟಿ ತಾರೆಗಳನು ನುಂಗಿಬಿಡುವೆ

ನೀ ಬದಿಯಲ್ಲಿದ್ದಾಗ

(ನೀಬಂದು ಹೋದೊಡನೆ)

ಇಲ್ಲಿ ಕೆತ್ತಿದ ಶಬ್ದ ಶಿಲ್ಪ ಇಂಗ್ಲೀಷ್ ಪ್ರತಿಮಾವಾದಿ ಕವಿ ಟಿ.ಇ. ಹ್ಯೂಮ್ (T.E. Hulme)ನ ಒಂದು ಪ್ರತಿಮೆಯನ್ನು ಹೋಲುತ್ತದೆ.

'Oh God make small
The old stareaten blank of the sky
That I may fold it round me and
in comfort lie'

ಪಟ್ಟಣಶೆಟ್ಟಿಯವರು ಪ್ರತಿಮೆಗಳನ್ನು ಸುಮ್ಮಸುಮ್ಮನೆ ಸೃಷ್ಟಿಸುವುದಿಲ್ಲ. ಪ್ರಾರಂಭದ 'ಔರಂಗಜೇಬ' ಕವನದಲ್ಲಿ ಪ್ರತಿಮೆಗಳು ಚೆಲ್ಲಾಪಿಲ್ಲಿ ಹರವಿದಂತೆ ಕಂಡರೂ, ನಂತರದ ಕವನಗಳಲ್ಲಿ ವ್ಯವಸ್ಥಿತವಾಗಿ ಕಾಣಿಸಿಕೊಳ್ಳುತ್ತವೆ. ಪಟ್ಟಣಶೆಟ್ಟಿಯವರು ಪ್ರತಿಮೆಗಳನ್ನು ಏಕಸೂತ್ರದಿಂದ ಕಟ್ಟುವ ಪ್ರಯತ್ನ ಮಾಡುತ್ತಾರೆ. ಅದೂ ಅಲ್ಲದೆ ಶಾಂತಿನಾಥ ದೇಸಾಯಿಯವರು ಹೇಳುವಂತೆ 'ಒಂದು ಕೇಂದ್ರ ಪ್ರತಿಮೆಯನ್ನು ಕಲಾತ್ಮಕವಾಗಿ ಬೆಳೆಸುತ್ತ ಅನುಭವದ ತಿರುಳಿಗೆ ಧಕ್ಕೆ ಬರದಂತೆ ಅನುಭವದ ಕೆಲವು ಅಗಮ್ಯವಾದ ಅಂಶಗಳನ್ನು ರೂಪಿಸುತ್ತ ಸೂಚಿಸುತ್ತಾ, ಅನುಭವ ಹಾಗೂ ಅಭಿವ್ಯಕ್ತಿ ಇವೆರಡರ ಮೇಲೂ ಗಟ್ಟಿಯಾದ ಹಿಡಿತವಿರಿಸಿ ಕಾವ್ಯ ಬರೆಯುವ ಪ್ರೌಢ ಪ್ರವೃತ್ತಿ ಇಲ್ಲಿ ಎಷ್ಟೋ ಕವಿತೆಗಳಲ್ಲಿ ಕಂಡುಬರುತ್ತದೆ.' ದೇಸಾಯಿಯವರು 'ನೀನಾ' ಕವನ ಸಂಕಲನದಲ್ಲಿಯ ಪ್ರತಿಮಾನಿಷ್ಠ ಕವನಗಳನ್ನು ಕುರಿತು ಹೇಳಿದ ಮಾತು ಅವರ 'ನೀನಾ'ದ ನಂತರದ ಕವನ ಸಂಕಲನಗಳಿಗೂ ಅನ್ವಯಿಸುತ್ತದೆ. ಔರಂಗಜೇಬದಲ್ಲಿಯ 'ಪಟ' 'ದೊಂಬರಾಟ' ನಿರ್ಗಮನ ಮುಂತಾದ ಕವಿತೆಗಳಲ್ಲಿ ಅನೇಕ ಶಬ್ದ ಚಿತ್ರಗಳು ಕೂಡಿ ಒಂದು ಪ್ರತಿಮೆಯಾಗಿರುತ್ತದೆ. ಉದಾಹರಣೆಗೆ 'ಡೊಂಬರಾಟ'ದಲ್ಲಿ ಕಾಣುವ ಕೇಂದ್ರ ಪ್ರತಿಮೆಯನ್ನು ನೋಡಬಹುದು.

'ಇಲ್ಲಿ
ಭೂತ ವರ್ತಮಾನಗಳ
ಆಚೆ ಈಚೆ ಎರಡೆರೆಡು ಗಳ-ಗಳ ನೆಟ್ಟು
ಸೋಲು-ಸರಿಗೋಲು ಕೈಯಲ್ಲಿ ಹಿಡಿದು
ನಿನ್ನ ನೆನಪಿನ ಹಗ್ಗದ ಮೇಲೆ ನಡೆಯುತ್ತಿರುವೆ'

ಪಟ್ಟಣಶೆಟ್ಟಿಯವರ ಕಾವ್ಯದಲ್ಲಿ ಪ್ರತಿಮೆಗಳು ಸಾವಿರಾರು. ಪ್ರತಿಮೆಗಳು ಹಿಂಡುಗಟ್ಟಿ, ದಂಡುಗಟ್ಟಿ ಬರುವುದು ಅವರ ಕಾವ್ಯದ ವೈಶಿಷ್ಟ್ಯ. ಕೆಲವು ಪ್ರತಿಮೆಗಳು 'ಪ್ರತಿಮೆಗಳಿಗಾಗಿ ಪ್ರತಿಮೆ'ಗಳು ಅರ್ಥವಿಲ್ಲದವೂ, ಕೆಲಸಕ್ಕೆ ಬಾರದವು ಎಂದು ಕಂಡರೂ, ಬಹಳಷ್ಟು ಪ್ರತಿಮೆಗಳು ಸತ್ವಯುತವೂ, ಪ್ರಯೋಜನಕಾರಿಯೂ, ಕಾವ್ಯೋದ್ದೇಶಕ್ಕಾಗಿ ಸೃಷ್ಟಿಸಲ್ಪಟ್ಟವೂ ಆಗಿರುತ್ತವೆ.''[೩೭]

ಸಮಾಜಕ್ಕೆ ಜವಾಬ್ದಾರನಾದ ಕವಿ ಕೊಡಬೇಕಾದ ಕೆಲವು ಕೊಡುಗೆಗಳನ್ನು ಸಿದ್ಧಲಿಂಗಪಟ್ಟಣಶೆಟ್ಟರು ಕೊಟ್ಟಿದ್ದಾರೆ. ಜಪಾನಿನ ಹೈಕುಗಳನ್ನು ಹೋಲುವಂತವ ನೂರಾರು ಕಿರುಗವನಗಳನ್ನು ರಚಿಸಿದ್ದಾರೆ. ಅವರ ಮೂಲ ಪ್ರಕೃತಿ ಕವಿಯದು. ತೀವ್ರಭಾವನೆ, ನೇರ ಅಭಿವ್ಯಕ್ತಿ, ಅನುಭವದ ವೈಶಿಷ್ಟ್ಯ ಇವುಗಳಿಂದಾಗಿ ಅವರು ಹೊಸಗನ್ನಡ ಕಾವ್ಯ ಕ್ಷೇತ್ರದಲ್ಲಿ ತಮ್ಮದೇ ಆದ ಸ್ಥಾನಗಳಿಸಿಕೊಂಡಿದ್ದಾರೆ.

ಸಿದ್ದಲಿಂಗ ಪಟ್ಟಣಶೆಟ್ಟಿಯವರು ಕವಿಮಾತ್ರ ಆಗಿರದೆ, ಸಾಹಿತ್ಯದ ವಿವಿಧ ಪ್ರಕಾರಗಳಾದ ಕಥೆ ಜೀವನ ಚರಿತ್ರೆ, ಅಂಕಣ ಬರಹ, ವಿಮರ್ಶೆ, ಅನುವಾದ ಪತ್ರಿಕಾ ಸಾಹಿತ್ಯಗಳಲ್ಲಿ ಕೃಷಿ ಮಾಡಿದ್ದಾರೆ. ಪ್ರೊ ಎಲ್.ಎಸ್. ಶೇಷಗಿರಿರಾವ್ ಹೇಳುವಂತೆ ''ನವ್ಯ ಕಾದಂಬರಿಯಂತೆ ನವ್ಯ ಸಣ್ಣಕಥೆಗೂ ಮನುಷ್ಯನ ಮನಸ್ಸಿನಲ್ಲಿ ಆಸಕ್ತಿ ಮನಸ್ಸಿನ ಮತ್ತು ಅನುಭವದ ವಿಶ್ಲೇಷಣೆಯನ್ನು ಪ್ರಯತ್ನಿಸಿದೆ. ಧ್ವನಿ ಪ್ರತಿಮೆ ಮತ್ತು ಸಂಕೇತಗಳ ಮೂಲಕ ಅನುಭವಕ್ಕೆ ಮಾತಿನ ಶರೀರ ಕೊಡಲು ಪ್ರಯತ್ನಿಸಿದೆ.''[೬೮] ಈ ಹಿನ್ನೆಲೆಯಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಮಾವ ಮತ್ತು ಇತರ ಕಥೆಗಳು ಮತ್ತು ಹಕ್ಕಿಗಳು ಕಥಾ ಸಂಕಲನವನ್ನು ನೋಡಿದಾಗ ಸಂಕೀರ್ಣವಾದ ಅಭಿವ್ಯಕ್ತಿಯ ತಂತ್ರ, ಕ್ಲಿಷ್ಟವಾದ, ಸಾಂಕೇತಿಕವಾದ, ಪ್ರತಿಮಾತ್ಮಕವಾದ ಬರವಣಿಗೆಯನ್ನು ಕೈ ಬಿಟ್ಟ ಬಹಳ ಸುಲಭ, ಸರಳ ಮತ್ತು ನೇರವಾಗಿ ಲವಲವಿಕೆಯಿಂದ ಕಥೆ ಹೇಳುವ ಕಲೆಗಾರಿಕೆಯಿಂದ ಕೂಡಿವೆ. ಈ ಕಥೆಗಳು ಲೇಖಕರು ತಮ್ಮ ಅನುಭವಗಳನ್ನು ಹೇಳುತ್ತಿದ್ದಾರೆ. ಏನೋ ಎಂದು ಒಮ್ಮೊಮ್ಮೆ ಅನಿಸುತ್ತದೆ. ಸಹಜವಾಗಿ ನಿರಾಳವಾಗಿ ಕಥೆಕಟ್ಟುವ ಕೌಶಲ್ಯಗಳನ್ನು ಹೊಂದಿದ್ದ ಪಟ್ಟಣಶೆಟ್ಟರು ಮುಂದೆ ಕಥೆಗಳನ್ನೇ ಬರೆಯಲಿಲ್ಲ. ನವ್ಯ ಕವಿಗಳಲ್ಲಿ ಬಹಳಷ್ಟು ಬರಹಗಾರರು ಕಾವ್ಯದಿಂದ ತಮ್ಮ ಸಾಹಿತ್ಯ ಕೃಷಿಯನ್ನು ಆರಂಭಿಸಿದರು. ಮುಂದೆ ಬೇರೆ ಬೇರೆ ಪ್ರಕಾರಗಳಲ್ಲಿ ತಮ್ಮ ಸಾರ್ಥಕತೆ ಕಂಡುಕೊಂಡರು; ಆದರೆ ಪಟ್ಟಣಶೆಟ್ಟರು ಸಾಹಿತ್ಯದ ಬಹುತೇಕ ಪ್ರಕಾರಗಳಲ್ಲಿ ಬರೆದರೂ ಅವರು ಅಭಿವ್ಯಕ್ತಿಯ ಮುಖ್ಯ ಪ್ರಕಾರ ಕಾವ್ಯವೇ ಆಗಿ ಉಳಿಯಿತು. ಧಾರವಾಡದ ಪ್ರಾದೇಶಿಕ ಭಾಷೆ, ನುಡಿಗಟ್ಟುಗಳು ಇವರ ಕಥೆಗಳಲ್ಲಿ ಬಂದಿವೆ. ಸಾಹಿತ್ಯ ಲೋಕ ಇವರನ್ನು ಕವಿಯಾಗಿ ಗುರುತಿಸುತ್ತದೆಯೇ ಹೊರತು ಕಥೆಗಾರರಾಗಿ ಗುರುತಿಸುವುದಿಲ್ಲ.

ಒಂದು ಸಾಹಿತ್ಯ ಕೃತಿಯನ್ನು ಅಭ್ಯಸಿಸಿ ಒಂದು ಪರಿಣಿತವಾದ ಮತ್ತು ಪಕ್ವವಾದ ಮನಸ್ಸು ಕೊಟ್ಟು ತೀರ್ಪು ಅಥವಾ ನಿರ್ಣಯಗಳೇ ವಿಮರ್ಶೆ. ಪ್ರೊ. ಎಲ್.ಎಸ್. ಶೇಷಗಿರಿ ಅವರು ಹೇಳುವಂತೆ ''ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಸಾಹಿತ್ಯ ವಿಮರ್ಶೆ ಯಾವಾಗ ಅವತರಿಸಿತು ಎಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಹೊಸ ಉತ್ಸಾಹ ಚಿಮ್ಮಿ ಹೊಸ ಸಾಹಿತ್ಯದ ಸೃಷ್ಟಿಯಾದಾಗ ಸಾಹಿತ್ಯ ಸೃಷ್ಟಿಯಲ್ಲಿ ನಿರತರಾದವರೇ ಸಾಹಿತ್ಯದ ವಿಷಯ ಮಾತನಾಡಬೇಕಾಯಿತು. ಬರೆಯ ಬೇಕಾಯಿತು. ಆಕಾಶವಾಣಿ ಇಲ್ಲದ ಕಾಲದಲ್ಲಿ ವೃತ್ತಪತ್ರಿಕೆಗಳು ಕನ್ನಡ ನಾಡಿನ ಒಂದೊಂದು ಭಾಗದಲ್ಲಿ ಓದು ಬರಹ ಬಲ್ಲ ಕೆಲವರಿಗೆ ಸೀಮಿತವಾಗಿದ್ದ ಕಾಲದಲ್ಲಿ ಬಿ.ಎಂ.ಶ್ರೀ, ಮಾಸ್ತಿ, ಡಿ.ವಿ.ಜಿ, ಬೇಂದ್ರೆ ಮೊದಲಾದವರು ನಾಡನ್ನು ಸಂಚರಿಸಿ ಸಾಹಿತ್ಯದ ವಿಷಯ ಮಾತಾಡಿದ್ದೇ ಹೆಚ್ಚು. ಹಿಂದಿನ ಮೈಸೂರಿನಲ್ಲಿ 'ಪ್ರಬುದ್ಧ ಕರ್ನಾಟಕ', ಉತ್ತರ ಕರ್ನಾಟಕದಲ್ಲಿ 'ಜಯ ಕರ್ನಾಟಕ' - ಈ ಎರಡು ನಿಯತಕಾಲಿಕೆಗಳು ಸಾಹಿತ್ಯವನ್ನು ಕುರಿತ ಲೇಖನಗಳಿಗೆ ಸಾಹಿತ್ಯ ಪ್ರಕಟಣೆಗಳ ವಿಮರ್ಶೆಗಳಿಗೆ ಅವಕಾಶ ಮಾಡಿಕೊಟ್ಟು ಮಾಡಿದ ಉಪಕಾರ ಅಷ್ಟಿಷ್ಟಲ್ಲ.''[೬೯] ನವೋದಯ ಕಾಲದಲ್ಲಿ ಸಾಹಿತ್ಯ ವಿಮರ್ಶೆ ಉತ್ತಮವಾಗಿಯೇ ನಡೆಯಿತು. ಪ್ರಗತಿಶೀಲ ಚಳುವಳಿ ಒಳ್ಳೆಯ ಸಾಹಿತ್ಯ ವಿಮರ್ಶೆಯನ್ನು ಸೃಷ್ಟಿಸಲಿಲ್ಲ. ನವ್ಯ ಸಾಹಿತ್ಯ ಆರಂಭವಾದಾಗ ವಿಮರ್ಶೆಯಲ್ಲಿಯೂ ನವ್ಯತೆ ಕಂಡುಬಂತು. ಕೇವಲ ವಿಮರ್ಶೆಯನ್ನೇ ತಮ್ಮ ಬರವಣಿಗೆಯನ್ನಾಗಿ ಮಾಡಿಕೊಂಡು ಹೆಸರುಗಳಿಂದ ಕೀರ್ತಿನಾಥ ಕುರ್ತುಕೋಟಿ, ಜಿ.ಎಸ್, ಅಮೂರ, ಎಚ್.ಜೆ. ನಾಯಕ್, ಗಿರಡ್ಡಿ ಗೋವಿಂದರಾಜ ಒಂದು ಕಡೆ ಇದ್ದಾರೆ. ತಮ್ಮ ಸೃಜನಶೀಲ ಬರಹಗಳ ಜೊತೆ ಕೃತಿ ವಿಮರ್ಶೆಯನ್ನು ಮಾಡಿಕೊಂಡವರು; ಜೊತೆ ಕೃತಿ ವಿಮರ್ಶೆಯನ್ನು

ಮಾಡಿಕೊಂಡವರು ಹಲವರು, ಪಟ್ಟಣಶೆಟ್ಟರು ಈ ಎರಡನೇ ಸಾಲಿಗೆ ಸೇರಿದವರಾಗಿದ್ದಾರೆ. ಇವರು ವಿಮರ್ಶೆಯನ್ನು ಒಂದು ಅನುಷಂಗಿಕ ಕ್ರಿಯೆಯನ್ನಾಗಿ ಮಾಡಿಕೊಂಡವರು. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಒಳ್ಳೆ ಆರು ವಿಮರ್ಶಾಯನ್ನು ಕುರಿತು. ಡಾ. ಪ್ರಹ್ಲಾದ ಅಗಸನಕಟ್ಟೆ ಹೀಗೆ ಹೇಳಿದ್ದಾರೆ. ''ಪಟ್ಟಣಶೆಟ್ಟಿಯವರ ಬರವಣಿಗೆಯಲ್ಲಿ ನವ್ಯ ಪರವಾದ ಒಲವು. ಅದರ ಧಾಟಿ-ಧೋರಣೆ, ಕೃತಿ ಪರೀಕ್ಷೆ, ಅರ್ಥ ವಿವೇಚನೆ, ಮೌಲ್ಯ ನಿಷ್ಕರ್ಷೆಯಲ್ಲಿ ಸಾಕಷ್ಟು ಪ್ರಭಾವ ಪೂರ್ಣವಾಗಿ ಕೆಲಸಮಾಡಿದೆ. ಆದರೆ ನವ್ಯ ವಿಮರ್ಶಕರಲ್ಲಿ ಸಾಮಾನ್ಯವಾಗಿ ಕಾಣಬರುವ ದೋಷಗಳಾದ ಉದ್ದೇಶ ಪೂರ್ವಕ ಕ್ಲಿಷ್ಟತೆ, ಸಂಕೀರ್ಣತೆ, ಅನಾವಶ್ಯಕ ಪರಿಭಾಷೆಗಳ ಬಳಕೆ, ಪುಂಖಾನು ಪುಂಖವಾಗಿ ತಮ್ಮ ವಾದ ಸಮರ್ಥನೆಗೆ ಇಂಗ್ಲೀಷ್ ವಿಮರ್ಶಕರ ಸಾಲುಗಳನ್ನು ಕೋಟ್ ಮಾಡುವ ಚಟ ಮುಂತಾದ ದೋಷಗಳಿಂದ ಪಟ್ಟಣಶೆಟ್ಟಿಯವರ ವಿಮರ್ಶೆ ಮುಕ್ತಗೊಂಡಿದೆ. ಇವರ ವಿಮರ್ಶಾ ಬರವಣಿಗೆಯ ಶೈಲಿ ಬಹಳ ನೇರ ಸರಳ, ಸಹೃದಯ ಹಾಗೂ ಮುಕ್ತವಾದುದಾಗಿದೆ. ಕೃತಿಯೊಂದನ್ನು ಬಹು ವಿನಯ ಪೂರ್ವಕವಾಗಿ ಪ್ರವೇಶಿಸಿ. ಅದನ್ನು ಅರ್ಥೈಸಲು ಪ್ರಯತ್ನಿಸುವ ಮನಸ್ಸೊಂದನ್ನು ಇಲ್ಲಿ ಕಾಣಬಹುದಾಗಿದೆ. ನವ್ಯ ವಿಮರ್ಶೆಯ ಎರಡು ಅತಿಶಯಗಳೆಂದರೆ ನವ್ಯ ಬರವಣಿಗೆಗಳನ್ನು ಸಮರ್ಥಿಸುವ ನವೋದಯ ಬರವಣಿಗೆಗಳನ್ನು ತಿರಸ್ಕರಿಸುವ ಅತಿಶಯಕ್ಕೆ ಹೋಗಿದ್ದು. ಆದರೆ ಪಟ್ಟಣಶೆಟ್ಟರು ಒಂದು ಸಮಪಾತಳಿಯನ್ನು ಕಾಯ್ದುಕೊಳ್ಳಲು ತೊಡಗಿರುವುದನ್ನು ಇಲ್ಲಿ ಕಾಣಬಹುದು. ಆ ಕಾಲದ ಒತ್ತಡದಿಂದಾಗಿ ನವ್ಯ ವಿಮರ್ಶೆಯ ನವ್ಯ ಬರವಣಿಗೆಯ ಸಮರ್ಥಕರಾಗಿಯೂ ಪಟ್ಟಣಶೆಟ್ಟರು ಅಲ್ಲಲ್ಲಿ ಕಂಡುಬರುತ್ತಾರೆ.''[೮೦]

ಬೇರೆ ಬೇರೆ ಕ್ಷೇತ್ರಗಳೆಲ್ಲಿ ಸಾಧನೆ ಮಾಡಿದವರ ಬಗ್ಗೆ ಜನಸಾಮಾನ್ಯರಲ್ಲಿ ಗೌರವ ಆಧರಗಳು ಮೂಡುವಂತೆ ಅವರ ಜೀವನ ಸಾಧನೆಗಳನ್ನು ತಿಳಿಸುವ ಕೃತಿಗಳೇ ಜೀವನ ಚರಿತ್ರೆಗಳಾಗಿವೆ. ಡಾ. ಸುಚೇತ ನವರತ್ನ ಅವರು ಹೇಳುವ ಹಾಗೆ ಸಾಹಿತ್ಯ ಕ್ಷೇತ್ರದ ಅತ್ಯಂತ ಸ್ಪಷ್ಟ, ಸರಳ ಪರಿಣಾಮಕಾರಿಯಾದ ಪ್ರಕಾರ ಜೀವನ ಚರಿತ್ರೆ. ನೇರವಾಗಿ, ಸರಳವಾಗಿ, ನಿರ್ಭಯವಾಗಿ, ಹಾಗೂ ಉದಾರವಾಗಿ ಉಕ್ತಗೊಂಡ ಸತ್ಯವೇ ಜೀವನ ಚರಿತ್ರೆಯ ಸಂವೋಹನ ಗುಣವೆಂದೂ ಆಲ್ ಫ್ರೆಡ್ ಆರ್ ಕ್ಲಾಕಿಂಗ್ ಹೇಳಿದ ಮಾತು ಸಮಂಜಸವಾಗಿದೆ.''[೮೧]

ಪಟ್ಟಣಶೆಟ್ಟರು ಎರಡು ಜೀವನ ಚರಿತ್ರೆಗಳನ್ನು ಒಂದು ವ್ಯಕ್ತಿ ಚಿತ್ರಣ ಕೃತಿಯನ್ನು ರಚಿಸಿದ್ದಾರೆ. ವ್ಯಕ್ತಿಯ ಮತ್ತು ಸ್ಥಳವಿಶೇಷತೆಗಳ ಆಂತರ್ಯವನ್ನು ಒಳಹೊಕ್ಕು ನೋಡುವ ಪ್ರಾಂಜಲ ಮನಸ್ಸು ಇವರಿಗಿದೆ. ಯಾರನ್ನು ಅನಾವಶ್ಯಕವಾಗಿ ಹೊಗಳಿ ಅಟ್ಟಕ್ಕೆ ಏರಿಸಿ. ವೈಭವಿಕರೀಸಿ ತೃಪ್ತಿ ಪಡಿಸುವ ಬರವಣಿಗೆ ಪಟ್ಟಣಶೆಟ್ಟರದಲ್ಲ. ಯಾರ ಬಗ್ಗೆಯೂ ಆರಾಧನಾ ಮನೋಭಾವನೆಯನ್ನು ತಾಳದೆ ಬದುಕಿ ಬಾಳಿದ ಬಗೆಯನ್ನು ಮಾತ್ರ ಸರಳವಾದ ಮಾತುಗಳಲ್ಲಿ ಹೇಳುತ್ತಾರೆ. ಅಂತೆಯೇ ಅವು ವ್ಯಕ್ತಿ ಪೂಜೆಗಳಾಗದೆ ವ್ಯಕ್ತಿತ್ವದ ಗುಣಗಾನಗಳಾಗಿವೆ. ತಮ್ಮ ಒಡನಾಟದಲ್ಲಿ ಬಂದ ಹಿರಿಯ ಸಾಹಿತಿಗಳ ಕೆಲವು ಸಣ್ಣ ತತ್ವಗಳನ್ನು ಯಾವ ಹಿಂಜರಿಕೆಯೂ ಇಲ್ಲದೇ ನೇರವಾಗಿ ಹೇಳಿದ್ದಾರೆ. ಇದ್ದದ್ದನ್ನು ಇದ್ದ ಹಾಗೇ ಹೇಳುವ ಗುಣ ಯಾರ ಮೂಲಾಜಿಗೂ ಒಳಗಾಗದ ಸ್ವಭಾವ ಪಟ್ಟಣಶೆಟ್ಟರದ್ದಾಗಿದೆ.

ಸೃಜನಶೀಲ ಸಾಹಿತಿಗಳಾದ ಪಟ್ಟಣಶೆಟ್ಟರು ಸೃಜನೇತರ ಕ್ಷೇತ್ರವಾದ ಸಂಪಾದನಾ ಕಾರ್ಯದಲ್ಲಿಯೂ ಉತ್ತಮ ಕೆಲಸ ಮಾಡಿದ್ದಾರೆ. ಕಾವ್ಯ, ಗೌರವಗ್ರಂಥಗಳು, ಸ್ಮರಣ ಗ್ರಂಥಗಳನ್ನು ಸಂಪಾದಿಸಿದ್ದಾರೆ. ಪ್ರತಿಯೊಂದು ಲೇಖನವನ್ನು

ಆಮೂಲಾಗ್ರವಾಗಿ ಓದಿ ವಾಕ್ಯದೋಷಗಳನ್ನು ಸರಿಪಡಿಸಿ ಉತ್ತಮ ಲೇಖನಗಳು ಹೊರಬರುವ ಹಾಗೆ ಮಾರ್ಗದರ್ಶನಮಾಡಿದ್ದಾರೆ.

ಕೃತಿಯ ಅಂತರಂಗ, ಬಹಿರಂಗ ಸರ್ವಾಂಗ ಸುಂದರವಾಗಿ ಪ್ರಕಟವಾಗುವಂತೆ ನೋಡಿಕೊಂಡಿದ್ದಾರೆ. ಅವರು ಬರೆದ ಸಂಪಾದಕೀಯ ಮಾತುಗಳು, ಬೆನ್ನುಡಿಗಳು, ಹೊಗಳಿ ಬರೆದ ಬರಹಗಳಲ್ಲಿ ಕೃತಿಯ, ವ್ಯಕ್ತಿಯ ವ್ಯಕ್ತಿತ್ವದ ಬಗ್ಗೆ ತಿಳಿಸುವ ಅರ್ಥಪೂರ್ಣ ಅಭಿಪ್ರಾಯಗಳಾಗಿವೆ. ಪಟ್ಟಣಶೆಟ್ಟರು ನಾಟಕ ಅಕಾಡೆಮಿಯ ಸದಸ್ಯರಾಗಿದ್ದಾಗ ರಂಗ ಸಂಪನ್ನರು ಮಾಲಿಕೆಯಡಿಲ್ಲಿ, ರಂಗ ಭೂಮಿಯಾಗಿ ದುಡಿದ ಅನೇಕ ಜನ ಕಲಾವಿದರ ಜೀವನ ಸಾಧನೆಗಳನ್ನು ಕೃತಿರೂಪದಲ್ಲಿ ತರುವ ಕೆಲಸಮಾಡಿದ್ದಾರೆ.

ಸಿದ್ಧಲಿಂಗ ಪಟ್ಟಣಶೆಟ್ಟಿಯವರು ವೃತ್ತಿಯಿಂದ ಹಿಂದಿ ಪ್ರಾಧ್ಯಾಪಕರು. ಹಿಂದೀ ಪ್ರಾಧ್ಯಾಪಕರಾಗಿ ಮೂರು ದಶಕಗಳ ಕಾಲ ಸೇವೆ ಸಲ್ಲಿಸಿದ್ದಾರೆ. ಆಗಾಗ ತಮ್ಮ ಅಭಿವ್ಯಕ್ತಿಗಾಗಿ ಹಿಂದೀ ಭಾಷೆಯನ್ನು ಬಳಸಿಕೊಂಡಿದ್ದಾರೆ. ಕರ್ನಾಟಕದಲ್ಲಿ ಹಿಂದೀಯಲ್ಲಿ ಕೆಲಸಮಾಡಿದವರಲ್ಲಿ ಪ್ರಮುಖರೆಂದರೆ ಪ್ರೊ.ನಾಗಪ್ಪ ಮತ್ತು ಹಾ.ಮ.ಸೂ.ಕೃಷ್ಣಮೂರ್ತಿಯವರು. ಈ ಪರಂಪರೆಯನ್ನು ಪಟ್ಟಣಶೆಟ್ಟರು ಮುಂದುವರಿಸಿಕೊಂಡು ಹೋಗಿದ್ದಾರೆ. ಇವರು ಹಿಂದೀಯಲ್ಲಿ ಕಾವ್ಯ, ನಿಬಂಧ, ವಿಮರ್ಶೆ, ಜೀವನ ಚರಿತ್ರೆ, ನಾಟಕಗಳನ್ನು ರಚಿಸಿದ್ದಾರೆ. ಹಿಂದೀಯ ಪ್ರಸಿದ್ಧ ಸಾಹಿತಿಗಳಾದ ಮೋಹನ ರಾಕೇಶ, ಜಯಶಂಕರ ಪ್ರಸಾದ, ಮೈಥಲೀ ಶರಣಗುಪ್ತ ನಾಮ ನರೇಶ ತ್ರಿಪಾಠಿ ಮುಂತಾದವರ ಸಾಹಿತ್ಯವನ್ನು ಕುರಿತು ವಿವೇಚಿಸಿದ್ದಾರೆ. ರಾಷ್ಟ್ರಕವಿ ಗೋವಿಂದ ಪೈ, ಬಸವಣ್ಣನವರ ಜೀವನ ಚರಿತ್ರೆಗಳನ್ನು ಹಿಂದೀಭಾಷಿಕರಿಗೆ ನೀಡಿದ್ದಾರೆ.

ಪಟ್ಟಣ ಶೆಟ್ಟರು ಬಹುಭಾಷಾ ವಿದ್ವಾಂಸರು ಇವರಿಗೆ ಇಂಗ್ಲಿಷ್, ಹಿಂದೀ, ಬಂಗಾಳೀ, ಮರಾಠಿ ಮುಂತಾದ ಭಾಷೆಗಳು ತಿಳಿದಿರುವುದರಿಂದ ಅನ್ಯಭಾಷೆಗಳ ಶ್ರೇಷ್ಠ ಕೃತಿಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಕಾವ್ಯ, ನಾಟಕ, ಜೀವನ ಚರಿತ್ರೆ, ವಿಚಾರ ಪ್ರಬಂಧಗಳನ್ನು ಇವರು ಅನುವಾದಿಸಿದ್ದಾರೆ.

ಕಾವ್ಯವನ್ನು, ಕಾವ್ಯವನ್ನಾಗಿ, ಅನುವಾದಿಸುವುದು ಬಹಳ ಕಷ್ಟದ ಕೆಲಸ. ಇವರು ಅನುವಾದಿಸಿರುವ 'ಕನುಪ್ರೀಯ' ಮತ್ತು 'ಮೀರಾವಾಣಿ'ಗಳು ಶ್ರೇಷ್ಠ ಕಾವ್ಯಾನುವಾದಗಳಾಗಿವೆ. ತಮ್ಮ ಸೃಜನಶೀಲ ಪ್ರತಿಭೆಯಿಂದ ಇವು ಕನ್ನಡದ ರಚನೆಗಳೆಂಬಷ್ಟರ ಮಟ್ಟಿಗೆ ಅನುವಾದಿಸಿದ್ದಾರೆ. ಇವರ ಶೇಷ ಪ್ರಶ್ನೆ, ಭಾರತೀ, ಕಾದಂಬರಿಗಳು ಮೀರಾಬಾಯಿ, ಜಯಶಂಕರ ಪ್ರಸಾದ ಅವರ ಜೀವನ ಚರಿತ್ರೆಗಳು ಉತ್ತಮವಾಗಿ ಅನುವಾದಗೊಂಡಿವೆ. ಇವರು ಅತಿ ಹೆಚ್ಚು ಅನುವಾದಮಾಡಿದ್ದು ನಾಟಕಗಳನ್ನು. ಕನ್ನಡ ನಾಟಕ ಸಾಹಿತ್ಯವನ್ನು ಅನುವಾದ ಸಾಹಿತ್ಯ ನಾಟಕಗಳಿಂದಲೇ ನೋಡಬೇಕಾಗುತ್ತದೆ. ''ಸಿಂಗರಾರ್ಯರ ಮಿತ್ರಾವಿಂದ್ಯಾ ಗೋವಿಂದ'' ಬಸಪ್ಪಶಾಸ್ತ್ರಿಗಳು 'ಶಾಕುಂತಲಾ' ಅಳ ಸಿಂಗಾರಾರ್ಯರ 'ಭಾಸ'ನ ಎರಡು ನಾಟಕಗಳು, ಡಿ.ವಿ.ಜಿಯವರು ಶೇಕ್ಸ್‌ಪಿಯರನ 'ಮೇಕಬೇಥ' ನಾಟಕ ಮುಂತಾದವುಗಳೆಲ್ಲ ಅನುವಾದ ನಾಟಕಗಳೇ ಆಗಿವೆ. ಪಟ್ಟಣ ಶೆಟ್ಟರು ಹಿಂದೀ, ಮರಾಠಿ, ಸಂಸ್ಕೃತ ಭಾಷೆಗಳಿಂದ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದರು. ಇವರಿಗೆ ರಂಗಭೂಮಿಯ ಪರಿಚಯವಿದ್ದ ಕಾರಣ, ರಂಗಭೂಮಿಯಲ್ಲಿ ಕೆಲಸ ಮಾಡಿದ ಕಾರಣ ಕನ್ನಡಕ್ಕೆ ಹೊಸದಾದ ನಾಟಕಗಳನ್ನು ರಂಗ ಪ್ರಯೋಗಗಳಲ್ಲಿ ಯಶಸ್ವಿಯಾಗುವ ನಾಟಕಗಳನ್ನು ಇವರು ಅನುವಾದಿಸಿದರು. ಡಾ.ನಾ.ದಾಮೋದರ ಶೆಟ್ಟಿ ಹೇಳುವ ಹಾಗೆ ''ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಎಲ್ಲಾ

ಅನುವಾದಿತ ನಾಟಕಗಳು ವಸ್ತುವಿನ ಆಯ್ಕೆಯ ದೃಷ್ಟಿಯಲ್ಲಿ, ಭಾಷೆಯ, ಶೈಲಿಯ ಬಳಕೆಯ ದೃಷ್ಟಿಯಲ್ಲಿ ಅದನ್ನು ತಮ್ಮದನ್ನಾಗಿಸುವ ದೃಷ್ಟಿಯಲ್ಲಿ, ಅನುಕರಣೀಯ, ಕಾರ್ಯಕಾರಣ ಸಂಬಂಧ ಇಲ್ಲಿ ಅತ್ಯಂತ ಯಶಸ್ವಿಯಾಗಿದೆ. ಅರ್ಥಾತ ನಿರ್ದಿಷ್ಟ ಗುರಿ ಇದ್ದೇ ಅವರು ಯಶಸ್ವಿಯಾಗಿದ್ದಾರೆ.''[೪೨]

ಕನ್ನಡ ಪ್ರಥಮ ಪತ್ರಿಕೆಯಾದ ಮಂಗಳೂರು ಸಮಾಚಾರದಲ್ಲಿಯೇ ಅಂಕಣ ಬರಹವನ್ನು ಕಾಣಬಹುದಾಗಿದೆ. ಅಂಕಣ ಬರಹ ಬಹುದಿನಗಳ ಕಾಲ ಸಾಹಿತ್ಯದ ಒಂದು ಪ್ರಕಾರವಾಗಿ ಮನ್ನಣೆಗಳಿಸಿದ್ದಿಲ್ಲ. 'ಆಡು ಮುಟ್ಟದ ಸೊಪ್ಪು ಇಲ್ಲ' ಎನ್ನುವಂತೆ ಅಂಕಣಕಾರರು ಎಲ್ಲಾ ವಿಷಯಗಳನ್ನು ಬರೆಯಬಹುದಾಗಿದೆ. ಕನ್ನಡದಲ್ಲಿ ವಿ.ಎಂ.ಇನಾಂದಾರ್, ಹಾ.ಮ.ನಾಯಕ, ಕು.ಶಿ.ಹರಿದಾಸ ಭಟ್ಟ, ಕೀರ್ತಿನಾಥ ಕುರ್ತುಕೋಟಿ, ಪಾಟೀಲ ಪುಟ್ಟಪ್ಪ ಇಂತಹ ಹಿರಿಯ ಲೇಖಕರು ಒಳ್ಳೆಯ ಅಂಕಣ ಸಾಹಿತ್ಯವನ್ನು ನಿರ್ಮಿಸಿದ್ದಾರೆ. ನವ್ಯದಲ್ಲಿ ಲಂಕೇಶರ 'ಟೀಕೆ ಟಿಪ್ಪಣಿ', ರವಿ ಬೆಳಗೆರೆಯವರ 'ಖಾಸಾಬಾತ್' ದಾಮೋದರ ಶೆಟ್ಟಿಯವರ ತೆಂಕಣದ 'ಸುಳಿಗಾಳಿ' ವೀರಣ್ಣದಂಡೆಯವರ 'ಕಲಬುರ್ಗಿ ಕಲರವ' ವಸಂತಕುಮಾರ ಪೆರ್ಲ ಅವರ 'ಪ್ರಸ್ತಾಪ' ರತ್ನಾಕರ ಶೆಟ್ಟಿಯವರ ಪ್ರಾಸಂಗಿಕ ಅಂಕಣಗಳು ಪ್ರಸಿದ್ಧಿ ಪಡೆದಿವೆ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಪ್ರಜಾವಾಣಿ ದಿನ ಪತ್ರಿಕೆಯ ಸಾಪ್ತಾಹಿಕ ಪುರವಣಿಯಲ್ಲಿ ಬರೆದ ಅಂಕಣ 'ಚಹಾದ ಜೋಡಿ ಚೂಡಾದ್ಹಾಂಗ' ಬರಹದಿಂದ ಅಂಕಣಕಾರರಾಗಿ ಹೆಸರುವಾಸಿ ಆದರು. ಇವರ ಅಂಕಣ ಬರಹದ ಚುಂಬಕ ಶಕ್ತಿ, ಧಾರವಾಡದ ಪ್ರಾದೇಶಿಕ ನುಡಿಯೇ ಆಗಿದೆ. ಬೇಂದ್ರೆ, ಕಂಬಾರರು ಉತ್ತರ ಕರ್ನಾಟಕದ ಭಾಷೆಯನ್ನು ತಮ್ಮ ಕಾವ್ಯದಲ್ಲಿ ಬಳಸಿಕೊಂಡು ಯಶಸ್ವಿಯಾದರು. ಪುಂಡಲೀಕ ಶೇಠ ಅವರು ಲಂಕೇಶ ಪತ್ರಿಕೆಯಲ್ಲಿ ಬರೆಯುತ್ತಿದ್ದ ರಾಜಕೀಯ ಅಂಕಣಕ್ಕೆ ಈ ಭಾಷೆಯನ್ನು ಬಳಸಿದರು. ಆದರೆ ಪಟ್ಟಣ ಶೆಟ್ಟರು ಸಾಂಸ್ಕೃತಿಕ, ಸಾಹಿತ್ಯಕ ವರದಿಗಳಿಗಾಗಿ ಈ ಭಾಷೆಯನ್ನು ದುಡಿಸಿಕೊಂಡರು. ಈ ಭಾಷೆಯ ಸೊಗಡನ್ನು ನಾಡಿಗೆಲ್ಲ ಪರಿಚಯಿಸಿದರು. ಇವರ ವರದಿಗಳು ಈ ಭಾಗದ ಸಾಂಸ್ಕೃತಿಕ, ಸಾಹಿತ್ಯಿಕ ದಾಖಲೆಗಳಾಗಿವೆ. ಉಪೇಕ್ಷೆಗೆ ಒಳಗಾದ ಸಂಗತಿಗಳನ್ನು ಪರಿಚಯಿಸುತ್ತಾ ತಾರತಮ್ಯವನ್ನು ಮನ ಮುಟ್ಟುವಂತೆ ಹೇಳುವ ಶಕ್ತಿ ಇವರ ಅಂಕಣ ಬರಹಗಳಲ್ಲಿದೆ. 'ಸಂಕಲನ' ಪತ್ರಿಕೆಯಲ್ಲಿ ಬರೆಯುತ್ತಿರುವ ಕಡೀಪುಟ, ಒನ್ನೇ ಪುಟಗಳು ಉತ್ತಮ ಅಂಕಣ ಬರಹಗಳಾಗಿದೆ.

ಕನ್ನಡದಲ್ಲಿ ಸಾಹಿತ್ಯ ಪತ್ರಿಕೆಗಳನ್ನು ಹುಟ್ಟುಹಾಕುವುದು ಸುಲಭ. ಆದರೆ ಅವು ನಿಲ್ಲದ ಹಾಗೆ ಬೆಳಸಿಕೊಂಡು ಹೋಗುವದು ಕಷ್ಟದ ಕೆಲಸ. ಚಂದ್ರಶೇಖರ ಪಾಟೀಲ, ಗಿರಡ್ಡಿಗೋವಿಂದರಾಜು, ಸಿದ್ಧಲಿಂಗಪಟ್ಟಣ ಶೆಟ್ಟಿಯವರು ಸೇರಿ ಹೊರತಂದ 'ಸಂಕ್ರಮಣ' ಪತ್ರಿಕೆ ಕನ್ನಡಸಾಹಿತ್ಯ ಲೋಕದಲ್ಲಿ ಒಂದು ಮೈಲುಗಲ್ಲು. ನವ್ಯದ ಮುಖವಾಣಿಯಾಗಿಯೇ ಮೂಡಿ ಬಂದ ಇದು ಅನೇಕ ಹೊಸ ವಿಚಾರಗಳನ್ನು ಹೊಸ ವ್ಯಕ್ತಿಗಳನ್ನು ಸಾಹಿತ್ಯ ಲೋಕಕ್ಕೆ ಪರಿಚಯಿಸಿತು. ಮಹತ್ವದ ಪತ್ರಿಕೆಯಾದ ಇದು ಜಿ.ಎಸ್.ಅಮೂರ ಹೇಳುವಂತೆ ''ಇವತ್ತು ಕನ್ನಡ ಸಾಹಿತ್ಯದಲ್ಲಿ ಪ್ರಖ್ಯಾತ ಅನೇಕ ಲೇಖಕರ ಕೃತಿಗಳನ್ನು ನಾನು ಓದಿದ್ದು ಸಂಕ್ರಮಣದಲ್ಲಿ, ಅದರಲ್ಲಿ ಕೆಲವರು ಸಂಕ್ರಮಣದ ಹಂಗು ಉಳಿಯದೇ ಬೆಳೆದಿದ್ದಾರೆ. ಅದರ ಕೀರ್ತಿ ಸಂಕ್ರಮಣಕ್ಕೆ ಸಲ್ಲಬೇಕು.''[೪೩] ಹಲವಾರು ಕಾರಣಗಳಿಂದ ಸಂಕ್ರಮಣದಿಂದ ದೂರವಾದ ಪಟ್ಟಣ ಶೆಟ್ಟರು ಸಂಕಲನ ಪತ್ರಿಕೆಯನ್ನು ಪ್ರಾರಂಭಿಸಿದರು. ಯಾವುದೇ ಸದ್ದುಗದ್ದಲವಿಲ್ಲದೇ ಸಾಹಿತ್ಯ ಕ್ಷೇತ್ರದಲ್ಲಿ ಸೇವೆಸಲ್ಲಿಸುತ್ತಿರುವ ಸಂಕಲನ ಪತ್ರಿಕೆಯ ಕನ್ನಡ ಮಹತ್ವದ

ಪತ್ರಿಕೆಗಳಲ್ಲೊಂದಾಗಿದೆ. ಸಂಶೋಧನಾ ಲೇಖನಗಳು ಕೃತಿ ವಿಮರ್ಶೆಗಳು, ಅನುಭವಮಾಲಿಕೆಗಳು, ಕಾವ್ಯ, ನಾಟಕಗಳಿಂದ ವೈವಿಧ್ಯಮವಾಗಿ ಮೂಡಿಬರುತ್ತಲಿದೆ. ಆದರೆ ಕನ್ನಡದಲ್ಲಿ ಕೊಂಡು ಓದುವವರ ಸಂಖ್ಯೆ ಇಂದು ಕಡಿಮೆಯಾಗಿದೆ. ಪಟ್ಟಣಶೆಟ್ಟರು ಪತ್ರಿಕೆ ನಿಲ್ಲಿಸುವ ವಿಚಾರವನ್ನು ವಿಜಯ ಕರ್ನಾಟಕ ದಿನಪತ್ರಿಕೆಯ ಸಂಪಾದಕರಾದ ವಿಶ್ವೇಶ್ವರ ಭಟ್ಟರ ಹತ್ತಿರ ಹೇಳಿಕೊಂಡಾಗ ಅವರು ತಮ್ಮ ಸಂಪಾದಕೀಯದಲ್ಲಿ ಈ ರೀತಿ ಪ್ರತಿಕ್ರಿಯಿಸಿದ್ದಾರೆ.

''ಮೊನ್ನೆ ಸಿದ್ಧಲಿಂಗ ಪಟ್ಟಣಶೆಟ್ಟರು ಕಛೇರಿಗೆ ಬಂದಿದ್ದರು. ಪಟ್ಟಣಶೆಟ್ಟರು ಬರುವಾಗಲೇ ನಗೆ ಚೆಲ್ಲುತ್ತಲೇ ಬರುತ್ತಾರೆ. ಅದು ಅವರ ವೈಶಿಷ್ಟ್ಯ. ಆದರೆ ಮೊನ್ನೆ ಅವರ ಮುಖದಲ್ಲಿ ಸಣ್ಣ ವಿಷಾದ ಆವರಿಸಿದಂತಿತ್ತು. ಕಳೆದ ಮೂರು ವರ್ಷಗಳಿಂದ ಅಕ್ಕರೆ, ಕಕ್ಕುಲಾತಿಯಿಂದ ಅವರು ಪ್ರಕಟಿಸುತ್ತಿರುವ 'ಸಂಕಲನ' ದ್ವೈಮಾಸಿಕ ಪತ್ರಿಕೆಯ ಕಡೆ ಮಾತು ಹೊರಳಿದಾಗ ಅವರ ವಿಷಾದ ಬಹಿರಂಗಗೊಂಡಿತು.

''ಯಾಕೋ ಸಾಕು ಅಂತ ಅನಿಸ್ಲಿಕ್ಕೆ ಶುರುವಾಗಿದೆ'' ಎಂದೇ ಪಟ್ಟಣ ಶೆಟ್ಟರು ಆರಂಭಿಸಿದರು. ಯಾಕೋ ಕೆಟ್ಟೆನಿಸಿತು. ಪಟ್ಟಣಶೆಟ್ಟರು ಕಾಲೇಜು ಮಾಸ್ತರಿಕೆಯಿಂದ ನಿವೃತ್ತರಾದ ಬಳಿಕ 'ಸಂಕಲನ' ಪತ್ರಿಕೆ ಅವರಿಗೆ ಪೂರ್ಣಾವಧಿ ಕೆಲಸ ಕೊಟ್ಟಿತ್ತು. ಕನ್ನಡದ ಸಾಹಿತ್ಯಕ ಪತ್ರಿಕೆಗಳೆಲ್ಲ ಒಂದೊಂದಾಗಿ ಪ್ರಕಟಣೆ ಸ್ಥಗಿತಗೊಳಿಸಿದಾಗ 'ಸಂಕಲನ' ಹುಟ್ಟಿಕೊಂಡಿದ್ದೇ ಖುಷಿಕೊಟ್ಟಿತ್ತು. ಆನಂತರ ಪಟ್ಟಣಶೆಟ್ಟರು ತಮ್ಮೆಲ್ಲ ಪ್ರೀತಿ, ಶ್ರದ್ಧೆಯನ್ನು ಧಾರೆಯೆರೆದು ಪತ್ರಿಕೆಯನ್ನು ಸಂಚಿಕೆಯಿಂದ ಸಂಚಿಕೆಗೆ ಅಂದಗೊಳಿಸಿದಾಗ ಒಂದಷ್ಟು ಸಮಾಧಾನವಾಗಿತ್ತು. ಪಟ್ಟಣಶೆಟ್ಟರನ್ನು ಪ್ರೀತಿಸಲು, ಅವರಿಗಾಗಿ ಎದುರು ನೋಡಲು ಮತ್ತೊಂದು ಕಾರಣವೂ ಸಿಕ್ಕಿತ್ತು.

ಆದರೆ ಈಗ ಪಟ್ಟಣಶೆಟ್ಟರು ಏಕಾಏಕಿ 'ಸಂಕಲನ' ನಿಲ್ಲಿಸುವ ಮಾತಾಡುತ್ತಿದ್ದಾರೆ. ''ಸಾರ್, ಯಾವುದೇ ಕಾರಣಕ್ಕೂ ಸಂಕಲನ ನಿಲ್ಲಿಸಬೇಡಿ. ಪತ್ರಿಕೆ ನಡೆಸಿಕೊಂಡು ಹೋಗುವುದು ಕಷ್ಟ. ನಿಲ್ಲಿಸುವುದು ಸುಲಭ ಅಂತ ಹೇಳ್ತಾರೆ. ಆದರೆ 'ಸಂಕಲನ' ದಂಥ ಪತ್ರಿಕೆಯನ್ನು ನಡೆಸಿಕೊಂಡು ಹೋಗುವುದು ಸುಲಭ ಹಾಗೂ ನಿಲ್ಲಿಸುವುದು ಕಷ್ಟ ಅಂತಾಗಬೇಕು. ಅದೇನೇ ಇರಲಿ ಸಂಕಲ ನಿಲ್ಲಿಸಬೇಡಿ'' ಎಂದೆ.

ಪಟ್ಟಣಶೆಟ್ಟರು ನೋವನ್ನು ತೋಡಿಕೊಂಡರು - ''ಆರಂಭದಲ್ಲಿ ಸುಮಾರು ೧೨೦ ಮಂದಿ ಮೂರು ವರ್ಷಕ್ಕೆ ೪೦೦ರೂ ಕೊಟ್ಟು ಚಂದಾದಾರರಾಗಿ ನನ್ನ ಉತ್ಸಾಹ ಹೆಚ್ಚಿಸಿದ್ದರು. ಆದರೆ ನಿಶ್ಚಿತವಾದ, ನಿಯಮಿತವಾದ ನೆರವು ಸಿಗದೇ, ಚಂದಾದಾರರ ಸಂಖ್ಯೆ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಾ ಹೋಯಿತು. ಒಟ್ಟಾರೆ ೪೦೦ರೂ ಕೊಟ್ಟವರು ೬೫೦ ಮಂದಿ ಇದ್ದರು. ಅನಂತರ ಇವರ ಸಂಖ್ಯೆ ೪೫೦ಕ್ಕೆ ಬಂದಿತು. ಈಗ ನಾನೂರಕ್ಕಿಂತ ಕಡಿಮೆ. ನನ್ನ ಅತ್ಯಂತ ಪರಿಚಿತ ವಲಯದ ಅನೇಕ ಸಾಹಿತಿ ಮಿತ್ರರು ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ೨೦-೩೦ ಸಾವಿರ ರೂಪಾಯಿ ಮಾಸಿಕ ವೇತನ ಪಡೆಯುವ ಪ್ರೊಫೆಸರ್‌ಗಳೂ ಸಹ ತಾವಾಗಿ ಬಯಸಿ ಸಂಕಲನ ಪಡೆಯುತ್ತಿದ್ದರೂ ವಾರ್ಷಿಕ ೧೫೦ ರೂ. ಚಂದಾ ಕೊಡುವುದಿಲ್ಲ. ಅಷ್ಟಕ್ಕಾಗಿ ನಾಲ್ಕುರು ಸಾರಿ ಪದೇ ಪದೆ ಅಲೆದಾಡಿಸಿದ್ದಾರೆ. ನನಗಾಗಿ ಎಂದೂ ಏನೂ ಬೇಡದ ನಾನು ಸಂಕಲನವನ್ನು ನಡೆಸಲು, ಅದು ತನ್ನ ಕಾಲ ಮೇಲೆಯೇ ನಿಂತು ಮುಂದುವರಿಯಲು ಬೇಕಾದ ಕನಿಷ್ಠ ೬೦೦ ಚಂದಾದಾರರನ್ನು ಪಡೆಯಲು ಸಾಧ್ಯವಾಗಿಲ್ಲ. ಹೀಗಿರುವಾಗ ಪತ್ರಿಕೆ ನಡೆಸುವುದು ಹೇಗೆ ನೀವೇಹೇಳಿ?''

ಸಾಹಿತ್ಯ, ಕಲೆ, ಸದಭಿರುಚಿಯ ಪತ್ರಿಕೆಗೆ ಒಂದು ಸಾವಿರ ಓದುಗರೂ ಸಿಗುವುದಿಲ್ಲ. ಅಂದರೆ ಅದು ನಿಜಕ್ಕೂ ಕಳವಳದ ವಿಷಯವೇ. ಮೂರು ವರ್ಷಕ್ಕೆ ಐನೂರು ರೂಪಾಯಿ ಕೊಡುವ ಆರುನೂರು ಚಂದಾದಾರರು ಸಿಕ್ಕರೆ ಮಾತ್ರ ಪತ್ರಿಕೆ ಮುಂದುವರಿಸಬಹುದು. ಏನೂ ಲಾಭವಾಗುವುದಿಲ್ಲವಾದರೂ ಕೈಸುಡುವುದಿಲ್ಲ. ಅದಕ್ಕಿಂತ ಕಡಿಮೆ ಚಂದಾದಾರರನ್ನಿಟ್ಟುಕೊಂಡು ಪತ್ರಿಕೆ ನಡೆಸುವುದು ಅಸಾಧ್ಯ.

ಸಾಹಿತ್ಯಕ್ಕೆ ಸಂಬಂಧಿಸಿದ ಬದುಕುಳಿದ ಪತ್ರಿಕೆಗಳೇ ವಿರಳ. ಸಾಕ್ಷಿ, ರುಜುವಾತು, ಶೂದ್ರದಂಥ ಪತ್ರಿಕೆಗಳನ್ನು ನಮ್ಮಿಂದ ಉಳಿಸಿಕೊಳ್ಳಲು ಆಗಲಿಲ್ಲ. ಇದ್ದುದರಲ್ಲಿ 'ಸಂಕ್ರಮಣ'ವನ್ನು ಚಂಪಾ ಹಠಕ್ಕೆ ಬಿದ್ದವರಂತೆ ಕೈಗಿಡುತ್ತಿದ್ದಾರೆ. ಇಂಥ ಪತ್ರಿಕೆಗಳನ್ನು ಮಾಡಿದವರು ಹಣ ಮಾಡುವುದಿರಲಿ, ನಷ್ಟ ಮಾಡಿಕೊಳ್ಳುವಂತಾಗಬಾರದು. ಜಾಹೀರಾತು ಬೆಂಬಲವಿಲ್ಲದ ಇಂಥ ಪತ್ರಿಕೆಗಳನ್ನು ಕನ್ನಡಿಗರು ಅಭಿಮಾನದಿಂದ ಪೋಷಿಸಬೇಕು. ಸಾಯಲು ಬಿಡಬಾರದು. ಮೂರು ವರ್ಷಕ್ಕೆ ಐನೂರು ರೂಪಾಯಿ ಕೊಡಲಾಗದಂಥ ಬಡತನ ಕನ್ನಡಿಗರದ್ದಲ್ಲ.

ಸಿದ್ಧಲಿಂಗ ಪಟ್ಟಣಶೆಟ್ಟಿಯವರು ತಮ್ಮ ಮನಸ್ಸನ್ನು ಬದಲಾಯಿಸುವಂತಾಗಲಿ 'ಸಂಕಲನ' ನಮ್ಮೊಂದಿಗಿರಲಿ. ಹಾಗಾಗುವಂತಾಗಲು ನಾವು ಮೊದಲಿಗೆ ಚಂದಾದಾರರಾಗೋಣ.''[೪೪]

ಹೀಗೆ ಹೊಸಗನ್ನಡ ಸಾಹಿತ್ಯದಲ್ಲಿ ನವ್ಯ ಕವಿಯಾಗಿ ಗುರುತಿಸಿಕೊಂಡ ಪಟ್ಟಣ ಶೆಟ್ಟರು ಶ್ರೇಷ್ಠ ಅನುವಾದಕರಾಗಿ ಉತ್ತಮ ಅಂಕಣ ಬರಹಗಾರರಾಗಿ, ಪತ್ರಿಕಾ ಸಂಪಾದಕರಾಗಿ, ನಿಷ್ಪಕ್ಷಪಾತ ವಿಮರ್ಶಕರಾಗಿ ಅನುಪಮ ಸಾಹಿತ್ಯ ಸೇವೆಯನ್ನು ಗೈದಿದ್ದಾರೆ. ಅನ್ಯಭಾಷೆ, ಅನ್ಯಸಂಸ್ಕೃತಿಗಳನ್ನು ಪರಿಚಯಿಸಿದ್ದಾರೆ. ಕವಿಯಾಗಿ ಇವರ ಕೊಡುಗೆ ಅಪಾರವಾದದ್ದು. ಸಾಹಿತಿ ಬಹುಭಾಷಾ ವಿಶಾರದನಾದಾಗ ಮಾತ್ರ ಅವನ ಭಾವಾನುಭವ, ಕಲ್ಪನಾ ಕೋಶಗಳು ವಿಸ್ತಾರಗೊಳ್ಳುತ್ತದೆ. ಹೊಸ ಹೊಸ ಅನುಭವಗಳು ದಕ್ಕುತ್ತವೆ. ಆಗ ಮೂಡಿ ಬರುವ ಸಾಹಿತ್ಯ ಶ್ರೇಷ್ಠಮಟ್ಟದ್ದಾಗಿರುತ್ತದೆ. ಇಂತಹ ಸಾಹಿತ್ಯವನ್ನು ಪಟ್ಟಣಶೆಟ್ಟರು ಸಾರಸ್ವತಲೋಕಕ್ಕೆ ನೀಡಿದ್ದಾರೆ.

ರಹಮತ್ ತರೀಕೆರೆ ಅವರು ಹೇಳುವ ಹಾಗೆ ''ಕನ್ನಡದ ಬಹುದೊಡ್ಡ ಲೇಖಕರು ತಮ್ಮನ್ನು ಎಂದೂ ನಿರ್ದಿಷ್ಟ ಪ್ರಕಾರ ಅಥವಾ ಕ್ಷೇತ್ರಕ್ಕೆ ಸೀಮಿತಗೊಳಿಸಿಕೊಳ್ಳಲಿಲ್ಲ. ಇದಕ್ಕೆ ಕಾರಣ ೨೦ನೇ ಶತಮಾನದ ಮೊದಲ ಘಟ್ಟದಲ್ಲಿ ಹಲವು ಪ್ರಕಾರಗಳಲ್ಲಿ ಕೃತಿ ರಚಿಸುವುದು ಒಂದು ಬಗೆಯ ನಾಡು ಕಟ್ಟುವ ಕೆಲಸವು ಆಗಿತ್ತು.''[೪೫] ಈ ನಿಟ್ಟಿನಲ್ಲಿ ಸಿದ್ಧಲಿಂಗ ಪಟ್ಟಣಶೆಟ್ಟರು ಸಾಹಿತ್ಯದ ಎಲ್ಲಾ ಪ್ರಕಾರಗಳಲ್ಲಿ ಕೃತಿ ರಚನೆ ಮಾಡಿದರು. ಇನ್ನೂ ಮಾಡುತ್ತಲೇ ಇದ್ದಾರೆ. ಇವರಿಂದ ಇನ್ನಷ್ಟು ಉತ್ತಮ ಸಾಹಿತ್ಯ ಹೊರಬಲೆಂಬುದೇ ಎಲ್ಲರ ಆಶಯವಾಗಿದೆ.

**ಅಡಿಟಿಪ್ಪಣಿ**


೧. ನರಹಳ್ಳಿ ಬಾಲಸುಬ್ರಹ್ಮಣ್ಯ, ನವ್ಯತೆ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೦, ಪು.೧

೨. ವೀರಣ್ಣರಾಜೂರು, ಕನ್ನಡ ಕಾವ್ಯದಲ್ಲಿ ನವ್ಯತೆ, ಕರ್ನಾಟಕ ಭಾರತಿ, ಕ.ವಿ.ವಿ, ಮೇ, ೧೯೯೩, ಪು.೯೬, ೯೭

೩. ಪ್ರೊ.ಎಲ್.ಎಸ್.ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೨, ಪು.೪,೫

೪. ಪ್ರೊ.ಎಲ್.ಎಸ್.ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೨, ಪು.೬

೫. ಡಾ.ಶಾಂತಲಕ್ಷ್ಮೀ, ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆಗಳು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೮, ಪು.೨೬

೬. ರಂ.ಶ್ರೀ.ಮುಗಳಿ, ಕನ್ನಡ ಸಾಹಿತ್ಯಚರಿತ್ರೆ, ಪು.೮೮

೭. ಪ್ರೊ.ಎಲ್.ಎಸ್.ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೨, ಪು.೬೪,೬೫

೮. ಎಚ್.ಕೆ.ರಾಮಚಂದ್ರ, ಆಧುನಿಕ ಕನ್ನಡ ಸಾಹಿತ್ಯ ಕೌಸ್ತುಭ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೭೧

೯. ಡಾ.ಎಸ್.ಶಿವಣ್ಣ, ಚಂದ್ರಶೇಖರ ಪಾಟೀಲರ ಸಾಹಿತ್ಯ ಸಮಗ್ರ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೨೦

೧೦. ಗೋಪಾಲಕೃಷ್ಣ ಅಡಿಗ, ಮಣ್ಣಿನವಾಸನೆ, ಅಕ್ಷರ ಪ್ರಕಾಶನ, ಸಾಗರ, ೧೯೭೫, ಪು.೭೭

೧೧. ಕೀರ್ತಿನಾಥ ಕುರ್ತುಕೋಟಿ, ನೂರುಮರ-ನೂರುಸ್ವರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೧೯೯೮, ಪು.೨೭೯, ೨೮೦

೧೨. ಪ್ರೊ.ಎಸ್.ಅನಂತನಾರಾಯಣ, ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ, ಗಂಗಾತರಂಗ ಸರಸ್ವತಿಪುರಂ, ಮೈಸೂರು, ೧೯೭೧, ಪು.೪೧೩

೧೩. ಕೀರ್ತಿನಾಥ ಕುರ್ತುಕೋಟಿ, ಯುಗಧರ್ಮ ಮತ್ತು ಸಾಹಿತ್ಯ, ಪು.೮೧

೧೪. ಪ್ರೊ.ಎಸ್.ಅನಂತನಾರಾಯಣ, ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ, ಗಂಗಾತರಂಗ ಸರಸ್ವತಿಪುರಂ ಮೈಸೂರು, ೧೯೭೧, ಪು.೬

೧೫. ದೇ.ಜ.ಗೌ.(ಪ್ರ.ಸಂ), ಸಹೃದಯ, ವನಸಿರಿ ಪ್ರಕಾಶನ, ಮೈಸೂರು, ೨೦೦೪, ಪು.೧

೧೬. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಪಟ್ಟಣಶೆಟ್ಟಿ ಸಮಗ್ರಕಾವ್ಯ ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ೨೦೦೦ ಪು.೨೦

೧೭. ಅದೇ ಪು.೨೫

೧೮. ಅದೇ ಪು.೪೬

೧೯. ಅದೇ ಪು.೭೦

೨೦. ಅದೇ ಪು.೭೦

೨೧. ಅದೇ ಪು.೧೮೬

೨೨. ಅದೇ ಪು.೧೯೦, ೧೯೧

೨೩. ಅದೇ ಪು.೧೮೬

೨೪. ಅದೇ ಪು.೧೨೮

೨೫. ಅದೇ ಪು.೧೩೨

೨೬. ದೇ.ಜ.ಗೌ (ಪ್ರ.ಸಂ), ಸಹೃದಯ, ವನಸಿರಿ ಪ್ರಕಾಶನ, ಮೈಸೂರು ೨೦೦೪, ಪು. ೧೯, ೨೦

೨೭. ಅದೇ ಪು.೨೧೭

೨೮. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಪಟ್ಟಣಶೆಟ್ಟಿ ಸಮಗ್ರ ಕಾವ್ಯ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ಪು.೯೨

೨೯. ಅದೇ ಪು.೨೦೦

೩೦. ಅದೇ ಪು.೧೯೫

೩೧. ದೇ.ಜ.ಗೌ (ಪ್ರ.ಸಂ), ಸಹೃದಯ, ವನಸಿರಿ ಪ್ರಕಾಶನ, ಮೈಸೂರು ೨೦೦೪, ಪು. ೨೨೨, ೨೨೩

೩೨. ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಪಟ್ಟಣಶೆಟ್ಟಿ ಸಮಗ್ರ ಕಾವ್ಯ, ಶ್ರೀ ಜಗದ್ಗುರು ತೋಂಟದಾರ್ಯ ಸಂಸ್ಥಾನಮಠ, ಗದಗ, ೨೦೦೦, ಪು. ೧೯೪, ೧೯೫

೩೩. ಅದೇ ಪು. ೮೫, ೮೫

೩೪. ಅದೇ ಪು. ೨೨೩, ೨೨೪

೩೫. ಅದೇ ಪು.೨೨೬

೩೬. ಪ್ರೊ.ದೊಡ್ಡರಂಗೇಗೌಡ, ಆಧುನಿಕ ಸಾಹಿತ್ಯ ಅಳಿಲು ಸೇವಾ ಸಂಸ್ಥೆ, ಬೆಂಗಳೂರು, ೨೦೦೨, ಪು.೨೩

೩೭. ಡಾ.ಸಿ.ಆರ್.ಯರವಿನತೆಲಿಮಠ, ಪಾಶ್ಚಾತ್ಯ ಸಾಹಿತ್ಯವಾದಗಳು ಮತ್ತು ಕನ್ನಡ ಸಾಹಿತ್ಯ ಸಂದರ್ಭ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೦, ಪು.೧೫೩, ೧೫೪

೩೮. ಪ್ರೊ.ಎಲ್.ಎಸ್.ಶೇಷಗಿರಿರಾವ್, ಹೊಸಗನ್ನಡ ಸಾಹಿತ್ಯ ಚರಿತ್ರೆ, ಅಂಕಿತ ಪುಸ್ತಕ, ಬೆಂಗಳೂರು, ೨೦೦೨, ಪು.೧೭೭

೩೯. ಅದೇ ಪು. ೨೧೬, ೨೧೭

೪೦. ದೇ.ಜ.ಗೌ.(ಪ್ರ.ಸಂ), ಸಹೃದಯ, ವನಸಿರಿ ಪ್ರಕಾಶನ, ಮೈಸೂರು, ೨೦೦೪, ಪು.೩೧೫

೪೧. ಡಾ.ಎಫ್.ಟಿ.ಹಳ್ಳಿಕೇರಿ ಮತ್ತು ಡಾ.ಕೆ.ರವೀಂದ್ರನಾಥ, ಸಂ.ದಶಕದ ಕನ್ನಡ ಸಾಹಿತ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೨, ಪು.೮೦

೪೨. ದೇ.ಜ.ಗೌ.(ಪ್ರ.ಸಂ), ಸಹೃದಯ, ವನಸಿರಿ ಪ್ರಕಾಶನ, ಮೈಸೂರು, ೨೦೦೪, ಪು.೩೬೧

೪೩. ಚಂಪಾ (ಸಂ) ಸಂಕ್ರಮಣ-೨೩೩, ಜನವರಿ, ೧೯೯೨, ಚಂಪಾಕಾಲಂ

೪೪. ವಿಜಯಕರ್ನಾಟಕ ದಿನಪತ್ರಿಕೆ ಸಂಪಾದಕೀಯ ದಿ.೨೭.೦೯.೨೦೦೪

೪೫. ರಹಮತ್ ತರೀಕೆರೆ, ಇಲ್ಲಿಯಾರು ಮುಖ್ಯರಲ್ಲ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ೨೦೦೫, ಪು.೧೧೦

* * *

# ಸಮಾರೋಪ

ಸುಮಾರು ನಾಲ್ಕುವರೆ ದಶಕಗಳಿಂದಲೂ ಸಾಹಿತ್ಯ ಕೃಷಿ ಮಾಡುತ್ತಾ ಬಂದಿರುವ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು. ಹೊಸಗನ್ನಡ ಸಾಹಿತ್ಯದ ನವ್ಯ ಕವಿಗಳಲ್ಲಿ ಪ್ರಮುಖರಾಗಿದ್ದಾರೆ. ಮೂಲತಃ ಕವಿ ಮನಸ್ಸಿನವರಾದ ಪಟ್ಟಣಶೆಟ್ಟಿಯವರು ಕಾವ್ಯದ ಜೊತೆ ಜೊತೆಗೆ ಉತ್ತಮ ಅನುವಾದಕರಾಗಿ ಶ್ರೇಷ್ಠ ಅಂಕಣ ಬರಹಗಾರರಾಗಿ ಒಳ್ಳೆಯ ಪತ್ರಿಕಾ ಸಂಪಾದಕರಾಗಿ ವಿಮರ್ಶಕರಾಗಿ, ರಂಗಕರ್ಮಿಗಳಾಗಿ, ಗ್ರಂಥ ಸಂಪಾದಕರಾಗಿ ಸಾಹಿತ್ಯದ ಬಹುತೇಕ ಎಲ್ಲಾ ಪ್ರಕಾರಗಳಲ್ಲಿಯೂ ರಚನೆಗೈದಿದ್ದಾರೆ. ತಮ್ಮ ಅನುವಾದ ಸಾಹಿತ್ಯದ ಮೂಲಕ ಅನ್ಯ ದೇಶಿಯ ಸಂಸ್ಕೃತಿ, ವಿಚಾರ, ಆಚಾರಗಳನ್ನು ಕನ್ನಡಕ್ಕೆ ಪರಿಚಯಿಸಿದ್ದಾರೆ. ಈಗಿನ ಸಾಹಿತ್ಯ ಸಂದರ್ಭದಲ್ಲಿ ವಿಶಿಷ್ಟವೆನ್ನಬಹುದಾದ ಸಾಹಿತ್ಯ ರಚನೆಯನ್ನು ಮಾಡುತ್ತಾ ಬಂದಿದ್ದಾರೆ.

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಸಾಹಿತ್ಯ ರಚನೆಗೆ ತೊಡಗಿದ್ದು ಎಪ್ಪತ್ತರ ದಶಕದ ಆರಂಭದಲ್ಲಿ. ಈ ಕಾಲ ಸಾಹಿತ್ಯ ಮತ್ತು ರಾಜಕೀಯ ದೃಷ್ಟಿಯಿಂದ ಸ್ಥಿತ್ಯಂತರದ ಕಾಲವಾಗಿದೆ. ಸ್ವಾತಂತ್ರ್ಯ ಪಡೆದನಂತರ ನಿಧಾನವಾಗಿ ಜನತೆಯ ಆಸೆಗಳು ಕರಗಿ ನಂಬಿಕೆಗಳು ದುರ್ಬಲವಾಗ ತೊಡಗಿದವು. ಒಟ್ಟಾರೆಯಾಗಿ ಭ್ರಮನಿರಸನ ಈ ಸಂದರ್ಭದಲ್ಲಿ ಹೆಚ್ಚಾಯಿತು. ಆಗ ಕನ್ನಡ ಸಾಹಿತ್ಯದಲ್ಲಿ ಹೊಸತಾದ ನವ್ಯ ಮಾರ್ಗ ರೂಪಗೊಂಡಿತು. ಡಾ. ಶಾಂತಲಕ್ಷ್ಮಿ ಅವರು ಹೇಳುವ ಹಾಗೆ ''ಪಾಶ್ಚಾತ್ಯ ಸಾಹಿತ್ಯದ ಪ್ರೇರಣೆ ನವ್ಯ ಕಾವ್ಯ ಸ್ವರೂಪವನ್ನು ಮಾತ್ರವಲ್ಲ, ಕಾವ್ಯ ಜಿಜ್ಞಾಸೆಯನ್ನು ರೂಪಿಸಿತು. ವಸ್ತು, ರೀತಿ, ತಂತ್ರ, ಶೈಲಿ ಇತ್ಯಾದಿಗಳನ್ನು ಕುರಿತಂತೆ ಅಪಾರವಾದ ಬದಲಾವಣೆಯನ್ನು ಮೂಡಿಸಿತು. ನವೋದಯದವರ ಸೌಂದರ್ಯ ಪ್ರಿಯತೆ, ಪ್ರಕೃತಿ ಪ್ರೇಮ, ಆದರ್ಶ ಪ್ರಿಯತೆ, ಆಧ್ಯಾತ್ಮಿಕತೆ, ಕೌಟುಂಬಿಕ ಪ್ರೇಮ ಪ್ರಣಯ ಮುಂತಾದವನ್ನು ನಿರಾಕರಿಸಿ ಜೀವನದ ಅತೃಪ್ತಿ, ನಿರಾಶೆ, ಬೇಸರ, ಭೀಭತ್ಸಗಳನ್ನು ವೈಭವೀಕರಿಸುತ್ತ ಸಿನಿಕತನವನ್ನು ನವ್ಯ ಕವಿಗಳು ಬೆಳೆಸಿಕೊಂಡರು. ಆಡುಮಾತು, ವಾಸ್ತವಿಕತೆ, ವೈಚಾರಿಕತೆ, ಸಂಕೀರ್ಣ ಬದುಕಿನ ಸ್ವಾನುಭವದ ಅಭಿವ್ಯಕ್ತಿಯೇ ಕಾವ್ಯ. ಕಾವ್ಯ ದೈವದತ್ತವಾದದಲ್ಲ, ಸ್ಫೂರ್ತಿಯ ಫಲವಲ್ಲ, ಮಣ್ಣಿನ ವಾಸನೆಯ ವಾಸ್ತವಿಕ ಸಾಮಾಜಿಕ ಪ್ರಜ್ಞೆಯ ಪ್ರತಿನಿಧಿ ಎಂದು ಭಾವಿಸಿರುವವರು''[೧] ಈ ಹಿನ್ನೆಲೆಯಲ್ಲಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ನವ್ಯ ಕವಿಗಳಲ್ಲಿ ಒಬ್ಬರಾಗಿ ನವ್ಯದ ಧೋರಣೆಗಳಾಗಿ ಅನುಗುಣವಾಗಿ ಸಾಹಿತ್ಯ ರಚನೆಯಲ್ಲಿ ತೊಡಗಿದರು.

ನವ್ಯ ಕವಿಗಳು ಆತ್ಮ ವಿಮರ್ಶೆಯ ಬೆಳಕಿನಲ್ಲಿ ಹೊಸ ಹಾದಿಗಳನ್ನು ನಿರ್ಮಿಸತೊಡಗಿದ್ದರು. ಉತ್ತಮ ಕೃತಿಗಳನ್ನು ಕನ್ನಡ ಸಾರಸ್ವತಲೋಕಕ್ಕೆ ನೀಡುತ್ತಾ ಭಿನ್ನಮಾರ್ಗದಲ್ಲಿ ತಮ್ಮ ಕಾವ್ಯ ಜೀವನವನ್ನು ಆರಂಭಿಸಿದವರೆಂದರೆ ಲಂಕೇಶ, ಚಂದ್ರಶೇಖರ ಪಾಟೀಲ, ಸಿದ್ಧಲಿಂಗಯ್ಯ ಹಾಗೆಯೇ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ ಮುಂತಾದವರು. ೧೯೬೪ ರಿಂದ ಇಂದಿಗೂ ನಿರಂತರವಾಗಿ ಕಾವ್ಯ ರಚನೆ ಮಾಡುತ್ತಾ ಇರುವ ಪಟ್ಟಣಶೆಟ್ಟರು, ಇಲ್ಲಿಯವರೆಗೆ ಕನ್ನಡದಲ್ಲಿ ಹದಿಮೂರು ಹಿಂದಿಯಲ್ಲಿ ಒಂದು ಕವನ ಸಂಕಲನಗಳನ್ನು ಹೊರತಂದಿದ್ದಾರೆ. ಇವರಿಗೆ ಕಾವ್ಯ ಬಹಳ ಇಷ್ಟವಾದ ಪ್ರಕಾರ. ಇವರು ತಮ್ಮ ಕಾವ್ಯದ ಮೂಲಕ ಓದುಗರಿಗೆ ಬಹುಬೇಗನೆ ಆಪ್ತರಾಗಿಬಿಡುತ್ತಾರೆ. ಯಾವುದೇ ಸದ್ದುಗದ್ದಲವಿಲ್ಲದೆ ಸಾಹಿತ್ಯ ರಚನೆ ಮಾಡಿಕೊಂಡು ಬಂದಿದ್ದಾರೆ. ಬದುಕಿನ ಲಯವನ್ನಾಲಿಸುತ್ತಾ, ಅದನ್ನು ಬರಹಕ್ಕಿಳಿಸುವ ಅವರ ಶೈಲಿ ಅನುಪಮವಾದುದಾಗಿದೆ. ಹೊಸಗನ್ನಡ ಸಾಹಿತ್ಯ ಅನೇಕ ಅವಸ್ಥಾಂತರಗಳಿಗೆ ಒಳಗಾಗಿದೆ. ಇದರ ಪ್ರಭಾವಕ್ಕೆ ಸಿಲುಕಿ ಅನೇಕ ಜನ ಕವಿಗಳು ಬದಲಾಗಿದ್ದಾರೆ. ಆದರೆ ಪಟ್ಟಣಶೆಟ್ಟರು ಅವೆಲ್ಲವನ್ನು ಕಂಡು ಅರಗಿಸಿಕೊಂಡು ಕಾವ್ಯ ಸೃಷ್ಠಿಯಲ್ಲಿ ತೊಡಗಿದ್ದಾರೆ. ಇವರ ಕಾವ್ಯಗಳು ವೈಯಕ್ತಿಕವಾದುದ್ದನ್ನು ಕುರಿತು ಹೇಳುವಂತೆ ಭಾಸವಾದರೂ ಅವು ಸಾರ್ವತ್ರಿಕವಾಗಿಯೇ ಇವೆ. ಅವರ ಕಾವ್ಯ ಜೀವನವೇ ಆಗಿದೆ. ಆದರೆ ಕವಿಯ ಜೀವನ ಎಲ್ಲರ ಜೀವನದಂತೆ ಇರದೆ ಬೇರೆಯದೇ ಆಗಿದೆ. ಕವಿಯ ಜೀವನದಲ್ಲಿ ಹೆಣ್ಣು ಪ್ರಧಾನ ಪಾತ್ರವಹಿಸಿದ್ದಾಳೆ. ಈಕೆಯಿಂದಲೇ ಕವಿಗೆ ನೋವು ನಲಿವುಗಳು ಉಂಟಾಗಿವೆ. ಹೆಂಡತಿಯಾಗಿ, ತಾಯಿಯಾಗಿ, ಮಗಳಾಗಿ ಬೇರೆ ಬೇರೆ ರೀತಿಯಲ್ಲಿ ಕಾವ್ಯದ ವಸ್ತುವಾಗಿದ್ದಾಳೆ. ಆದರೆ ಕವಿಗಳು ಈಕೆಯಿಂದ ಅನುಭವಿಸಿದ ಸುಖಕ್ಕಿಂತ ನೋವೇ ಜಾಸ್ತಿಯಾಗಿದೆ. ವಿರಹ ವೇದನೆಗಳಿಂದ ಕೂಡಿದ ಕಾವ್ಯಗಳು ಹೆಚ್ಚಾಗಿ ಮೂಡಿಬಂದಿವೆ. ಹೀಗೆ ಹೆಣ್ಣಿನಿಂದಲೇ ಎಲ್ಲಾ ಕಷ್ಟಗಳು ಬಂದರೂ ಕವಿನೊಂದರೂ ಅವೆಲ್ಲಾ ಕಾವ್ಯವಾಗಿ ಮೂಡಿಬಂದರೂ ಕವಿ ಹೆಣ್ಣನ್ನು ಸಂಪೂರ್ಣವಾಗಿ ತ್ಯಜಿಸುವುದಿಲ್ಲ ಅದು ಕವಿಗೆ ಸಾಧ್ಯವಿಲ್ಲ. ಕವಿಗೆ ಕಾವ್ಯಕ್ಕೆ ಮತ್ತೆ ಹೆಣ್ಣು ಬೇಕೇ ಬೇಕು.

ಹೆಣ್ಣು,

ನನಗೆ ಮೋಹಗಳ ಮಧುರ ಆಕರ್ಷಣೆ

ಬಣ್ಣಗಳ ತುಂಬಿರುವ ಐಂದ್ರಜಾಲಿಕ ಕಣ್ಣು

ಎತ್ತ ಬೇಕಾದತ್ತ ಹೊರಳಿ ಮರಳಿನಲ್ಲೂ

ನಿತ್ಯ ಚಿತ್ತಾರಗಳ ಬರೆವ ದೀರ್ಘವಾಹಿನಿ

- ಸದಾ ಯೌವನೆ ನದಿ

ಕವಿಗೆ ಹೆಣ್ಣಿನ ಮೇಲೆ ವಿಶೇಷವಾದ ವ್ಯಾಮೋಹವಿರುವುದನ್ನು ಕಾಣಬಹುದಾಗಿದೆ. ಅದನ್ನು ಕುರಿತು ಅವರು ಜಿಜ್ಞಾಸೆಯನ್ನು ಮಾಡುತ್ತಾರೆ. 'ಪ್ರೀತಿಯೊಂದೆ ಹೌದು, ಪ್ರಣಯವೊಂದೇ ಕಾವ್ಯವಾಗುವ ಕಾವು ಪಡೆದಿಹುದು ಎಂದು ಮುಂದುವರಿದು', ಕವಿತೆ ಬರೆಯುವುದಕ್ಕೆ ಈ ಹಾಳು ಹುಡಿಗಿಯರೇ ಬೇಕೆ? ಎಂದು ಅವರೇ ಕೇಳುತ್ತಾರೆ. ಭಾವಗೀತೆಯಿಂದ ಹಿಡಿದು ದೀರ್ಘಕಾವ್ಯದ ವರೆಗೆ ಹೆಣ್ಣನ್ನು ಕುರಿತು ಬರೆದವರಿದ್ದಾರೆ. ಆದರೆ ಪಟ್ಟಣಶೆಟ್ಟರು ಕಿರುಗಮನದಲ್ಲಿ ಹೆಣ್ಣಿನ ಮೂಲ ಗುಣವನ್ನು ಕುರಿತು ಹೀಗೆ ಹೇಳಿದ್ದಾರೆ.

ಹೆಣ್ಣು

ಸಮಸ್ಯೆಯ ನೆಗೆಟಿವ್

ಎಷ್ಟು ಪ್ರತಿ ಮುದ್ರಿಸಿದರೇನು

ಬೃಹತ್ತಿಸಿದರೇನು ?

ಹಂಬಲ ರಸಾಯನ ತಿಕ್ಕಿದಷ್ಟು

ಅದೇ ಅಸ್ಪಷ್ಟ ಚಿತ್ರ ಇನ್ನೂನು.

ಹೀಗೆ ಹೆಣ್ಣು ಅವಳಿಂದ ಸಿಕ್ಕ ಪ್ರೀತಿ, ಪ್ರೇಮ , ವಿರಹ, ವೇದನೆ, ನೋವುಗಳೇ ಪಟ್ಟಣಶೆಟ್ಟರ ಹೆಚ್ಚಿನ ಕವನಗಳ ಸ್ಥಾಯಿಯಾಗಿದ್ದರೂ ಕವಿ ಹಲವಾರು ಕವನಗಳಲ್ಲಿ ಸಮಾಜಮುಖಿಯಾಗಿದ್ದಾರೆ. ದೇಶಪ್ರೇಮವನ್ನು ಮೆರೆದಿದ್ದಾರೆ. ಆತ್ಮ ವಿಮರ್ಶೆಮಾಡಿಕೊಂಡಿದ್ದಾರೆ. ಸಮಾಜದಲ್ಲಿನ ಅವ್ಯವಸ್ಥೆಗಳನ್ನ ಕಂಡು ಆಕ್ರೋಶಗೊಂಡಿದ್ದಾರೆ. ಒಟ್ಟಾರೆಯಾಗಿ ಇವರ ಕಾವ್ಯ ನವ್ಯದ ಪ್ರಮುಖ ಲಕ್ಷಣಗಳನ್ನು ಮೈಗೂಡಿಸಿಕೊಂಡು ನಿರಂತರವಾಗಿ ಮುಂದುವರಿಯುತ್ತಲಿದೆ. ಇವರು ೧೯೬೩ರಲ್ಲಿ ಮೊದಲು ಹಿಂದಿಯಲ್ಲಿ ಶೈಲ್ ಔರ್ ಸಾಗರ್ ಕವನ ಸಂಕಲನವನ್ನು ಹೊರತಂದರೂ ನಂತರ ಕನ್ನಡದಲ್ಲಿ ಕಾವ್ಯ ಕೃಷಿ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಇವರ ಕಾವ್ಯದಲ್ಲಿ ಬರುವ ಪ್ರತಿಮೆ ಸಂಕೇತಗಳು ವಿಶಿಷ್ಟವಾಗಿವೆ. ಶಿವಶಂಕರ ಹಿರೇಮಠರು ಹೇಳುವ ಹಾಗೆ ''ಇಂದು ಸಿ.ಪ. ೬೦. ಈಗಲೂ ಇವರು ಹಾಡಿನ ಮೋಡಿಯಲ್ಲಿ ಹೊಸ ಅರ್ಥದ ಹೊಸರಹಸ್ಯದ ಶತಮುಖಗಳನ್ನು ಕಾಣಬಯಸುತ್ತಾರೆ. ಪ್ರಶ್ನೆಗಳ ನೆನಪುಗಳ ತಿಳಿಯಾದ ಸೂತ್ರದಿಂದ ಬದುಕನ್ನು ಕಟ್ಟಬಯಸುತ್ತಾರೆ. ಜಾತಿ ಮತ ಪಂಥಗಳಿಂದ ಅತೀತವಾದ ಉಚ್ಚ, ನೀಚ ಮೇಲು ಕೀಳುಗಳ ತಾರತಮ್ಯ ವಿಲ್ಲದೆ ಎಲ್ಲರೊಂದಿಗೆ ಹೃದ್ಯವಾಗಿ ಇರಬಯಸುವ ಕವಿ''[೨] ಜೀವನಮುಖಿ ಸಮಾಜಮುಖಿ ಕವಿಯಾದ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಕಾವ್ಯ ಜೀವನದಲ್ಲಿ ಸಹಜವಾಗಿ ಬರುವ ಸೋಲು ಗೆಲುವು, ನೋವು ನಲಿವುಗಳೆಲ್ಲವನ್ನು ಮೀರಿದ ಆಶಾಧ್ವನಿಯಿದೆ. ಇವರು ಜೀವನಾನುಭವವನ್ನು ಸಮೃದ್ಧವಾಗಿ ತುಂಬಿಕೊಂಡಿರುವ ಕವಿಯಾಗಿದ್ದಾರೆ. ಇಚ್ಛಾಶಕ್ತಿಯೇ ಇವರ ಕವಿತೆಗಳ ಆಂತರ್ಯವಾಗಿದೆ. ಇವರ ಅನೇಕ ಕವಿತೆಗಳು ಬದುಕಿನ ಏರಿಳಿತಗಳ ಸಂಕೇತದಂತೆ ಕಂಡುಬರುತ್ತವೆ. ಭಾಷೆ ಸರಳವಾಗಿರುವುದರಿಂದ ಅನುಭವ ಸಮೃದ್ಧವಾಗಿರುವುದರಿಂದ ಇವರ ಕಾವ್ಯ ಶೈಲಿ ಆಪ್ತದಾಟಿಯಲ್ಲಿ ಸಾಗುತ್ತದೆ. ಕವಿ ಬದುಕನ್ನು ವಿಶಿಷ್ಟವಾಗಿ ಬದುಕಬೇಕೆಂದು ಕೊಂಡಿದ್ದರೂ ವಿಧಿ ಬೇರೆಯದೇ ಆದ ರೀತಿಯಲ್ಲಿ ನಡೆಸಿದೆ. ಬದುಕಿನ ಅನುಭವಗಳು ವಿಶಿಷ್ಟವಾಗಿವೆ. ಕಾವ್ಯವಾಗಿ ಮೂಡಿಬಂದು ಕನ್ನಡ ಸಾಹಿತ್ಯ ಲೋಕ ಸೇರಿದೆ. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಇಲ್ಲಿಯವರೆಗೆ ಅಧ್ಯಯನಕ್ಕೆ ಒಳಪಡಿಸಿದ ಸಮಗ್ರ ಕಾವ್ಯ ಕವಿಯ ಸಮಗ್ರ ಕಾವ್ಯವಲ್ಲ. ಕವಿ ಇಲ್ಲಿಯವರೆಗೆ ಬರೆದಿರುವ ಸಮಗ್ರ ಕಾವ್ಯ ಮಾತ್ರವಾಗಿದೆ.

ಇವರ ಎರಡು ಕಥಾ ಸಂಕಲನಗಳನ್ನು ಬರೆದಿದ್ದರೂ ಕನ್ನಡ ಕಥಾಲೋಕದಲ್ಲಿ ಅವುಗಳ ಹೆಜ್ಜೆ ಗುರುತುಗಳನ್ನು ಮೂಡಿಸಿಲ್ಲ ಇವರ ಕಥೆಗಳು ಕಥೆಗಾರ ತಮ್ಮ ಜೀವನದಲ್ಲಿ ಕಂಡ ಅನುಭವಿಸಿದ ಘಟನೆಗಳಂತೆ ಕಂಡುಬರುತ್ತವೆ. ಯಾವ ಕಸರತ್ತು ಇಲ್ಲದ ಈ ಕಥೆಗಳು ಸರಳವಾಗಿ ಓದಿಸಿಕೊಂಡು ಹೋಗುತ್ತವೆ. ಸಂವಹನದ ದೃಷ್ಟಿಯಿಂದ

ನೋಡಿದರೂ ಸರಳವಾಗಿವೆ. ಧಾರವಾಡದ ಪ್ರಾದೇಶಿಕ ಭಾಷೆ ನುಡಿಗಟ್ಟುಗಳು ನಾಣ್ಣುಡಿಗಳು ಇವರ ಕಥೆಗಳಲ್ಲಿವೆ.

ಡಾ. ಸಿದ್ಧಲಿಂಗ ಪಟ್ಟಣಶೆಟ್ಟರು ಎರಡು ಜೀವನ ಚರಿತ್ರೆಗಳು ಶುಷ್ಕವರದಿಗಳಾಗಿರದೆ ರಸಾನುಭವವನ್ನು ಮೂಡಿಸುವಂತಿವೆ. ನನಗೆ ಈ ಬರವಣಿಗೆ ಹೊಸರೀತಿಯದು ಎಂದು ಕೃತಿಯ ಆರಂಭದಲ್ಲೇ ಹೇಳಿದ್ದರೂ ಇವರಿಗೆ ಈ ಪ್ರಕಾರ ಹೊಸದಾಗಿರಬಹುದೇ ಹೊರತು ಬರವಣಿಗೆ ಹೊಸದಲ್ಲ ಇವರು ಎರಡೂ ಜೀವನ ಚರಿತ್ರೆಗಳಲ್ಲಿ ಉಪಶೀರ್ಷಿಕೆಗಳನ್ನು ನೀಡಿದ್ದಾರೆ. ಈ ಉಪಶೀರ್ಷಿಕೆಗಲು ಕಾವ್ಯಮಯವಾಗಿವೆ. ವಿರೇಂದ್ರ ಹೆಗ್ಗಡೆಯವರ ಜೀವನ ಸಾಧನೆಗಳನ್ನು ದಾಖಲಿಸುತ್ತ ಧರ್ಮಸ್ಥಳದ ಇತಿಹಾಸವನ್ನು ಪರಂಪರೆಯನ್ನು ಕುರಿತು ಹೇಳುತ್ತಾರೆ. ಅದೇ ರೀತಿ ಹಳ್ಳಿಕೇರಿ ಗುದ್ಲೆಪ್ಪನವರ ಬಾಲ್ಯ ಮತ್ತು ಲೌಕಿಕ ಸಾಧನೆಗಳನ್ನು ಪಟ್ಟಿಮಾಡಿಕೊಡುತ್ತಾ ಗುದ್ಲೆಪ್ಪನವರ ಅಂತರಂಗ ಬಹಿರಂಗದ ಸೂಕ್ಷ್ಮವಾದ ವಿವರಗಳನ್ನು ನೀಡುವಲ್ಲಿ ಲೇಖಕರು ಯಶಸ್ವಿಯಾಗಿದ್ದಾರೆ. ಋಣಾನುಬಂಧ ಒಂದು ವ್ಯಕ್ತಿ ಚಿತ್ರಣ ಕೃತಿಯಾಗಿದ್ದು ಲೇಖಕರು ತಮ್ಮ ಸಂಪರ್ಕದಲ್ಲಿ ಬಂದ ಗಣ್ಯ ವ್ಯಕ್ತಿಗಳ ಗುಣ ಸ್ವಭಾವಗಳನ್ನು ಲೋಪದೋಷಗಳನ್ನು ಮುಚ್ಚು ಮರೆಯಿಲ್ಲದೇ ಹೇಳುತ್ತಾರೆ. ಈ ಬರವಣಿಗೆಯಲ್ಲಿ ಒಳ್ಳೆಯ ತನದ ಬಗ್ಗೆ ಅಭಿಮಾನವಿದೆ. ಕೆಟ್ಟದ್ದು ನಡೆದಾಗ ಮರುಕವಿದೆ. ವ್ಯಕ್ತಿಗಳ ಬಗ್ಗೆ ಸಾತ್ವಿಕ ಸಂತಾಪವಿದೆ. ವ್ಯಂಗದಲ್ಲೂ ವಿಷಾದವಿದೆ. ಸಾರಸ್ವತ ಲೋಕದಲ್ಲಿ ಕಳೆದ ಮೂವತ್ತು ವರ್ಷಗಳಿಂದ ಪ್ರಭಾವ ಬೀರಿದ ಭಾವವಲಯವನ್ನು ತಟ್ಟಿದ. ನೆನಪಿನಂಗಳದಿಂದ ಮಾಸದ ವ್ಯಕ್ತಿಗಳ ಕುರಿತ ಸಂಸ್ಕರಣ ಲೇಖನಗಳು ಇಲ್ಲವೆ. ಗದ್ಯ ಕಾವ್ಯದಂತೆ ಇರುವ ಈ ಕೃತಿ ಕನ್ನಡಕ್ಕೆ ಹೊಸ ಮಾದರಿಯದ್ದಾಗಿದೆ. ಈ ಕೃತಿಯನ್ನು ಕುರಿತು ಚಂದ್ರಶೇಖರ ವಸ್ತ್ರದ ಅವರು ಹೀಗೆ ಹೇಳಿದ್ದಾರೆ. ''ಒಟ್ಟಿನಲ್ಲಿ 'ಋಣಾನುಬಂಧ' ಓದಿಮುಗಿಸಿದ ಮೇಲೆ ಅನ್ನಿಸುವುದಿಷ್ಟೆ ಪಟ್ಟಣಶೆಟ್ಟರು ನವೋದಯ ಮನೋಭಾವದ ನವ್ಯ ಶೈಲಿಯ ಪ್ರಗತಿಪರ ಲೇಖಕ.''[೨]

ಡಾ. ಸಿದ್ದಲಿಂಗ ಪಟ್ಟಣಶೆಟ್ಟರು ಸೃಜನಶೀಲ ಸಾಹಿತ್ಯ ಸೃಷ್ಟಿಯ ಜೊತೆಗೆ ವಿಮರ್ಶೆಯನ್ನು ಮಾಡಿದ್ದಾರೆ. ಅವರ ವಿಮರ್ಶಾ ಕೃತಿಗಳನ್ನು ಗಮನಿಸಿದಾಗ ಯಾವುದೇ ಗುಂಪು ಪಂಗಡಕ್ಕೆ ಸೇರದೆ. ಯಾರೊಂದಿಗೂ ಗುರುತಿಸಿಕೊಂಡಿಲ್ಲ. ಇವರು ಮುಕ್ತ ಮನಸ್ಸಿನಿಂದ ಕೃತಿಗಳ ಕಾವ್ಯಗಳ ಗುಣಗ್ರಹಣ ಮಾಡುವ ಪ್ರಯತ್ನ ಮಾಡಿದ್ದಾರೆ. ತಮ್ಮ ವಿಮರ್ಶೆಗಳಲ್ಲಿ ಚಿಕ್ಕವರು ದೊಡ್ಡವರು ಎಂಬ ಬೇಧಭಾವ ತೋರದೆ ಹೇಳಬೇಕಾದುದನ್ನು ನೇರವಾಗಿ ಹೇಳಿದ್ದಾರೆ. ನ್ಯಾಯ ನಿಷ್ಠುರತೆ ಮೆರೆದಿದ್ದಾರೆ. ಒಳ್ಳೆಯ ಅಂಶಗಳನ್ನು ಮೆಚ್ಚುವ ಸಹೃದಯತೆ ಸಜ್ಜನಿಕೆಗಳು ಅವರಲ್ಲಿವೆ. ಪ್ರಾಮಾಣಿಕತನ ಮತ್ತು ಸಾಹಿತ್ಯ ಕುರಿತ ಕಾಳಜಿಗಳು ಇಲ್ಲವೆ.

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಸಂಪಾದನಾ ಕ್ಷೇತ್ರದಲ್ಲಿಯೂ ಮಹತ್ವದ ಕಾರ್ಯಮಾಡಿದ್ದಾರೆ. ಚಂದ್ರಶೇಖರ ಪಾಟೀಲ ಮತ್ತು ಗಿರಡ್ಡಿ ಗೋವಿಂದರಾಜು ಅವರ ಜೊತೆ ಸೇರಿ ಸಂಪಾದಿಸಿದ ಸಂಕ್ರಮಣ ಕಾವ್ಯ ನವ್ಯದ ಪ್ರಾತಿನಿಧಿಕ ಕವನ ಸಂಕಲನವಾಗಿದೆ. ಅದೇ ರೀತಿ ಸಾಲಿರಾಮಚಂದ್ರರಾಯರ ಸಮಗ್ರ ಕಾವ್ಯ ಎನ್ಕೆಯವರನ್ನ ಕುರಿತ ಸಂಪಾದನೆಗಳು ಕೈಲಾಸಂ ಎಸ್.ಎಂ. ಕೃಷ್ಣ, ಗುದಗಿನ ತೋಂಟದಾರ್ಯಸ್ವಾಮಿಜಿಯವರ ಮುಂತಾದ ಸಂಸ್ಕರಣ ಗ್ರಂಥಗಳನ್ನು ಅಚ್ಚು ಕಟ್ಟಾಗಿ ಸಂಪಾದಿಸಿ ಕೊಟ್ಟಿದ್ದಾರೆ. ಅವರು ಬರೆದ ಸಂಪಾದಕೀಯ ಮಾತುಗಳು ಬೆನ್ನುಡಿಗಳು ಕೇವಲ ಹೊಗಳಿಕೆಯ ಮಾತುಗಳಾಗರದೆ ಆ ವ್ಯಕ್ತಿಯ ವ್ಯಕ್ತಿತ್ವವನ್ನು ಸೂಕ್ಷ್ಮಗಳನ್ನು ತಿಳಿಸುವ ಅರ್ಥಪೂರ್ಣ ಅಭಿಪ್ರಾಯಗಳಾಗಿವೆ. ವಹಿಸಿಕೊಂಡ ಕೆಲಸವನ್ನ ಅಚ್ಚು ಕಟ್ಟುತನದಿಂದ ಮೌಲಿಕವಾಗಿ ಹಾಕಿಕೊಂಡ ಕಾಲಮಿತಿಯೊಳಗೆ

ಮಾಡಿಮುಗಿಸುವ ಕಲೆ ಪಟ್ಟಣಶೆಟ್ಟರಿಗೆ ಕರಗತವಾಗಿದೆ. ಅದನ್ನು ಇವರ ಸಂಪಾದಿತ ಕೃತಿಗಳಲ್ಲಿ ಕಾಣಬಹುದಾಗಿದೆ.

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಹಿಂದೀ ಪ್ರಾಧ್ಯಾಪಕರು, ಹಿಂದೀ ಮಾತೃ ಭಾಷಿಕರೂ ನಾಚುವಷ್ಟು ಸರಾಗವಾಗಿ ಸ್ಫುಟವಾಗಿ ಅವರು ಹಿಂದೀ ಮಾತನಾಡುತ್ತಿದ್ದರು. ಅವರು ಸಾಹಿತ್ಯ ಕೃಷಿಯನ್ನು ಮೊದಲು ಆರಂಭಿಸಿದ್ದೇ ಹಿಂದಿಯಲ್ಲಿ ಶೈಲ್ ಔರ್ ಸಾಗರ್ ಎನ್ನುವ ಕವನ ಸಂಕನಲದ ಮೂಲಕ. ಆಗ ಅವರ ಕಾವ್ಯ ಹಿಂದೀ ವಿದ್ವಾಂಸರ ಮೆಚ್ಚುಗೆಯನ್ನು ಗಳಿಸಿದ್ದವು. ಯಾವುದೇ ಒಬ್ಬ ಸಾಹಿತಿಗೆ, ಅಭಿವ್ಯಕ್ತಿಗೆ ಮಾತೃಭಾಷೆಯಷ್ಟು ಅನ್ಯ ಭಾಷೆ ಸೂಕ್ತವಾದುದಲ್ಲ. ಆದರೂ ಪಟ್ಟಣಶೆಟ್ಟಿಯವರು ತಾವೊಬ್ಬ ಒಳ್ಳೆಯ ಹಿಂದೀ ಕವಿಯೆಂದು ತಮ್ಮ ಮೊದಲ ಹಿಂದೀ ಕವನ ಸಂಕಲನದ ಮೂಲಕ ಸಾಬೀತು ಪಡಿಸಿದರು. ಕರ್ನಾಟಕದಲ್ಲಿ ಹಿಂದಿಯಲ್ಲಿ ಕೆಲಸ ಮಾಡಿದ ಪ್ರಮುಖರಲ್ಲಿ ಪಟ್ಟಣಶೆಟ್ಟರೂ ಒಬ್ಬರಾಗಿದ್ದಾರೆ. ಜೀವನ ಚರಿತ್ರೆ, ಕಾವ್ಯ, ಸಂಪಾದನೆ, ನಾಟಕ ಮುಂತಾದ ಪ್ರಕಾರಗಳಲ್ಲಿ ಹಿಂದಿಯಲ್ಲಿ ಸಾಹಿತ್ಯ ರಚಿಸಿದ ಪಟ್ಟಣಶೆಟ್ಟರು. ಕನ್ನಡ ಮತ್ತು ಹಿಂದಿ ಸಾಹಿತ್ಯದ ಕೆಲವು ಅಂಶಗಳನ್ನು ತೌಲನಿಕವಾಗಿ ವಿವೇಚಿಸಿದ್ದಾರೆ. ಕನ್ನಡದ ಕೆಲವು ನಾಟಕಗಳನ್ನು ಹಿಂದಿಗೆ ಅನುವಾದ ಮಾಡಿಸಿದ್ದಾರೆ. ಮೂರು ದಶಕಗಳಿಗೂ ಹೆಚ್ಚು ಕಾಲ ಹಿಂದಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದಾರೆ. 'ಮೋಹನ್ ರಾಕೇಶ್ ಮತ್ತು ಗಿರೀಶ್ ಕಾರ್ನಾಡ'ರ ನಾಟಕಗಳ ತುಲನಾತ್ಮಕ ಅಧ್ಯಯನ ಇವರ ಸಂಶೋಧನಾ ಪ್ರಬಂಧವಾಗಿದೆ. ಮೋಹನ್ ರಾಕೇಶರ ಕೃತಿಗಳ ವಿಮರ್ಶಾತ್ಮಕ ಕೃತಿಯನ್ನು ಹೊರತಂದಿದ್ದಾರೆ.

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಉತ್ತಮ ಕವಿ ಹೇಗೋ ಹಾಗೆ ಉತ್ತಮ ಅನುವಾದಕರೂ ಹೌದು. ಡಾ. ತಿಪ್ಪೇಸ್ವಾಮಿಯವರು ಹೇಳುವ ಹಾಗೆ ''ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಕೃತಿತ್ವದ ಎರಡು ಕಣ್ಣುಗಳೆಂದರೆ ಒಂದು ಕಾವ್ಯ ಇನ್ನೊಂದು ಅನುವಾದ. ಕವಿಯಾಗಿ ಪಟ್ಟಣಶೆಟ್ಟರು ಪ್ರೇಮ-ಪ್ರೀತಿ, ಒಳಗುದಿ ಮತ್ತು ತಮ್ಮ ಸುತ್ತಲಿನ ಸಮಾಜದ ನಾನಾ ಸಮಸ್ಯೆಗಳಿಗೆ ಸ್ಪಂದಿಸಿದ್ದರೆ ಅನುವಾದಕರಾಗಿ ಹಿಂದಿಯ ಹಲವಾರು ಶ್ರೇಷ್ಠ ರಚನೆಗಳನ್ನು ತಮ್ಮ ಸೃಜನಶೀಲ ಪ್ರತಿಭೆಯಿಂದ ಮೂಲ ರಚನೆಗಳನ್ನು ಕನ್ನಡದ್ದೇ ರಚನೆಗಳೇನೋ ಎಂಬಷ್ಟರ ಮಟ್ಟಿಗೆ ಅನುವಾದಿಸಿ ಸಮೃದ್ಧಗೊಳಿಸಿದ್ದಾರೆ. ಡಾ. ಪಟ್ಟಣಶೆಟ್ಟಿಯವರು ಅನುವಾದ ಕ್ಷೇತ್ರ ಬಹುಮುಖಿಯಾದದ್ದು.''[೪] ಕಾವ್ಯ, ಕಾದಂಬರಿ, ವಿಚಾರ ಪ್ರಬಂಧ, ಜೀವನ ಚರಿತ್ರೆ, ನಾಟಕಗಳನ್ನು ಅನುವಾದ ಮಾಡಿದ್ದಾರೆ.

ಕಾವ್ಯವನ್ನು ಕಾವ್ಯವನ್ನಾಗಿ ಅನುವಾದ ಮಾಡುವುದು ಕಷ್ಟದ ಕೆಲಸವಾಗಿದ್ದರೂ ಪಟ್ಟಣಶೆಟ್ಟರು ಕವಿಮನೋಭಾವದವರಾದ ಕಾರಣ ಕಾವ್ಯಾನುವಾದದಲ್ಲಿ ಯಶಸ್ವಿಯಾಗಿದ್ದಾರೆ. ಇವರು ಅನುವಾದ ಕೊಡುಗೆಗಳಲ್ಲಿ ಬಹುಮುಖ್ಯವಾದವುಗಳೆಂದರೆ ನಾಟಕಗಳು ಹಿಂದೀ, ಮರಾಠಿ, ಉರ್ದು, ಸಂಸ್ಕೃತ ಭಾಷೆಗಳಿಂದ ಶ್ರೇಷ್ಠವಾದ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಡಾ. ಮ. ಸು. ಕೃಷ್ಣಮೂರ್ತಿಯವರು ಹೆಳುವ ಹಾಗೆ, ''ಕನ್ನಡ, ಹಿಂದೀ, ಮರಾಠಿ, ಪಂಜಾಬೀ, ಉರ್ದು, ಇಂಗ್ಲೀಷ್ ಮೊದಲಾದ ಭಾಷೆಗಳ ಪರಿಚಯ ಅಲ್ಲಿಯ ಸಾಹಿತಿಗಳ ಒಡನಾಟ ಅವರ ಬರಹಕ್ಕೆ ಒಂದು ಅಖಿಲ ಬಾರತ ವ್ಯಾಪ್ತಿಯನ್ನು ದೃಷ್ಟಿಯನ್ನು ನೀಡಿದೆ. ಇಂದು ಭಾರತೀಯ ರಂಗಭೂಮಿಯನ್ನು ಕುರಿತು ಖಚಿತವಾಗಿ ಕರಾರುವಾಕ್ಕಾಗಿ ಸ್ಪಷ್ಟವಾಗಿ ಅಧಿಕಾರ ವಾಣಿಯಿಂದ ಮಾತನಾಡಬಲ್ಲ ವ್ಯಕ್ತಿ ಪಟ್ಟಣಶೆಟ್ಟಿ ಎಂದರೆ ಅತಿಶಯೋಕ್ತಿಯಾಗಲಾರದು.''[೫] ಬಂಗಾಳಿ ಭಾಷೆಯಿಂದಲೂ ಕಾದಂಬರಿಗಳನ್ನು ವಿಚಾರ ಪ್ರಬಂಧವನ್ನು ಅನುವಾದಿಸಿದ್ದಾರೆ. ಹೀಗೆ ಅನುವಾದ ಕಾರ್ಯದ ಮೂಲಕ ಅನ್ಯದೇಶೀಯ ಸಂಸ್ಕೃತಿಯನ್ನು

ವಿಚಾರಗಳನ್ನು ಕನ್ನಡಕ್ಕೆ ಪರಿಚಯಿಸಿದ್ದಾರೆ. ಭಾರತದಲ್ಲಿರುವ ಹಲವಾರು ಭಾಷೆಗಳ ಶ್ರೇಷ್ಠ ನಾಟಕಕಾರರನ್ನ ನಮಗೆಲ್ಲಾ ಪರಿಚಯಿಸಿದ್ದಾರೆ.

ಅಂಕಣ ಸಾಹಿತ್ಯ ಪ್ರಸಿದ್ಧಿಯನ್ನು ಪಡೆದಿದ್ದು ಇತ್ತೀಚಿನ ವರ್ಷಗಳಲ್ಲಾದರೆ ಅಂಕಣ ಸಾಹಿತ್ಯ ಕನ್ನಡದಲ್ಲಿ ಪತ್ರಿಕೆಗಳ ಹುಟ್ಟಿನೊಂದಿಗೆ ಆರಂಭವಾಗಿದೆ. ಮಂಗಳೂರು ಸಮಾಚಾರದ ಸಂಪಾದಕರಾದ ಮೊಗ್ಲಿಂಗ್ ಅವರು 'ನೈತಿಕ ವಿಚಾರಗಳು' ಎನ್ನುವ ಅಂಕಣ ಬರಹವನ್ನು ಬರೆಯುತ್ತಿದ್ದರು. ೧೯೬೪ಳರಲ್ಲಿ ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ಅನಿವಾರ್ಯವಾಗಿ ಅಂಕಣ ಬರಹವನ್ನು ಬರೆಯಬೇಕಾಗಿ ಬಂತು. ಆಗ ಪ್ರಜಾವಾಣಿ ದಿನಪತ್ರಿಕೆಯ ಸಂಪಾದಕರಾದ ಶ್ರೀ ಎನ್. ರಂಗನಾಥರಾವ್ ಅವರು ಉತ್ತರ ಕರ್ನಾಟಕದ ಸಾಂಸ್ಕೃತಿಕ ವರದಿಗಳಿಗಾಗಿ ಪ್ರಜಾವಾಣಿಯ ಸಾಪ್ತಾಹಿಕ ಪುರವಣಿಯಲ್ಲಿ ಒಂದು ಅಂಕಣವನ್ನು ಮೀಸಲಿರಿಸಿ ಅದನ್ನು ಪಟ್ಟಣಶೆಟ್ಟರಿಂದ ಬರೆಯಿಸಿದರು. ಪಟ್ಟಣಶೆಟ್ಟರು ತಮ್ಮ ಅಂಕಣದಲ್ಲಿ ಬಳಸಿದ ಧಾರವಾಡದ ಪ್ರಾದೇಶಿಕ ಸೊಗಡಿನ ಭಾಷೆ ಓದುಗರಿಗೆ ಓದಿಕೊಳ್ಳಲು ಆರಂಭದಲ್ಲಿ ಕಷ್ಟವೆನಿಸಿದರೂ ನಂತರ ಈ ಭಾಷೆಯೇ ಸೂಜಿಗಲ್ಲಿನಂತೆ ಆಕರ್ಷಿಸಿತು. ಉಪೇಕ್ಷೆಗೆ ಒಳಗಾದ ಸಂಗತಿಗಳನ್ನು ಇಲ್ಲಿ ಪರಿಚಯಿಸಿದ್ದಾರೆ. ತಾರತಮ್ಯಗಳನ್ನು ಮುಖಕ್ಕೆ ರಾಚುವಂತೆ ಹೇಳಿದ್ದಾರೆ. ಕರ್ನಾಟಕದ ಮೂಲೆ ಮೂಲೆಯಲ್ಲಿರುವ ಸಾಂಸ್ಕೃತಿಕ ಸಂಗತಿಗಳನ್ನು ಕರ್ನಾಟಕದ ಪತ್ರಿಕೆಯೊಂದರ ಮೂಲಕ ಹೊರತರುವ ಪ್ರಯತ್ನ ಸ್ವಾಗತಾರ್ಹವಾಗಿತ್ತು. ಇವರ ಅಂಕಣ ಬರಹದ ಶೀರ್ಷಿಕೆ 'ಚಹಾದ ಜೋಡಿ ಚೂಡ್ದಾದಾಂಗ' ಬಹು ಬೇಗ ಜನಪ್ರಿಯತೆ ಪಡೆಯಿತು. ಅದೇ ರೀತಿ ತಾವೇ ಸಂಪಾದಿಸಿ ಪ್ರಕಟಿಸುತ್ತಿರುವ ಸಂಕಲನದಲ್ಲಿಯೂ 'ಕಡೀಪುಟ' ಅಂಕಣ ಬರಹದಲ್ಲಿ ಛಂದಸ್ಸು, ತತ್ವಜ್ಞಾನ,ಜೀವನಾನುಭವ, ವ್ಯಾಕರಣ, ಪದಗಳ ಅರ್ಥ ಮುಂತಾದ ವಿಷಯಗಳನ್ನು ಕುರಿತು ವಿವೇಚನೆಗೆ ಒಳಪಡಿಸಿದ್ದಾರೆ. ಅದೇ ಸಂಕಲನದಲ್ಲಿ 'ಒನ್ನೇಪುಟ' ಎನ್ನುವ ಅಂಕಣದಲ್ಲಿ ಅನ್ಯ ಭಾಷೆಯ ಕವಿಗಳನ್ನು ಕುರಿತು. ಸಂಕ್ಷಿಪ್ತವಾಗಿ ಪರಿಚಯಿಸುವ ಕೆಲಸವನ್ನು ಮಾಡಿದ್ದಾರೆ. ಇವರ ಅಂಕಣ ಬರಹಗಳ ತಲೆ ಬರಹಗಳಾದ 'ಚಹಾದ ಜೋಡಿ ಚೂಡಾದಾಂಗ' 'ಕಡೀಪುಟ' 'ಒನ್ನೇ ಪುಟ'ಗಳು ಪ್ರಾದೇಶಿಕ ಭಾಷೆಯ ಸೊಗಡನ್ನು ಹೇಳುತ್ತವೆ.

ಕನ್ನಡ ಸಾಹಿತ್ಯದಲ್ಲಿ ನವ್ಯ ಘಟ್ಟವನ್ನು ಪ್ರತಿನಿಧಿಸಿದ ಪತ್ರಿಕೆ ಸಂಕ್ರಮಣ ಚಂದ್ರಶೇಖರ ಪಾಟೀಲ ಗಿರಡ್ಡಿ ಗೋವಿಂದರಾಜು ಸಿದ್ಧಲಿಂಗಪಟ್ಟಣಶೆಟ್ಟಿಯವರ ಸಂಪಾಕತ್ವದಲ್ಲಿ ಇದು ಹೊರಬಂತು. ನವ್ಯ ಸಾಹಿತ್ಯದ ಕತೆ ಕವಿತೆ ನಾಟಕ ವಿಮರ್ಶೆಗಳನ್ನು ಪ್ರಕಟಿಸುವ ಮುಖ್ಯವಾದ ಧ್ಯೇಯವನ್ನು ಇಟ್ಟುಕೊಂಡು ಸಂಕ್ರಮಣ ಆರಂಭಗೊಂಡಿತು. ನವ್ಯ ಸಾಹಿತ್ಯದ ಪ್ರಮುಖ ಲೇಖಕರು ಕನ್ನಡ ಓದುಗರಿಗೆ ಪರಿಚಯಿಸುವ ಕೆಲಸ ಮಾಡಿದ್ದು ಈ ಸಂಕ್ರಮಣ ಪತ್ರಿಕೆಯಾಗಿದೆ. ನವ್ಯದ ಹಿರಿಯ ಸಾಹಿತಿಗಳಿಂದ ಹಿಡಿದು ಉಯೋನ್ಮುಖಿ ಕಿರಿಯ ಸಾಹಿತಿಗಳಿಗೆ ಅವಕಾಶ ಮಾಡಿಕೊಟ್ಟು ಅವರನ್ನು ಬೆಳಕಿಗೆ ತರುವ ಕೆಲಸವನ್ನು ಈ ಪತ್ರಿಕೆ ಮಾಡಿತು. ಚಂದ್ರಶೇಖರ ಪಾಟೀಲ ಗಿರಡ್ಡಿಯವರು ಓದಲು ಬೇರೆ ಕಡೆ ಹೋದಾಗಲೂ ಸಿದ್ಧಲಿಂಗಪಟ್ಟಣ ಶೆಟ್ಟಿಯವರು ಒಬ್ಬರೇ ಪತ್ರಿಕೆಯನ್ನು ನಡೆಸಿಕೊಂಡು ಹೋದರು ಕಾರಣಾಂತರಗಳಿಂದ ಸಂಪಾದಕತ್ವದಿಂದ ಹೊರಬಂದ ಪಟ್ಟಣಶೆಟ್ಟರು ಈಗ ಸಂಕಲನ ಪತ್ರಿಕೆಯನ್ನು ನಡೆಸುತ್ತಿದ್ದಾನೆ. ಈ ಸಂಕಲನ ಪತ್ರಿಕೆ ಸದ್ಯದ ಕನ್ನಡ ಸಾಹಿತ್ಯ ಪತ್ರಿಕೆಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದಿದೆ. ಅಪ್ಪ ಅಮ್ಮ ಮಾಲಿಕೆ, ಗುರುಮಾಲಿಕ, ಶೆಟ್ಟರ್ ಅವರ ಕವಿರಾಜಮಾರ್ಗ ಮಂಥನ ಮಾಲಿಕೆಯ ಸಂಶೋಧನಾ ಲೇಖನಗಳು ಕತೆ, ಕಾವ್ಯ, ನಾಟಕ ವಿಮರ್ಶೆ, ಪುಸ್ತಕ ಪರಿಶೀಲನೆ, ಅಂಕಣ ಬರಹ ಹೀಗೆ ವೈವಿದ್ಯತೆಯಿಂದ ಕೂಡಿದೆ.

ಹೀಗೆ ಕನ್ನಡ ಸಾಹಿತ್ಯದಲ್ಲಿ ಮಹತ್ವದ ಕಾರ್ಯ ಸಾಧಿಸಿದ್ದರೂ ಅವರು ರಂಗ ಕರ್ಮಿಗಳಾಗಿ ಕೊಡುಗೆಗಳನ್ನು ನೀಡಿದ್ದಾರೆ. ಭಾರತೀಯ ಭಾಷೆಗಳ ಪ್ರಸಿದ್ಧ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಧಾರವಾಡದಲ್ಲಿ 'ಅಂತರಂಗ' ನಾಟಕ ತಂಡವನ್ನು ಕಟ್ಟಿದ್ದಾರೆ. ರಂಗಾಯಣದ ಸದಸ್ಯರಾಗಿ ಅಮೂಲ್ಯ ಸಲಹೆಗಳನ್ನು ನೀಡಿದ್ದಾರೆ. ನಾಟಕ ಅಕಾಡೆಮಿಯ ಸದಸ್ಯರಾಗಿ ಕನ್ನಡ ರಂಗಭೂಮಿಯನ್ನ ಚಾಲನೆಯಲ್ಲಿಟ್ಟಿದ್ದಾರೆ. ಕನ್ನಡ ರಂಗಭೂಮಿ ಕಲಾವಿದರ ಜೀವನ ಸಾಧನೆಗಳನ್ನು ಕುರಿತು ಪುಸ್ತಗಳನ್ನು ಹೊರತಂದಿದ್ದಾರೆ. ನೀನಾಸಂಗಾಗಿ ಅನೇಕ ನಾಟಕಗಳನ್ನು ಅನುವಾದಿಸಿಕೊಟ್ಟಿದ್ದಾರೆ. ರಂಗಭೂಮಿ ಸಮಸ್ಯೆಗಳನ್ನು ಸ್ಥಿತ್ಯಂತರಗಳನ್ನು ಆಗಬೇಕಾದ ಕೆಲಸಗಳನ್ನು ಕುರಿತು ಲೇಖನಗಳನ್ನು ಬರೆದಿದ್ದಾರೆ. ಇವರಿಗೆ ಅತಿಹೆಚ್ಚು ಗೌರವಾದರಗಳು ಲಭಿಸಿದ್ದು ರಂಗಭೂಮಿಗೆ ಸಂಬಂಧಿಸಿದವುಗಳೇ ಆಗಿವೆ. ಇವರ ರಂಗ ನಿಲುವುಗಳನ್ನು ಕುರಿತು ಡಾ. ಮ.ಸು. ಕೃಷ್ಣಮೂರ್ತಿ ಅವರು ಹೇಳುವ ಹಾಗೆ ''ನಾಟಕ ಕ್ಷೇತ್ರದಲ್ಲಿ ಅವರು ನಟರಾಗಿ ಅನುವಾದಕರಾಗಿ ನಿರ್ದೇಶಕರಾಗಿ, ರಂಗಕರ್ಮಿಯಾಗಿ ಅಖಿಲ ಭಾರತ ಖ್ಯಾತಿಯನ್ನು ಪಡೆದಿದ್ದಾರೆ. ಅನೇಕ ರಂಗ ತಂಡಗಳನ್ನು ಉತ್ತರದ ಪ್ರಾಂತಗಳಿಗೆ ಕೊಂಡೊಯ್ದು ಕನ್ನಡದ ರಂಗಸಂಪದವನ್ನು ಅಲ್ಲಿಯ ಜನಕ್ಕೆ ಉಣಬಡಿಸಿದ್ದಾರೆ. ಅಲ್ಲೆಲ್ಲ ಕನ್ನಡದ ಡಿಂಡಿಮವನ್ನು ಬಾರಿಸಿದ್ದಾರೆ. ಈ ರೀತಿ ಅವರು ಉತ್ತರ ಮತ್ತು ದಕ್ಷಿಣದ ನಡುವೆ ಸುವರ್ಣಸೇತುವೆಯಾಗಿದ್ದಾರೆ.''[೬]

ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರು ನವ್ಯದ ಪ್ರಮುಕ ಕವಿಯಾಗಿ ಶ್ರೇಷ್ಠ ಅನುವಾದಕರಾಗಿ ಪ್ರಸಿದ್ಧ ಅಂಕಣಕಾರವಾಗಿ ಪತ್ರಿಕಾ ಸಂಪಾದಕರಾಗಿ ಒಳ್ಳೆಯ ವಿಮರ್ಶಕರಾಗಿ ಅನುಪಮ ಸೇವೆ ಗೈದಿದ್ದಾರೆ. ಇವರಿಂದ ಇನ್ನಷ್ಟು ಉತ್ತಮ ಕೃತಿಗಳು ಮೂಡಿಬರಲೆಂಬುದು ಎಲ್ಲರ ಆಶಯವಾಗಿದೆ.

**ಟಿಪ್ಪಣಿಗಳು**


೧. ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆಗಳು ಒಂದು ಅಧ್ಯಯನ ಡಾ. ಶಾಂತಲಕ್ಷ್ಮಿ, ಕನ್ನಡ ಸಾಹಿತ್ಯ ಪರಿಷತ್ತು ಪುಟ ೨೩೮

೨. ಸಹೃದಯ ಪ್ರ.ಸಂ ದೇ.ಜೆ.ಗೌ, ವನಶ್ರೀ ಪ್ರಕಾಶನ ಮೈಸೂರು ಪು.ಸಂ. ೧೯

೩. ಅದೇ, ಪು.ಸಂ. ೨೮೯

೪. ಅದೇ, ಪು.ಸಂ. ೩೬೧

೫. ಅದೇ, ಪು.ಸಂ. ೦೮

೬. ಅದೇ, ಪು.ಸಂ. ೦೮


* * *

## ಅನುಬಂಧಗಳು

* ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಂಕ್ಷಿಪ್ತ ಪರಿಚಯ
* ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯವರಿಗೆ ಸಂದ ಪ್ರಶಸ್ತಿ ಮತ್ತು ಗೌರವಗಳು
* ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿಯರ ಕೃತಿಗಳು
* ಛಾಯಾಚಿತ್ರಗಳು
* ಗ್ರಂಥಋಣ

## ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಸಂಕ್ಷಿಪ್ತ ಪರಿಚಯ

**ಜನ್ಮದಿನ** : ೩ ಮಾರ್ಚ್ ೧೯೪೫

**ಹುಟ್ಟೂರು** : ಯಾದವಾಡ ಧಾರವಾಡ ಜಿಲ್ಲೆ

**ತಂದೆ-ತಾಯಿ** : ಬಸೆಟ್ಟೆಪ್ಪ, ಗಿರಿಜವ್ವ

**ವಿದ್ಯಾಭ್ಯಾಸ** : ಹಿಂದೀ ಶಿಕ್ಷಕ ಸನದ್ (೧೯೫೮), ಪ್ರಥಮ ಶ್ರೇಣಿ, ಮುಂಬಾಯಿ ರಾಜ್ಯ ರಾಷ್ಟ್ರಭಾಷಾ ಪ್ರವೀಣ್ (೧೯೫೯) ದ್ವಿತೀಯ ಶ್ರೇಣಿ, ದಕ್ಷಿಣ ಭಾರತ ಹಿಂದೀ ಪ್ರಚಾರ ಸಭಾ, ಮದರಾಸು

: ದಕ್ಷಿಣಾ ಫೆಲೋ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (೧೯೬೨-೬೩)

: ಎಂ.ಎ., (೧೯೬೩), ಪ್ರಥಮ ಶ್ರೇಣಿ, ಕರ್ನಾಟಕ ವಿಶ್ವವಿದ್ಯಾಲಯ.

: ಪಿ.ಎಚ್.ಡಿ., (೧೯೯೩), (ಮಹಾಪ್ರಬಂಧ ಮೋಹನ್ ರಾಕೇಶ್ ಮತ್ತು ಗಿರೀಶ್‌ಕಾರ್ನಾಡ್ ನಾಟಕಗಳ ತೌಲನಿಕ ಅಧ್ಯಯನ)

**ವೃತ್ತಿ** : ಹಿಂದೀ ಅಧ್ಯಾಪಕರಾಗಿ ೧೯೬೫ ೨೦೦೦

**ಸಾಂಸ್ಕೃತಿಕ ಮತ್ತು** :

**ಇತರೆ ಸಾಧನೆಗಳು** : 'ಅಂತರಂಗ' ನಾಟಕ ಕೂಟದ ಸಂಸ್ಥಾಪಕ ಸದಸ್ಯ ಮತ್ತು ಕಾರ್ಯದರ್ಶಿ, ಧಾರವಾಡ (೧೯೭೧-೭೫)

: ಸಂಗೀತ ನಾಟಕ ಅಕಾಡೆಮಿ ಸದಸ್ಯ (೧೯೮೪-೮೭/೧೯೯೮-೨೦೦೧) ರಂಗಾಯಣ, ಮೈಸೂರು ರಂಗಸಮಾಜ, ಸಾರ್ವತ್ರಿಕ ಮಂಡಳಿ ಸದಸ್ಯ (೨೦೦೦-೨೦೦೪)

: ಡಾ. ಮಲ್ಲಿಕಾರ್ಜುನ ಮನಸೂರ ಪ್ರತಿಷ್ಠಾನ, ಕಾರ್ಯಕಾರಿ ಸಮಿತಿ ಸದಸ್ಯ, ರಾಯಚೂರು

: ಸಾಲಿ ರಾಮಚಂದ್ರರಾಯ ಪ್ರತಿಷ್ಠಾನ, ಅಧ್ಯಕ್ಷರು, ಧಾರವಾಡ ಕರ್ನಾಟಕ ವಿದ್ಯಾವರ್ಧಕ ಸಂಘ ಪ್ರಧಾನ ಕಾರ್ಯದರ್ಶಿ, ಧಾರವಾಡ (೧೯೮೨-೧೯೮೭)

* * *

## ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರಿಗೆ ಸಂದ ಪ್ರಶಸ್ತಿ ಮತ್ತು ಪುರಸ್ಕಾರಗಳು

ಕೇಂದ್ರಿಯ ಹಿಂದೀ ಶಿಕ್ಷಣ್ ಮಂಡಲ್, ಆಗ್ರಾ ಆಡಳಿತ ಮಂಡಳಿ ಸದಸ್ಯ, ಭಾರತ ಸರ್ಕಾರ, ೧೯೯೬-೧೯೯೯

ದಕ್ಷಿಣ ಮಧ್ಯವಲಯ ಸಾಂಸ್ಕೃತಿಕ ಕೇಂದ್ರ, ನಾಗಪುರ ಆಡಳಿತ ಮಂಡಳಿ ಸದಸ್ಯ, ೯೯-೨೦೦೨

ಕರ್ನಾಟಕ ಶಿಕ್ಷಣ ಇಲಾಖೆಯಿಂದ ಶ್ರೇಷ್ಠ ಅನುವಾದಕ ಪ್ರಶಸ್ತಿ - ೧೯೮೩

(ಅಲೆಗಳಲ್ಲಿ ರಾಜಹಂಸಗಳು ಕೃತಿಗೆ)

ಕರ್ನಾಟಕ ಸಾಹಿತ್ಯ ಅಕಾಡೆಮಿ ಸೃಜನಾತ್ಮಕ ಅನುವಾದಕ ಪ್ರಶಸ್ತಿ ೧೯೮೩

(ಅಂಜಿ ಕೃತಿಗೆ)

ದಿನಕರ ದೇಸಾಯಿ ಪ್ರಶಸ್ತಿ ೧೯೮೬

(ಅಯಸ್ಕಾಂತ ಕೃತಿಗೆ)

ಕರ್ನಾಟಕ ಸಾಹಿತ್ಯ ಅಕಾಡೆಮಿ ಸೃಜನಾತ್ಮಕ ಅನುವಾದ ಪ್ರಶಸ್ತಿ ೧೯೮೯

(ಮೂರು ನಾಟಕಗಳು ಕೃತಿಗೆ)

ಸಂ.ಶಿ. ಭೂಸನೂರಮಠ ಸಾಹಿತ್ಯ ಪ್ರಶಸ್ತಿ, ಧಾರವಾಡ ೨೦೦೧

(ಸಮಗ್ರ ಕಾವ್ಯ ಕೃತಿಗೆ)

ಕೆ.ವಿ. ಸುಬ್ಬಣ್ಣ ಪ್ರಶಸ್ತಿ, ಶಿವಮೊಗ್ಗ ೨೦೦೧

(ಕೋರ್ಟ್ ಮಾರ್ಷಲ್ ಕೃತಿಗೆ)

ಶಿವಾನಂದ ಪಾಟೀಲ ಕಥಾ ಪ್ರಶಸ್ತಿ, ಹುನಗುಂದ, ೨೦೦೨

(ಹಕ್ಕಿಗಳು ಕೃತಿಗೆ)

ಕರ್ನಾಟಕ ನಾಟಕ ಅಕಾಡೆಮಿ ಫೆಲೋಷಿಪ್-೧೯೯೬

ಕರ್ನಾಟಕ ಸಾಹಿತ್ಯ ಅಕಾಡೆಮಿ ಗೌರವ ಪ್ರಶಸ್ತಿ-೧೯೯೮

ವಿಶೇಷ ಸಾಹಿತ್ಯ ಸೇವಾ ಸಮ್ಮಾನ್ ದ.ಭಾ. ಹಿಂದೀ ಪ್ರಚಾರ ಸಭಾ, ಮದ್ರಾಸ್-೨೦೦೩

ರಾಜ್ಯಹಾಗೂ ರಾಷ್ಟ್ರಮಟ್ಟದ ಹಲವಾರು ಕವಿಗೋಷ್ಠಿ, ನಾಟಕಗೋಷಿ, ವಿಚಾರಗೋಷ್ಠಿ, ಕಾರ್ಯಾಗಾರಗಳಲ್ಲಿ ಸಂಪನ್ಮೂಲ ವ್ಯಕ್ತಿಯಾಗಿ ಭಾಗವಹಿಸಿದ್ದಾರೆ.

* * *

## ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿಯವರ ಕೃತಿಗಳು

**ಸ್ವತಂತ್ರ ಕೃತಿಗಳು:ಕನ್ನಡ**

**ಕಾವ್ಯ**

೧. ನೀನಾ:೧೯೬೪, ೧೯೮೮

೨. ಔರಂಗಜೇಬ ಮತ್ತು ಇತರ ಕವನಗಳು:೧೯೬೭

೩. ಪರದೇಸಿ ಹಾಡುಗಳು:೧೯೭೬, ೧೯೭೯

೪. ನೂರಾರು ಪದ್ಯಗಳು:೧೯೭೭

೫. ಪ್ರತೀಕ್ಷೆ:೧೯೭೯

೬. ಮತ್ತೆ ಬಂದಿದ್ದಾಳೆ:೧೯೮೨

೭. ಪಟ್ಟಣಶೆಟ್ಟರ ಆಯ್ದ ಕವಿತೆಗಳು:೧೯೮೩

೮. ಅಯಸ್ಕಾಂತ:೧೯೮೬

೯. ಇಂದು ರಾತ್ರಿಯ ಹಾಗೆ:೧೯೯೪

೧೦. ಅಂತರಂಗದ ಕವನಗಳು ಆಯ್ದ ಕವಿತೆಗಳು:೧೯೯೪

೧೧. ಇಷ್ಟು ಹೇಳಿದ ಮೇಲೆ:೨೦೦೦

೧೨. ಪಟ್ಟಣಶೆಟ್ಟಿಯವರ ಸಮಗ್ರ ಕಾವ್ಯ:೨೦೦೦

೧೩. ಅಪರಂಪಾರ:೨೦೦೫

**ಕಥೆಗಳು**

೧೪. ಮಾವ ಮತ್ತು ಇತರ ಕತೆಗಳು:೧೯೭೭, ೧೯೮೧

೧೫. ಹಕ್ಕಿಗಳು:೨೦೦೧

**ವಿಮರ್ಶೆ**

೧೬. ಆಧುನಿಕ ಕನ್ನಡ ಹಿಂದೀ ಕಾವ್ಯ:೧೯೭೦

೧೭. ಅನುಶೀಲನ:೧೯೮೨

೧೮. ರಂಗಾಯಣ:೧೯೯೫

೧೯. ಪರಿಭಾವನ:೨೦೦೦

೨೦. ಅನುಸ್ವಾದನ:೨೦೦೨

**ವ್ಯಕ್ತಿ ಚಿತ್ರ ಸಂದರ್ಶನ**

೨೧. ಋಣಾನುಬಂಧ ೧೯೯೯

**ಜೀವನ ಚರಿತ್ರೆ**

೨೨. ಹಳ್ಳಿಕೇರಿ ಗುದ್ಲೆಪ್ಪನವರು ೧೯೮೧, ೨೦೦೦

೨೩. ಧರ್ಮಸ್ಥಳ ೧೯೮೧

**ಅಂಕಣ**

೨೪. ಚಹಾದ ಜೋಡಿ ಚೂಡಾದ್ಹಾಂಗ-ಭಾಗ:೧ ೧೯೯೬

೨೫. ಚಹಾದ ಜೋಡಿ ಚೂಡಾದ್ಹಾಂಗ-ಭಾಗ:೧ ೧೯೯೯

೨೬. ಚಹಾದ ಜೋಡಿ ಚೂಡಾದ್ಹಾಂಗ-ಭಾಗ:೧ ೨೦೦೦

೨೭. ಚಹಾದ ಜೋಡಿ ಚೂಡಾದ್ಹಾಂಗ-ಭಾಗ:೧ ೨೦೦೨

೨೮. ಚಹಾದ ಜೋಡಿ ಚೂಡಾದ್ಹಾಂಗ-ಭಾಗ:೧ ೨೦೦೩

**ಸಂಪಾದಿತ**

೨೯. ನಾನಿಕಾಕಾ ಎನ್ನೆ ಬದುಕು: ಸ್ಮರಣ-ಅಭಿನಂದನೆ:೧೯೮೩

೩೦. ನಾನಿಕಾಕಾ ಎನ್ನೆ ಬರಹ: ವಿಮರ್ಶಾ ಲೇಖನಗಳು:೧೯೮೩

೩೧. ಕೈಲಾಸಂ:೧೯೮೮

೩೨. ಸಾಲಿ ರಾಮಚಂದ್ರರಾಯರ ಸಮಗ್ರ ಕಾವ್ಯ:೧೯೯೬

೩೩. ಕಲ್ಯಾಣದ ಹಾದಿ:೧೯೯೯

**ಸಂಪಾದಿತ (ಇತರರೊಡನೆ)**

೩೪. ಸಂಕ್ರಮಣ ಕಾವ್ಯ ಕಾವ್ಯ: ೧೯೬೫, ೧೯೬೭, ೧೯೭೭

೩೫. ಸಾಲಿ ರಾಮಚಂದ್ರರಾಯ ಸಂಸ್ಮರಣೆಗಳು: ೧೯೮೦

೩೬. ಎಸ್.ಎಂ.ಕೃಷ್ಣ ಬದುಕು ಸಾಧನೆ: ೧೯೯೯

೩೭. ಎಚ್.ಎನ್.ಹೂಗಾರ: ೧೯೯೯

೩೮. ಬಿ.ವಿ. ಕಾರಂತ: ೧೯೯೯

೩೯. ಆರ್. ನಾಗರತ್ನಮ್ಮ: ೧೯೯೯

೪೦. ಮಾಸ್ಟರ್ ಹಿರಣ್ಣಯ್ಯ: ೧೯೯೯

೪೧. ಎಚ್.ಕೆ. ಯೋಗಾನರಸಿಂಹ: ೧೯೯೯

೪೨. ಬಿ.ಎನ್. ನಾಣಿ: ೧೯೯೯

೪೩. ಚಿಂದೋಡಿ ಲೀಲಾ: ೧೯೯೯

೪೪. ಆರ್. ನಾಗೇಶ್: ೧೯೯೯

೪೫. ಎಂ.ಎಸ್. ಸತ್ಯು: ೧೯೯೯

೪೬. ಪಿ.ಬಿ. ಧುತ್ತರಗಿ: ೧೯೯೯

**ಅನುವಾದ ಕೃತಿಗಳು:ಕನ್ನಡ**

**ನಾಟಕ**

೪೭. ಆಷಾಢದ ಒಂದು ದಿನ: ಮೋಹನ್ ರಾಕೇಶ್: ಹಿಂದೀ: ೧೯೭೩, ೧೯೭೮, ೧೯೮೮, ೨೦೦೦

೪೮. ಅಲೆಗಳಲ್ಲಿ ರಾಜಹಂಸಗಳು: ಮೋಹನ್ ರಾಕೇಶ್: ಹಿಂದೀ: ೧೯೮೦, ೧೯೮೮

೪೯. ಆಧೇ ಅಧೋರ್: ಮೋಹನ್ ರಾಕೇಶ್: ಹಿಂದೀ: ೧೯೭೭, ೧೯೮೯

೫೦. ಅಂಧಯುಗ: ಧರ್ಮವೀರ್ ಭಾರತೀ: ಹಿಂದೀ: ೧೯೭೭, ೧೯೯೦

೫೧. ಸೂರ್ಯಾಸ್ತದಿಂದ ಸೂರ್ಯೋದಯದ ವರೆಗೆ: ಸುರೇಂದ್ರ ವರ್ಮಾ: ಹಿಂದೀ: ೧೯೭೯

೫೨. ಹಾಸಿಗೆ: ರತ್ನಾಕರ ಮತಕರೀ: ಮರಾಠೀ: ೧೯೮೧, ೧೯೮೨

೫೩. ಬೇರಿಲ್ಲದವರು: ಅನಿಲ್ ಠಕ್ಕರ್: ಉರ್ದೂ: ೧೯೮೧ ೧೯೮೯

೫೪. ಅಂಜಿ: ವಿಜಯ್ ತೆಂಡುಲಕರ್: ಮರಾಠೀ: ೧೯೮೩

೫೫. ಮದ್ರಾರಾಕ್ಷಸ: ವಿಶಾಖದತ್ತ: ಸಂಸ್ಕೃತ: ೧೯೮೬, ೧೯೮೭

೫೬. ಮೂರು ನಾಟಕಗಳು: ಮೋಹನ್ ರಾಕೇಶ್: ಹಿಂದೀ: ೧೯೮೯, ೧೯೯೩

೫೭. ಕೋರ್ಟ್ ಮಾರ್ಶಲ್: ಸ್ವದೇಶ್ ದೀಪಕ್: ಹಿಂದೀ: ೨೦೦೦

೫೮. ಶಸ್ತ್ರ ಸಂತಾನ: ರಾಮೇಶ್ವರ್ ಪ್ರೇಮ್: ಹಿಂದೀ: ೨೦೦೨

**ಕಾವ್ಯ**

೫೯. ಕನುಪ್ರಿಯಾ: ಧರ್ಮವೀರ್ ಭಾರತೀ: ಹಿಂದೀ: ೧೯೮೧

೬೦. ಮೀರಾವಾಣಿ: ಹಿಂದೀ: ೧೯೮೬

**ಕಾದಂಬರಿ**

೬೧. ಶೇಷಪ್ರಶ್ನೆ: ಶರಶ್ಚಂದ್ರ: ೧೯೬೪, ೧೯೭೦, ೧೯೮೬

೬೨. ಭಾರತಿ: ಶರಶ್ಚಂದ್ರ: ೧೯೬೫, ೧೯೭೦, ೧೯೮೬

**ಜೀವನ ಚರಿತ್ರೆ**

೬೩. ಮೀರಾಬಾಯಿ: ಉಷಾ ಎಸ್. ನಿಲ್ಸನ್ ಇಂಗ್ಲೀಷ್: ೧೯೭೨, ೧೯೯೮

೬೪. ಜಯಶಂಕರ್ ಪ್ರಸಾದ್: ರಮೇಶ್‌ಚಂದ್ರ ಶಾಹ್: ಇಂಗ್ಲೀಷ್: ೧೯೯೦

**ವಿಚಾರ ಪ್ರಬಂಧ**

೬೫. ಹೆಣ್ಣಿನ ಸ್ಥಾನಮಾನ: ಶರಶ್ಚಂದ್ರ: ೧೯೬೬,೧೯೭೧

**ಸ್ವತಂತ್ರ ಕೃತಿಗಳು: ಹಿಂದೀ**

೬೬. ಶೈಲ್ ಔರ್ ಸಾಗರ್: ಕಾವ್ಯ: ೧೯೬೩

೬೭. ಹಿಂದೀ ಗದ್ಯ ಮಾಧುರೀ: ನಿಬಂಧ ಸಂಕಲನ: ೧೯೬೬

೬೮. ಆಧುನಿಕ್ ಹಿಂದೀ ಔರ್ ಕನ್ನಡ್ ಕಾವ್ಯ: ವಿಮರ್ಶೆ: ೧೯೬೮, ೧೯೮೦

೬೯. ರಾಷ್ಟ್ರಕವಿ ಗೋವಿಂದ್ ಪೈ: ಜೀವನ ಚರಿತ್ರೆ: ೧೯೬೯

೭೦. ಹಿಂದೀ ಮಂಜರೀ: ಗದ್ಯ ಪದ್ಯ-ಸಂಗ್ರಹ: ೧೯೭೮

೭೧. ಮೋಹನ್ ರಾಕೇಶ್ ಔರ್ ಉನ್‌ಕೇ ನಾಟಕ್: ೧೯೯೫

೭೨. ಸಾಹಿತ್ಯ ಮಾನಸ್: ಸಂ. ಇತರರೊಡನೆ: ಗದ್ಯ ಪದ್ಯ ಸಂಗ್ರಹ: ೧೯೭೮

೭೩. ಸುಲ್ತಾನ ಟೀಪು: ಸಂ ಇತರರೊಡನೆ: ನಾಟಕ: ೧೯೯೯

೭೪. ಛಲ್‌ನಾ ಮೇರಾ ನಾಮ್: ಸಂ. ಇತರರೊಡನೆ: ನಾಟಕ: ೧೯೯೯

೭೫. ಸೀಮಾಪಾರ್, ಪ್ರಸನ್ನರ ಹದ್ದು ಮೀರಿದ ಹಾದಿ ನಾಟಕದ ಅನುವಾದ: ೨೦೦೩

೭೬. ಮಹಾಮಾನವ್ ಬಸವೇಶ್ವರ್: ೨೦೦೩

ನಾಟಕ ಅಕಾಡೆಮಿಗಾಗಿ ಸಂಪಾದಿಸಿಕೊಟ್ಟ ಐದು ಹಿಂದೀ ನಾಟಕಗಳು

**ಪತ್ರಿಕೆ ಸಂಪಾದನೆ**

ಸಂಕ್ರಮಣ :ದ್ವೈಮಾಸಿಕ: ೧೯೬೪-೧೯೭೫

ಸೃಜನವೇದಿ :೧೯೮೪

ಸಂಕಲನ :ದ್ವೈಮಾಸಿಕ: ೨೦೦೨ ರಿಂದ

* * *



೧೯೫೭ರಲ್ಲಿ ಸಿದ್ದಲಿಂಗ ಪಟ್ಟಣಶೆಟ್ಟಿ

ಪೂಜ್ಯ ಶ್ರೀ ತೋಂಟದ ಸಿದ್ಧಲಿಂಗ ಸ್ವಾಮಿಯವರೊಂದಿಗೆ

ತುಮಕೂರು ಸಿದ್ಧಗಂಗಾ ಮಠದ
ಡಾ. ಶಿವಕುಮಾರ ಸ್ವಾಮಿಯವರಿಂದ ಸನ್ಮಾನ (೪.೪.೧೯೯೯)

ಎಂ.ಎಚ್.ಕೃಷ್ಣಯ್ಯ, ಹೇಮಾ, ಸಿ.ಪ., ಎಚ್.ವಿ.ವೆಂಕಟಸುಬ್ಬಯ್ಯ, ಸಿ.ಆರ್.ಸಿಂಹ,
ಡಾ.ವಿಜಯಾ, ಚಂದ್ರಶೇಖರ ಪಾಟೀಲ, ಬಿ.ಸುರೇಶ್, ಸಿ.ಬಸವಲಿಂಗಯ್ಯ, ಇತರರು

ಡಾ.ಎಂ.ಎಂ.ಕಲಬುರ್ಗಿ, ಚೆನ್ನವೀರ ಕಣವಿ, ಸಿ.ಪ.

ಡಿಸೆಂಬರ್ ೧೯೯೭ ಮಂಗಳೂರಿನಲ್ಲಿ ೬೬ನೇ ಅಖಿಲ ಭಾರತ ಕನ್ನಡ ಸಮ್ಮೇಳನದ ಕವಿಗೋಷ್ಠಿಯ ಭಾಷಣ ಮಾಡುತ್ತಿರುವ ಸಿ.ಪ.

ಡಾ. ಶಾಂತಿನಾಥ ದೇಸಾಯಿ ಮತ್ತು ಸಿ.ಪ.

ಕಲಬುರ್ಗಿಯಲ್ಲಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆಯುವಾಗ
ಡಾ.ಯು.ಆರ್.ಅನಂತಮೂರ್ತಿ, ಎಂ.ಪಿ.ಪ್ರಕಾಶ್, ಗಿರಡ್ಡಿ ಗೋವಿಂದರಾಜು

ಡಾ.ಎಂ.ಅಕಬರ ಅಲಿ, ಡಾ.ಚಂದ್ರಶೇಖರ ಕಂಬಾರ, ಸಿ.ಪ.

ಸದಾನಂದ ಕನವಳ್ಳಿ, ಕೆ.ಎಸ್.ದೇಶಪಾಂಡೆ (ಹಿಂದೆ) ವಿ.ಕೃ.ಗೋಕಾಕ್, ಅನಿಲ ಗೋಕಾಕ್, ಸಿ.ಪ.

ಹೇಮಾ, ಸಿ.ಪ., ಗಿರೀಶ್ ಕಾರ್ನಾಡ್, ಸುರೇಶ್ ಕುಲಕರ್ಣಿಯವರೊಂದಿಗೆ



ಸಮುದ್ರ (ಮಗ), ಡಾ.ಸಿದ್ಧಲಿಂಗ ಪಟ್ಟಣಶೆಟ್ಟಿ, ಗಿರಿಜಾದೇವಿ (ತಾಯಿ), ಹೂ (ಮಗಳು), ಹೇಮಾ (ಮಡದಿ)

## ಗ್ರಂಥಋಣ


೧. ಅಧೋ ಅಧೋರೆ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ ೧೯೭೬

೨. ಅನುಶೀಲನ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ ೧೯೮೨

೩. ಅನುಸ್ವಾದನ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ, ೨೦೦೨

೪. ಅಪರಂಪಾರ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ, ೨೦೦೫

೫. ಅಯಸ್ಕಾಂತ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ, ೧೯೮೬

೬. ಅಲೆಗಳಲ್ಲಿ ರಾಜಹಂಸಗಳು : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗರಿ
ಧಾರವಾಡ, ೧೯೮೦

೭. ಅಂಜಿ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೧೯೮೩

೮. ಅಂಧಯುಗ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ, ೧೯೭೭

೯. ಅಂತರಂಗದ ಕವನಗಳು : ಸಂ. ಡಾ. ಸಿದ್ದಲಿಂಗ ಪಟ್ಟಣಶೆಟ್ಟಿ, ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ ೧೯೯೪

೧೦. ಆಧುನಿಕ ಕನ್ನಡ ಹಿಂದೀ ಕಾವ್ಯ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಪ್ರಸಾರಾಂಗ ಕರ್ನಾಟಕ, ವಿ.ವಿ
ಧಾರವಾಡ ೧೯೭೦

೧೧. ಆಧುನಿಕ ಸಾಹಿತ್ಯ : ದೊಡ್ಡರಂಗೇಗೌಡ
ಅಳಿಲು ಸೇವಾ ಸಂಸ್ಥೆ ಬಸವನಗುಡಿ
ಬೆಂಗಳೂರು ೧೯೯೯

೧೨. ಆಧುನಿಕ ಕನ್ನಡ ಕೌಸ್ತುಭ : ಹೆಚ್.ಕೆ. ರಾಘವೇಂದ್ರ
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು

೧೩. ಆಧುನಿಕ ಕನ್ನಡ ಕವಿಗಳ ಕಾವ್ಯ ಜಿಜ್ಞಾಸೆಗಳು : ಡಾ. ಶಾಂತಲಕ್ಷ್ಮಿ
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು ೨೦೦೮

೧೪. ಆಧುನಿಕ ಹಿಂದೀ ಔರ್ ಕನ್ನಡ ಕಾವ್ಯ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಗಿರಿಜಾ ಪ್ರಕಾಶನ
ಧಾರವಾಡ ೧೯೬೮

೧೫. ಅಲೆಗಳಲ್ಲಿ ರಾಜಹಂಸಗಳು : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೧೯೮೮

೧೬. ಆಷಾಡದ ಒಂದು ದಿನ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ ೧೯೭೩

೧೭. ಆರ್. ನಾಗರತ್ನಮ್ಮ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಕರ್ನಾಟಕ ನಾಟಕ ಅಕಾಡೆಮಿ
ಬೆಂಗಳೂರು ೧೯೯೯

೧೮. ಆರ್ ನಾಗೇಶ್ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಕರ್ನಾಟಕ ನಾಟಕ ಅಕಾಡೆಮಿ
ಬೆಂಗಳೂರು ೧೯೯೯

೧೯. ಇಲ್ಲಿಯಾರೂ ಮುಖ್ಯರಲ್ಲ : ರಹಮತ್‌ತರಿಕೆರೆ
ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ
ವಿದ್ಯಾರಣ್ಯ, ೨೦೦೫

೨೦. ಇಷ್ಟು ಹೇಳಿದ ಮೇಲೆ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ ೨೦೦೦

೨೧. ಇಂದು ರಾತ್ರಿಯ ಹಾಗೆ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೧೯೯೪

೨೨. ಋಣಾನುಬಂಧ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೧೯೯೯

೨೩. ಎಚ್.ಕೆ. ಯೋಗಾನರಸಿಂಹ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಕರ್ನಾಟಕ ನಾಟಕ ಅಕಾಡೆಮಿ
ಬೆಂಗಳೂರು ೧೯೯೯

೨೪. ಎಚ್.ಎನ್. ಹೂಗಾರ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಕರ್ನಾಟಕ ಅಕಾಡೆಮಿ
ಬೆಂಗಳೂರು ೧೯೯೯

೨೫. ಎಸ್.ಎಂ. ಕೃಷ್ಣ ಬದುಕುಸಾಧನೆ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
೧೯೯೯

೨೬. ಎಂ.ಎಸ್. ಸತ್ಯು : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಕರ್ನಾಟಕ ನಾಟಕ ಅಕಾಡೆಮಿ
ಬೆಂಗಳೂರು ೧೯೯೯

೨೭. ಔರಂಗ ಜೇಬ ಮತ್ತು ಇತರ ಕವನಗಳು : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸಂಕ್ರಮಣ ಪ್ರಕಾಶನ
ಧಾರವಾಡ ೧೯೬೭

೨೮. ಕನುಪ್ರಿಯಾ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನುವಾದ ಪ್ರಕಾಶನ
ಮೈಸೂರು ೧೯೮೧

೨೯. ಕನ್ನಡ ಸಾಹಿತ್ಯ ಚರಿತ್ರೆಯ ಅಧ್ಯಯನ : ಡಾ. ಎಸ್.ವಿ. ಹಿರೇಮಠ
ಮಾತೃ ಪ್ರಕಾಶನ
ಗದಗ ೨೦೦೪

೩೦. ಕನ್ನಡ ಸಾಹಿತ್ಯ ಕೋಶ : ಸಂ. ರಾಜಪ್ಪದಳವಾಯಿ
ಕದಿರು ಪ್ರಕಾಶನ
ಮೈಸೂರು ೧೯೯೬

೩೧. ಕನ್ನಡ ಕಾವ್ಯದಲ್ಲಿ ನವ್ಯತೆ : ಡಾ. ವೀರಣ್ಣ ರಾಜೂರು
ಕರ್ನಾಟಕ ಭಾರತಿ, ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ ೧೯೯೩

೩೨. ಕನ್ನಡ ಸಾಹಿತ್ಯ ಚರಿತ್ರೆ : ರಂ.ಶ್ರೀ. ಮುಗಳಿ ಗೀತಾ ಬುಕ್ ಹೌಸ್ ಮೈಸೂರು ೧೯೯೦

೩೩. ಕಲ್ಯಾಣದ ಹಾದಿ : ಸಂ. ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ವೀರಶೈವ ಅಧ್ಯಯನ ಸಂಸ್ಥೆ
ಗದಗ ೧೯೯೯

೩೪. ಕಾವ್ಯದಲ್ಲಿ ನವ್ಯತೆ : ಡಾ. ಹೇಮಂತ ಕುಲಕರ್ಣಿ
ಪ್ರಸಾರಾಂಗ ಮೈಸೂರು ವಿ.ವಿ.
ಮೈಸೂರು ೧೯೮೬

೩೫. ಕೈಲಾಸಂ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಕರ್ನಾಟಕ ನಾಟಕ ಅಕಾಡೆಮಿ
ಬೆಂಗಳೂರು ೧೯೫೮

೩೬. ಕೋರ್ಟ್ ಮಾರ್ಷಲ್ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೨೦೦೧

೩೭. ಗೋಪಾಲಕೃಷ್ಣ ಅಡಿಗರ ನವ್ಯ ಕಾವ್ಯ ಒಂದು ಅಧ್ಯಯನ : ಡಾ. ಶಿವಾನಂದ ಕೆಳಗಿನಮನಿ
ಸೌಜನ್ಯ ಪ್ರಕಾಶನ
ಧಾರವಾಡ ೨೦೦೦

೩೮. ಚಹಾದ ಜೋಡಿ ಚೂಡಾದ್ಹಾಂಗ : ಭಾಗ ೧ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ ೧೯೯೬

೩೯. ಚಹಾದ ಜೋಡಿ ಚೂಡಾದ್ಹಾಂಗ : ಭಾಗ ೨ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೧೯೯೯

೪೦. ಚಹಾದ ಜೋಡಿ ಚೂಡಾದ್ಹಾಂಗ : ಭಾಗ ೩ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೨೦೦೦

೪೧. ಚಹಾದ ಜೋಡಿ ಚೂಡದ್ಹಾಂಗ : ಭಾಗ ೪ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ,
ಧಾರವಾಡ ೨೦೦೨

೪೨. ಚಹಾದ ಜೋಡಿ ಚೂಡದ್ವಾಂಗ ಭಾಗ ೫ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ,
ಧಾರವಾಡ ೨೦೦೩

೪೩. ಚೋರಚರಣದಾಸ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ
ಧಾರವಾಡ ೨೦೦೪

೪೪. ಚಂದ್ರಶೆಖರ ಪಾಟೀಲರ : ಡಾ. ಎಸ್. ಶಿವಣ್ಣ
ಕನ್ನಡ ಸಾಹಿತ್ಯ ಪರಿಷತ್ತು
ಬೆಂಗಳೂರು ೨೦೦೫

೪೫. ಚಿಂದೋಡಿ ಲೀಲಾ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಕರ್ನಾಟಕ ನಾಟಕ ಅಕಾಡೆಮಿ
ಬೆಂಗಳೂರು ೧೯೯೯

೪೬. ಥಲ್‌ನಾಮೇರಾನಾಮ್ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ,
ಕೇಂದ್ರ ಸಾಹಿತ್ಯ ಅಕಾಡೆಮಿ,
ದೆಹಲಿ ೧೯೯೯

೪೭. ಜಯಶಂಕರ್ ಪ್ರಸಾದ್ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ,
ಕೇಂದ್ರ ಸಾಹಿತ್ಯ ಅಕಾಡೆಮಿ
ದೆಹಲಿ ೧೯೯೦

೪೮. ದಶಕದ ಕನ್ನಡ ಸಾಹಿತ್ಯ : ಸಂ.ಡಾ.ಕೆ. ರವೀಂದ್ರನಾಥ ಡಾ.ಎಫ್.ಟಿ. ಹಳ್ಳಿಕೇರಿ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ.

೪೯. ಧರ್ಮಸ್ಥಳ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಚಂದ್ರನಾಥ ಪ್ರಕಾಶನ
ಧಾರವಾಡ ೧೯೮೭

೫೦. ನವ್ಯತೆ : ಡಾ. ನರಹಳ್ಳಿ ಬಾಲಸುಬ್ರಮಣ್ಯಂ
ಕರ್ನಾಟಕ ಸಾಹಿತ್ಯ ಅಕಾಡೆಮಿ
ಬೆಂಗಳೂರು ೧೯೯೦

೫೧. ನಾನಿಕಾಕಃ ಎನ್ನೆ ಬದುಕು : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ,
ಸುಂದರ ಪ್ರಕಾಶನ
ಧಾರವಾಡ ೧೯೮೩

೫೨. ನಾನಿಕಾರ ಎನ್ನೆ ಬರಹ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸುಂದರ ಪ್ರಕಾಶನ
ಧಾರವಾಡ ೧೯೮೩

೫೨. ನಾನಿಕಾರ ಎನ್ನೆಬರಹ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸುಂದರ ಪ್ರಕಾಶನ
ಧಾರವಾಡ ೧೯೮೩

೫೩. ನಾನಿಯ ನೆನಹುಗಳು : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸುಂದರ ಪ್ರಕಾಶನ
ಧಾರವಾಡ ೧೯೮೩

೫೪. ನೀನಾ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾವಾಡ ೧೯೬೪

೫೫. ನೂರಾರು ಪದ್ಯಗಳು : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ ೧೯೭೭

೫೬. ನೂರುಮರ ನೂರು ಸ್ವರ : ಕೀರ್ತಿನಾಥ ಕುರ್ತುಕೋಟಿ,
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ, ೧೯೯೮

೫೭. ಪಟ್ಟಣಶೆಟ್ಟರ ಆಯ್ದ ಕವಿತೆಗಳು : ಸಂ.ಡಾ.ಎಚ್.ಎಸ್. ವೆಂಕಟೇಶಮೂರ್ತಿ
ಬೆಂಗಳೂರು ವಿ.ವಿ.
ಬೆಂಗಳೂರು, ೧೯೮೩

೫೮. ಪಟ್ಟಣಶೆಟ್ಟಿ ಸಮಗ್ರ ಕಾವ್ಯ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ವೀರಶೈವ ಅಧ್ಯಯನ ಸಂಸ್ಥೆ ತೋಂಟದಾರ್ಯಮಠ
ಗದಗ ೨೦೦೦

೫೯. ಪ್ರತಿಜ್ಞೆ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ, ೧೯೭೯

೬೦. ಪರದೇಶಿ ಹಾಡುಗಳು : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸಂಕ್ರಮಣ ಪ್ರಕಾಶನ
ಧಾರವಾಡ ೧೯೭೬

೬೧. ಪರಿಭಾವನ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ ೨೦೦೦

೬೨. ಪಾಶ್ಚಾತ್ಯ ಸಾಹಿತ್ಯ ವಾದಗಳು ಮತ್ತು ಸಾಹಿತ್ಯ ಸಂದರ್ಭ : ಡಾ.ಸಿ.ಆರ್.ಯರವಿನತೆಲಿಮಠ
ಕನ್ನಡ ವಿಶ್ವವಿದ್ಯಾಲಯ ಹಂಪಿ
ವಿದ್ಯಾರಣ್ಯ, ೨೦೦೦

೬೩. ಪಿ.ಬಿ. ದುತ್ತರಗಿ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಕರ್ನಾಟಕ ನಾಟಕ ಅಕಾಡೆಮಿ
ಬೆಂಗಳೂರು ೧೯೯೯

೬೪. ಭಾರತಿ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸಮಾಜ ಪುಸ್ತಕಾಲಯ
ಧಾರವಾಡ ೧೯೬೫

೬೫. ವಿ.ವಿ. ಕಾರಾಂತ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಕರ್ನಾಟಕ ನಾಟಕ ಅಕಾಡೆಮಿ
ಬೆಂಗಳೂರು ೧೯೯೯

೬೬. ಬಿ.ಎನ್. ನಾಣಿ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಕರ್ನಾಟಕನಾಟಕ ಅಕಾಡೆಮಿ
ಬೆಂಗಳೂರು ೧೯೯೯

೬೭. ಬೇರಿಲ್ಲದವರು : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಚಂದ್ರನಾಥ ಪ್ರಕಾಶನ
ಧಾರವಾಡ ೧೯೮೧

೬೮. ಮತ್ತೆ ಬಂದಿದ್ದಾಳೆ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೧೯೮೨

೬೯. ಮರಾಠಿ ದಲಿತ ಕಾವ್ಯ : ಡಾ. ಸರೂಜ ಕಾಟ್ಕರ್
ಲೋಹಿಯಾ ಪ್ರಕಾಶನ
ಬಳ್ಳಾರಿ ೨೦೦೦

೭೦. ಮಾವ ಮತ್ತು ಇತರ ಕಥೆಗಳು : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ ೧೯೭೭

೭೧. ಮಹಾಮಾನವ ಬಸವೇಶ್ವರ್ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ವೀರಶೈವ ಅಧ್ಯಯನ ಸಂಸ್ಥೆ ತೋಂಟದಾರ್ಯಗಳು
ಗದಗ

೭೨. ಮೀರಾವಾಣಿ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ, ೧೯೬೭

೭೩. ಮುದ್ರಾರಾಕ್ಷಸ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೧೯೮೬

೭೪. ಮಣ್ಣಿನವಾಸನೆ : ಗೋಪಾಲಕೃಷ್ಣ ಅಡಿಗ
ಅಕ್ಷರ ಪ್ರಕಾಶನ
ಸಾಗರ ೧೯೭೫

೭೫. ಮಾಸ್ತರ್ ಹಿರಣ್ಣಯ್ಯ : ಸಂ.ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಕರ್ನಾಟಕ ನಾಟಕ ಅಕಾಡೆಮಿ
ಬೆಂಗಳೂರು ೧೯೯೯

೭೬. ಮೋಹನ್ ರಾಕೇಶ್ ಔರ್ ಉನ್‌ಕೆ ನಾಟಕ್ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅಮನ್ ಪ್ರಕಾಶನ ರಾಂಭಾಗ್
ಕಾನ್ಪುರ

೭೭. ಯುಗಧರ್ಮ ಮತ್ತು ಸಾಹಿತ್ಯ : ಕೀರ್ತಿನಾಥ ಕುರ್ತುಕೋಟಿ
ಸಮಾಜ ಪುಸ್ತಕಾಲಯ
ಧಾರವಾಡ

೭೮. ರಂಗಾಯಣ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ, ೧೯೮೮

೭೯. ರಾಷ್ಟ್ರಕವಿಗೋವಿಂದಪೈ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಕೇಂದ್ರಸಾಹಿತ್ಯ ಅಕಾಡೆಮಿ
ದೆಹಲಿ ೧೯೬೯

೮೦. ಶಸ್ತ್ರ ಸಂತಾನ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೨೦೦೨

೮೧. ಶೇಷಪ್ರಶ್ನೆ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸಮಾಜ ಪುಸ್ತಾಕಾಲಯ
ಧಾರವಾಡ ೧೯೬೦

೮೨. ಶೈಲ್‌ಔರ್‌ಸಾಗರ್ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸ್ನೇಹ ಪ್ರಕಾಶನ
ಬೆಳಗಾವಿ ೨೯೬೩

೮೩. ಸಹೃದಯ : ಸಂ.ದೇ.ಜ.ಗೌ
ವನಶ್ರೀ ಪ್ರಕಾಶನ
ಮೈಸೂರು ೨೦೦೪

೮೪. ಸಾಲಿರಾಮಚಂದ್ರರಾಯರ ಸಮಗ್ರ ಕಾವ್ಯ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸುಂದರ ಪ್ರಕಾಶನ
ಧಾರವಾಡ ೧೯೮೮

೮೫. ಸಾಹಿತ್ಯ ಪ್ರವೇಶ : ಸಿ.ಪಿ.ಕೆ.
ಕರ್ನಾಟಕ ಸಹಕಾರಿ ಪ್ರಕಾಶನ
ಬೆಂಗಳೂರು

೮೬. ಸೀಮಾಪಾರ್ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಮಣಿ ಪ್ರಕಾಶನ
ದೆಹಲಿ ೨೦೦೩

೮೭. ಸುಲ್ತಾನ್ ಟೀಪು : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಕೇಂದ್ರ ನಾಟಕ ಅಕಾಡೆಮಿ
ದೆಹಲಿ ೧೯೯೯

೮೮. ಸೂರ್ಯಾಸ್ತದಿಂದ ಸೂರ್ಯೋದಯದವರೆಗೆ : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ, ವಿದ್ಯಾಗಿರಿ
ಧಾರವಾಡ ೧೯೭೯

೮೯. ಸಂಕ್ರಮಣ ಕಾವ್ಯ : ಸಂ.ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ , ಚಂದ್ರಶೇಖರ ಪಾಟೀಲ
ಮತ್ತು ಗಿರಡ್ಡಿಗೋವಿಂದರಾಜು
ಸಂಕ್ರಮಣ ಪ್ರಕಾಶನ
ಧಾರವಾಡ ೧೯೬೫

೯೦. ಹಕ್ಕಿಗಳು : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಅನನ್ಯ ಪ್ರಕಾಶನ ವಿದ್ಯಾಗಿರಿ
ಧಾರವಾಡ, ೨೦೦೧

೯೧. ಹಳ್ಳಿಕೇರಿ ಗುದ್ನೆಪ್ಪನವರು : ಡಾ. ಸಿದ್ಧಲಿಂಗಪಟ್ಟಣಶೆಟ್ಟಿ
ವೀರಶೈವ ಅಧ್ಯಯನ ಸಂಸ್ಥೆ
ಗದಗ ೧೯೮೧

೯೨. ಹಾಸಿಗೆ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸಮಾಜ ಪುಸ್ತಕಾಲಯ
ಧಾರವಾಡ ೧೯೮೧

೯೩. ಹೆಣ್ಣಿನ ಸ್ಥಾನಮಾನ : ಡಾ. ಸಿದ್ಧಲಿಂಗ ಪಟ್ಟಣಶೆಟ್ಟಿ
ಸಮಾಜ ಪುಸ್ತಕಾಲಯ
ಧಾರವಾಡ ೧೫೬೬

೯೪. ಹೊಸಗನ್ನಡ ಸಾಹಿತ್ಯ ಚರಿತ್ರೆ : ಎಲ್.ಎಸ್. ಶೇಷಗಿರಿರಾವ್
ಅಂಕಿತ ಪುಸ್ತಕ
ಬೆಂಗಳೂರು ೧೯೯೯

೯೫. ಹೊಸಗನ್ನಡ ಕವಿತೆಯು ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ : ಪ್ರೊ.ಎಸ್. ಅನಂತನಾರಾಯಣ
ಗಂಗಾತರಂಗ ಸರಸ್ವತಿಪುರ
ಮೈಸೂರು ೧೯೬೨

**ಪತ್ರಿಕೆಗಳು**

೧. ಪ್ರಜಾವಾಣಿ
೨. ಸಂಯುಕ್ತ ಕರ್ನಾಟಕ
೩. ವಿಜಯ ಕರ್ನಾಟಕ
೪. ಸಂಕ್ರಮಣ
೫. ಸೃಜನವೇದಿ
೬. ಸಂಕಲನ

* * *

